# ಶಿವಾನುಭವ.

ವರ್ಷ ೩ ಮಾರ್ಚ ೧೯೨೮ ಸಂಚಿಕೆ ೯

## ವೇದವಾಙ್ಮಯ.

ಲೇಖಕಃ—ಶ್ರೀ ಶಂಭುಲಿಂಗ ಶಿವಾಚಾರ್ಯ ಹಿರಿಯಮಠ ವಿಜಾಪುರ.



(೮ನೆಯ ಸಂಚಿಕೆಯಿಂದ ಮುಂದುವರಿದುದು.)

"ಮನ್ತ್ರ ಬ್ರಾಹ್ಮಣಯೋರ್ವೇದ ನಾಮಧೇಯಮ್"(ಹಿರಣ್ಯ. ಶ್ರೌ. ೧—೧)

ಎಂಬ ಸೂತ್ರಾನುಸಾರವಾಗಿ, ವೇದವು ಸಂಹಿತೆ—ಬ್ರಾಹ್ಮಣಗಳೆಂಬ ಎರಡು ಭಾಗಗಳುಳ್ಳುದಾಗಿದೆ. ಬ್ರಾಹ್ಮಣದೊಳಗಣ ಕೊನೆಯ ಕೆಲವು ಭಾಗಗಳು ಆರಣ್ಯಕಗಳೆಂತಲೂ ಉಪನಿಷತ್ತುಗಳೆಂತಲೂ ಹೇಳಿಸಿಕೊಳ್ಳಲ್ಪಡುತ್ತವೆ. ಅದುಕಾರಣವೇ, ಆರಣ್ಯಕಗಳ ಹಾಗೂ ಉಪನಿಷತ್ತುಗಳ ಹೊರತಾಗಿ ಉಳಿದ ಭಾಗವೆಲ್ಲವೂ ಬ್ರಾಹ್ಮಣವೆಂಬ ಸಂಜ್ಞೆಯನ್ನು ತಳೆದಿರುವದು. ಈ ತೆರದ ವೇದವಾಙ್ಮಯ ಭಾಗಗಳಲ್ಲಿ ಮೊದಲನೆಯ ಭಾಗವು ಸಂಹಿತೆಯು. ಇಂತಹ ಸಂಹಿತೆಗಳಾದರೊ ಪೂರ್ವದಲ್ಲಿ ಬಹಳವಾಗಿದ್ದಿರಬಹುದೆಂದು ಊಹೆಯಾಗುವದು. ಸದ್ಯಃ, ಋಗ್ವೇದ—ಯಜುರ್ವೇದ—ಸಾಮವೇದ—ಅಥರ್ವವೇದಗಳೆಂಬ ಈ ನಾಲ್ಕೇ ವೇದಗಳು ಸರ್ವತ್ರ ಪ್ರಸಿದ್ಧಗಳಾಗಿರುವದರಿಂದ, ಪ್ರತ್ಯೇಕ ವೇದದ ಒಂದೊಂದು ಸಂಹಿತೆಯ ಮೇರೆಗೆ ನಾಲ್ಕು ಸಂಹಿತೆಗಳಿರುತ್ತವೆ. ಅವುಗಳ್ಲಿ ಮುಖ್ಯವೂ ಪ್ರಾಚೀನತಮವೂ ಆದ ಋಗ್ವೇದ ಸಂಹಿತೆಯು ತನ್ನ ಪಶ್ಚಾತ್ಕಾಲದಲ್ಲಿ ಸಶಾ

ಖೋಪ ಶಾಖೆಗಳ ರೂಪವಾಗಿ ಹಬ್ಬಿರುವ ವೈದಿಕ ಗ್ರಂಥ ಸಮುದಾಯ ಕ್ಕೆಲ್ಲ ಅಂಕುರಾಯಮಾಣವಾಗಿದೆ.

ಸಂಹಿತಾ ಎಂಬದರ ಅರ್ಥವನ್ನು ಯಾಸ್ಕಾಚಾರ್ಯನು-- 'ಪರಃ ಸಂನಿಕರ್ಷಃ ಸಂಹಿತಾ' ( ನಿ. ಅ. ೧ ಖಂ ೧೭ ಸೂ. ೪ ) —ಉತ್ಕೃಷ್ಟವಾದ ಸಂಬಂಧವು ಸಂಹಿತೆಯು ಎಂದು ಹೇಳಿರುವನಲ್ಲದೆ, ಸಂಹಿತೆಯ ಲಕ್ಷಣವನ್ನು ಬೋಧಿಸತಕ್ಕ 'ಪದಪ್ರಕೃತಿಃ ಸಂಹಿತಾ' (ಋ. ಪ್ರಾತಿ. ಪ ೨ ಸೂ ೧)--ಪದಗಳ ಪ್ರಕೃತಿ (ವಿಕಾರ) ಭೂತವಾದುದು ಸಂಹಿತೆಯು; ಎಂಬ ಶೌನಕ ಮಹರ್ಷಿಯ ವಾಕ್ಯವನ್ನಾದರೂ ಅಂಗೀಕರಿಸಿರುವನು. ಇದರಿಂದ, ಮೊದಲು ಪದ ಪಾಠವಿದ್ದಿತೆಂತಲೂ ಬಳಿಕ ಸಂಧಿನಿಯಮಾನುಸಾರವಾಗಿ ಶಬ್ದಗಳ ಸಂಧಿರಚನೆಯಾಗಿ ಸಂಹಿತಾ ಪಾಠ ನಿರ್ಮಾಣ ಮಾಡಲ್ಪಟ್ಟಿತೆಂತಲೂ ತಿಳಿದು ಬರುತ್ತದೆ. ಸಂಹಿತೆಗಳು ಛಂದೋ ಬದ್ಧಗಳಾಗಿರುತ್ತವೆ. ಪರಿಕಿಸಿದರೆ ಪ್ರಾಚೀನತಮ ಆರ್ಯಋಷಿಗಳ ಕಾವ್ಯಮಯಗಳಾದ ಸಹಜೋದ್ಗಾರಗಳು ಋಗ್ವೇದದಲ್ಲಿಯೇ ಕಂಡು ಬರುತ್ತವೆ. ಇತರ ಸಂಹಿತೆಗಳಂತೆ ಇದರಲ್ಲಿ (ಋಕ್ಸಂಹಿತೆಯಲ್ಲಿ) ಬಹಳವಾಗಿ ಕೃತ್ರಿಮತನದ ಸಮಾವೇಶವಿಲ್ಲ. ಆರ್ಯವಂಶೀಯರಾದ ಪ್ರಾಚೀನ ಮನುಷ್ಯರ ಆಚಾರ ವಿಚಾರ--ಆಹಾರ ವಿಹಾರ—ಮತ್ತು ಆ ಕಾಲದ ಪರಿಸ್ಥಿತಿ ಮುಂತಾದುದಕ್ಕೆ ಸಂಬಂಧಪಟ್ಟ ಜ್ಞಾನವು ನಮಗೆ ಋಗ್ವೇದದಲ್ಲಿಯೇ ದೊರೆಯುವದು.

ಯಜುರ್ವೇದ ಸಂಹಿತೆಯು ಯಜ್ಞದ ಸಲುವಾಗಿಯೇ ನಿರ್ಮಿತವಾಗಿರುವದೆಂದು ಬಲ್ಲವರ ಹೇಳಿಕೆಯಿದೆ. ಈ ಸಂಹಿತೆಯೊಳಗಣ ಋಚೆಗಳು ಯಾಜ್ಞಿಕ ಕರ್ಮಗಳಲ್ಲಿ ಉಪಯುಕ್ತಗಳಾಗುವಂತೆ ಅನುಕ್ರಮವಾಗಿ ಒತ್ತಟ್ಟಿಗೆ ಸೇರಿಸಲ್ಪಟ್ಟಿವೆ. ಒಟ್ಟಿನ ಮೇಲೆ, ಈ ಸಂಹಿತೆಯಾದರೊ ದ್ರವ್ಯಮಯಗಳಾದ ಯಾಜ್ಞಿಕ ಕರ್ಮಗಳಲ್ಲಿ ಮುಂದಾಳುಗಳೆನಿಸುವ ವಿಶಿಷ್ಟ ಪುರೋಹಿತರಿಗೆ ಉಪಯೋಗಗಳಾದ ಋಚೆಗಳ ಸಂಗ್ರಹಾತ್ಮಕ ಪುಸ್ತಕವೆಂದು ಹೇಳಿಸಿಕೊಳ್ಳಲ್ಪಡುವದು. ಇದು ಕೃಷ್ಣ, ಶುಕ್ಲಗಳೆಂಬ ಎರಡು ತೆರದ ಪಾಠ ಭೇದಗಳುಳ್ಳದ್ದಾಗಿದೆ. ಈ ಎರಡು ಭಾಗಗಳಿಗೇನೆ ತೈತ್ತಿರೀಯ ಸಂಹಿತಾ, ವಾಜಸನೇಯಿ ಸಂಹಿತಾ ಎಂಬ ಬೇರೆ ಹೆಸರುಗಳಿರುತ್ತವೆ. ಯಜುರ್ವೇದ ಸಂಹಿತೆಯು ಕೃಷ್ಣ, ಶುಕ್ಲಗಳೆಂಬ ಎರಡು ಭಾಗಗಳಾದುದರ ಬಗ್ಗೆ ವಿನೋದರೂಪವಾದ ಒಂದು ಕಥೆಯುಂಟು. ಅದು

ಹೇಗೆಂದರೆ— ಶ್ರೀ ವ್ಯಾಸ ಮಹರ್ಷಿಯು ವೇದಗಳನ್ನು ನಾಲ್ಕು ಭಾಗಗಳನ್ನಾಗಿ ಮಾಡಿ ಅವುಗಳನ್ನು ಪೈಲ—ವೈಶಂಪಾಯನ—ಜೈಮಿನಿ ಸುಮಂತು ಎಂಬೀ ತನ್ನ ಶಿಷ್ಯರಿಗೆ ಕಲಿಸಿದನು. ಮುಂದೆ ವೈಶಂಪಾಯನನು ತನ್ನ ಭಾಗವಾದ ಯಜುರ್ವೇದವನ್ನು ಯಾಜ್ಞವಲ್ಕ್ಯನಿಗೆ ಕಲಿಸಿದನು. ಆದರೆ, ಕೆಲ ಕಾಲಾನಂತರ ಒಂದಾನೊಂದು ಸಂದರ್ಭದಲ್ಲಿ ವೈಶಂಪಾಯನನು ಕುಪಿತನಾಗಿ ಯಾಜ್ಞವಲ್ಕ್ಯನನ್ನು ಕುರಿತು—ಎಲೋ, ನೀನು ನನ್ನ ವಿದ್ಯೆಯನ್ನೆಲ್ಲ ಈಗಳೇ ತಿರುಗಿ ಕೊಡಲೇಬೇಕು; ಎಂದು ಆಗ್ರಹದೊಡನೆ ಅಪ್ಪಣೆ ಮಾಡಲು, ದೃಷ್ಟಿದೋಷಕ್ಕೊಳಗಾದ ಎಳೆಗೂಸುಗಳು ಹೊಟ್ಟೆಯೊಳಗಿನ ಹಾಲನ್ನು ಕಕ್ಕುವ ಪರಿಯಂತೆ ಗುರುವಿನ ಕ್ರೂರದೃಷ್ಟಿಗೀಡಾದ ಆ ಶಿಷ್ಯನಾದರೊ ಕೂಡಲೇ ತನ್ನೊಡಲೊಳಗಿನ ಯಜುರ್ವೇದವನ್ನೆಲ್ಲ ಕಾರಿ ಹೊರಚೆಲ್ಲಿದನು. ಇದರಿಂದ, ಆ ವೇದವು ಕಪ್ಪನೆ ಕಂದಿದುದು (ಕಪ್ಪಾಯಿತು,) ಅದುಕಾರಣವೇ ಅದು 'ಕೃಷ್ಣ' ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವದು. ಮುಂದೆ ಯಾಜ್ಞವಲ್ಕ್ಯನು ಸೂರ್ಯನನ್ನು ಆರಾಧಿಸಿ ಎರಡನೆಯ ಯಜುರ್ವೇದವನ್ನು ದೊರಕಿಸಿದನು. ಅದು ತೇಜಸ್ವಿಯಾಗಿರುವದರಿಂದ ಅದಕ್ಕೆ 'ಶುಕ್ಲ' ಎಂಬ ಹೆಸರುಂಟಾಯಿತು.

ಸಾಮ ಎಂಬ ಶಬ್ದವು ಗಾನ (ಹಾಡು) ಎಂಬ ಅರ್ಥಬೋಧಕವಾಗಿದೆ. ಸಾಮ ಸಂಹಿತೆಯೊಳಗಿನ ಋಚೆಗಳು ಹಾಡುಗಾರಿಕೆಯ ಮಟ್ಟುಗಳಂತಿರುವವು. ಈ ಸಂಹಿತೆಯು ಪೂರ್ವಾರ್ಚಿಕ, ಉತ್ತರಾರ್ಚಿಕವೆಂಬ ಎರಡು ಭಾಗಗಳಿವೆ. ಈ ಸಂಹಿತೆಯು ಸ್ವತಃ ಸಿದ್ಧವಾದ ಅಷ್ಟೊಂದು ಒಳ್ಳೇಯ ಹೆಚ್ಚುಗಾರಿಕೆಯುಳ್ಳದ್ದಲ್ಲ. ಏಕೆಂದರೆ— ಈ ಸಾಮ ಸಂಹಿತೆಯಲ್ಲಿ ಎಪ್ಪತ್ತೈಯ್ದು ಮಂತ್ರಗಳನ್ನು ಬಿಟ್ಟು ಉಳಿದ ಎಲ್ಲ ಭಾಗವೂ ಋಗ್ವೇದದಿಂದ ಎತ್ತಿ ಸೋಮಯಾಗ ಕ್ರಿಯಾ ಕ್ರಮಕ್ಕೆ ಅನುಸರಿಸಿ ಜೋಡಿಸಲ್ಪಟ್ಟಿದಾಗಿದೆ. ಯೆಂದು ತಜ್ಞರ ಮತವು.

ಬುನಾದಿ ಈ ಮೂರು ಪಳೆಮಾತುಗಳೇ ಮಿಗಿಲಾದ ಪವಣಗಳೆನಿಸಿದ್ದವು. ಅದು ಕಾರಣವೇ? ಹಳೆಯ ಓಲೆಗಳಲ್ಲಿ 'ತ್ರಯೀ ವಿದ್ಯಾ' ಎಂಬ ಬಳಿಕೆಯಿದ್ದುದು ಕಂಡು ಬರುತ್ತದೆ. ಎಷ್ಟೋ ದಿವಸಗಳ ತರುವಾಯ ನಾಲ್ಕನೆಯದಾದ ಅಥರ್ವವೇದ ಸಂಹಿತೆಯು ಅವುಗಳೊಡನೆ ಸೇರಿಸಲ್ಪಟ್ಟಿದೆ. ಆದರೂ ಈ ಸಂಹಿತೆಯ ಹೆಚ್ಚುಗಾರಿಕೆಯು ಹೊಗಳಿಸಿ ಕೊಳ್ಳಲು ತಕ್ಕದ್ದಾಗಿದೆ.

ಹಲವು ತರದ ಮಂತ್ರ ತಂತ್ರಗಳ ಪ್ರಯೋಗಜ್ಞಾನ ರೂಪವಾದುದೇ ಅಥರ್ವವೇದ ಸಂಹಿತೆಯು. ಇದರಲ್ಲಿ ಮುಖ್ಯವಾಗಿ ಅಥರ್ವನ್ ಮತ್ತು ಅಂಗಿರಸ್ ಎಂಬ ಎರಡು ಬಗೆಯ ಮಂತ್ರ ವಿಧಿಗಳಿರುವದರಿಂದಲೇ ಪ್ರಾಚೀನ ಕಾಲದಲ್ಲಿ ಈ ವೇದಕ್ಕೆ ಅಥರ್ವಾಂಗಿರಸ ಎಂಬ ಹೆಸರಿದ್ದಿತು. ಅಥರ್ವವೇದವೆಂದು ಹೇಳಲ್ಪಡುವದಾದರೊ ಅಥರ್ವಾಂಗಿರಸವೇದ ಎಂಬ ಹೆಸರಿನ ಸಂಕ್ಷಿಪ್ತ ರೂಪವು.

ಈ ರೀತಿಯಾಗಿ, ವೈದಿಕ ಸಾಹಿತ್ಯದಲ್ಲಿ ನಾಲ್ಕು ಬಗೆಯ ಸಂಹಿತಾ ಭಾಗಗಳಿರುತ್ತವೆ. ಪ್ರತಿಯೊಂದು ಸಂಹಿತೆಯೊಳಗಣ ಶಾಖಾ ಭೇದ ಮುಂತಾದುದರ ಬಗ್ಗೆ ಆಯಾ ವೇದ ವಿಚಾರಾವಸರದಲ್ಲಿ ಪ್ರತಿಪಾದಿಸುವೆವು.

ಸಂಹಿತೆಗಳ ಉತ್ತರ ಕಾಲದಲ್ಲಿ ದೇವತೆಗಳನ್ನು ಉದ್ದೇಶಿಸಿ ನೂತನ ಸ್ತೋತ್ರಗಳನ್ನು ರಚಿಸುವ ಬಯಕೆಯು ಜನರಲ್ಲಿ ಸ್ವಲ್ಪವಾದರೂ ಇದ್ದಿಲ್ಲ. ವಿಶುದ್ಧ ಜ್ಞಾನಿಗಳಾದ ಪೂರ್ವ ಪುರುಷರಿಂದ ಸಾಕ್ಷಾತ್ಕರಿಸಲ್ಪಟ್ಟವುಗಳಾಗಿ ಪಿತಾ ಪುತ್ರ ಪರಂಪರೆಯಿಂದ ಬಂದ ವೇದಗಳ ಅಧ್ಯಯನವೇ ಪರಮ ಧರ್ಮವೆಂದು ಪುರೋಹಿತರ ಕುಲಗಳಲ್ಲಿ ಬಲವಾದ ನಂಬಿಗೆಯಿದ್ದಿತು. ಈ ಸಮಯದಲ್ಲಿ ವೇದಗಳು ಪ್ರಕ್ರಿಯಕ್ಕೆ ಸರಿಯಾಗಿ ಸಂಗ್ರಹಿಸಲ್ಪಟ್ಟು ಮೇಲೆ ಹೇಳಿದಂತೆ ಸಂಹಿತೆಗಳೆಂಬ ಹೆಸರನ್ನು ತಾಳಿ ಶಾಶ್ವತವಾದ ಪ್ರತಿಷ್ಠೆಯನ್ನು ಪಡೆದಿದ್ದವು. ನವೀನ ಸ್ತೋತ್ರಗಳನ್ನು ರಚಿಸುವ ಇಚ್ಛೆಯು ವಿಚ್ಛೇದ ಮೂಲಕವಾಗಿ ಪುರೋಹಿತರ ವ್ಯವಸಾಯವು ದೊಡ್ಡ ದೊಡ್ಡ ಯಜ್ಞಗಳನ್ನು ಮಾಡುವದರ ರೂಪವಾಗಿ ಪರಿಣಮಿಸಿತೆಂದು ಹೇಳಬಹುದು. ಇದರಿಂದ, ವ್ಯಾಮೋಹ ಗೊಳಿಸುವದೂ ಅಲೋಕ ಸಾಮಾನ್ಯವೂ ಆದ ಕ್ರಿಯಾಕಲಾಪವು ಸಾಂಗೋಪಾಂಗವಾಗಿ ಹಬ್ಬತೊಡಗಿತು. ವೈದಿಕ ಮಂತ್ರಗಳೆಲ್ಲವೂ ಆಯಾಯ ಯಜ್ಞ ಕ್ರಿಯೆಗಳಿಗೆ ಸಂಬಂಧಿಸಿದವುಗಳಾಗಿ ವ್ಯವಸ್ಥೆ ಗೊಳಿಸಲ್ಪಟ್ಟವು. ಆಗಳೇ ವೈದಿಕ ಮಂತ್ರಗಳಿಗೂ ಯಾಜ್ಞಿಕ ಕ್ರಿಯೆಗಳಿಗೂ ಸಂಬಂಧಪಟ್ಟುದಾದ ಬೇರೊಂದು ಧರ್ಮ ಮಾರ್ಗವು ಪುರೋಹಿತರ ಪರಂಪರೆಯಲ್ಲಿ ಆವಿರ್ಭವಿಸಿತು. ಅಧ್ಯಾತ್ಮ ವಿದ್ಯಾ ವಿಷಯಕವಾದ ಅಂತಸ್ಥ ಧರ್ಮ ಮಾರ್ಗವನ್ನು ಪ್ರತಿಪಾದಿಸತಕ್ಕವುಗಳಾದ ಗ್ರಂಥಗಳು ಬ್ರಹ್ಮ

ಸಂಬಂಧಿತ್ವದಿಂದ ಬ್ರಾಹ್ಮಣಗಳೆಂದು ಹೇಳಿಸಿಕೊಳ್ಳಲ್ಪಟ್ಟವು. ಬ್ರಹ್ಮನ್ ಎಂಬ ಶಬ್ದವು ಪ್ರಾರ್ಥನೆ ಅಥವಾ ವಿಶ್ವದ ಆತ್ಮಾ ಎಂದರ್ಥವು. ಎದು ವರೆಗೆ ವೇದಗಳು ನಿರಾಯಾಸವಾಗಿ ತಿಳಿಯಲ್ಪಡುತ್ತಿದ್ದವೊ ಅದು ವರೆಗೆ ಬ್ರಾಹ್ಮಣ ಗ್ರಂಥಗಳು ತಲೆದೋರಿರಲಿಲ್ಲ. ವೇದಗಳ ರಕ್ಷಕರಾದ ಪುರೋಹಿತರು, ಕ್ರಮಿಕ ಸಂಚಯ ಮೂಲಕ ಭಾಷೆಯು ವಿಪರ್ಯಾಸವಾಗಲು ಅವುಗಳ ಅರ್ಥವನ್ನು ಅರಿತು ಕೊಳ್ಳಲು ಕುಂಠಿತ ಮತಿಯುಳ್ಳವರಾದ ಸಮಯದಲ್ಲಿಯೇ ಬ್ರಾಹ್ಮಣ ಗ್ರಂಥಗಳು ಬರೆಯಲ್ಪಟ್ಟವು. ಅವು ಸರ್ವಾತ್ಮನಾ ಗದ್ಯಮಯಗಳಾಗಿಯೂ ಕೆಲವೆಡೆಯಲ್ಲಿ ವೇದಗಳಂತೆ ಸ್ವರ ಚಿನ್ಹಗಳಿಂದ ಅಂಕಿತಗಳಾಗಿಯೂ ಇರುತ್ತವೆ. ಅವುಗಳ ವಾಕ್ಯಸರಣಿಯು ಬಹಳ ಕ್ಲಿಷ್ಟವಾಗಿಯೂ ಪರಸ್ಪರ ಅನನ್ವಿತವಾಗಿಯೂ ಇರುವದು.

ಆ ಬ್ರಾಹ್ಮಣ ಗ್ರಂಥಗಳು ವೈದಿಕ ವಾಕ್ಯಗಳ ಅನ್ಯೋನ್ಯ ವ್ಯಕ್ತಿಯನ್ನೂ ಯಜ್ಞಕ್ರಿಯೆಗಳ ಅಂಗಾಂಗಿಭಾವವನ್ನೂ ಪದಗಳ ಪರಸ್ಪರ ಬಿಡುವಿಲ್ಲದಿರುವ ಮೂಲಕವಾಗಿ ಸಂಕೇತವುಳ್ಳ ಅರ್ಥವನ್ನೂ ಬೋಧಿಸುತ್ತವೆ. ವ್ಯುತ್ಪತ್ತಿ, ಇತಿಹಾಸ ಮುಂತಾದ ಹಿಂದುಗಡೆಯುಂಟಾದ ಶಾಸ್ತ್ರಗಳ ಮೂಲವನ್ನು ಈ ಗ್ರಂಥಗಳಲ್ಲಿಯೇ ಕಾಣಬಹುದು. ಜ್ಯೋತಿಷದ ಮೂಲವಾದರೊ ಋಗ್ವೇದದ ಒಂದೆಡೆಯಲ್ಲಿ ಮಾತ್ರ ತೋರುವದು. ಬ್ರಾಹ್ಮಣಗಳಲ್ಲಿ ಕಾಣಬರುವ ಪ್ರಸಂಗಕ್ಕನುಗುಣಗಳಾದ ಉಪಾಖ್ಯಾನಗಳು ಹೃದಯಂಗಮಗಳಾಗಿವೆ. ಆದರೆ ಕೆಲವು ಆಶಯ ವಿಶೇಷಗಳನ್ನು ಬಿಟ್ಟುಉಳಿದ ಭಾಗವೆಲ್ಲವೂ ಸಾಹಿತ್ಯವೆಂಬದಾಗಿ ಹೇಳಿಸಿಕೊಳ್ಳಲ್ಪಡುವಷ್ಟು ಯೋಗ್ಯತೆಯುಳ್ಳದಾಗಿಲ್ಲ. ಯಾಜ್ಞಿಕ ಕರ್ಮಗಳ ಇರವನ್ನು ಬಿಚ್ಚಿ ಹೇಳಲು ತೊಡಗಿದ ಆ ಬ್ರಾಹ್ಮಣ ಗ್ರಂಥಗಳು ಅದಕ್ಕೆ ತಕ್ಕ ಹಾಗೆ ಪದಪ್ರಯೋಗಗಳೊಡನೆ ಆಯಾ ಪ್ರಸಂಗಕ್ಕೆ ಅನುಸರಿಸಿ ಅಧ್ಯಾತ್ಮವಿದ್ಯೆ ಜಗತ್ಸೃಷ್ಟಿ ಸಿದ್ಧಾಂತಗಳನ್ನು ಪ್ರಸ್ತಾಪಿಸುವ ಮೂಲಕವಾಗಿ ಈ ಮೇಲೆ ನಿರ್ದೇಶಿಸಲ್ಪಟ್ಟಂತೆ ಪುರಾವೃತ್ತಗಳನ್ನೂ ತತ್ವವಿದ್ಯೆಯನ್ನೂ ಬಣ್ಣಿಸುತ್ತವೆ. ಈ ಗ್ರಂಥಗಳ ಕೆಲವೆಡೆಯಲ್ಲಿ ಜಾಣತನದ ಹೆಮ್ಮೆಗೊಳಪಟ್ಟು ಸ್ವಕಪೋಲಕಲ್ಪಿತಾರ್ಥಗಳನ್ನು ನೆಲೆಗೊಳಿಸುವ ಬಯಕೆಯಿಂದ ಪ್ರಲಾಪಮಯಗಳಾದ ಬಗೆಬಗೆಯ ಚರ್ಚೆಗಳೂ ತೋರಿಸಲ್ಪಟ್ಟಿವೆ. ಈ ತೆರನಾದ ಸರಣಿಯಾದರೊ ಭಾರತ ವರ್ಷದ ಹೊರತು ಬೇರೆ ಎಲ್ಲಿಯೂ

ಮೊದಲಿರಲಿಲ್ಲವೆಂದು ಹೇಳಬಹುದು. ಆದರೂ ಇಂತಹ ವ್ಯವಸಾಯವು ಸಾಮಾನ್ಯವಾಗಿ ಮತಸಂಬಂಧ ಚರಿತೆಯನ್ನು ಚರ್ಚಿಸತಕ್ಕವರಿಗೆ ಮಿಗಿಲಾದ ಆಸರವಾಗಿದೆ. ಭರತ ಭೂಮಿಯಲ್ಲಿ ಅನಾದಿ ನಡೆದ ಸಂಗತಿಗಳನ್ನು ಹುಡುಕುವದಕ್ಕೆ ಬ್ರಾಹ್ಮಣ ಗ್ರಂಥಗಳು ದೀವಿಗೆಗಳಂತೆ ನೆರವಾಗುತ್ತವೆ.

ಇದು ವರೆಗಿನ ಬರಹದಿಂದ ವೇದ ಹಾಗು ಬ್ರಾಹ್ಮಣಗಳಲ್ಲಿರುವ ವಿಶೇಷವು ತೋರಿಸಲ್ಪಟ್ಟಿತು. ಒಟ್ಟಿನ ಮೇಲೆ, ವೇದಗಳು ಛಂದೋ ಬದ್ಧಗಳಾಗಿವೆ. ಬ್ರಾಹ್ಮಣಗಳು ಗದ್ಯಾತ್ಮಕಗಳಾಗಿವೆ. ವೇದ( ಸಂಹಿತೆ )ಗಳಲ್ಲಿ ಸ್ತೋತ್ರಗಳೂ ಮಂತ್ರ ಪ್ರಯೋಗಗಳೂ ಆಶೀರ್ವಾದಾತ್ಮಕ ಸೂಕ್ತಗಳೂ ಇಷ್ಟ ಪ್ರಾಪ್ತಿ ಹಾಗು ಅನಿಷ್ಟ ನಿವೃತ್ತಿಗಾಗಿ ಮಾಡಲ್ಪಡುವ ಪ್ರಾರ್ಥನೆಗಳೂ ಇವೆ. ಬ್ರಾಹ್ಮಣಗಳಲ್ಲಿ ದೇವಾದಿಗಳ ಕಥೆಗಳೂ ಯಾಜ್ಞಿಕ ಕರ್ಮಗಳ ಸಂಬಂಧವಾದ ವಿಚಾರವೂ ಬೇರೆಬೇರೆಗಳಾದ ಯಜ್ಞಗಳೊಳಗಣ ಕ್ರಿಯೆಗಳ ವ್ಯವಹಾರಿಕ ಹಾಗು ಆಧ್ಯಾತ್ಮಿಕ ಮಹತ್ವ ವರ್ಣನೆ ಮುಂತಾದ ವಿಷಯಗಳು ಇರುತ್ತವೆ. ಸಂಹಿತೆಗಳ ಅರ್ಥವನ್ನು ಸ್ಪಷ್ಟೀಕರಿಸುವದೇ ಬ್ರಾಹ್ಮಣಗಳ ಮುಖ್ಯೋದ್ದೇಶವಾಗಿದೆ.

ಆಯಾ ವೇದಕ್ಕೆ ಸಂಬಂಧಿಸಿದ ಬ್ರಾಹ್ಮಣ ಗ್ರಂಥಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ವಸ್ತುಗಳು, ಆಯಾ ವೇದದಲ್ಲಿ ಅಧಿಕೃತರಾದ (ಎಂದರೆ ಅನೂಚಾನ ಪದ್ಧತಿಯ ಮೇರೆಗೆ ಋಗಾದಿ ವೇದಗಳನ್ನು ಚೆನ್ನಾಗಿ ಅರಿತವರಾದ ) ಋತ್ವಿಜರ ಕರ್ಮಗಳ ಭೇದ ಮೂಲಕವಾಗಿ ಬೇರೆ ಬೇರೆಗಳಾಗಿರುತ್ತವೆ. ಬೇರೆ ಬೇರೆ ಕ್ರಿಯೆಗಳಿಗೆ ಸಂಬಂಧಿಸಿದ ಬೇರೆ ಬೇರೆ ಮಂತ್ರಗಳ ವಿನಿಯೋಗ ಜ್ಞಾನವು ಆಯಾ ವೇದದ ಅರ್ಥ ಪರಿಜ್ಞಾನವುಳ್ಳ ಋತ್ವಿಜರಿಗೆ ಸರಿಯಾಗಿರಬೇಕಾದುದು. ಹೋತೃವೆಂಬ ಹೆಸರುಳ್ಳ ಋತ್ವಿಜನಿಗೆ ಸಲ್ಲುವ ಕರ್ಮಗಳನ್ನು ಋಗ್ವೇದ ಬ್ರಾಹ್ಮಣಗಳು ಉಪದೇಶಿಸುತ್ತವೆ. ಇದೇ ಮೇರೆಗೆ ಯಜುರ್ವೇದ ಬ್ರಾಹ್ಮಣಗಳು ಅಧ್ವರ್ಯುವಿಗೂ ಸಾಮವೇದ ಬ್ರಾಹ್ಮಣಗಳು ಉದ್ಗಾತುವಿಗೂ ಆಯಾ ಕರ್ಮಗಳನ್ನು ಬೋಧಿಸುತ್ತವೆ. ಋಗ್ವೇದಕ್ಕೆ ಸಂಬಂಧಿಸಿದ ಬ್ರಾಹ್ಮಣಗಳು ವೇದ ಮಂತ್ರಗಳ ಅನುಕ್ರಮಕ್ಕಿಂತಲೂ ಭಿನ್ನವಾದ ಕ್ರಿಯಾ ಕ್ರಮವನ್ನು ಅವಲಂಬಿಸಿವೆ. ಯಜುಸ್ಸಾಮಗಳಿಗೆ ಸಂಬಂಧ ಪಟ್ಟ ಬ್ರಾಹ್ಮಣಗಳು

ಆಯಾ ವೇದದಲ್ಲಿಯ ಕ್ರಿಯಾ ಕ್ರಮಕ್ಕೆ ಅನುಸಾರವಾದ ಮಂತ್ರಗಳ ಸಂಗ್ರಹದೊಡನೆ ಆಯಾವೇದ ಮಂತ್ರಗಳ ಪರಿಪಾಟಿಯನ್ನೇ ಹಿಂಬಾಲಿಸುತ್ತವೆ. ಅವುಗಳಲ್ಲಿ ಸಾಮವೇದ ಬ್ರಾಹ್ಮಣಗಳು ಪ್ರತಿಯೊಂದು ಮಂತ್ರದ ಅರ್ಥವನ್ನು ಬಣ್ಣಿಸುವದಿಲ್ಲ. ಯಜುರ್ವೇದ ಬ್ರಾಹ್ಮಣಗಳಾದರೊ ಬಹುತರವಾಗಿ ಎಲ್ಲ ಮಂತ್ರಗಳ ಅರ್ಥಗಳನ್ನು ಸಂಗ್ರಹರೂಪದಿಂದ ನಿರೂಪಿಸುತ್ತವೆ.

ಈ ಬ್ರಾಹ್ಮಣ ಭಾಗವು ಭಾರತವರ್ಷೀಯ ಸಾಂಘಿಕ ಜಾತಿಯನ್ನು ಚರ್ಚಿಸುವವರಿಗೆ ಅತ್ಯಂತ ಉಪಯುಕ್ತವಾಗಿದೆ. ಈಗಣಭಾರತವರ್ಷದಲ್ಲಿ ಸಂಕೀರ್ಣ ರೂಪದಿಂದ ಹರಡಿದ ವರ್ಣಜಾಲಕ್ಕೆ ಮೂಲಭೂತವಾದ ಚಾತುರ್ವರ್ಣ್ಯ ವಿಭಾಗವು ಬ್ರಾಹ್ಮಣ ಕಾಲದಲ್ಲಿ ಪೂರ್ಣರೂಪತ್ವವನ್ನು ಪಡೆದಿದ್ದಿತಾಗಿ ಕಂಡು ಬರುವದು. ವೇದ ಕಾಲದಲ್ಲಿಯೇ ಎಲ್ಲದರಿಂದಲೂ ಘನತೆಯನ್ನು ಹೊಂದಿದ್ದ ಪುರೋಹಿತರು ವರ್ಣ ವ್ಯವಸ್ಥೆಯಾದ ಬಳಿಕಾದರೊ ಮತ್ತಿಷ್ಟು ಹೆಚ್ಚುಗಾರಿಕೆಯನ್ನೇ ಪಡೆದರು. ಪೌರೋಹಿತ್ಯವು ಮಹತ್ವವುಳ್ಳುದೆಂಬ ಭಾವನೆಯು ಭಾರತೀಯರಲ್ಲಿ ಇದ್ದ ಹಾಗೆ ಬೇರೆ ಯಾರಲ್ಲಿಯೂ ಇದ್ದುದು ಕಾಣಬರುವದಿಲ್ಲ. ಭಾರತೀಯರಲ್ಲಿ ಕುಲ ಕ್ರಮಾಗತರಾದ ಪುರೋಹಿತವರ್ಗೀಯರಲ್ಲಿಯೇ ಸಂಪ್ರದಾಯ ಶುದ್ಧವಾದ ವೇದಾಧ್ಯಯನಾಧಿಕಾರವು ಈಗಳೂ ಸುಪ್ರತಿಷ್ಠಿತವಾಗಿರುವದು. ಅದಂತಿರಲಿ. ಆ ಬ್ರಾಹ್ಮಣಗಳು ಕೆಲವು ಕಾಲಾನಂತರದಲ್ಲಿ ಪವಿತ್ರಸ್ವರೂಪಗಳನ್ನು ತಳೆದವು; ಇಷ್ಟೆಯಲ್ಲ ಶ್ರುತಿವರ್ಗದಲ್ಲಿ ಪರಿಗಣಿಸಲ್ಪಟ್ಟವು ಅವುಗಳ ತರುವಾಯ ಆತ್ಮವಿದ್ಯೆಯನ್ನು ಪ್ರತಿಪಾದಿಸುವವುಗಳೂ ನಿರುಪದ್ರವಾದ ಅರಣ್ಯದಲ್ಲಿ ಪಠಿಸಲ್ಪಡತಕ್ಕವುಗಳೂ ಆದ ಆರಣ್ಯಕಗಳು ತಲೆದೋರಿದವು. ಅನಂತರದಲ್ಲಿ, ಆತ್ಮತತ್ವವನ್ನೇ ವಿಶೇಷವಾಗಿ ಪ್ರಕಾಶಗೊಳಿಸತಕ್ಕವುಗಳಾದ ಉಪನಿಷತ್ತುಗಳೆಂಬ ಗ್ರಂಥಗಳು ಪ್ರಾದುರ್ಭವಿಸಿದವು. ಆರಣ್ಯಕಗಳೂ ಉಪನಿಷತ್ತುಗಳೂ ಕ್ರಮದಿಂದ ಶ್ರುತಿ ಪದವಿಗೆ ಮುಟ್ಟಿದವು. ಆಯಾ ವೇದಕ್ಕೆ ಸಂಬಂಧಿಸಿದ ಬ್ರಾಹ್ಮಣ--ಆರಣ್ಯಕ-ಉಪನಿಷತ್ತುಗಳನ್ನು ನಿರ್ದೇಶ ಮಾತ್ರವಾಗಿ ಈ ಕೆಳಗೆ ತೋರಿಸುವೆವು.--

ಋಗ್ವೇದಕ್ಕೆ--ಐತರೇಯ ಬ್ರಾಹ್ಮಣ; ಕೌಷಿತಕೀ ಬ್ರಾಹ್ಮಣಂ ಎಂಬಿವೆರಡೂ (ಸಾಙ್ಖ್ಯಾಯನ-ಶಾಂಖಾಯನ ಶಬ್ದ; ಗಳು ಕೌಷಿತಕಿಯ ಪರ್ಯಾಯಗಳು.)

ಕೃ. ಯ. ವೇ. ಕ್ಕೆ—ತೈತ್ತಿರೀಯ ಬ್ರಾಹ್ಮಣವೂ;
ಶು. ಯ. ವೇ. ಕ್ಕೆ—ಶತಪಥ; ಕಾಣ್ವ ಬ್ರಾಹ್ಮಣಗಳೂ;
ಸಾ. ವೇ. ಕ್ಕೆ—ಪಂಚವಿಂಶ; ಷಡ್ವಿಂಶ; ಸಾಮವಿಧಾನ; ಆರ್ಷೇಯ; ಮನ್ತ್ರ; ದೇವತಾಧ್ಯಾಯ; ವಂಶ; ಸಂಹಿತೋಪನಿಷದ್ ಬ್ರಾ.; ಜೈಮಿನೀಯ ಬ್ರಾ.; ಜೈಮಿನೀಯೋಪನಿಷದ್ ಬ್ರಾ; ಅಪಯಃ ಎಂಬೀ ಬ್ರಾಹ್ಮಣಗಳೂ;
ಅ. ವೇ. ಕ್ಕೆ—ಗೋಪಥ ಬ್ರಾಹ್ಮಣವು ಎಂಬೀ ರೀತಿಯಾಗಿ ಆಯಾ ವೇದಕ್ಕೆ ಸಂಬಂಧಿಸಿದವುಗಳಾಗಿವೆ.

... ... ... ... ...

ಋ. ವೇ. ಕ್ಕೆ—ಐತರೇಯಾರಣ್ಯಕ; ಸಾಂಖ್ಯಾಯನ ಆರಣ್ಯಕ.
ಕೃ. ಯ. ವೇ.—ತೈತ್ತಿರೀಯ ಆರಣ್ಯಕ.
ಶು. ಯ. ವೇ.—ಬೃಹದಾರಣ್ಯಕ (ಅ) ಮಾಧ್ಯಂದಿನ ಶಾಖೆಯ ಬ್ರಾಹ್ಮಣದೊಳಗಣ ೧೪ನೆಯ ಕಾಂಡ (ಅ) ಕಾಣ್ವಶಾಖೆಯ ಬ್ರಾಹ್ಮಣದೊಳಗಣ ೧೭ನೆಯ ಕಾಂಡವು.

ಉಪನಿಷದ್ವರ್ಗವಾದರೊ ವೇದದೊಳಗಣ ಶ್ರೇಷ್ಠತಮವಾದ ಜ್ಞಾನದಭಾಗವು. ಅದು ಕಾರಣವೇ, ಅದಕ್ಕೆ ವೇದಾಂತ ಎಂಬ ಹೆಸರಿದೆ. ಪ್ರತಿಯೊಂದು ವೇದದ ಬೇರೆ ಬೇರೆ ಭಾಗಗಳಿರುವಂತೆ ಪ್ರತಿಯೊಂದು ವೇದದ ಭಾಗರೂಪಗಳಾದ ಸ್ವತಂತ್ರ ಉಪನಿಷತ್ತುಗಳೂ ಇವೆ. ವೇದಭಾಗಗಳೆನಿಸುವ ಬ್ರಾಹ್ಮಣ ಗ್ರಂಥಗಳಿಗೆ ವೈದಿಕತ್ವವಿರುತ್ತಿರಲು ತದ್ಭಾಗ ವಿಶೇಷಗಳು ಪವಿತ್ರ ಜ್ಞಾನಬೋಧಕಗಳೂ ಆದ ಉಪನಿಷತ್ತುಗಳಿಗಾದರೊ ವೈದಿಕತ್ವವು ನಿರ್ವಿವಾದವಾಗಿದೆಯೆಂಬ ಈಗುಟ್ಟನ್ನು **ಶಿವಾನುಭವ** ಪ್ರೇಮಿಗಳು ಮನದಲ್ಲಿ ಮರೆಯದೆ ಮಡುಗಿಕೊಳ್ಳತಕ್ಕದ್ದು.

ಋ. ವೇ.—ಐತರೇಯೋಪನಿಷದ್; ಕೌಷಿತಕ್ಯುಪನಿಷದ್; ಬಾಷ್ಕಲೋಪನಿಷದ್;
ಕೃ. ಯ. ವೇ.—ತೈತ್ತಿರೀಯೊಪನಿಷದ್; ಮೈತ್ರಾಯಣ್ಯುಪನಿಷದ್; ಕಠೊಪನಿಷದ್; ಶ್ವೇತಾಶ್ವತರೊಪನಿಷದ್;
ಶು. ಯ. ವೇ.—ಈಶಾವಾಸ್ಯೊಪನಿಷದ್; ಬೃಹದಾರಣ್ಯಕೊಪನಿಷದ್;

ಸಾ. ವೇ. — ಛಾಂದೊಗ್ಯೋಪನಿಷದ್; ಕೇನೊಪನಿಷದ್;
ಅ. ವೇ.— ಪ್ರಶ್ನೋಪನಿಷದ್; ಮಾಂಡುಕ್ಯೋಪನಿಷದ್; ಮುಂಡ
ಕೊಪನಿಷದ್;

ಇವುಗಳಲ್ಲದೆ ಬೇರೆ ಅನೇಕ ಉಪನಿಷತ್ತುಗಳು ಈಗ ಪ್ರಚಾರದ ಲ್ಲಿರುತ್ತವೆ.

ಇದು ವರೆಗೆ ವೇದ ಭಾಗಗಳ ನಿರ್ದೇಶವು ಮಾಡಲ್ಪಟ್ಟಿತು. ವೇದಕ್ಕೆ 'ಶ್ರುತಿ' ಎಂಬ ಎರಡನೆಯ ಹೆಸರಿರುವದು. ವೈದಿಕ ಸಾಹಿತ್ಯ ವರ್ಗ ದಲ್ಲಿ ಪರಿಗಣಿಸಲ್ಪಡುವ ಮತ್ತೊಂದು ಭಾಗವಿರುವದು. ಅದು ವೈದಿಕ ವೆನಿಸುವದಾದರೂ ಶ್ರುತಿ ಎಂಬ ಹೆಸರನ್ನು ತಳೆದಿರುವದಿಲ್ಲ. ಅದಾವು ದೆಂದರೆ ಸೂತ್ರ ಸಮುದಾಯವು. ಬ್ರಾಹ್ಮಣ ಗ್ರಂಥಗಳೊಳಗಣ ಹಾಗು ಸಂಪ್ರದಾಯದಿಂದ ಬಂದ ವಿಸ್ತೃತಗಳಾದ ಧರ್ಮಗಳನ್ನೂ ಕರ್ಮಕ ಲಾಪಾದಿ ಸಮಗ್ರ ವಿಷಯಗಳನ್ನೂ ಒಟ್ಟು ಗೂಡಿಸಿ ಸೇರುವೆ ಮಾಡು ವದೇ ಸೂತ್ರ ಗ್ರಂಥಗಳ ಪರಮೋದ್ದೇಶವು. ಇವುಗಳಿಗೆ ಕಲ್ಪ ಸೂತ್ರಗ ಳೆಂತಲೂ ಅಥವಾ ಹಾಗೇ ಸೂತ್ರಗಳೆಂತಲೂ ಎನ್ನುತ್ತಾರೆ. ಈ ಸೂತ್ರ ಗಳು ಹೊಸತಾದ ಧರ್ಮಗಳನ್ನು ಉಪದೇಶಿಸಲು ಪ್ರವೃತ್ತವಾದವುಗ ಳಲ್ಲ. ಮತ್ತೇನೆಂದರೆ— ಪೂರ್ವಿಕರಿಂದ ಪ್ರತಿಪಾದಿಸಲ್ಪಟ್ಟ ವಿಷಯಗ ಳನ್ನೇ ಕರತಳಾಮಳಕದಂತೆ (ಅಂಗೈಯೊಳಗಣ ನೆಲ್ಲೀಕಾಯಿಯಂತೆ) ಮಾಡಲುದ್ಯುಕ್ತಗಳಾಗಿವೆ. ಬಹು ಅರ್ಥ ಗರ್ಭಿತಗಳಾದ ಮಿತಾಕ್ಷರಗ ಳುಳ್ಳವುದೇ ಸೂತ್ರದ ಸ್ವರೂಪವು. ಆಯಾ ವರ್ಗೀಯಗಳಾದ ಸೂತ್ರ ಗ್ರಂ ಥಗಳೆಲ್ಲವೂ ಬಹುತರವಾಗಿ ಸಮಾನ ರೂಪಗಳೇ ಆಗಿರುವವಾದರೂ ಅವುಗಳ ಉತ್ಪತ್ತಿಗೆ ಸಂಬಂಧಪಟ್ಟ ಕಾಲಭೇದಗಳನ್ನು ಅವಶ್ಯವಾಗಿ ಒಡಂಬಡಲೇ ಬೇಕು. ಅವುಗಳಲ್ಲಿ ಬಹು ಸ್ವಲ್ಪ ಅಕ್ಷರಗಳುಳ್ಳ ಕೆಲವು ಸೂತ್ರ ಗ್ರಂಥಗಳು ಬಹಳಾದಿಯಾದವುಗಳಲ್ಲ; ಭಾಷೆಯ ಸ್ವಾರಸ್ಯವನ್ನು ಪರಿಕ್ಷಿಸಿದರೆ ಆ ಸೂತ್ರ ಗ್ರಂಥಗಳು ಪಾಣಿನಿಯ ಸಮಕಾಲಿಕಗಳೆಂದು ತೋರುತ್ತವೆ. ಆದರೆ ಕೆಲವು ಸೂತ್ರ ಗ್ರಂಥಗಳು ಅವುಗಳಿಗಿಂತಲೂ ಅತಿಪ್ರಾಚೀನಗಳಾಗಿವೆ. ಒಟ್ಟಿನ ಮೇಲೆ, ಕ್ರಿ. ಶ. ದ ಆರಂಭಕ್ಕಿಂತ ಮುಂಚೆ ಆಯ್ದನೆಯ ಶತಮಾನ ಮೊದಲಾಗಿ ಎರಡನೆಯ ಶತಮಾ ನದ ವರೆಗೆ ಸೂತ್ರ ಗ್ರಂಥಗಳ ಆವಿರ್ಭಾವದಕಾಲವೆಂದು ಬಲ್ಲವರ

ಒಪ್ಪಿಗೆಯಿದೆ. ಆ ಸೂತ್ರಗಳಾದರೊ ಶ್ರೌತ ಸೂತ್ರಗಳೆಂತಲೂ ಗೃಹ್ಯ ಸೂತ್ರ ಗಳೆಂತಲೂ ಧರ್ಮಸೂತ್ರಗಳೆಂತಲೂ ಮೂರು ತೆರನಾಗಿವೆ. ಅವು ಗಳಲ್ಲಿ---

ಶ್ರೌತ ಸೂತ್ರಗಳು—ಶ್ರೌತ ಕರ್ಮಗಳನ್ನು ಬೋಧಿಸುತ್ತವೆ. ಎಂದರೆ ಮೂರಾಗಲಿ ಅದಕ್ಕೂ ಹೆಚ್ಚಾಗಲಿ ಅಗ್ನಿಗಳಿಂದ ಆಚಾರ್ಯರ ಮುಖೇನ ಮಾಡಲ್ಪಡತಕ್ಕ ಶ್ರುತಿ ಮೂಲಕಗಳಾದ ಕರ್ಮಗಳನ್ನು ಉಪದೇಶಿಸು ತ್ತವೆ. ಈ ಸೂತ್ರಗಳಲ್ಲಿ ದೊಡ್ಡ ದೊಡ್ಡ ಯಜ್ಞಗಳ ಪ್ರಯೋಗ ನಿಯ ಮಗಳು ಹೇಳಲ್ಪಟ್ಟಿವೆ ಒಂದೇ ಶ್ರೌತ ಸೂತ್ರ ಗ್ರಂಥದಲ್ಲಿ ಆಯಾ ಯಜ್ಞ ಗಳ ಸ್ವರೂಪವು ಸಂಪೂರ್ಣವಾಗಿ ಪ್ರತಿಪಾದಿಸಲ್ಪಟ್ಟಿರುವದಿಲ್ಲವಾದುದ ರಿಂದ ಯಜ್ಞಗಳ ಪೂರ್ಣ ಸ್ವರೂಪವನ್ನು ತಿಳಿದು ಕೊಳ್ಳುವದಕ್ಕಾಗಿ ಅನ್ಯ ಶ್ರೌತ ಸೂತ್ರ ಗ್ರಂಥಗಳನ್ನಾದರೂ ಮರೆವೊಗುವದುಂಟು.

ಗೃಹ್ಯ ಸೂತ್ರಗಳು— ಗಾರ್ಹಪತ್ಯಾಗ್ನಿಯಿಂದ ( ಒಂದೇ ಅಗ್ನಿ ಯಿಂದ ) ದಿನಾಲೂ ಗೃಹಸ್ಥರು ಮನೆಗಳಲ್ಲಿ ಅನುಷ್ಠಿಸಲ್ಪಡತಕ್ಕ ಕರ್ಮ ಗಳನ್ನು ತಿಳಿಸುತ್ತವೆ ಈ ಕರ್ಮಗಳನ್ನು ಮಾಡುವಾಗ ಆಚಾರ್ಯರ ಅವ ಶ್ಯಕತೆಯಿರುವದಿಲ್ಲ; ಮನೆಯ ಯಜಮಾನನೇ ತನ್ನ ಪತ್ನಿಯೊಡನೆ ನೆರವೇರಿಸುತ್ತಾನೆ. ಈ ಕರ್ಮಗಳು ಸ್ಮೃತಿ ಮೂಲಕಗಳಾದ್ದರಿಂದ ಇವು ಗಳಿಗೆ ಸ್ಮಾರ್ತ ಕರ್ಮಗಳೆನ್ನುತ್ತಾರೆ.

ಜನ್ಮ- ವಿವಾಹ — ಮೃತ್ಯು ಮುಂತಾದ ಪ್ರಸಂಗಗಳಲ್ಲಿ ಮಾಡಲ್ಪ ಡತಕ್ಕ ಸಣ್ಣ ಪುಟ್ಟ ಸಂಸ್ಕಾರಗಳಿಗೂ ನಿತ್ಯದ ಹೋಮಹವನಗಳಿಗೂ ಸಂಬಂಧ ಪಟ್ಟ ನಿಯಮಗಳು ಈ ಗೃಹ್ಯ ಸೂತ್ರಗಳಲ್ಲಿ ದೊರೆಯುತ್ತವೆ. ಗೃಹ್ಯ ಸೂತ್ರ ಗ್ರಂಥಗಳು ಅನೇಕವಾಗಿವೆಯೆಷ್ಟೆ. ಆ ಎಲ್ಲವುಗಳಲ್ಲಿಯೂ ಸಮಾನವಾದ ವಿಷಯಗಳೇ ಪ್ರತಿಪಾದಿಸಲ್ಪಡುತ್ತವೆ. ಆದರೆ ಆಯಾ ಕ್ರಿಯೆಗಳಲ್ಲಿ ಪಠಿಸಲ್ಪಡುವ ಮಂತ್ರಗಳಾದರೊ ಆಯಾ ಗೃಹ್ಯ ಸೂತ್ರ ಗಳಿಗೆ ಸಂಬಂಧಿಸಿದ ವೇದಗಳಿಂದ ಉದ್ಧೃತವಾದವುಗಳಾಗಿರುವವೆಂಬ ದಿಷ್ಟೇ ವಿಶೇಷವು. ಈ ಗೃಹ್ಯ ಸೂತ್ರ ಗ್ರಂಥಗಳು ತಮ್ಮ ತಮ್ಮ ಶಾಖೀ ಯಗಳಾದ ಶ್ರೌತ ಸೂತ್ರ ಗ್ರಂಥಗಳನ್ನು ಪರಾಮರ್ಶಿಸುವವುಗಳಾಗಿ ತಮಗೂ ಅವುಗಳಿಗೂ ಇರುವ ಪರಿಚಯವನ್ನು ಸೂಚಿಸುತ್ತವೆ; ಆದರೂ ಶ್ರೌತ ಹಾಗೂ ಗೃಹ್ಯ ಎಂಬಿವೆರಡು ಮಾರ್ಗಗಳು ಒಂದೇ ಆಗಿರು ವದಿಲ್ಲ.

ಶ್ರೌತ, ಗೃಹ್ಯ ಸೂತ್ರಗಳಲ್ಲದೆ ವರ್ಣಾಶ್ರಮಧರ್ಮಗಳನ್ನೂ ವ್ಯಾವಹಾರಿಕ ಧರ್ಮಗಳನ್ನೂ ಶಾಸನಗೊಳಿಸುವ ಮತ್ತೊಂದು ಸೂತ್ರ ಗ್ರಂಥ ಸಮುದಾಯವಿದೆ. ಅದಕ್ಕೆ ಧರ್ಮಸೂತ್ರ ಗ್ರಂಥಸಮುದಾಯವೆನ್ನುವರು. ಆದಾದರೂ ಗೃಹ್ಯ ಸೂತ್ರಗಳಂತೆ ಸ್ಮೃತಿಮೂಲಕವಾದುದು. ಅಂತಪ್ಪ ಧರ್ಮ ಸೂತ್ರ ಗ್ರಂಥಗಳು ಭಾರತೀಯರ ಲೌಕಿಕವ್ಯವಹಾರಗಳಿಗೆ ಮೂಲ ಪ್ರಮಾಣ ಭೂತಗಳಾಗಿವೆ. ಧರ್ಮ ಎಂಬ ಶಬ್ದವು ವರ್ಣಾಶ್ರಮಧರ್ಮ, ಸದಾಚಾರ ಎಂಬ ಅರ್ಥದ್ವಯ ವಾಚಕವಾಗಿದೆ. ಆದರೂ ಇಲ್ಲಿ ವರ್ಣಾಶ್ರಮಧರ್ಮವೇ ಪ್ರಾಧಾನ್ಯವಾಗಿ ವಿವಕ್ಷಿತವಾಗಿರುವದರಿಂದ ಅದುವೇ ಪ್ರಕೃತಕ್ಕೆ ಸರಿಯಾಗಿ ಹೆಚ್ಚು ಸಮನಿಸುವದು. ಇದಲ್ಲದೆ, ಈ ಧರ್ಮ ಸೂತ್ರಗಳಿಗೂ ವೇದಗಳಿಗೂ ಸಾಕ್ಷಾತ್ಸಂಬಂಧವಿದ್ದುದಾಗಿ ತೋರುವದು. ಅದು ಹೇಗಂದರೆ—ಇವು ವೇದವಾಕ್ಯಗಳನ್ನೇ ಮಿಗಿಲಾದ ಪ್ರಮಾಣಗಳೆಂದೊಪ್ಪುತ್ತವೆ.

ಈ ಬಗೆಯಾಗಿ, ಸಾರತರ ವಿಷಯಗಳನ್ನು ಅತಿಪರಿಮಿತಶಬ್ದಗಳಿಂದ ಸಂಕ್ಷೇಪಗೊಳಿಸುವ ವಿಕೃತವೂ ಕ್ಲಿಷ್ಟವೂ ಆದ ಭಾಷೆಯುಸರಣಿಯನ್ನು ಅನುಸರಿಸುವವುಗಳೂ ವೈದಿಕ ಸಾಹಿತ್ಯ ಕೋಟಿಯಲ್ಲಿ ಸೇರಿಸಿ ವಿಮರ್ಶಿಸಲ್ಪಡತಕ್ಕವುಗಳೂ ಆದ ಈ ಸೂತ್ರಗ್ರಂಥಗಳೆಲ್ಲವೂ ಬ್ರಾಹ್ಮಣ ಗ್ರಂಥಗಳಿಗಿಂತಲೂ ಕಡಿಮೆ ತರಗತಿಗೊಳಪಟ್ಟವುಗಳಾದರೂ ಬುನಾದಿ ಬ್ರಾಹ್ಮಣ ಗ್ರಂಥಗಳಲ್ಲಿ ವಿಷಯಗಳ ಸೇರುವೆಯು ಸರಿಯಾಗಿಲ್ಲದಿದ್ದುದರಿಂದ ಕರ್ಮಗಳ ಸಂಬಂಧವಾದ ತಿಳುವಳಿಕೆಗೆ ಬಲು ತೊಂದರೆಯಾಗಿರುತ್ತಿರಲು, ಸೂತ್ರಗ್ರಂಥಗಳು ಆಯಾ ಪ್ರಕರಣಗಳನ್ನು ಸಂಧರ್ಭಕ್ಕೆ ಸರಿಯಾಗಿ ಸೇರುವೆಮಾಡಿ ವಿಷಯಗಳನ್ನು ವ್ಯವಸ್ಥೆಗೊಳಿಸಿದವುಗಳಾಗಿ ಅನುಷ್ಠಿಸಲ್ಪಡತಕ್ಕ ಬೇರೆ ಬೇರೆ ಕರ್ಮಗಳ ನಿಜಸ್ವರೂಪವನ್ನು ನಿರಾಯಾಸವಾಗಿ ತಿಳಿದುಕೊಳ್ಳುವಂತೆ ಮಾಡಿದುದರಿಂದ ಯಾಗಗಳನ್ನುನೆರವೇರಿಸುವ ಬಗೆಯನ್ನು ಪ್ರತ್ಯಕ್ಷವಾಗಿ ನೋಡದೆಯಾದರೂ ಇವುಗಳ ಪರಿಶೀಲನ ಬಲದಿಂದ ಸಾಂಗೋಪಾಂಗಗಳಾದ ಆ ಯಜ್ಞಗಳನ್ನು ಸರಿಯಾಗಿ ಮಾಡಲಿಕ್ಕೆ ಬರುವದಾದಕಾರಣವೇ ಈ ಸೂತ್ರಗ್ರಂಥಗಳು ಧರ್ಮದ ಇರವನ್ನು ಕಂಡುಕೊಳ್ಳಬೇಕೆಂಬ ಬಯಕೆಯುಳ್ಳವರಿಗೆ ಪರಮೋಪಕಾರವನ್ನು ಮಾಡತಕ್ಕವುಗಳಾಗಿರುವವೆಂದು ಧಾರಾಳವಾಗಿ ಹೇಳಬಹುದು.

ಗೃಹ್ಯ ಸೂತ್ರ ಗ್ರಂಥಗಳೂ ಧರ್ಮ ಸೂತ್ರ ಗ್ರಂಥಗಳೂ, ವೈದಿಕ ಕಾಲದಲ್ಲಿ ಭಾರತೀಯರ ಲೋಕಯಾತ್ರೆಯೆಲ್ಲವೂ ನಿತ್ಯ ನೈಮಿತ್ತಿಕ ರೂಪಗಳಾದ ಉಚ್ಚಾವಚ (ಮೇಲುಕೀಳಾದ ಹಲವು ಬಗೆಯ) ಕರ್ಮ ಜಾಲಗಳಿಂದಲೇ ಆಕ್ರಮಿಸಲ್ಪಟ್ಟಿದ್ದಿತೆಂಬುದನ್ನು ಬೋಧಿಸುವವುಗಳಾಗಿ ಬುನಾದಿ ಭಾರತೀಯರ ಆಚಾರಗಳ ಬಗ್ಗೆ ವಿಚಾರಪರರಾದವರೆದುರಿಗೆ ನಿಜವಾದ ಸಂಗತಿಯನ್ನಿರಿಸುತ್ತವೆ.

ಆಯಾ ವೇದಕ್ಕೆ ಸಂಬಂಧಿಸಿದ ಶ್ರೌತ ಸೂತ್ರಗಳೂ, ಗೃಹ್ಯ ಸೂತ್ರಗಳೂ ಧರ್ಮ ಸೂತ್ರಗಳೂ ಈ ಕೆಳಗೆ ಬರೆದಂತಿರುವವು.—

| | ಶ್ರೌತಸೂ. | ಗೃಹ್ಯಸೂ. | ಧರ್ಮಸೂ |
|---|---|---|---|
| ಋ. ವೇ.— | ೧ ಆಶ್ವಲಾಯನ. | ೧ ಆಶ್ವಲಾಯನ. | ೧ ವಸಿಷ್ಠ. |
| | ೨ ಸಾಂಖ್ಯಾಯನ (ಕೌಷತಿಕೀ) | ೨ ಸಾಂಖ್ಯಾಯನ ಅಥವಾ ಕೌಷಿತಕೀ. | |
| ಕೃ.ಯ.ವೇ.– | ೧ ಆಪಸ್ತಂಭ. | ೧ ಮಾನವ. | |
| | ೨ ಬೋಧಾಯನ. | | |
| | ೩ ಹಿರಣ್ಯಕೇಶೀ (ಸತ್ಯಾಷಾಢ) | | |
| | ೪ ಭಾರದ್ವಾಜ. | | |
| | ೫ ವೈಖಾನಸ. | | ೧ ಆಪಸ್ತಂಭ. |
| | ೬ ನಾಥೂಲ. | | ೨ ಬೋಧಾಯನ |
| | ೭ ಮಾನವ. | | ೩ ಹಿರಣ್ಯಕೇಶೀ |
| | ೮ ವಾಸಹ. | | |
| ಶು. ಯ.ವೇ.– | ೧ ಕಾತ್ಯಾಯನ (ಪಾರಸ್ಕರ) | ೧ ಕಾತ್ಯಾಯನ | |
| ಸಾ. ವೇ.— | ೧ ಖಾದಿರ. | ೧ ಖಾದಿರ. | ೧ ಗೌತಮ. |
| | ೨ ಲಾಟ್ಯಾಯನ, | ೨ ಗೋಭಿಲ. | |
| | ೩ ದ್ರಾಹ್ಯಾಯಣ. | ೩ ಗೌತಮ. | |
| ಅ. ವೇ.— | ೧ ವೈತಾನ. | ೧ ಕೌಶಿಕ. | |

ಇವುಗಳಲ್ಲಿ, ಶ್ರೌತಸೂತ್ರ (ಕಲ್ಪಸೂತ್ರ) ಗ್ರಂಥ ಸಮುದಾಯ ವನ್ನು ಮಾತ್ರ ಶಿಕ್ಷಾ, ಛಂದಸ್ಸು, ಜ್ಯೋತಿಷ, ವ್ಯಾಕರಣ ನಿರುಕ್ತಗ ಳೆಂಬ ಶಾಸ್ತ್ರಗಳ ಮಾಲೆಯಲ್ಲಿ ಸೇರಿಸಿ ಅವುಗಳಿಗೆಲ್ಲ ವೇದದ ಅಂಗಗ ಳೆನ್ನುತ್ತಾರೆ. ಈಗ ಅವುಗಳ ಬಗ್ಗೆ ವಿಚಾರ ಮಾಡತೊಡಗುವದು ಅಪ್ರ ಕೃತವೆನಿಸದು. ವೇದಾಂಗಗಳೆಂದರೆ ವೇದದ ಉಪಗ್ರಂಥಗಳು. ಅವು ವೇದದ ಎಲ್ಲ ಇರವನ್ನು ತಿಳಿಸಿಕೊಡುವದಕ್ಕಾಗಿಯೇ ಪ್ರವೃತ್ತಗಳಾಗಿವೆ. ಅವುಗಳಲ್ಲಿ ಶಿಕ್ಷಾ ಗ್ರಂಥವು ವೇದವರ್ಣಗಳನ್ನು ಹೇಗೆ ಉಚ್ಚರಿಸಬೇಕು, ಸ್ವರವು ಆವಾವಲ್ಲಿ ಎಂತೆಂತಿರಬೇಕು ಹಾಗು ಸಂಧಿ ವರ್ಣೋತ್ಪತ್ತಿ, ವರ್ಣೋತ್ಪತ್ತಿ ಸ್ಥಾನಗಳೂ ಮುಂತಾದುವರ ವಿಷಯವಾಗಿ ಶಾಸನಗೊ ಳಿಸುವದು. ಹೇಗೆಂದರೆ:—

ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ। ಸವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇ†ಂದ್ರ ಶತ್ರುः ಸ್ವರತೋಽಪರಾಧಾತ್॥

"ಸ್ವರ ವರ್ಣಗಳ ಕ್ರಮವಿಲ್ಲದೆ ವಿಪರ್ಯಾಸದೊಡನೆ ಪ್ರಯೋಗಿಸ ಲ್ಪಡುವ ಮಂತ್ರವು ವಿಪರೀತವಾದ ಅರ್ಥಪ್ರದವಾದುದಾಗಿ ವಜ್ರದಂತೆ ಪರಿಣಮಿಸಿ ಪಠಿಸುವವನನ್ನು ನಾಶಗೊಳಿಸುವದೆಂಬ ವಿಷಯದಲ್ಲಿ ಸ್ವರ ವ್ಯತ್ಯಾಸದೊಡನೆ ತಾನು ಪಠಿಸಿದ ಮಂತ್ರದಿಂದ ತನ್ನ ನಾಶಮಾಡಿ ಕೊಂಡ ಇಂದ್ರನ ಶತ್ರುವಾದ +ತ್ವಷ್ಟಾ ಎಂಬಾತನು ದೃಷ್ಟಾಂತ ರೂಪ ನಾಗಿರುವನು." (ಪಾ. ಶಿ. ೫೨) ಎಂಬೀ ವಾಕ್ಯವು ಶಿಕ್ಷೆಯ ಅವಶ್ಯ ಕತೆಯನ್ನು ತೋರಿಸುವದು ಪಠನದ ಗುಣ ದೋಷಗಳ ಬಗ್ಗೆ ಶಿಕ್ಷಾ ಗ್ರಂಥದಲ್ಲಿ ವಿಸ್ತೃತವಾಗಿ ಹೇಳಲ್ಪಟ್ಟಿದೆ.

ಛಂಧಃಶಾಸ್ತ್ರವು, ಪಿಂಗಲನಿಂದ ರಚಿಸಲ್ಪಟ್ಟಿರುವದು. ಇದರಲ್ಲಿ ಗಾಯತ್ರೀ ಮೊದಲಾದ ಛಂದಸ್ಸುಗಳ ವಿವೇಚನೆ ಯಿದೆ. 'ಗಾಯತ್ರ್ಯ ವಸವಃ'—'ಜಗತ್ಯಾ ಆದಿತ್ಯಾः' ಎಂಬಿವೇ ಮುಂತಾದ ಸೂತ್ರಗಳಿಂದ

---

†'ಇಂದ್ರ ಶತ್ರುಃ' ಎಂಬಲ್ಲಿ ಇಂದ್ರಸ್ಯ ಶತ್ರುಃ ಅಥವಾ ಇಂದ್ರಃ ಶತ್ರುಃ (ಶಾತಯಿತಾ) ಯಸ್ಯ ಎಂದು ವಿಗ್ರಹವು ಎರಡು ತೆರನಾಗಿದೆ.

+ಇವನ ಕಥೆಯು ತೈತ್ತಿರೀಯ ಸಂಹಿತೆಯ ೨-೫-೨ ನೆಯದರಲ್ಲಿ ಬಣ್ಣಿಸಲ್ಪಟ್ಟಿದೆ.

ಛಂದಸ್ಸುಗಳ ಪ್ರತಿಯೊಂದು ಪಾದದೊಳಗಣ ಅಕ್ಷರ ಸಂಖ್ಯೆಯು ನಿಶ್ಚಯಿಸಲ್ಪಡುವದು. ಅರ್ಥಾತ್ ವೇದದೊಳಗಣ ಋಚೆಗಳ ವೃತ್ತಗಳ ಸಂಬಂಧವಾದ ವಿಚಾರವು ಛಂದೋವಿಧಾನದಲ್ಲಿದೆ.

'ಯೊಹವಾ ಅವಿದಿತಾರ್ಷೆಯಚ್ಛನ್ದೊ ದೈವತ ಬ್ರಾಹ್ಮಣೇನ ಮಂತ್ರೇಣ ಯಾಜಯತಿ ವಾಽಧ್ಯಾಪಯತಿ ವಾಸ್ಥಾಣಂ ವರ್ಚ್ಛತಿ ಗರ್ತಂ ವಾ ಪ್ರತಿಪದ್ಯತೆ ವಾ ಪ್ರಮೀಯತೆ ಪಾಪೀಯಾನ್ಭವತಿ ತಸ್ಮಾದೇತಾನಿ ಮಂತ್ರೇ ವಿದ್ಯಾತ್' ಎಂಬ ಆರ್ಷೇಯ ಬ್ರಾಹ್ಮಣ ವಾಕ್ಯವು ಋಷಿ-ಛಂದಸ್ಸು- ದೇವತೆಗಳ ಪರಿಜ್ಞಾನವಿಲ್ಲದೆ ಪಠಿಸುವ ಮಂತ್ರವು ಶ್ರೇಯಸ್ಕರವಾದುದಲ್ಲವೆಂದು ಹೇಳುವದು.

**ಕಲ್ಪಃ**— ಎಂಬದಾದರೊ ವೈದಿಕ ಯಜ್ಞವಿಧಿಯೇ ಮುಖ್ಯ ವಿಷಯವುಳ್ಳದ್ದಾಗಿದೆ. ಯಾವ ಸಂದರ್ಭದಲ್ಲಿ ಯಾವ ಋಚೆಯನ್ನು ಉಪಯೋಗಿಸಬೇಕು, ಯಾವ ಯಾಜ್ಞಿಕ ವಿಧಿಯನ್ನು ಹೇಗೆ ಮಾಡಬೇಕು, ಎಂಬಿವೇ ಮುಂತಾದ ವಿಷಯಗಳನ್ನು ಕಲ್ಪಸೂತ್ರ ಸಮುದಾಯವು ಸ್ಪಷ್ಟೀಕರಿಸುವದು. ಶ್ರೌತಸೂತ್ರಗಳಿಗೇನೆ ಕಲ್ಪಸೂತ್ರಗಳೆನ್ನುತ್ತಾರೆ. ಇವುಗಳ ಬಗ್ಗೆ ಈ ಹಿಂದೆ ವಿವೇಚಿಸಿರುವೆವು. ಆದರೂ ಷಡಂಗ ವಿಚಾರ ಪ್ರಸಂಗದಲ್ಲಿ ಮತ್ತೆಯೂ ನಿರ್ದೇಶ ಮಾಡಬೇಕಾಯಿತು.

**ಜ್ಯೋತಿಷಃ**—ಎಂಬದು ಯಾವಯಜ್ಞವನ್ನು ಯಾವಕಾಲದಲ್ಲಿ ಮಾಡಬೇಕು, ಅದನ್ನು ಯಾವನಕ್ಷತ್ರವನ್ನನುಸರಿಸಿ ಆರಂಭಿಸಬೇಕು ಎಂಬಿವೇ ಮುಂತಾದ ಸಂಗತಿಗಳನ್ನು ತಿರ್ಮಾನಗೊಳಿಸುವದು. ಆದ್ದರಿಂದಯಾಜ್ಞಿಕ ವಿಧಿಗಳಿಗೆ ಜೋತಿಷಶಾಸ್ತ್ರದ ಅವಶ್ಯಕತೆಯುಂಟಾಯಿತು. ಶ್ರುತಿಯಲ್ಲಿ ವಿಧಿಸಲ್ಪಟ್ಟ ಕರ್ಮಗಳಿಗೆ ಅಂಗಭೂತವಾದ ಕಾಲವನ್ನು ತಿಳಿಸುವಮೂಲಕವಾಗಿ ಜ್ಯೋತಿಷಶಾಸ್ತ್ರವು ವೇದಾಂಗವೆನಿಸಿತು. ಇದು ಪ್ರಾಣಿಗಳ ಶುಭಾಶುಭ ಕರ್ಮಗಳ ಫಲವಿಪಾಕದ ಕಾಲವನ್ನೂ ತಿಳಿಸುವದು.

**ವ್ಯಾಕರಣವುಃ**—ಪಾಣಿನಿಯ ಅಷ್ಟಾಧ್ಯಾಯಿಯ ಎಂಬ ಗ್ರಂಥವು ವ್ಯಾಕರಣದ ದೃಷ್ಟಿಯಿಂದ ವೇದಾಂಗವೆನಿಸಿಕೊಳ್ಳುವದು; ಆದರೂ ಬುನಾದಿ ವೇದಾಂಗಭೂತವಾದ ವ್ಯಾಕರಣ ಗ್ರಂಥವು ಬೇರೆಯೇ ಇರಬಹುದೆಂದು ತಿಳಿದುಬರುತ್ತದೆ. ವೇದಾಂಗಗಳಲ್ಲಿ ಪರಿಗಣಿಸಲ್ಪಡುವ ವ್ಯಾಕರಣಗಳಲ್ಲಿ ಪ್ರಾತಿಶಾಖ್ಯಗಳೇ ಪ್ರಾಮುಖ್ಯವಾದವುಗಳು. ಇವು

ಶೌನಕ ಪ್ರಣೀತವಾದ ಋಕ್ಪ್ರಾತಿಶಾಖ್ಯ, ಕಾತ್ಯಾಯನರಚಿತವಾದ ಯಜುಃಪ್ರಾತಿಶಾಖ್ಯವೆಂಬದಾಗಿ ಪ್ರತಿಯೊಂದು ವೇದಕ್ಕೂ ಸಂಬಂಧಿಸಿದ ನಾಲ್ಕು ಪ್ರಾತಿಶಾಖ್ಯಗಳು ಬೇರೆ ಬೇರೆಯಾಗಿರುವವು. ಸೂತ್ರಮಯಗಳಾದ ಇವುಗಳಿಗೆ ಉವ್ವಟಾಚಾರ್ಯನಿಂದ ಭಾಷ್ಯವು ರಚಿಸಲ್ಪಟ್ಟಿದೆ. ಪಾಣಿನಿಯ ನುಡಿಗಟ್ಟಾದರೂ ಬಳಿಕೆಯ ಸಕ್ಕದ ಮಾತುಗಳ ಚೊಕ್ಕಳಿಕೆಯ (ಪರಿಶುದ್ಧತೆಯ) ಕಟ್ಟಳೆಗಾಗಿ ಹುಟ್ಟಿದುದಾಗಿದೆಯೆಂದು ಗಟ್ಟಿಯಾಗಿ ಹೇಳಬಹುದು. ವೈದಿಕ ವ್ಯಾಕರಣದ ವಿಚಾರವು ಅದರಲ್ಲಿ ಪ್ರಸಂಗೋಪಾತ್ತವಲ್ಲದೆ ಮುಖ್ಯವಾಗಿರುವದಿಲ್ಲ. ಆದ್ದರಿಂದ ವೇದಾಂಗ ಭೂತಗಳಾದ ವ್ಯಾಕರಣಗ್ರಂಥಗಳಲ್ಲಿ ಪ್ರತಿಯೊಂದು ಶಾಖೆಗನುಸರಿಸಿರುವ ಮೇಲೆ ಹೇಳಿದ ಪ್ರಾತಿಶಾಖ್ಯಗಳೇಬಲುಹಳೆಯವಾದವುಗಳು.

ನಿರುಕ್ತವು—ವೈದಿಕ ಶಬ್ದಗಳ ವ್ಯುತ್ಪತ್ತಿಯನ್ನು ತಿಳುಹಿ ಋಚೆಗಳ ಅರ್ಥವನ್ನು ನಿರ್ಣಯಿಸುವದಕ್ಕಾಗಿ ಈ ಶಾಸ್ತ್ರದ ಉದಯವಾಗಿದೆ. ಬನಾದಿಯಿಂದಲೂ ಭಾರತೀಯ ಪಂಡಿತರು ವೇದಗಳೊಳಗಣ ಕಠಿಣ ಶಬ್ದಗಳ ಅರ್ಥವನ್ನು ಬಿಡಿಸಲು ಬಿಡುವಿಲ್ಲದೆ ಹೆಣಗುತ್ತಿದ್ದರೆಂತಲೇ ತಿಳಿದು ಬರುವದು. ಆ ಕಾಲದಲ್ಲಿ ಜಾಣರು ಋಗಾದಿ ವೇದಗಳಲ್ಲಿಯ ದುರ್ಬೋಧ (ತಿಳಿಯಲು ಬಿರಿಯಾದ) ಶಬ್ದಗಳನ್ನು ಆರಿಸಿ ಬೇರೆ ಒತ್ತಟ್ಟಿಗೆ ಸರಂಗೊಳಿಸಿ ಪ್ರತಿಯೊಂದು ವೇದದ ಕಠಿಣ ಶಬ್ದಗಳ ಕೋಶಗಳನ್ನು ತಯಾರಿಸುವ ಕೆಲಸವನ್ನು ಮೊದಲು ಕೈಕೊಂಡರು. ಕೋಶ ಎಂದರೆ ನಿಘಂಟು ಎಂಬ ಸಂಜ್ಞೆಯು ಆಗಳೇ ಮೂಡಿತು. ಅಂತಪ್ಪ ವೇದ ದುರ್ಬೋಧ ಶಬ್ದಕೋಶ (ನಿಘಂಟು) ಗಳೆಂಬ ಗ್ರಂಥಗಳು ಆಗ ಅನೇಕವಾಗಿರ ಬಹುದು.

ಈಗ ಉಪಲಬ್ಧಗಳಾಗಿರುವ ಋಗ್ವೇದದ ಟೀಕಾಗ್ರಂಥಗಳಲ್ಲಿ ಯಾಸ್ಕಾಚಾರ್ಯನಗ್ರಂಥ (ನಿರುಕ್ತ)ವೇ ಹಳೆಯದೆನಿಸಿವೆ ಯಾಸ್ಕನು ಹಳೆಯ ನಿಘಂಟುವಿನ ಆಸರದಿಂದ ತನ್ನ ಗ್ರಂಥ (ನಿರುಕ್ತ)ದಲ್ಲಿ ಋಗ್ವೇದದೊಳಗಣ ಎಷ್ಟೋ ಋಚೆಗಳಅರ್ಥವನ್ನು ಬಿಡಿಸಿ ಬರೆದಿದ್ದಾನೆ. ಈ ನಿರುಕ್ತ ಗ್ರಂಥವು ದುರ್ಗಾಚಾರ್ಯಕೃತ ವೃತ್ತಿಯೊಡನೆ ಎಲ್ಲ ಕಡೆಗೂ ಬಳಿಕೆಯಲ್ಲಿದೆ. ಯಾಸ್ಕನು ಪಾಣಿನಿಗಿಂತಲೂ ಮುಂಚಿನವನು; ಇವನು ತನಗಿಂತಲೂ ಮುಂಚೆಯಿದ್ದ ಔಪಮನ್ಯವ ಔದುಂಬರಾಯಣ ಮುಂತಾದ ಹದಿನೇಳುಜನನಿರುಕ್ತಕಾರರ ಪರಸ್ಪರ ಮತಭೇದಗಳನ್ನು ತೋರಿ

ಸುವನಲ್ಲದೆ ಅವರಲ್ಲಿ ಕೆಲವರ ಅಭಿಪ್ರಾಯಗಳ ಬಗ್ಗೆ ತನ್ನ ಅರುಚಿಯನ್ನು ತೋರಿಸಿದ್ದಾನೆ. ಯಾಸ್ಕನ ನಿರುಕ್ತದ ಹೊರತಾಗಿ ಉಳಿದ ಆ ಹಳೆಯ ನಿರುಕ್ತಗಳು ಈಗ ಉಪಲಬ್ಧಗಳಾಗಿಲ್ಲವಾದರೂ ನಿರುಕ್ತಶಾಸ್ತ್ರದ ಆವಶ್ಯಕತೆಯು ಬುನಾದಿಯಿಂದಲೂ ಇದ್ದಿತೆನ್ನುವದಕ್ಕೇನೂ ಅಡ್ಡಿಯಿಲ್ಲ.

ವೇದಗಳು ಬಹಳ ಪುರಾತನಗಳಾದುದರಿಂದ, ವೈದಿಕಭಾಷೆಗೂ ತದನಂತರದ ಸಂಸ್ಕೃತಭಾಷೆಗೂ ಬದಲಾವಣೆಯುಂಟಾಗಿ ಆ ವೇದಗಳು ಅರಿತುಕೊಳ್ಳಲು ಬಲು ಬಿರಿಯಾಗಿವೆ. ಇಂತಹಸ್ಥಿತಿಯಲ್ಲಿ ವೇದಗಳ ಅರ್ಥವನ್ನು ತಿಳಿಯುಲು ವ್ಯುತ್ಪತ್ತಿಶಾಸ್ತ್ರವು ಬಹಳ ಮಹತ್ವದಸಾಧನವಾಗಿದೆ. ಏಕೆಂದರೆ—ವ್ಯುತ್ಪತ್ತಿಯು ನೆರವಿನಿಂದ ಯಾವಶಬ್ದವು ಯಾವ ಧಾತುವಿನಿಂದ ಸಿದ್ಧವಾಗಿರುವದೆಂಬುದು ಗೊತ್ತಾಗುವದರಿಂದ ಒಳ್ಳೆಯ ಬಿಕ್ಕಟ್ಟಿನ ಶಬ್ದದ ಅರ್ಥವಾದರೂ ಈ ಶಾಸ್ತ್ರದ ಆಸರದಿಂದ ಹಚ್ಚಲಿಕ್ಕೆ ಬರುವದು. ಇದುವೇ ವ್ಯುತ್ಪತ್ತಿಶಾಸ್ತ್ರದ ಮೊದಲನೆಯದೊಡ್ಡ ಉಪಯೋಗವಿದೆ. ಯಾಸ್ಕನು ನಿರುಕ್ತದ ಪ್ರಥಮಾಧ್ಯಾಯದ ಹದಿನೈಯ್ದನೆಯ ಖಂಡದಲ್ಲಿ—

> ಅಥಾಪೀದಮನ್ತರೇಣ ಮನ್ತ್ರೇಷ್ವರ್ಥಪ್ರತ್ಯಯೋನವಿದ್ಯತೆ। ಅರ್ಥಮಪ್ರತಿಯತೊ ನಾತ್ಯಂತಂಸ್ವರ ಸಂಸ್ಕಾರೋದ್ದೇಶಃ। ತದಿದಂ ವಿದ್ಯಾಸ್ಥಾನಂ ವ್ಯಾಕರಣಸ್ಯಕಾರ್ತ್ಸ್ನ್ಯಂ ಸ್ವಾರ್ಥಸಾಧಕಂಚ।

ಎಂದು ಮೊದಲಾಗಿ ನಿರೂಪಿಸಿದ್ದಾನೆ. ಇದೆಲ್ಲದರ ಭಾವವೇನೆಂದರೆ ವೇದದ ಅರ್ಥವನ್ನು ತಿಳಿಯದಿರುವಾತನಿಗೆ ವೇದದ ಸ್ವರಗಳ ಜ್ಞಾನವಾಗಲೂ ಶಕ್ಯವಿಲ್ಲ; ಹಾಗು ವ್ಯಾಕರಣ ರೀತಿಯಿಂದ ಸಿದ್ಧಗೊಳಿಸಿದ ಶಬ್ದಗಳ ರೂಪಗಳಾದರೂ ಗೊತ್ತಾಗುವದಿಲ್ಲ. ಏಕೆಂದರೆ—ವೇದ ಮಂತ್ರಗಳಲ್ಲಿರುವ ಉದಾತ್ತ ಅನುದಾತ್ತ ಸ್ವರಿತ ಎಂಬ ಈ ಮೂರುಬಗೆಯ ಸ್ವರಗಳು ಅರ್ಥವನ್ನು ಅವಲಂಬಿಸಿಯೇ ಇರುತ್ತವೆ. ಯಾವಭಾಷೆಯಲ್ಲಾದರೂ ಮಾತನಾಡುವಾಗ ವಾಕ್ಯದ ಒಂದಾನೊಂದು ಶಬ್ದದಮೇಲೆ ಅಥವಾ ಅಕ್ಷರದಮೇಲೆ ಒತ್ತಾಯದ ಸ್ವರವನ್ನು ತೋರಿಸುವದಾದರೊ ಅರ್ಥವನ್ನು ಅನುಸರಿಸಿಯೇ ಇರುವದು. ಹೇಗೆಂದರೆ— ನೀನು ನಿನ್ನೆ ಯಾಕೆ ಬರಲಿಲ್ಲ; ಆ ನೀನು ಹೀಗೆ ಮಾಡತಕ್ಕದ್ದೊ; ಎಂಬ

ವಾಕ್ಯಗಳೊಳಗಣ ನೀನು- ನಿನ್ನೆ- ಯಾಕೆ; ಆ- ನೀನು- ಹೀಗೆ; ಎಂಬ ಒಂದೊಂದರ ಮೇಲೆ ಸ್ವರದ ಜೋರನ್ನು ಇರಿಸಿ ಪರಿವಿಡಿದು ನುಡಿದರೆ ಅರ್ಥಗಳು ಬೇರೆ ಬೇರೆ ಬಗೆಗಳಾಗುವದು ಗೊತ್ತಾಗುವದು. ಹೀಗೆ ಭಿನ್ನ ಭಿನ್ನಾರ್ಥಗಳನ್ನು ಹೊರಡಿಸುವಿಕೆಯು, ಸಂದರ್ಭಕ್ಕೆ ಸರಿಯಾದ ವಕ್ತೃವಿನ ಇಚ್ಛಾನುಸಾರವಾಗಿ ವಾಕ್ಯಗಳೊಳಗಣ ಶಬ್ದಗಳ ಅಥವಾ ಅಕ್ಷರಗಳ ಮೇಲೆ ಮಾಡಲ್ಪಡುವ ಸ್ವರಾಘಾತಗಳನ್ನು ಅವಲಂಬಿಸಿರುವದು. ಈ ಉದಾಹರಣೆಯು ಮೇರೆಗೆ ವೇದ ವಾಕ್ಯಗಳ ಪಠನದಲ್ಲಿಯೂ ಸ್ವರಗಳ ಅವಶ್ಯಕತೆಯಿರುವದರಿಂದ ಅಂತಸ್ಥ ಸ್ವರಜ್ಞಾನವಾಗುವದಕ್ಕಾಗಿ ಮೊದಲು ಅರ್ಥ ಜ್ಞಾನವು ಬೇಕಾಗುವದು. ಅರ್ಥ ಜ್ಞಾನವಾದರೊ ವ್ಯುತ್ಪತ್ತಿ ಶಾಸ್ತ್ರ ಜ್ಞಾನವಿಲ್ಲದೆ ಸಂಭವಿಸದು. ಅದು ಕಾರಣ, ಪರ್ಯಾಯದಿಂದ ಸ್ವರ ಜ್ಞಾನಕ್ಕೋಸುಗ ವ್ಯುತ್ಪತ್ತಿಯ ಜ್ಞಾನವು ಅವಶ್ಯವಾಗಿ ಬೇಕು. ವ್ಯಾಕರಣದ ರೂಪಗಳ ಜ್ಞಾನವಾದರೂ ವ್ಯುತ್ಪತ್ತಿಯನ್ನೇ ಅವಲಂಬಿಸಿರುವದು; ಎಂದರೆ ವ್ಯುತ್ಪತ್ತಿ ಶಾಸ್ತ್ರವು ತನ್ನ ಮುಖ್ಯ ಕೆಲಸವನ್ನು ಮಾಡುವದರೊಡನೆ ವ್ಯಾಕರಣದ ನ್ಯೂನತೆಯನ್ನು ಹೋಗಲಾಡಿಸುವ ಕಾರ್ಯವನ್ನೂ ಕೈಕೊಳ್ಳುವದು. ಹೇಗೆ ವೇದಾರ್ಥವನ್ನು ಅರಿಯುವದಕ್ಕಾಗಿ ವೇದಗಳೊಳಗಣ ವ್ಯಾಕರಣದ ರೂಪಗಳನ್ನೂ, ಸ್ವರಗಳನ್ನೂ ತಿಳಿಯಲು ವ್ಯುತ್ಪತ್ತಿಯ ಅವಶ್ಯಕತೆಯುಂಟೋ ಹಾಗೆಯೇ ಋಚೆಗಳ ಪದಗಳನ್ನು ಬಿಡಿಸುವದಕ್ಕೂ ವ್ಯುತ್ಪತ್ತಿಯ ನೆರವುಬೇಕು. ಅಕ್ಷರಗಳ ಸಂಧಿಯಾಗಿ ಸಂಹಿತಾ ಪಾಠವಾಗಿದೆ. ಸಂಹಿತಾ ಪಾಠದ ಮೇಲಿಂದ ಪದ ಪಾಠವನ್ನು ತಯಾರಿಸಬೇಕಾದರೆ ಮೊದಲು ಋಚೆಯ ಅರ್ಥವನ್ನು ಅರಿತುಕೊಂಡು ಅರ್ಥಕ್ಕೆ ಸರಿಯಾಗಿ ಪದಚ್ಛೇದ ಮಾಡತಕ್ಕದ್ದು. ಉದಾಹರಣೆಗಾಗಿ ನಾವು ಒಂದು ಋಚೆಯ ತುಣುಕನ್ನು ತೆಗೆದುಕೊಳ್ಳುವಾ. 'ಅವಸಾಯ ಪದ್ವತೆ ರುದ್ರ ಮೃಳ' ಎಂಬಲ್ಲಿ ಅವಸಾಯ ಇದರ ಪದಚ್ಛೇದವು ಮಾಡಲ್ಪಡುವದಿಲ್ಲ. ಏಕೆಂದರೆ- ಅವಸಾಯ ಶಬ್ದವು ಅವ್ ( ಹೋಗು ) ಎಂಬಧಾತುವಿನಿಂದಾಗಿದೆ. ಆದರೆ ಇದರ ರೂಪವು ಮತ್ತೊಂದು ಕಡೆಬಂದರೆ ಪದಚ್ಛೇದವು ಮಾಡಲ್ಪಡುವದು. ಹೇಗೆಂದರೆ- 'ಅವಸಾಯಾಶ್ವಾನ್ '— ಕುದುರೆಗಳನ್ನು ಬಿಚ್ಚಿ ( ಬಿಡುಗಡೆಮಾಡಿ ); ಎಂಬಲ್ಲಿ ಅವ-ಸಾಯ ಎಂದು ಪದ ವಿಭಾಗವು ಮಾಡಲ್ಪಡುವದು. ಅವಸಾಯ ಎಂಬ ರೂಪವು ಅವ ಉಪಸರ್ಗಪೂರ್ವಕವಾದ ಸಾ ಎಂಬ

ಸುವನಲ್ಲದೆ ಅವರಲ್ಲಿ ಕೆಲವರ ಅಭಿಪ್ರಾಯಗಳ ಬಗ್ಗೆ ತನ್ನ ಅರುಚಿಯನ್ನು ತೋರಿಸಿದ್ದಾನೆ. ಯಾಸ್ಕನ ನಿರುಕ್ತದ ಹೊರತಾಗಿ ಉಳಿದ ಆ ಹಳೆಯ ನಿರುಕ್ತಗಳು ಈಗ ಉಪಲಬ್ಧಗಳಾಗಿಲ್ಲವಾದರೂ ನಿರುಕ್ತಶಾಸ್ತ್ರದ ಆವಶ್ಯಕತೆಯು ಬುನಾದಿಯಿಂದಲೂ ಇದ್ದಿತೆನ್ನುವದಕ್ಕೇನೂ ಅಡ್ಡಿಯಿಲ್ಲ.

ವೇದಗಳು ಬಹಳ ಪುರಾತನಗಳಾದುದರಿಂದ, ವೈದಿಕಭಾಷೆಗೂ ತದನಂತರದ ಸಂಸ್ಕೃತಭಾಷೆಗೂ ಬದಲಾವಣೆಯುಂಟಾಗಿ ಆ ವೇದಗಳು ಅರಿತುಕೊಳ್ಳಲು ಬಲು ಬಿರಿಯಾಗಿವೆ. ಇಂತಹಸ್ಥಿತಿಯಲ್ಲಿ ವೇದಗಳ ಅರ್ಥವನ್ನು ತಿಳಿಯಲು ವ್ಯುತ್ಪತ್ತಿಶಾಸ್ತ್ರವು ಬಹಳ ಮಹತ್ವದಸಾಧನವಾಗಿದೆ. ಏಕೆಂದರೆ—ವ್ಯುತ್ಪತ್ತಿಯು ನೆರವಿನಿಂದ ಯಾವಶಬ್ದವು ಯಾವ ಧಾತುವಿನಿಂದ ಸಿದ್ಧವಾಗಿರುವದೆಂಬುದು ಗೊತ್ತಾಗುವದರಿಂದ ಒಳ್ಳೆಯ ಬಿಕ್ಕಟ್ಟಿನ ಶಬ್ದದ ಅರ್ಥವಾದರೂ ಈ ಶಾಸ್ತ್ರದ ಆಸರದಿಂದ ಹಚ್ಚಲಿಕ್ಕೆ ಬರುವದು. ಇದುವೇ ವ್ಯುತ್ಪತ್ತಿಶಾಸ್ತ್ರದ ಮೊದಲನೆಯದೊಡ್ಡ ಉಪಯೋಗವಿದೆ. ಯಾಸ್ಕನು ನಿರುಕ್ತದ ಪ್ರಥಮಾಧ್ಯಾಯದ ಹದಿನೈದನೆಯ ಖಂಡದಲ್ಲಿ—

ಅಥಾಪೀದಮನ್ತರೇಣ ಮನ್ತ್ರೇಷ್ವರ್ಥಪ್ರತ್ಯಯೋನವಿದ್ಯತೆ। ಅರ್ಥಮಪ್ರತೀಯತೊ ನಾತ್ಯಂತಂಸ್ವರ ಸಂಸ್ಕಾರೋದ್ದೇಶಃ। ತದಿದಂ ವಿದ್ಯಾಸ್ಥಾನಂ ವ್ಯಾಕರಣಸ್ಯಕಾರ್ತ್ಸ್ನ್ಯಂ ಸ್ವಾರ್ಥಸಾಧಕಂಚ।

ಎಂದು ಮೊದಲಾಗಿ ನಿರೂಪಿಸಿದ್ದಾನೆ. ಇದೆಲ್ಲದರ ಭಾವವೇನೆಂದರೆ ವೇದದ ಅರ್ಥವನ್ನು ತಿಳಿಯದಿರುವಾತನಿಗೆ ವೇದದ ಸ್ವರಗಳ ಜ್ಞಾನವಾಗಲೂ ಶಕ್ಯವಿಲ್ಲ; ಹಾಗು ವ್ಯಾಕರಣ ರೀತಿಯಿಂದ ಸಿದ್ಧಗೊಳಿಸಿದ ಶಬ್ದಗಳ ರೂಪಗಳಾದರೂ ಗೊತ್ತಾಗುವದಿಲ್ಲ. ಏಕೆಂದರೆ—ವೇದ ಮಂತ್ರಗಳಲ್ಲಿರುವ ಉದಾತ್ತ ಅನುದಾತ್ತ ಸ್ವರಿತ ಎಂಬ ಈ ಮೂರುಬಗೆಯ ಸ್ವರಗಳು ಅರ್ಥವನ್ನು ಅವಲಂಬಿಸಿಯೇ ಇರುತ್ತವೆ. ಯಾವಭಾಷೆಯಲ್ಲಾದರೂ ಮಾತನಾಡುವಾಗ ವಾಕ್ಯದ ಒಂದಾನೊಂದು ಶಬ್ದದಮೇಲೆ ಅಥವಾ ಅಕ್ಷರದಮೇಲೆ ಒತ್ತಾಯದ ಸ್ವರವನ್ನು ತೋರಿಸುವದಾದರೊ ಅರ್ಥವನ್ನು ಅನುಸರಿಸಿಯೇ ಇರುವದು. ಹೇಗೆಂದರೆ—ನೀನು ನಿನ್ನೆ ಯಾಕೆ ಬರಲಿಲ್ಲ; ಆ ನೀನು ಹೀಗೆ ಮಾಡತಕ್ಕದ್ದೊ; ಎಂಬ

ವಾಕ್ಯಗಳೊಳಗಣ ನೀನು- ನಿನ್ನೆ- ಯಾಕೆ; ಆ- ನೀನು- ಹೀಗೆ; ಎಂಬ ಒಂದೊಂದರ ಮೇಲೆ ಸ್ವರದ ಜೋರನ್ನು ಹಾಕಿ ಹಿಡಿದು ನುಡಿದರೆ ಅರ್ಥಗಳು ಬೇರೆ ಬೇರೆ ಬಗೆಗಳಾಗುವದು ಗೊತ್ತಾಗುವದು. ಹೀಗೆ ಭಿನ್ನ ಭಿನ್ನಾರ್ಥಗಳನ್ನು ಹೊರಡಿಸುವಿಕೆಯು, ಸಂದರ್ಭಕ್ಕೆ ಸರಿಯಾದ ವಕ್ತೃವಿನ ಇಚ್ಛಾನುಸಾರವಾಗಿ ವಾಕ್ಯಗಳೊಳಗಣ ಶಬ್ದಗಳ ಅಥವಾ ಅಕ್ಷರಗಳ ಮೇಲೆ ಮಾಡಲ್ಪಡುವ ಸ್ವರಾಘಾತಗಳನ್ನು ಅವಲಂಬಿಸಿರುವದು. ಈ ಉದಾಹರಣೆಯ ಮೇರೆಗೆ ವೇದ ವಾಕ್ಯಗಳ ಪಠನದಲ್ಲಿಯೂ ಸ್ವರಗಳ ಅವಶ್ಯಕತೆಯಿರುವದರಿಂದ ಅಂತಸ್ಥ ಸ್ವರಜ್ಞಾನವಾಗುವದಕ್ಕಾಗಿ ಮೊದಲು ಅರ್ಥ ಜ್ಞಾನವು ಬೇಕಾಗುವದು. ಅರ್ಥ ಜ್ಞಾನವಾದರೊ ವ್ಯುತ್ಪತ್ತಿ ಶಾಸ್ತ್ರ ಜ್ಞಾನವಿಲ್ಲದೆ ಸಂಭವಿಸದು. ಅದು ಕಾರಣ, ಪರ್ಯಾಯದಿಂದ ಸ್ವರ ಜ್ಞಾನಕ್ಕೋಸುಗ ವ್ಯುತ್ಪತ್ತಿಯ ಜ್ಞಾನವು ಅವಶ್ಯವಾಗಿ ಬೇಕು. ವ್ಯಾಕರಣದ ರೂಪಗಳ ಜ್ಞಾನವಾದರೂ ವ್ಯುತ್ಪತ್ತಿಯನ್ನೇ ಅವಲಂಬಿಸಿರುವದು; ಎಂದರೆ ವ್ಯುತ್ಪತ್ತಿ ಶಾಸ್ತ್ರವು ತನ್ನ ಮುಖ್ಯ ಕೆಲಸವನ್ನು ಮಾಡುವದರೊಡನೆ ವ್ಯಾಕರಣದ ನ್ಯೂನತೆಯನ್ನು ಹೋಗಲಾಡಿಸುವ ಕಾರ್ಯವನ್ನೂ ಕೈಕೊಳ್ಳುವದು. ಹೇಗೆ ವೇದಾರ್ಥವನ್ನು ಅರಿಯುವದಕ್ಕಾಗಿ ವೇದಗಳೊಳಗಣ ವ್ಯಾಕರಣದ ರೂಪಗಳನ್ನೂ, ಸ್ವರಗಳನ್ನೂ ತಿಳಿಯಲು ವ್ಯುತ್ಪತ್ತಿಯ ಅವಶ್ಯಕತೆಯುಂಟೋ ಹಾಗೆಯೇ ಋಚೆಗಳ ಪದಗಳನ್ನು ಬಿಡಿಸುವದಕ್ಕೂ ವ್ಯುತ್ಪತ್ತಿಯ ನೆರವುಬೇಕು. ಅಕ್ಷರಗಳ ಸಂಧಿಯಾಗಿ ಸಂಹಿತಾ ಪಾಠವಾಗಿದೆ. ಸಂಹಿತಾ ಪಾಠದ ಮೇಲಿಂದ ಪದ ಪಾಠವನ್ನು ತಯಾರಿಸಬೇಕಾದರೆ ಮೊದಲು ಋಚೆಯ ಅರ್ಥವನ್ನು ಅರಿತುಕೊಂಡು ಅರ್ಥಕ್ಕೆ ಸರಿಯಾಗಿ ಪದಚ್ಛೇದ ಮಾಡತಕ್ಕದ್ದು. ಉದಾಹರಣೆಗಾಗಿ ನಾವು ಒಂದು ಋಚೆಯ ತುಣಕನ್ನು ತೆಗೆದುಕೊಳ್ಳುವಾ. 'ಅವಸಾಯ ಪದ್ವತೆ ರುದ್ರ ಮೃಳ' ಎಂಬಲ್ಲಿ ಅವಸಾಯ ಇದರ ಪದಚ್ಛೇದವು ಮಾಡಲ್ಪಡುವದಿಲ್ಲ. ಏಕೆಂದರೆ- ಅವಸಾಯ ಶಬ್ದವು ಅವ್ ( ಹೋಗು ) ಎಂಬಧಾತುವಿನಿಂದಾಗಿದೆ. ಆದರೆ ಇದರ ರೂಪವು ಮತ್ತೊಂದು ಕಡೆಬಂದರೆ ಪದಚ್ಛೇದವು ಮಾಡಲ್ಪಡುವದು. ಹೇಗೆಂದರೆ- 'ಅವಸಾಯಾಶ್ವಾನ್ '— ಕುದುರೆಗಳನ್ನು ಬಿಚ್ಚಿ ( ಬಿಡುಗಡೆಮಾಡಿ ); ಎಂಬಲ್ಲಿ ಅವ-ಸಾಯ ಎಂದು ಪದ ವಿಭಾಗವು ಮಾಡಲ್ಪಡುವದು. ಅವಸಾಯ ಎಂಬ ರೂಪವು ಅವ ಉಪಸರ್ಗಪೂರ್ವಕವಾದ ಸಾ ಎಂಬ

ಧಾತುವಿನಿಂದ ಸಿದ್ಧವಾಗಿದೆ; ಆದ್ದರಿಂದ ಉಪಸರ್ಗ ಹಾಗು ಧಾತು ಇವುಗಳನ್ನು ವಿಂಗಡಿಸಿ ತೋರಿಸುವದಕ್ಕಾಗಿಯೇ ಅವಸಾಯ ಶಬ್ದದ ಪದಚ್ಛೇದವನ್ನು ಮಾಡಬೇಕಾಗುವದು.

ಪದ ವಿಭಾಗವೆಂಬದು ಅತ್ಯಂತವಾಗಿ ಅರ್ಥವನ್ನೂ ಅರ್ಥವು ವ್ಯುತ್ಪತ್ತಿಯನ್ನೂ ಅವಲಂಬಿಸಿರುವ ಮೂಲಕವಾಗಿಯೇ ಪ್ರಾಯದಿಂದ ಪದ ವಿಭಾಗವಾದರೂ ವ್ಯುತ್ಪತ್ತಿಯನ್ನು ಆಶ್ರಯಿಸಿಯೇ ಇರುವದು.

ಆಯಾ ಋಚೆಗಳಿಂದ ಬೋಧಿಸಲ್ಪಡುವ ದೇವತೆಗಳ ಸ್ವರೂಪವನ್ನೂ ಕರ್ಮಕಲಾಪವನ್ನೂ ತಿಳಿಯಬೇಕಾದರೆ ಋಚೆಗಳ ಅರ್ಥಜ್ಞಾನದ ಆವಶ್ಯಕತೆಯುಂಟು. ಋಚೆಗಳ ಅರ್ಥವಾದರೊ ವ್ಯುತ್ಪತ್ತಿಜ್ಞಾನವಿಲ್ಲದವನಿಗೆ ಗೊತ್ತಾಗಲಾರದು. ಆದ್ದರಿಂದ, ವೇದ ವಿಧಿಯನ್ನು ಯಥಾ ಸಾಂಗವಾಗಿ ನೇರವೇರಿಸಬೇಕಾದರೆ ವ್ಯುತ್ಪತ್ತಿ ( ನಿರುಕ್ತ ) ಶಾಸ್ತ್ರದ ಬೆಂಬಲವು ಬೇಕು.

ಮಂತ್ರದ ದೇವತೆಯನ್ನು ತಿಳಿಯುವದಕ್ಕಾಗಿ ಮಂತ್ರದ ಅರ್ಥವನ್ನು ಅರಿಯಲೇಬೇಕೆಂಬ ಕಟ್ಟಳೆಯೇಕೆ ? ಯಾವ ಮಂತ್ರದಲ್ಲಿ ಯಾವ ದೇವತೆಯ ಹೆಸರು ಕಂಡು ಬರುವದೊ ಅದುವೇ ಆ ಮಂತ್ರದ ದೇವತೆಯೆಂದು ಅರ್ಥಜ್ಞಾನದ ಹಂಗಿಲ್ಲದೆ ತೀರ್ಮಾನಿಸಬಹುದು? ಎಂದು ಶಂಕಿಸುವದು ಕೇವಲ ಭ್ರಮೆಯೇ ಸರಿ. ಏಕೆಂದರೆ. ಒಂದೇ ಮಂತ್ರದಲ್ಲಿ ಹಲವು ಬಾರಿ ಎರಡು ಅಥವಾ ಅದಕ್ಕು ಹೆಚ್ಚು ದೇವತೆಗಳ ಹೆಸರುಗಳು ಬಂದಿರುತ್ತವೆ. ಯಾವ ದೇವತೆಯು ಮಂತ್ರವಿದಿಯೊ ಆ ದೇವತೆಯ ಹೆಸರು ಆ ಮಂತ್ರದಲ್ಲಿರದೆ ಅನ್ಯದೇವತೆಯ ಹೆಸರಿರುವದು ಕಾಣಬರುವ ಸ್ಥಳದಲ್ಲಿ, ಅರ್ಥಜ್ಞಾನವಿಲ್ಲದೆ ದೇವತೆಯನ್ನು ನಿಶ್ಚಯಿಸಲಳವಲ್ಲ. ಹೇಗೆಂದರೆ— 'ಇಂದ್ರಂ ನತ್ವಾ ಶವಸಾ ದೇವತಾಃ ವಾಯುಂ ಪೃಣನ್ತಿ' — ಇಂದ್ರನಂತೆಯೂ ವಾಯುವಿನಂತೆಯೂ ದೇವತೆಗಳು ನಿನ್ನನ್ನು ಸಾಮರ್ಥ್ಯವುಳ್ಳವನನ್ನಾಗಿ ಮಾಡುತ್ತಾರೆ; ಎಂಬ ಈ ಋಚೆಯು ವಾಸ್ತವಿಕವಾಗಿ ಅಗ್ನಿಯದಾಗಿದೆ. ಆದರೆ, ಇಲ್ಲಿ ಇಂದ್ರ ಹಾಗು ವಾಯು ಇವರುಗಳ ಹೆಸರುಗಳುಬಂದಿವೆ. ಮತ್ತು, 'ಅಗ್ನಿರಿವ ಮನ್ಯೋತ್ವಿಷಿತಃ ಸಹಸ್ವ' —ಅಗ್ನಿಯಂತೆ ಪ್ರಕಾಶಿಸುತ್ತಲಿರುವ ಎಲೈ ಮನ್ಯುವೇ ನೀನು ಸಾಮರ್ಥ್ಯವುಳ್ಳವನಾಗು. ಈ ಋಚೆಯು ಮನ್ಯುವಿನದಾಗಿದೆ. ಆದರೆ ಇದರಲ್ಲಿ ಅಗ್ನಿಯ ಹೆಸರುಂಟು. ಇವೇ ಮುಂತಾದ ಪ್ರಮಾಣಭೂತ

ಉದಾಹರಣೆಗಳಿಂದ ವೇದವನ್ನು ಅರ್ಥಪೂರ್ವಕವಾಗಿ ಪಠಿಸಬೇಕೆಂಬ ತಿರುಳು ನೆಲೆಗೊಳ್ಳುವದು.

ಇನ್ನು, ವೇದವಾಕ್ಯಗಳಲ್ಲಿ ನಿಸರ್ಗಸಿದ್ಧವಾದ ದೈವಿಕ ಪ್ರಭಾವ ವಿರುವದರಿಂದ ಪಾಠಮಾತ್ರದಿಂದ ಏನೂ ಫಲವಿಲ್ಲವೆಂದು ಹೇಳಲಾಗುವದಿಲ್ಲ. ವೇದಾಭ್ಯಾಸವಾದರೋ:—

ವೇದಸ್ವೀಕರಣಂ ಪೂರ್ವಂ ವಿಚಾರೋಭ್ಯಸನಂ ಜಪಃ ।
ತದ್ದಾನಂ ಚೈವ ಶಿಷ್ಯೇಭ್ಯೋ ವೇದಾಭ್ಯಾಸೋ ಹಿ ಪಂಚಧಾ ॥

ಎಂಬದಾಗಿ ಐದು ಬಗೆಯಾಗಿದೆ. ಋಗ್ವೇದ ಪ್ರಾತಿಶಾಖ್ಯದ ೧೫ ನೆಯ ಪಟಲದಲ್ಲಿ ವಿಧಿಸಲ್ಪಟ್ಟಿರುವ ಮೇರೆಗೆ, ಗುರುವಿನ ಬಳಿಯಲ್ಲಿ ಬ್ರಹ್ಮಚರ್ಯಾದಿ ವ್ರತ ಧಾರಣ ಪೂರ್ವಕವಾದ ವೇದಗ್ರಹಣವು ಅಧ್ಯಯನವೆನಿಸುವದು; ಮಂತ್ರಗಳ ಲಕ್ಷಣವನ್ನೂ ಅರ್ಥವನ್ನೂ ಸರಿಯಾಗಿ ಅರಿತುಕೊಳ್ಳುವ ರೀತಿಯು ವಿಚಾರವು; ಚಿಂತನವೇ ಅಭ್ಯಸನವು; ವಿನಿಯೋಗ ಜ್ಞಾನಪೂರ್ವಕವಾಗಿ ವಿಶಿಷ್ಟ ಧ್ಯೇಯಾನುಸಂಧಾನದೊಡನೆ ಪಠಿಸುವಿಕೆಯೇ ಜಪವು; ಸುಸಂಸ್ಕೃತರೂ ವ್ರತಿಗಳೂ ಆದ ಶಿಷ್ಯರಿಗೆ ವೇದಗ್ರಹಣ ಮಾಡಿಸುವಿಕೆಯು ಅಧ್ಯಾಪನರೂಪವಾದ ದಾನವೆನಿಸುವದು. "ಪಾರಾಯಣಂ ವರ್ತಯೇದ್ಬ್ರಹ್ಮಚಾರೀ ಗುರುಃಶಿಷ್ಯೇಭ್ಯಸ್ತದನುವ್ರತೇಭ್ಯಃ" (ಋ. ಪ್ರಾ. ಶಾ. ೧೫; ೧) ಎಂಬಂತೆ ಪಾರಾಯಣವೆಂಬ ಅಧ್ಯಾಪನವೂ ಅಭ್ಯಾಸ ವರ್ಗದಲ್ಲಿಯೇ ಸೇರಿದುದಾಗಿದೆ.

ವೇದದೊಳಗಣ ಬೇರೆಬೇರೆಗಳಾದ ಸೂಕ್ತಗಳನ್ನು ಜಪಿಸುವ ಮಾತ್ರದಿಂದಲೂ ಜಾಪಕನಿಗೆ ಅನಿಷ್ಟ ನಿವೃತ್ತಿದ್ವಾರಾ ಇಷ್ಟಫಲ ಪ್ರಾಪ್ತಿಯಾಗುವದೆಂದು ಆಯಾ ವೇದ ವಿಧಾನಗ್ರಂಥಗಳಲ್ಲಿ ನಿರೂಪಿಸಲ್ಪಟ್ಟಿದೆ. ಅವುಗಳಲ್ಲಿ ಋಗ್ವಿಧಾನವೊಂದನ್ನು ಸಂದರ್ಭಕ್ಕೆಸರಿಯಾಗಿ ಉದಾಹರಣೆಯನ್ನಾಗಿಟ್ಟುಕೊಳ್ಳುವಾ. ಶ್ರೀ ಶೌನಕಮಹರ್ಷಿಯು ಋಗ್ವಿಧಾನವೆಂಬ ಗ್ರಂಥವನ್ನು ರಚಿಸಿದ್ದಾನೆ. ಅದು ಅನುಷ್ಟುಪ್ ಛಂದೋಮಯಗಳಾದ ಶ್ಲೋಕಗಳನೊಳಕೊಂಡಿದೆ. ಅದರಲ್ಲಿ ಋಗ್ವೇದಾಂತರ್ಗತ ಅನೇಕ ಸೂಕ್ತಗಳ ಜಪವಿನಿಯೋಗರೀತಿಗಳೂ ತತ್ಫಲಗಳೂ ವಿಧಿಸಲ್ಪಟ್ಟಿವೆ. ಹೇಗೆಂದರೆ:—

ಕದ್ರುದ್ರಾಯ ಜಪೇತ್ಸೂಕ್ತಂ ಶೀತಜ್ವರ ವಿನಾಶನಂ ।
ಲಿಂಗಂ ಸ್ಪೃಷ್ಟ್ವಾಯುಗಂ ಧೀಮಾನ್ನಿರೋಗೀ ಶೀಘ್ರತಸ್ತದಾ ॥

ಸಯೋ ವೃಷಾ ಜಪೇತ್ಸೂಕ್ತಂ ವಂಧ್ಯಾ ಲಕ್ಷಂ ಶಿವಾಲಯೇ ।
ಆಯುಷ್ಮಂತಂ ಪುತ್ರಂ ಚ ಭಾಗ್ಯವಂತಂ ಪ್ರಸೂಯತೇ ॥
ಉತ್ತಮಾಂಗಃ ಪ್ರಜಪೇನ್ಮಂತ್ರಂ ಶತವಾರಂ ದಿನೇ ದಿನೇ ।
ಶಿವೇನ ಸಹ ವಕ್ತಾ ಚ ಶಿವಲೋಕೇ ಮಹೀಯತೇ ॥

ಎಂಬಿವೇ ಮುಂತಾದ ವಾಕ್ಯಗಳು ಋಗ್ವೇದಾಂತರ್ಗತ ಬೇರೆ ಬೇರೆ ಸೂಕ್ತಗಳ ಜಪದಿಂದ ಜ್ಞಾತ ಹಾಗೂ ಅಜ್ಞಾತ ಪಾಪಗಳ ನಿವೃತ್ತಿಯೂ ದೀರ್ಘಾಯುರಾರೋಗ್ಯ ಭಾಗ್ಯಲಾಭವೂ ಮುಂತಾದ ಅಭೀಷ್ಟಾರ್ಥಸಿದ್ಧಿಯುಂಟಾಗುವದೆಂದು ನಿರೂಪಿಸುತ್ತವೆ. ಗ್ರಂಥದ ಕೊನೆಯಲ್ಲಿ ಕಂಡುಬರುವ:—

ಋಗ್ವೇದಃ ಪಠಿತೋಪ್ಯೇಷ ನೃಣಾಂ ಭವತಿ ನಿಷ್ಫಲಃ ।
ಋಗ್ವಿಧಾನಂ ವಿನಾ ತಸ್ಮಾದಧ್ಯೇಯಂ ತತ್ಪ್ರಯತ್ನತಃ ॥
ಋಗ್ವಿಧಾನೇನ ಸಂಯುಕ್ತಮೃಗ್ವೇದಂ ವೆತ್ತಿ ಯೋ ದ್ವಿಜಃ ।
ಧರ್ಮಾರ್ಥ ಕಾಮಮೋಕ್ಷಾಣಾಮಾಶ್ರಯಃ ಸಭವೇದ್ಧ್ರುವಂ ॥

ಇತ್ಯಾದಿ ವಾಕ್ಯಗಳು ಜಪಸಾಪೇಕ್ಷೆಯಿಂದ ಪಾಠಮಾತ್ರಕ್ಕೆ ಸಾಮಾನ್ಯತೆಯನ್ನು ಹೇಳುತ್ತವೆ.

'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿವಾಕ್ಯಾನುಸಾರವಾಗಿ ಧರ್ಮ-ಅರ್ಥ- ಕಾಮ-ಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳನ್ನು ಸಾಧಿಸಲಪೇಕ್ಷಿಸುವ ಶಿಷ್ಟರಿಗೆ ವೇದಾಧ್ಯಯನದ ಆವಶ್ಯಕತೆಯುಂಟು. ಆ ವಿಧಿವಾಕ್ಯದಲ್ಲಿಯ 'ಅಧ್ಯೇತವ್ಯಃ' ಎಂಬ ಶಬ್ದವು ಪಾಠ ಮಾತ್ರ ವಾಚಕವಾಗಿರುವದರಿಂದ 'ವೇದವನ್ನು ಪಠಿಸಬೇಕು' ಇಷ್ಟೇ ಅರ್ಥವಾಗುವದಲ್ಲವೇ? ಇದರಿಂದ ವೇದಾರ್ಥ ಜ್ಞಾನದ ಉಪಯುಕ್ತತೆಯೇ ತೋರುವದಿಲ್ಲ; ಎಂಬ ಆಕ್ಷೇಪಕ್ಕೆ ಭಟ್ಟ ಮತಾನುಯಾಯಿಗಳಾದ ಮೀಮಾಂಸಕರು ಸಮರ್ಪಕವಾದ ಉತ್ತರವನ್ನು ಹೇಳಿ 'ಸ್ವಾಧ್ಯಾಯ' ಶಬ್ದದಲ್ಲಿ "ಪಠನ" ಎಂಬ ಅರ್ಥವಿರುವಂತೆ "ಬೋಧನ" ಎಂಬ ಅರ್ಥವೂ ಹೇಗೆ ಅಂತರ್ಭೂತವಾಗಿದೆಯೆಂಬದನ್ನು ಅಂದವಾಗಿ ವಿವರಿಸಿದ್ದಾರೆ. ವೇದದ ಅರ್ಥಪರಿಜ್ಞಾನವಿಲ್ಲದೆ ಕೇವಲ ಅಧ್ಯಯನ ರೂಪವಾದ ಭಾರಮಾತ್ರವನ್ನು ಹೊತ್ತಿರುವವನ ಪರಿಯಾದರೊ ತಾನೆ ಎಲೆ-ಹೂವು-ಹಣ್ಣುಗಳನ್ನು ತಾನು ತಳೆದಿದ್ದರೂ ಅವುಗಳ ರೂಪ-ರಸ-ಗಂಧ-ಸ್ಪರ್ಶೋಪಭೋಗ ಸುಖವಿಲ್ಲದಿರುವ ವೃಕ್ಷದಂತೆಯೆ ಸರಿ. ಕತ್ತೆಯು ಚಂದನಕಟ್ಟಿಗೆಯ

ಹೊರೆಯನ್ನೇ ಬೆನ್ನ ಮೇಲೆ ಹೊತ್ತುಕೊಂಡಿದ್ದಾಗ್ಯಾದರೂ ಅದರ ಉಪಭೋಗದ ವಿಷಯವಾಗಿ ತಾನೇನೂ ಸಂಬಂಧ ಪಡದಿರುವಹಾಗೆಯೇ ವೇದದ ಅರ್ಥ ಪರಿಜ್ಞಾನವಿಲ್ಲದೆ ಅಧ್ಯಯನ(ಪಾಠ)ಮಾತ್ರದಿಂದಲೇ ನಾನು ಕೃತಾರ್ಥನಾಗುವೆನೆಂಬುವವನ ಬಗೆಯಾಗಿದೆ. ಋಗ್ವೇದ ಸಂಹಿತೆಯ ೧೦ನೆಯ ಮಂಡಲದಲ್ಲಿ—

ಉತ ತ್ವಃ ಪಶ್ಯನ್ನ ದದರ್ಶ ವಾಚಮುತ ತ್ವಃ ಶೃಣ್ವನ್ನ ಶೃಣೋತ್ಯೇನಾಮ್
ಉತೋತ್ವಸ್ಮೈ ತನ್ವಂ ವಿಸಸ್ರೆ ಜಾಯೇವ ಪತ್ಯ ಉಶತೀ ಸುವಾಸಾಃ (೭೧-೪)

"ವೇದಪಾಠಕರಾದ ಬಹುಜನರಲ್ಲಿ ಯಾವನೊ ಒಬ್ಬನು ಮಾತ್ರ ಮನಃ ಪೂರ್ವಕವಾಗಿ ಅಧ್ಯಯನ ಮಾಡುತ್ತಿರಬಹುದು. ಆದರೂ ಅರ್ಥ ಪರಿಜ್ಞಾನವಿಲ್ಲದೆ ಹೀಗೆ ವೇದವನ್ನು ಪಠಿಸುವವನಿಗಾಗಲಿ ಆ ವೇದ ಘೋಷವನ್ನು ಶ್ರವಣ ಮಾಡುವವನಿಗಾಗಲಿ ವೇದವಾಣಿಯ ನಿಜಸ್ವ ರೂಪವೇ ಗೊತ್ತಾಗುವದಿಲ್ಲ. ಋತುಸ್ನಾತಳಾದ ತಾರುಣ್ಯ ಲಾವಣ್ಯ ವಿಶಿಷ್ಟ ಸಾಧ್ವಿಯು(ಹದಿಬದಿಯು) ಪತಿಯನ್ನು ಕಾಮಿಸಿ ತನ್ನ ದೇಹ ವನ್ನು ಅವನಿಗೆ ಮಾಜದೆ ಇಷ್ಟವಾಗುವ ಹಾಗೆ ತೋರಲು, ಅವಳ ರಮಣನಾದರೊ ಆ ಮನದನ್ನೆಯನ್ನು ಮನವಾರೆನೋಡಿ, ಮನದ ಬಯ ಕೆಯನೀಡೇರಿಸಿಕೊಳ್ಳುವ ಹಾಗೆ, ತುಂಬಾ ಬಟ್ಟೆಯ ಹೊದಿಕೆಯುಳ್ಳ ಆ ಗರತಿಯ ಸುಕುಮಾರ ಶರೀರವನ್ನು ಅನ್ಯ ಪುರುಷರು ಯಥಾವ ತ್ತಾಗಿ ನೋಡಲು ಸಹ ಶಕ್ಯವಿಲ್ಲವಷ್ಟೇ. ಅರ್ಥವು ವಾಕ್ಕಿನ ಶರೀರವು. [ವಾಕ್ ಶಬ್ದವು ಸ್ತ್ರೀಲಿಂಗವಿದೆ.] ವಾಣಿಯ ನಿಜಸ್ವರೂಪವನ್ನು ಅರ್ಥ ಜ್ಞನು ಗ್ರಹಿಸುವನಲ್ಲದೆ ಕೇವಲ ಪಾಠಕರು ಸರಿಯಾಗಿ ಕಂಡು ಕೊಳ್ಳ ಲಾರರು."

ಎಂಬದಾಗಿ ಅರ್ಥಜ್ಞನ ಪ್ರಶಂಸೆಯು ಮಾಡಲ್ಪಟ್ಟಿದೆ. ಒಟ್ಟಿನ ಮೇಲೆ ವೇದವಾಕ್ಕು (ನುಡಿಯು) ಅರ್ಥಪರಿಜ್ಞಾನವೂ ತದ್ವಿಷಯಕ ವಾದ ಅನುಷ್ಠಾನವೂ ಮುಂತಾದ ಪರಮ ಧ್ಯೇಯಗಳುಳ್ಳದಾಗಿದೆ.

ಮತ್ತು, ಯಾವ ವಿದ್ಯೆಯನ್ನು ಯಾರಿಗೆ ಹೇಳಬೇಕು; ಯಾರಿಗೆ ಹೇಳಬಾರದು ಈ ವಿಷಯಕವಾದ ನಿರ್ಬಂಧವು ಹಿಂದುಸ್ತಾನದಲ್ಲಿ ಬುನಾದಿಯಿಂದಲೂ ಇದೆ. ಇದು ಬುದ್ಧಿ ಸಂಸ್ಕಾರ ತಾರತಮ್ಯವನ್ನು ಅನುಲಕ್ಷಿಸಿರುವದಲ್ಲದೆ ಭಾರತೀಯರ ದುರಾಗ್ರಹ ಪಕ್ಷಪಾತ ಮೂಲ ಕವಾದ ಸಂಕುಚಿತ ಭಾವನೆಯ ದ್ಯೋತಕವಲ್ಲ. ಯಾಸ್ಕಾಚಾರ್ಯನು-

ನಾವೈಯಾಕರಣಾಯ—ನಾನುಪಸನ್ನಾಯ— ಅನಿದಂವಿದೇ ವಾ ನಿತ್ಯಂ ಹ್ಯವಿಜ್ಞಾತುರ್ವಿಜ್ಞಾನೇಽಸೂಯಾ। ಉಪಸನ್ನಾಯ ತು ನಿರ್ಬ್ರೂಯಾತ್ ಯೋ ವಾಲಂ ವಿಜ್ಞಾತುಂ ಸ್ಯಾನ್ಮೇಧಾವಿನೇ ತಪಸ್ವಿನೇ ವಾ॥

ವ್ಯಾಕರಣವನ್ನು ಅರಿಯದವನಿಗೂ ಗುರುವಿನ ಬಳಿಯಲ್ಲಿದ್ದು ಅಭ್ಯಾಸಿಸದವನಿಗೂ ಅರ್ಥವನ್ನು ಗ್ರಹಿಸಲು ಅಸಮರ್ಥನಾದವನಿಗೂ ವೇದಾರ್ಥವನ್ನು ( ವ್ಯುತ್ಪತ್ತಿ ಶಾಸ್ತ್ರವನ್ನು ) ಹೇಳಲಾಗದು; ಏಕೆಂದರೆ ಎಗ್ಗನ ಮನದಲ್ಲಿ ಜಾಣರ ಬಗ್ಗೆ ಯಾವಾಗಲೂ ತಿರಸ್ಕಾರ ಬುದ್ಧಿ ಯಿರುವದು. ಆದರೆ, ಗುರುವಿನ ಬಳಿಯಲ್ಲಿದ್ದು ಸರಿಯಾಗಿ ಅಭ್ಯಾಸ ಮಾಡುವಾತನಿಗೂ ಬುದ್ಧಿಶಾಲಿಯೂ ಶಮದಮಾನ್ವಿತನೂ ಶ್ರದ್ಧೆಯು ಳ್ಳವನೂ ಆದ ಶಿಷ್ಯನಿಗೆ ವೇದ ಶಬ್ದಗಳ ನಿರ್ವಚನವನ್ನು ಬೋಧಿಸ ಬೇಕು" ( ನಿ. ಅ. ೨. ಖ. ೩ ) ಎಂದು ಹೇಳಿದ್ದಾನೆ. ಇದಕ್ಕೆ ಆಧಾರ ಭೂತಗಳಾದ ಸಂಹಿತೋಪನಿಷದೊಳಗಣ ವಾಕ್ಯಗಳು ಈ ಕೆಳಗೆ ಬರೆದು ಕಾಣಿಸಿದಂತಿರುವವು-

ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾ ಶೇವಧಿಷ್ಟೇಽಹ
ಮಸ್ಮಿ। ಅಸೂಯಕಾಯಾನೃಜವೇಽಯತಾಯ ನ ಮಾ ಬ್ರೂಯಾ
ವೀರ್ಯವತೀ ತಥಾ ಸ್ಯಾಮ್ ॥೧॥

ಯಮೇವ ವಿದ್ಯಾಃ ಶುಚಿಮಪ್ರಮತ್ತಂ ಮೇಧಾವಿನಂ ಬ್ರಹ್ಮಚರ್ಯೋ
ಪಪನ್ನಮ್। ಯಸ್ತೇ ನ ದ್ರುಹ್ಯೇತ್ ಕತಮಚ್ಚನಾಹ ತಸ್ಮೈ ಮಾ ಬ್ರೂಯಾ
ನಿಧಿಪಾಯ ಬ್ರಹ್ಮನ್ ॥೨॥

"ವಿದ್ಯೆಯು ಮೂರ್ತಸ್ವರೂಪವನ್ನು ಧರಿಸಿ ಬ್ರಾಹ್ಮಣನ ಬಳಿಸಾರ್ದು ನುಡಿದು ದೇನೆಂದರೆ--- ಎಲೈ ಬ್ರಾಹ್ಮಣನೇ, ನಾನು ನಿನ್ನ ಮೂಲಧನ ನಿಧಿಯಾಗಿದ್ದೇನೆ; ದ್ವೇಷಿಯೂ ಕಪಟಿಯೂ ಸ್ವೇಚ್ಛಾಚಾರಪರನೂ ಆದ ಮನುಷ್ಯನ ವಶಕ್ಕೆ ನನ್ನನ್ನು ಕೊಡಬೇಡ ಕಂಡೆಯಾ! ಹಾಗಾದರೇನೆ ನಾನು ಅತಿಶಯವಾದ ತೇಜಸ್ವಿಯಾಗಿರುವೆನು. ಆದರೆ, ಯಾವನು ಶುದ್ಧನೂ ದೋಷರಹಿತನೂ ಬುದ್ಧಿಶಾಲಿಯೂ ಬ್ರಹ್ಮಚರ್ಯೆಯನ್ನು ಪಾಲಿಸುವಾತನೂ ಆಗಿರುವನೆಂದು ನಿನಗೆ ಚೆನ್ನಾಗಿ ಮನವರಿಕೆಯಾ ಗಿದ್ದ ಪಕ್ಷದಲ್ಲಿ ಹಾಗು ಅವನು ಎಂದೂ ನಿನಗೆ ದ್ರೋಹ ಮಾಡ ಶಕ್ಯವನಲ್ಲವೆಂಬದೂ ತಿಳಿದು ಬಂದರೆ, ವಿದ್ಯಾ ನಿಧಿಯನ್ನು ಸಂರಕ್ಷಿಸು ವದರಲ್ಲಿ ಅಪ್ರಮತ್ತನಾದ ಅಂತಹ ಪವಿತ್ರಾತ್ಮನಿಗೆ ನನ್ನನ್ನು ಒಪ್ಪಿಸು"

ಈ ಮೇಲಿನ ವಾಕ್ಯಗಳು ಅಧಿಕಾರಿಯಾದ ಶಿಷ್ಯನಲ್ಲಿ, ಯಾವದೋಷಗಳಿರಬಾರದು, ಹಾಗು ಯಾವ ಗುಣಗಳು ಅವಶ್ಯವಾಗಿ ಇರಲೇಬೇಕು. ಎಂಬ ಬಗ್ಗೆ ತುಸು ನುಡಿಗಳಿಂದಲೇ ಒಳ್ಳೆಯ ಪರಿಣಾಮಕಾರಕಗಳಾದ ಶಬ್ದಗಳೊಡನೆ ನಿರೂಪಿಸಿವೆ. ಪ್ರತಿಯೊಬ್ಬ ವಿದ್ಯಾರ್ಥಿಯೂ ಆ ವಾಕ್ಯಗಳನ್ನು ಅವಶ್ಯವಾಗಿ ನೆನಪಿನಲ್ಲಿಟ್ಟುಕೊಂಡು ನಡೆಯುವದು ಶ್ರೇಯಸ್ಕರವಾಗಿದೆ. ಯಾವ ವಿದ್ಯೆಯನ್ನು ಅಭ್ಯಾಸಮಾಡಬೇಕಾಗಿದ್ದರೂ ಬ್ರಹ್ಮಚರ್ಯ ಮುಂತಾದ ಉತ್ತಮ ಗುಣಗಳ ಅವಶ್ಯಕತೆಯುಂಟೆಂಬ ಬಗೆಯನ್ನು ಯಾರೂ ಅಲ್ಲಗಳೆಯಲಾರರು. ಈ ವಿಷಯವು ಬಹಳ ಮಹತ್ವವುಳ್ಳದಾದದರಿಂದಲೇ ಮನುಸ್ಮೃತಿಯಲ್ಲಿಯೂ ಗೀತೆಯಲ್ಲಿಯೂ ಮೇಲಿನ ಛಾಂದೋಗ್ಯ ಬ್ರಾಹ್ಮಣ ವಾಕ್ಯಗಳ ಅಭಿಪ್ರಾಯವೇ ವ್ಯಕ್ತಗೊಳಿಸಲ್ಪಟ್ಟಿರುವದು. ಹೇಗೆಂದರೆ—

> ವಿದ್ಯಾ ಬ್ರಾಹ್ಮಣ ಮೇತ್ಯಾಹ ಶೇವಧಿಸ್ತೇಽಸ್ಮಿ ರಕ್ಷಮಾಮ್। ಅಸೂಯಕಾಯ ಮಾಂ ಮಾದಾಸ್ತಥಾ ಸ್ಯಾಂ ವೀರ್ಯವತ್ತಮಾ ॥ ಯಮೇವ ತು ಶುಚಿಂ ವಿದ್ಯಾನ್ನಿಯತ ಬ್ರಹ್ಮಚಾರಿಣಮ್ । ತಸ್ಮೈ ಮಾಂ ಬ್ರೂಹಿ ವಿಪ್ರಾಯ ನಿಧಿಪಾಯಾಪ್ರಮಾದಿನೆ ॥
>
> ಮನು. ಅ. ೨ ಶ್ಲೊ. ೧೧೪—೧೧೫

ಗೀತೆಯಲ್ಲಿ—

> ಇದಂತೆ ನಾತಪಸ್ಕಾಯ ನಾಭಕ್ತಾಯಕದಾಚನ। ನ ಚಾಶುಶ್ರೂಷವೆ ವಾಚ್ಯಂ ನಚಮಾಂಯೋಭ್ಯಸೂಯತಿ ॥ ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ । ಭಕ್ತಿಂ ಮಯಿ ಪರಾಂಕೃತ್ವಾ ಮಾಮೇವೈಷ್ಯತ್ಯಸಂಶಯಃ ॥
>
> ( ಗೀ. ಅ. ೧೮ ಶ್ಲೊ. ೬೭—೬೮

ಒಟ್ಟಿನ ಮೇಲೆ ಲೌಕಿಕ ವಿದ್ಯೆಗಳನ್ನು ಕಲಿಸುತ್ತಿರುವ ಶಾಲೆಗಳಲ್ಲಿ ಯಾದರೂ ವಿದ್ಯಾರ್ಥಿಯ ಗುಣಾವಗುಣಗಳ ಬಗ್ಗೆ ತಕ್ಕಮಟ್ಟಿಗಾದರೂ ವಿಚಾರ ಮಾಡುವದುಂಟು; ಅಸಾಮಾನ್ಯವಾದ ವೈದಿಕ ವಿದ್ಯೆಯ ವಿಷಯವಾಗಿ ಅಧಿಕಾರಿ ಸಂಬಂಧವಾದ ವಿಚಾರವು ಮಾಡಲ್ಪಡಬೇಕಾದುದು ಯುಕ್ತವೇಸರಿ. ಅದುಕಾರಣವೇ, ವೈದಿಕ ಸಾಹಿತ್ಯರೂಪಗಳಾದ ಬಹುತರವಾಗಿ ಎಲ್ಲ ಸಂಸ್ಕೃತ ಗ್ರಂಥಗಳ ಪ್ರಾರಂಭದಲ್ಲಿ ಸರ್ವ ಗ್ರಂಥಕಾರರೂ ಅಧಿಕಾರಿ - ಸಂಬಂಧ- ವಿಷಯ- ಪ್ರಯೋಜನ ಎಂಬೀ ಅನು

ಬಂಧ ಚತುಷ್ಟಯವನ್ನು ಹೇಳುವದು ವಾಡಿಕೆಯಾಗಿದೆ. ಹಾಗೆಯೇ, ವೇದಾಭ್ಯಾಸಕ್ಕೆ ಅಧಿಕಾರಿಯಾವನು? ಸಂಬಂಧವೆಂತಿರುವದು? ವೇದದಲ್ಲಿ ಯಾವ ವಿಷಯವಿದೆ? ವೇದವು ಯಾವ ಪ್ರಯೋಜನವುಳ್ಳದು? ಎಂಬ ಅನುಬಂಧ ಚತುಷ್ಟಯ ವಿಚಾರಾವಸರದಲ್ಲಿ ಅಧಿಕಾರಿಯ ಪ್ರಸ್ತಾಪವು ಮೊದಲನೆಯದಾಗಿರುತ್ತದೆ. ಇನ್ನು, ಪ್ರಾಕೃತ ಉಪನಯನ ಸಂಸ್ಕಾರಕ್ಕೆ ಅನಧಿಕಾರಿಗಳೆನಿಸುವವರು ಅಲೌಕಿಕೋಪಾಯ ಜ್ಞಾನವನ್ನು ಇತಿಹಾಸ ಪುರಾಣಾದಿ ಗ್ರಂಥಗಳ ಮೂಲಕವಾಗಿ ಪಡೆಯ ಬಹುದಲ್ಲದೆ ಅವರಿಗೆ ವೇದಾಧ್ಯಯನಾಧಿಕಾರವಿಲ್ಲವೆನ್ನುವದಾದರೊ ಅಪ್ರಾಕೃತ ವಿಶೇಷ ಸಂಸ್ಕೃತಾಧಿಕಾರಿಗಳಿಗಿಂತಲೂ ಬೇರೆ ಯಾದವರಿಗೆ ಸಂಬಂಧ ಪಟ್ಟದ್ದಾಗಿದೆ. ಇಷ್ಟವಸ್ತುವಿನ ಪ್ರಾಪ್ತಿಗಾಗಿಯೂ ಅನಿಷ್ಟ ವಿಷಯ ಮೂಲಕ ಸಂಭವಿಸುವ ಕಷ್ಟ (ದುಃಖ) ನಿವಾರಣೆಗಾಗಿಯೂ ಅಲೌಕಿಕ ಉಪಾಯವನ್ನು ತಿಳುಹುವ ಗ್ರಂಥವಾಗಲಿ ಅಥವಾ ಜ್ಞಾನವಾಗಲಿ ವೇದ ವೆಂದು ಹೇಳಿಸಿಕೊಳ್ಳಲ್ಪಡುವದು; ಎಂಬದಾಗಿ ವೇದದ ಸ್ವರೂಪವನ್ನು ಸುರುವಿಗೇನೆ ನಾವು ಹೇಳಿದ್ದೇವೆ.

ಇಷ್ಟ ಪ್ರಾಪ್ತಿಗೂ ಅನಿಷ್ಟಪರಿಹಾರಕ್ಕೂ ಸಂಬಂಧಿಸಿದ ಅಲೌಕಿಕ ಉಪಾಯವೇ ವೇದಗ್ರಂಥದ ವಿಷಯವು.

ವೇದವು ಅಲೌಕಿಕ ಉಪಾಯವನ್ನು ಬೋಧಿಸುವ ಮೂಲಕ ಉಪಕಾರಿಯಾಗಿದೆ. ( ಉಪಕಾರಿ, ಉಪಕಾರಕವೆಂಬಿವೆರಡೂ ಪರ್ಯಾಯ ನಾಮಗಳು. ) ಅಂತಪ್ಪ ಉಪಕಾರವನ್ನು ಪಡೆಯುವವನಾದ ಅಧಿಕಾರಿಯು ಉಪಕಾರ್ಯನೆನಿಸುವನು. ಈ ರೀತಿಯಾಗಿ ವೇದಕ್ಕೂ ವೇದಾಧಿಕಾರಿಗೂ ಉಪಕಾರಕ ಉಪಕಾರ್ಯಭಾವ ಸಂಬಂಧವಿದೆ.

ಅಧಿಕಾರಿ ಪ್ರವೃತ್ತಿಗೆ ಗುರಿಯಾದ ವೇದವು ಅನಿಷ್ಟನಿವೃತ್ತಿಪೂರ್ವಕ ಇಷ್ಟಪ್ರಾಪ್ತಿಯೇ ಪ್ರಯೋಜನವುಳ್ಳದಾಗಿದೆ. ಧರ್ಮ-ಅರ್ಥ-ಕಾಮ-ಮೋಕ್ಷರೂಪ ಪುರುಷಾರ್ಥಾಪೇಕ್ಷಿಗಳಿಗೆ ವೇದವು ಪರಮ ಉಪಾದೇಯವಾಗಿರುವದರಿಂದ, ವೇದಚತುಷ್ಟಯದಲ್ಲಿ ಮೊದಲನೆಯದೆನಿಸುವ ಋಗ್ವೇದಸ್ವರೂಪವನ್ನು ಕಂಡುಕೊಳ್ಳಲು ತೊಡಗುವಾ.

(ಮುಂದೆ ಸಾಗುವದು.)

# ವೇದಾಂತಸಾರ ವೀರಶೈವ ಚಿಂತಾಮಣಿಯ ವಿಮರ್ಶೆ

ಲೇಖಕ— ವೀರಪ್ಪ ಚನ್ನಬಸಪ್ಪ ಯುಗಟಿ ಬಿ. ಎ.ಎಲ್. ಎಲ್. ಬಿ.
ವಕೀಲ ಹಾವೇರಿ.



ವೀರಶೈವ ತತ್ವಸಿದ್ಧಾಂತವನ್ನು ಬೋಧಿಸುವ ಗ್ರಂಥಗಳು ವಿಪುಲವಾಗಿವೆ. ಅವುಗಳಲ್ಲಿ ವೇದಾಂತಸಾರ ವೀರಶೈವ ಚಿಂತಾಮಣಿಯು ಒಂದು ಉತ್ತಮವಾದ ಗ್ರಂಥವಾಗಿದೆ. ಇದು ಪೂರ್ವಖಂಡ ಮತ್ತು ಉತ್ತರ ಖಂಡಗಳೆಂದು ಎರಡು ಭಾಗಗಳಲ್ಲಿರುವದು. ಪೂರ್ವಖಂಡವು ಅಚ್ಚಾಗಿರುವದಿಲ್ಲ. ಇದರಲ್ಲಿ ಶಿವಸಿದ್ಧಾಂತದ ಮೇಲ್ಮೆಯು ವೇದೋಪನಿಷದ್ವಾಕ್ಯಗಳಿಂದ ಬಲಪಡಿಸಲ್ಪಟ್ಟಿರುವದು. ಇದು ಬಹು ಗಡುಚಾಗಿರುವದರಿಂದ ಸುಲಭವಾದ ಟೀಕೆಯನ್ನು ಬರೆದು ಅಚ್ಚು ಹಾಕುವದು ಅವಶ್ಯವು. ಎರಡನೆಯ ಖಂಡದ ಸಂಸ್ಕೃತ ಮೂಲ ಗ್ರಂಥವನ್ನು ಮರಾಠಿಯ ಟಿಪ್ಪಣಿಯೊಂದಿಗೆ ಕೈ. ವಾ. ರಾವಬಹಾದ್ದೂರ ಮಲ್ಲಪ್ಪ ಅಣ್ಣಾ ವಾರದ ಸೊಲ್ಲಾಪುರ ಇವರು ಮುದ್ರಿಸಿರುವರು. ಈ ಗ್ರಂಥವನ್ನು ರಚಿಸಿದವರು ನಿಷ್ಠೂರು ಗ್ರಾಮದ ನಂಜಣಾಚಾರ್ಯರೆಂಬವರು. ಇವರ ಚರಿತ್ರೆ ಮತ್ತು ಕಾಲಮಾನವು ಸೂರ್ಯನ ಬೆಳಕಿಗೆ ಬೀಳದ ಹಾಗಾಗಿದೆ. ಇವರು ವಿಶದಪಡಿಸಿರುವ ಗ್ರಂಥಗಳ ಆಧಾರದಿಂದ ಇವರು ಕ್ರಿ. ಶ. ೧೬ ನೇ ಶತಮಾನದಲ್ಲಿದ್ದರೆಂದು ಊಹಿಸಬಹುದು. ಇವರು ಮಹಾ ವಿದ್ವಾನರಿದ್ದರೆಂಬದನ್ನು ಇವರ ಗ್ರಂಥವೇ ಹೇಳುತ್ತದೆ. ವೀರಶೈವ ಸಿದ್ಧಾಂತವನ್ನು ಸಮರ್ಥಿಸುವದಕ್ಕಾಗಿ ವೇದೋಪನಿಷತ್ತು ಮೊದಲಾದ ಅನೇಕ ಗ್ರಂಥಗಳ ಆಧಾರವನ್ನು ಹೇಳಿರುವರು. ಇವರು ಉದಾಹರಿಸಿದ ಗ್ರಂಥಗಳ ಸಂಖ್ಯೆಯನ್ನು ನೋಡಿದರೆ ತಮ್ಮ ಕಾಲದಲ್ಲಿ ಇದ್ದ ಎಲ್ಲ ಗ್ರಂಥಗಳನ್ನು ಇವರು ಓದಿಕೊಂಡಿದ್ದರೆಂದು ಹೇಳಬಹುದು. ೨ನೆಯ ಖಂಡದಲ್ಲಿ ಶಕ್ತಿ ವಿಶಿಷ್ಟಾದ್ವೈತವು ಹೇಳಲ್ಪಟ್ಟಿದೆ. ವೀರಶೈವ ಸಿದ್ಧಾಂತವು ವೇದಾಂತದಸಾರವೆಂಬದನ್ನು ಶ್ರೀ ನಂಜಣಾಚಾರ್ಯರು ಬಹು ಮನೋಹರವಾಗಿ ಸಿದ್ಧಗೊಳಿಸಿರುವರು. ೨ನೆಯ ಖಂಡವು ೨೧ ಪ್ರಕರಣಗ

ಳಾಗಿ ಭಾಗಿಸಲ್ಪಟ್ಟಿದೆ. ಆದರೆ ಇಲ್ಲಿ ನಾನು ಇದರಲ್ಲಿಯ ಮುಖ್ಯವಿಷಯುಗಳನ್ನು ಮಾತ್ರ ವಿಮರ್ಶಿಮಾಡುತ್ತೇನೆ.

ಮೊದಲನೆಯ ಪ್ರಕರಣವಾದ ಅನುಬಂಧ ಚತುಷ್ಟಯದಲ್ಲಿ ಶುದ್ಧಶೈವ, ಮಿಶ್ರಶೈವ ಮೊದಲಾದವರ ಸಾಧಾರಣ ಧರ್ಮವನ್ನು ಗನೆಯ ಖಂಡದಲ್ಲಿ ಹೇಳಿರುವದರಿಂದ ಈಗ ವೀರಶೈವರಿಗೆ ವಿಶಿಷ್ಟವಾದ ಧರ್ಮವನ್ನು ಹೇಳುತ್ತೇನೆಂದು ಗ್ರಂಥಕರ್ತನು ಪ್ರಾರಂಭಿಸಿರುವನು. "ಜೀವೇಶ್ವರಾಭೇದವಾದಿನೋ ವೀರಶೈವಾಃ ಜೀವಸ್ಯಲಿಂಗೇ ಲಯೋಕ್ತೇಃ ॥ ಅಂದರೆ ಜೀವವು ಲಿಂಗದಲ್ಲಿ ಲಯವಾಗುವದರಿಂದ ವೀರಶೈವರು ಜೀವೇಶ್ವರರು ಒಂದೇ ಎಂದು ತಿಳಿಯುತ್ತಾರೆ. ವೀರಶೈವ ಸಿದ್ಧಾಂತದ ಈ ಮೂಲತತ್ವವನ್ನು ನಂಜಣಾಚಾರ್ಯರು ಪತಂಜಲಿಯಂತೆ ಸೂತ್ರ ರೂಪದಲ್ಲಿ ಹೇಳಿರುವರು. ಅವರು ಶಂಕರಸಂಹಿತೆಯ ಆಧಾರವನ್ನು ಕೊಟ್ಟಿರುವದೇನಂದರೆ- ಮಾಯೋಪಾಧಿಯಿಂದ ಕೂಡಿದ ಸದಾಶಿವನು ಅವಿದ್ಯೋಪಾಧಿಯುಳ್ಳವನಾಗಿ ಅಂಗರೂಪಿಯಾಗುತ್ತಾನೆ. ಕಾಮಿಕಾಗಮದಲ್ಲಿಯೂ ಹೇಳಿರುವದೇನಂದರೆ- ಶಿವನೇ ಲಿಂಗವಾಗಿಯೂ ಆತ್ಮನೇ ಅಂಗವಾಗಿಯೂ ಶಿವಜೀವರ ಸಂಯೋಗವೇ ಲಿಂಗಾಂಗ ಸಾಮರಸ್ಯವೆನಿಸುವದು. ವೀರಶೈವರಿಗೆ ಪುನರ್ಜನ್ಮವೇ ಇಲ್ಲ. ಒಂದೇ ಜನ್ಮದಲ್ಲಿಯೇ ಅವರಿಗೆ ಮುಕ್ತಿಯುಂಟಾಗುವದು. ಪುಣ್ಯಕಾರ್ಯಗಳನ್ನು ಮಾಡುವ ಉಳಿದ ಶೈವರು ಮೂರನೆಯ ಜನ್ಮದಲ್ಲಿ ವೀರಶೈವರಾಗಿ ಹುಟ್ಟುತ್ತಾರೆ. 'ತತ್ವಮಸಿ' ಎಂಬವಾಕ್ಯದ ಅರ್ಥವನ್ನು ಶಂಕರ ಸಂಹಿತೆಯು ಹೀಗೆ ಹೇಳುತ್ತದೆ:- ತತ್= ಪರಮಾತ್ಮರೂಪವಾದ ಆ ಲಿಂಗವು, ತ್ವಂ= ಅಂಗರೂಪವಾದ ನೀನು, ಅಸಿ= ಇರುತ್ತೀ, ಲಿಂಗ ಮತ್ತು ಅಂಗನೆಂಬ ಭೇದವು ಮಾಯೋಪಾಧಿಯಿಂದ ಉಂಟಾಗಿರುತ್ತದೆ. ಮಾಯಾ ನಾಶವುಂಟಾದಾಗ ಇವೆರಡರಲ್ಲಿಯ ಭೇದವು, ಅಳಿದು, ಎರಡೂ ಒಂದಾಗಿ ಸಚ್ಚಿದಾನಂದರೂಪವಾಗುವದು.

ವೀರಶೈವ ಶಬ್ದವು ಕಾಮಿಕ ಮತ್ತು ವಾತುಲಾಗಮದಲ್ಲಿ "ವಿಶಬ್ದೇನೋಚ್ಯತೆವಿದ್ಯಾ ಶಿವ ಜೀವೈಕ್ಯ ಬೋಧಿನೀ । ತಸ್ಯಾಂರಮಂತೆಯೆ ಶೈವಾಃ ವೀರಶೈವೋಸ್ತುತೆ ಮತಾಃ ॥" ಎಂದು ವ್ಯಾಖ್ಯೆ ಮಾಡಲ್ಪಟ್ಟಿದೆ. 'ವಿ' ಶಬ್ದದಿಂದ ಶಿವಜೀವರ ಐಕ್ಯವನ್ನು ಬೋಧಿಸುವ ವಿದ್ಯೆಯೆಂದಾ

ಗುವದು. ಅಂಥ ವಿದ್ಯೆಯಲ್ಲಿ ಯಾರು ರಮಿಸುತ್ತಾರೋ ಅವರೇ ವೀರಶೈವರೆಂಬರ್ಥವು. ಅಂತ್ಯಜನಾದಾಗ್ಯೂ ಭಕ್ತಿವಂತನಿದ್ದರೆ ಅವನೂ ಸಹ ತನ್ನ ಪ್ರೇಮಕ್ಕೆ ಪಾತ್ರನಾಗುವನೆಂದು ಶಿವನು ಸ್ಕಂದನಿಗೆ ಹೇಳಿರುವನು. ಭಕ್ತಿಯು ಅಂತರಂಗ, ಬಹಿರಂಗನೆಂದು ಎರಡು ತರವಾಗಿರುವದು. ಮೂರ್ತಿಪೂಜೆ ಮಾಡುವದು ಬಾಹ್ಯ ಭಕ್ತಿಯು. ಲಿಂಗೆ ಪ್ರಾಣಂಸಮಾಧಾಯ ಪ್ರಾಣೆ ಲಿಂಗಂತು ಶಾಂಭವಂ । ಸಶರೀರಂ ಮುಸಂಸ್ಕೃತ್ವಾ ನಕಿಂಚಿಚ್ಚಿಂತಯೇದ್ಯದಿ। ಸಾಭ್ಯಂತರಾ ಭಕ್ತಿರಿತಿ ಪ್ರೋಚ್ಯತೇ ಶಿವಯೋಗಿಭಿಃ॥ ಅಂದರೆ ಲಿಂಗದಲ್ಲಿ ಪ್ರಾಣವನ್ನೂ ಪ್ರಾಣದಲ್ಲಿ ಲಿಂಗವನ್ನೂ ಜೋಡಿಸಿ ಶರೀರ ಸಹಿತವಾಗಿ ಮನಸ್ಸನ್ನು ಪರಮಾತ್ಮನಲ್ಲಿ ಸ್ಥಿರಗೊಳಿಸಿದರೆ ಅದುಅಂತರ್ಯ ಭಕ್ತಿಯೆನಿಸುವದು. ಇಂಥ ಭಕ್ತಿಯುಳ್ಳವನು ಪುನಃ ಹುರಿದ ಬೀಜದಂತೆ ( ತಸ್ಯಜೀವಪರಿ ಭ್ರಷ್ಟ ಬೀಜವತ್ ) ಇಹಲೋಕದಲ್ಲಿ ಹುಟ್ಟಲಾರನು. ಇವನು ಅತ್ಯಾಶ್ರಮಿಯು. ಈತನು ದೇಹವನ್ನೆಲ್ಲ ಅಗ್ನಿ ಮಂತ್ರಗಳಿಂದಲೂ, ಶುದ್ಧವಾದ ವಿಭೂತಿಯಿಂದಲೂ ಧರಿಸಿ ಅಂಗುಷ್ಠ ಮಾತ್ರವಾದ ವರ್ತುಳಾಕಾರದ ಲಿಂಗವನ್ನು ಮಾಡಿ, ಮಧ್ಯಭಾಗವನ್ನು ಪೀಠವನ್ನು ಮಾಡಿ, ಪೀಠದ ಅರ್ಧದನ್ನು ಗೋಮುಖ ಮಾಡಬೇಕು. ಇದಕ್ಕೆ ಪಂಚಸೂತ್ರ ಲಿಂಗವೆನ್ನುವರು. ಸಕಲೇಂದ್ರಿಯಗಳನ್ನು ನಿಗ್ರಹಿಸಿದವನೇ ಅತ್ಯಾಶ್ರಮಿಯು. ಭಕ್ತಿ, ಧ್ಯಾನ, ಶ್ರದ್ಧಾ, ಯೋಗಗಳುಳ್ಳಾತನೇ ಬ್ರಹ್ಮವಿದ್ಯೆಗೆ ಅಧಿಕಾರಿಯಾಗುತ್ತಾನೆ. ಯೋಗದಿಂದ ಜ್ಞಾನೋತ್ಪತ್ತಿಯೂ, ಜ್ಞಾನದಿಂದ ಮುಕ್ತಿಯೂ ಆಗುವದು. ಕರ್ಮದಿಂದಾಗದು. ಅತ್ಯಾಶ್ರಮಿಯು ಮೂರು ಬೆರಳಿನ ವಿಭೂತಿಯನ್ನು ( ತ್ರಿಪುಂಡ್ರವನ್ನು ) ಧರಿಸತಕ್ಕದ್ದು.

ಪರಮಾತ್ಮನು ಸರ್ವವ್ಯಾಪಿಯೂ, ಅನಾದಿಯೂ, ಶಾಶ್ವತನೂ, ನಿರಾಕಾರಿಯೂ, ಸರ್ವಜ್ಞನೂ, ಸರ್ವಶಕ್ತನೂ, ಸರ್ವಾಂತರ್ಯಾಮಿಯೂ, ಸಚ್ಚಿದಾನಂದ ಪರಂಜ್ಯೋತಿಯೂ ಆಗಿರುವನು. ಹೃದಯ ಮಧ್ಯದಲ್ಲಿ ಆತ್ಮವು ನೆಲಿಸಿರುವದು. ಪರಮಾತ್ಮನು ಪರಂಜ್ಯೋತಿಯಂತೆ ಆತ್ಮದಲ್ಲಿ ನೆಲಿಸಿರುವನು. ಕಟ್ಟಿಗೆಯಲ್ಲಿ ಅಗ್ನಿಯು ನೆಲಿಸಿರುವಂತೆ ಪರಮಾತ್ಮನು ಪ್ರಕೃತಿಯಲ್ಲಿ (ಪ್ರತಿಯೊಂದು ವಸ್ತುವಿನಲ್ಲಿ) ಅವ್ಯಕ್ತರೂಪದಿಂದಿರುವನು. ದ್ವಿಜಾತಿಗಳಿಗೆ ಬ್ರಹ್ಮಚರ್ಯ, ಅಹಿಂಸಾ, ಕ್ಷಮಾ, ಶಾಂತಿ, ತಪಸ್ಸು,

ದಯಾ, ಸಂತೋಷ, ಸತ್ಯ, ಅಸ್ತಿಕ್ಯ ಗಳೆಂಬ ವಿಶೇಷವಾದ ಅಂಗಗಳಿರುವಂತೆ ಅತ್ಯಾಶ್ರಮಿಗೆ ಭಸ್ಮಧಾರಣ, ರುದ್ರಾಕ್ಷಧಾರಣ, ಶಿವಲಿಂಗಾರ್ಚನೆ, ಭಕ್ತಿ, ಶ್ರದ್ಧೆ ಮೊದಲಾದ ವಿಶಿಷ್ಟವಾದ ಅಂಗಗಳುಂಟು. ಶಿವಗೀತೆಯಲ್ಲಿ ಶಿವನು ರಾಮನಿಗೆ ಹೇಳಿರುವದೇನಂದರೆ "ಸರ್ವಾನ್ಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ। ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ರಾಘವ॥" ಅಂದರೆ ಎಲ್ಲ ಧರ್ಮಗಳನ್ನು ತೊರೆದು ನನ್ನನ್ನು ಶರಣು ಹೊಂದಿದರೆ ನಿನ್ನನ್ನು ಎಲ್ಲ ಪಾಪಗಳಿಂದ ಬಿಡುಗಡೆ ಮಾಡುತ್ತೇನೆ. ವೀರಶೈವರಲ್ಲಿ ಜಾತಿಭೇದವಿಲ್ಲ. ಚಾಂಡಾಲನೂ ಸಹ ಸದಾಚಾರಿಯಾಗಿ ಶಿವಭಕ್ತನಾಗಿದ್ದರೆ ಅವನೊಡನೆ ಸಹ ಭೋಜನ ಮಾಡಬಹುದು. ಲಿಂಗಪೂಜೆಗೆ ಸ್ತ್ರೀಯರೂ ಬಾಲಕರೂ ಸಹ ಅಧಿಕಾರಿಗಳು. ಲಿಂಗಾರ್ಚನೆ ಬಿಟ್ಟವನಿಗೆ ಮೋಕ್ಷವೇ ಇಲ್ಲ. ವೀರಶೈವರಿಗೆ ಯಜ್ಞ, ಯಾಗ, ಹವನಗಳಲ್ಲಿ ಲಿಂಗಪೂಜೆ ಮಾಡುವದೇ ಕರ್ಮವು ವೀರಶೈವನು ಬ್ರಾಹ್ಮಣನಾಗಿ ಹುಟ್ಟಿದರೂ ಕರ್ಮಕಾಂಡಬದ್ಧನಾಗಿಲ್ಲ. ಮಹಾ ಭಾರತದಲ್ಲಿ—"ಜನ್ಮನಾಜಾಯತೆ ಶೂದ್ರಃ ಕರ್ಮಣಾಜಾಯತೆ ದ್ವಿಜಃ। ವೇದಾಧ್ಯಾಯಿ ಭವೇದ್ವಿಪ್ರೋ ಬ್ರಹ್ಮಜಾನಾತಿ ಬ್ರಾಹ್ಮಣಃ।" ಅಂದರೆ ಜನ್ಮದಿಂದ ಶೂದ್ರನಾಗಿಯೂ ಕರ್ಮದಿಂದ ದ್ವಿಜನಾಗಿಯೂ, ವೇದಾಭ್ಯಾಸದಿಂದ ವಿಪ್ರನಾಗಿಯೂ ಪರಬ್ರಹ್ಮವನ್ನು ತಿಳಿದವನು ಬ್ರಾಹ್ಮಣನೂ ಆಗುವನು. ಆದಿತ್ಯಪುರಾಣ ಮಾನವೀಯ ಸಂಹಿತೆಯಲ್ಲಿ ೬೩ನೇ ಅಧ್ಯಾಯದಲ್ಲಿ ಸೂರ್ಯನು ಹೇಳಿರುವದೇನಂದರೆ, "ಬ್ರಾಹ್ಮಣಃ ಕ್ಷತ್ರಿಯೋವೈಶ್ಯಃ ಶೂದ್ರೋವಾಪ್ಯಂತ್ಯಜಾತಜಃ। ಶಿವಭಕ್ತ ಸ್ಸದಾಪೂಜ್ಯಸ್ಸಸರ್ವಬ್ರಾಹ್ಮಣೋತ್ತಮಃ" ಅಂದರೆ ಬ್ರಾಹ್ಮಣನಾಗಲಿ ಅಂತ್ಯಜನಾಗಲಿ ಶಿವಭಕ್ತನಾಗಿದ್ದರೆ ಅವನು ಪೂಜ್ಯನೂ ಬ್ರಾಹ್ಮಣೋತ್ತಮನೂ ಆಗಿದ್ದಾನೆ. ಶಿವಪುರಾಣದ ವಾಯುವೀಯ ಸಂಹಿತೆಯಲ್ಲಿ ಉತ್ತರಾರ್ಧವಾದ ಕೃಷ್ಣ ಮತ್ತು ಉಪಮನ್ಯುಗಳ ಸಂವಾದದಲ್ಲಿ ಹೀಗೆ ಹೇಳಿದೆ,—"ಭಕ್ತಿರಷ್ಟವಿಧಾಹ್ಯೇಷಾಯಸ್ಮಿನ್ ಮ್ಲೇಚ್ಛೋಪಿ ವರ್ತತೆ। ಸವಿಪ್ರೇಂದ್ರೋಮುನಿಃ ಶ್ರೀಮಾನ್ ಸಯತಿಃಸಚ ಪಂಡಿತಃ॥" ಎಂಟುವಿಧವಾದ ಭಕ್ತಿಯುಳ್ಳಾತನು ವಿಪ್ರೇಂದ್ರನಾಗಿ ಮುನಿಯೆನಿಸಿಕೊಳ್ಳುವನು.

ಜಾತಿಯಲ್ಲಿ ಬ್ರಾಹ್ಮಣ್ಯವಿಲ್ಲ. ಯಾಕೆಂದರೆ ಋಷ್ಯಶೃಂಗ, ಅಗಸ್ತ್ಯ, ವಶಿಷ್ಠರಿಗೆ ಯಾವ ಜಾತಿಯುಂಟು? ಜೀವಕ್ಕೆ ಬ್ರಾಹ್ಮಣ್ಯವಿಲ್ಲ. ಯಾಕೆಂದರೆ ಜೀವವು ಎಲ್ಲ ಪ್ರಾಣಿಗಳಲ್ಲಿಯೂ ಅದೆ. ವರ್ಣದಲ್ಲಿ ಬ್ರಾಹ್ಮಣ್ಯವಿಲ್ಲ.

ಮುಖ, ಬಾಹು, ತೊಡೆ, ಪಾದಗಳಲ್ಲಿ ಉತ್ಪನ್ನವಾದ ಶ್ವೇತ ಮೊದಲಾದವರು ಸಮಾನರೇ ಇದ್ದಾರೆ. ಧರ್ಮದಲ್ಲಿಯೂ ಬ್ರಾಹ್ಮಣ್ಯವಿಲ್ಲ. ಆಹಾರ, ನಿದ್ರಾ ಮೊದಲಾದ ಧರ್ಮಗಳು ಎಲ್ಲ ಪ್ರಾಣಿಗಳಿಗೂ ಸಾಮಾನ್ಯವಾಗಿವೆ. ಕರ್ಮದಲ್ಲಿಯೂ ಬ್ರಾಹ್ಮಣ್ಯವಿಲ್ಲ. ಯಾಕೆಂದರೆ ಉಪನಯನಾದಿ ಕರ್ಮಗಳು ಕ್ಷತ್ರಿಯರಿಗೂ ಉಂಟು. ಸಾಮವೇದದಲ್ಲಿ ಹೇಳಿರುವದೇನಂದರೆ—“ತ್ವಂ ದೇವೇಷು ಬ್ರಾಹ್ಮಣೋಽಸೀತ್ಯಾದಿ ಸಾಮಶ್ರುತೇಶ್ಶಿವಃ । ದೇವೇಷ್ವೇಕೋ ಬ್ರಾಹ್ಮಣಃ ಸ್ಯಾತ್ತದ್ಭಕ್ತೋಽನ್ಯಷು ಬ್ರಾಹ್ಮಣಃ ॥” ಅಂದರೆ ಶಿವನು ದೇವತೆಗಳಲ್ಲಿ ಬ್ರಾಹ್ಮಣನಾಗಿರುವನು, ಶಿವಭಕ್ತನು ಮನುಷ್ಯರಲ್ಲಿ ಬ್ರಾಹ್ಮಣನಾಗಿದ್ದಾನೆ. ಪರಾಶರ ಪುರಾಣದಲ್ಲಿ ಹೀಗೆ ಹೇಳಿದೆ—“ಶಂಕರಾ ಸರ್ವದೇವಾಶ್ಚ ವೃಷಲಸ್ತು ಪುರಂದರಃ । ಪಿತಾಮಹಶ್ಚ ವೈಶ್ಯಸ್ಯಾತ್ ಕ್ಷತ್ರಿಯಃ ಪರಮೋ ಹರಿಃ । ಬ್ರಾಹ್ಮಣೋ ಭಗವಾನ್ ರುದ್ರಃ ಸರ್ವೇಷಾಮುತ್ತಮೋತ್ತಮಃ ॥ ಮಹಾಬ್ರಾಹ್ಮಣಮೀಶಾನಮುಪಧಾನೇನ್ನ ಚೇತರಂ ॥ ಬ್ರಹ್ಮನು ವೈಶ್ಯನೂ, ಹರಿಯು ಕ್ಷತ್ರಿಯನಾಗಿಯೂ ರುದ್ರನು ಬ್ರಾಹ್ಮಣನಾಗಿಯೂ ಇರುವರು ಆದ್ದರಿಂದ ಶಿವನನ್ನು ಬಿಟ್ಟು ಉಳಿದವರನ್ನು ಧ್ಯಾನಿಸಬಾರದು. ಮಹಾ ಭಾರತದ ಅನುಶಾಸನ ಪರ್ವದಲ್ಲಿ ಹೇಳಿರುವದೇನಂದರೆ, ದೂರ್ವಾಸನ ಉಚ್ಛಿಷ್ಟದ ಶೇಷವನ್ನು ಕೃಷ್ಣನು ಅಂಗುಷ್ಠದಿಂದ ಮಸ್ತಕದವರೆಗೆ ಹಚ್ಚಿಕೊಂಡದ್ದರಿಂದ ವಜ್ರದೇಹಿಯಾದನು. ಹಾಗೆಯೇ ಶಿವಭಕ್ತನು ಮಹೇಶ್ವರನ ಪ್ರಸಾದ ಹಚ್ಚಿಕೊಳ್ಳುವದರಿಂದ ಹಾಗೆಯೇ ಆಗುವನು. ಪ್ರಸಾದ ಸೇವನೆಯಿಂದ ವಸಿಷ್ಠನು ಬ್ರಹ್ಮರ್ಷಿಯಾದನು.

ವೀರಶೈವರಿಗೆ ರಜೋದೋಷ, ಪ್ರಸವದೋಷ, ಮೃತ್ಯುದೋಷಗಳಿಲ್ಲ. ದೇಹಕ್ಕಲ್ಲದೆ ಆತ್ಮಕ್ಕೆ ಈ ದೋಷಗಳಿಲ್ಲ. ಆತ್ಮವು ಪ್ರತ್ಯಗ್ರೂಪ, ಜ್ಞಾನರೂಪ ಪೂರ್ಣರೂಪ ಮತ್ತು ಕೇವಲ ಶಿವಸ್ವರೂಪವೇ ಆಗಿದೆ. ಗೃಹಸ್ಥನು ಸನ್ಯಾಸಿಗೆ ಗುರುವಾಗಬಲ್ಲನು. ಅವನು ವಿದ್ಯೆಯಲ್ಲಿ ಪಾರಂಗತನಿರಬೇಕು. **ಆತ್ಮಜ್ಞಾನದಿಂದ ಯಾವನ ವರ್ಣಾಶ್ರಮವು ಕಳೆದು ಹೋಗಿರುವದೋ ಅವನಿಗೆ ಅತ್ಯಾಶ್ರಮಿಯೆಂದು ಹೆಸರು.** ಅಥರ್ವವೇದ ಶಿರೋಭಾಗದ ಉಪಸಂಹಾರ ಸಂದರ್ಭದಲ್ಲಿ ಹೇಳಿರುವದೇನಂದರೆ, “ತದೇತದುಪಾಸಿತವ್ಯಃ” ಮೊದಲಾದ ವಾಕ್ಯದಿಂದ ಪ್ರಾರಂಭವಾಗಿ “ರುದ್ರೈರುದ್ರ ಏಕತ್ವಮಾಹುಃ” ಎಂಬುದರ ವರೆಗೆ ಪ್ರಾಣಲಿಂಗಧಾರಣ, ಉಪಾಸನವೂ “ರೌದ್ರಂ ಶಾಶ್ವತಂ” ಎಂಬ ವಾಕ್ಯದಿಂದ ಇಷ್ಟಲಿಂಗಧಾರಣವೂ ಹೇಳಿದೆ. ಇದರಲ್ಲಿ

ಶಿವನೊಬ್ಬನನ್ನೇ ಪೂಜಿಸಬೇಕೆಂದು ಹೇಳಲ್ಪಟ್ಟಿದೆ. ಅಥರ್ವವೇದೋಪ ಸಂಹಾರದಲ್ಲಿ ವೀರಶೈವಮತವು ಪ್ರತಿಪಾದಿಸಲ್ಪಟ್ಟಿರುವದು. ವಾತುಲಾ ಗಮದ ಉತ್ತರಭಾಗದಲ್ಲಿ ವೀರಶೈವ ಸಿದ್ಧಾಂತವನ್ನು ಶಿವನು ಹೇಳಿರು ವನು, ಈಶ್ವರನು ಒಬ್ಬನೇ ಇದ್ದು ಸರ್ವ ಪ್ರಾಣಿಗಳ ಅಂತರಂಗದಲ್ಲಿ ಸಾಕ್ಷೀಭೂತನಾಗಿದ್ದು ಬೇರೆ ಬೇರೆ ಪ್ರಾಣಿಗಳಲ್ಲಿ ಬೇರೆ ಬೇರೆ ರೂಪದಿಂದ ಕಾಣಿಸುತ್ತಾನೆ. ಅನೇಕ ಪಾತ್ರೆಗಳ ನೀರಿನಲ್ಲಿ ಸೂರ್ಯನು ಹೇಗೆ ಅನೇಕ ಪ್ರತಿಬಿಂಬಗಳಾಗಿ ಕಾಣಿಸುತ್ತಾನೋ ಮತ್ತು ಪಾತ್ರೆಗಳಲ್ಲಿಯ ನೀರು ಹೋದ ಮೇಲೆ ಪ್ರತಿಬಿಂಬಗಳಿಲ್ಲದಾಗಿ ಸೂರ್ಯನೊಬ್ಬನೇ ಹೇಗೆ ಉಳಿ ಯುತ್ತಾನೋ ಅದರಂತೆಯೇ ಈಶ್ವರನು ಲೀಲೆಯಿಂದ ಜೀವಭಾವವನ್ನು ತಾಳಿದವನಾಗಿ ಉಪಾಧಿಯೆಂಬ ಪಾಶವು ಲಯವಾದ ಮೇಲೆ ಶುದ್ಧ ಈಶ್ವ ರನೊಬ್ಬನೇ ಉಳಿಯುತ್ತಾನೆ. ಜನರ ದುಃಖದಿಂದ ಈಶ್ವರನು ಲಿಪ್ತನಾಗು ವದಿಲ್ಲ. ಬ್ರಹ್ಮಾದಿ ದೇವತೆಗಳೂ ಮನುಷ್ಯಾದಿ ಪ್ರಾಣಿಗಳೂ ಪಶುಗ ಳೆಂತಲೂ ಶಿವನು ಪಶುಪತಿಯೆಂತಲೂ ಹೇಳಿದೆ. ಪಶುಪತಿತ್ವಗಳೆರಡೂ ಮಾಯಾಮೋಹದಿಂದ ಕಲ್ಪಿತವಾಗಿರುವವು. ಮಾಯಾ ಮೋಹವು ನಾಶ ವಾದ ಮೇಲೆ ಯಾವನು ಪಶು ಯಾವನು ಪತಿಯು? ಅಂದರೆ ಈ ಭೇದವು ಉಳಿಯುವದಿಲ್ಲವೆಂಬರ್ಥ. ( ಸಿದ್ಧಾಂತಶಿಖಾಮಣಿ ಐಕ್ಯಸ್ಥಲ) ಶಿವಾ ಚಾರ್ಯರು ಶಿವತತ್ತ್ವಕ್ಕೆ ಸ್ಥಲವೆಂದು ಹೇಳಿದ್ದಾರೆ. ಯಾಕೆಂದರೆ ಸರ್ವ ಮಹದಾದಿ ತತ್ತ್ವಗಳು ಸ್ಥಾನಭೂತವಿದ್ದು ಅದರಲ್ಲಿ ಲಯಸ್ಥಾನವೂ ಒಂದಾಗಿದೆ.

ಪ್ರಕೃತಿ ಪುರುಷರಿಂದ ಉತ್ಪನ್ನವಾದ ಈ ಜಗತ್ತು ಯಾವ ಸ್ಥಳ ದಲ್ಲಿರುವದೋ ಅಲ್ಲಿಯೇ ಅದು ಲಯಹೊಂದುವದರಿಂದ ಆ ಪರಶಿವ ವಸ್ತುವಿಗೆ ಸ್ಥಲನೆಂದು ಹೆಸರು. ಸ್ಥಕಾರವು ಸ್ಥಳವಾಚಕವಿದ್ದು ಲಕಾ ರವು ಲಯವಾಚಕವದೆ. ಇವೆರಡಕ್ಕೂ ಯಾವನು ಕಾರಣನಿದ್ದಾನೋ ಅವನಿಗೆ ಸ್ಥಲವೆಂದು ಹೆಸರು. ಸ್ಥಾವರ ಜಂಗಮ ಜಗತ್ತಿಗೆ ಯಾವನು ಅಧಿಷ್ಠಾನನಾಗಿರುವನೋ ಅವನಿಗೆ ಸ್ಥಲವೆಂದು ಹೆಸರು. ಆ ಸ್ಥಲವು ತನ್ನಶಕ್ತಿಯ ಕ್ಷೋಭದಿಂದ ೨ ಪ್ರಕಾರವಾಗುವದು. ಒಂದಕ್ಕೆ ಅಂಗಸ್ಥಲ ವೆಂತಲೂ, ಇನ್ನೊಂದಕ್ಕೆ ಲಿಂಗಸ್ಥಲವೆಂತಲೂ ಹೆಸರು. ಸ್ಥಲವು ಲಿಂ ಗಾಂಗದ ಉಪಾಧಿಯಿಂದ ಪರಸ್ಪರ ಭಿನ್ನವಾಗಿದೆ. ಆಕಾಶವು ಘಟಾ

ಕಾಶ, ಮತ್ತಾಕಾಶವಾಗುವಂತೆ ಲಿಂಗಸ್ಥಳವು ಉಪಾಸ್ಯವಿದ್ದು ಅಂಗಸ್ಥಳವು ಉಪಾಸಕವಿದೆ. ಉಪಾಸ್ಯತ್ವ, ಉಪಾಸಕತ್ವಗಳೆರಡೂ ಧರ್ಮಗಳನ್ನು ಪರಶಿವನು ತಾನೇ ಸ್ವೀಕರಿಸಿದ್ದು ಚ್ಯುತಿಇಲ್ಲದಂತೆ ಆತ್ಮಲೀಲೆಯಿಂದಿರುವನು. ತನ್ನ ಶಕ್ತಿಯಿಂದಲೇ ಏಕಕಾಲದಲ್ಲಿ ಸಾಕ್ಷಾತ್ಕಾರವನ್ನುಂಟು ಮಾಡುವನು. ಮಾಯಾರೂಪ ಉಪಾಧಿಯಿಂದ ಕೂಡಿದ ಯಾವ ಲಿಂಗರೂಪಿಯಾದ ಶಂಭುವಿರುವನೋ ಅಂಥ ಸದಾಶಿವನೇ ಅವಿದ್ಯಾರೂಪ ಉಪಾಧಿಯಿಂದ ಕೂಡಿ ಅಂಗಸ್ವರೂಪ ಜೀವನಾಗುತ್ತಾನೆ. ಹಾಗೆಯೇ ಶಕ್ತಿಯೂ ೨ ಪ್ರಕಾರವಾಗಿದೆ. ಆ ಶಕ್ತಿಯು ಶಿವನ ಸಹಚಾರಿಯಾಗಿರುವದು. (ಪತ್ನಿಯು) ಆ ಶಕ್ತಿಯು ಸರ್ವಸಾಕ್ಷಿಯಾಗಿದ್ದು ಸದಾ ಅಕ್ಷಯವಾಗಿಯೂ, ಪೂರ್ಣವಾಗಿಯೂ ಇದೆ. ಲಿಂಗಸ್ಥಲವನ್ನು ಆಶ್ರಯಿಸಿ ಒಂದು ಶಕ್ತಿಯು ಫಲದಾಯಕವಾಗಿಯೂ, ಅಂಗಸ್ಥಲವನ್ನು ಆಶ್ರಯಿಸಿದ ಮತ್ತೊಂದು ಶಕ್ತಿಯ ಅಂಶವು ಭಕ್ತಿರೂಪದಿಂದಿದ್ದು ಭಕ್ತನ ಸಂಕಟವನ್ನು ಪರಿಹಾರ ಮಾಡುತ್ತದೆ. ಶಕ್ತಿಯು ವಾಸನಾತ್ಮಕವಾಗಿದ್ದು ಭಕ್ತಿದಶೆಯಲ್ಲಿ ಅದೇ ವಾಸನಾ ರಹಿತವಾಗಿರುತ್ತದೆ. ಭಕ್ತಿಯೇ ಶಕ್ತಿಯೂ, ಶಕ್ತಿಯೇ ಭಕ್ತಿಯೂ ಆಗಿದೆ. ಪರಮಾರ್ಥ ದೃಷ್ಟಿಯಿಂದ ಶಕ್ತಿ ಭಕ್ತಿಗಳಲ್ಲಿ ಭೇದವಿಲ್ಲ. ಶಕ್ತಿಯು ಪ್ರವೃತ್ತಿ ರೂಪವೂ, ಭಕ್ತಿಯು ನಿವೃತ್ತಿ ರೂಪವೂ ಆಗಿವೆ. ಆದ್ದರಿಂದಲೇ ಶಕ್ತಿಯ ಯೋಗದಿಂದ ಜಗತ್ತಿನ ಸೃಷ್ಟಿಯಾಗುತ್ತದೆ. ಭಕ್ತಿಯ ಯೋಗದಿಂದ ಅದರ ಲಯವಾಗುತ್ತದೆ. ಶಕ್ತಿಯು ಕೆಳಮುಖವಾಗಿಯೂ, ಭಕ್ತಿಯು ಮೇಲ್ಮುಖವಾಗಿಯೂ, ಇರುವವು. ಶಕ್ತಿಗೆ ಮಾಯೆಯೆಂತಲೂ, ಭಕ್ತಿಗೆ ನಿರ್ಮಾಯೆ ಯೆಂತಲೂ, ಅನ್ನುವರು. ಶಕ್ತಿಗಿಂತ ಭಕ್ತಿಯು ಗುಣದಿಂದ ಶ್ರೇಷ್ಠವಾಗಿದೆ. ಶಕ್ತಿಯು ಉಪಾಸ್ಯವಾಗಿಯೂ, (ಪೂಜೆ ಮಾಡಿಸಿಕೊಳ್ಳುವದು) ಭಕ್ತಿಯು ಉಪಾಸಕವಾಗಿಯೂ, (ಪೂಜೆ ಮಾಡುವದು) ಇವೆ. ಆದ್ದರಿಂದಲೇ ಲಿಂಗಸ್ಥಲದಲ್ಲಿ ಶಕ್ತಿ ಇದ್ದು ಅಂಗಸ್ಥಲದಲ್ಲಿ ಭಕ್ತಿ ಇದೆ. ಲಿಂಗಸ್ಥಲವು ಸಾಕ್ಷಾತ್ ಶಿವನಾಗಿದ್ದು ಅಂಗಸ್ಥಲವು ಜೀವಾತ್ಮವಾಗಿದೆ. ಈ ಲಿಂಗಾಂಗಸ್ಥಳಗಳ ಐಕ್ಯಕ್ಕೇನೇ ಶಿವಜೀವೈಕ್ಯವೆಂದು ಹೇಳುತ್ತಾರೆ. ಈ ರಹಸ್ಯವು ಯಾರಿಗೆ ತಿಳಿದಿರುವದೋ ಅವರು ಅವಿದ್ಯಾ ರೂಪದ ಗಂಟನ್ನು ಬಿಚ್ಚುವರು.

## ಲಿಂಗಾಂಗ ಷಟ್ಸ್ಥಲ ನಿರೂಪಣ

ಯಾವತ್ತು ಚರಾಚರ ಜಗತ್ತು ಶಿವನಲ್ಲಿಯೇ ಲಯ ಹೊಂದುವದರಿಂದ ಎಲ್ಲ ಪ್ರಾಣಿಗಳ ಗತಿಲಯುಗಳಿಗೆ ಕಾರಣನಾದ ನಿಷ್ಕಳರೂಪ ಶಿವನಿಗೆ ಲಿಂಗವೆಂದು ಹೆಸರು. ಲಿಂಗವು ಭಾವ, ಪ್ರಾಣ ಇಷ್ಟ ಎಂದು ೩ ಪ್ರಕಾರವಾಗಿದೆ. ಭಾವಲಿಂಗವು ಕಲಾರಹಿತವಾಗಿದ್ದು ಕೇವಲ ಭಾವದಿಂದಲೇ ಅರಿತುಕೊಳ್ಳಲು ಯೋಗ್ಯವಾಗಿದೆ. ಪ್ರಾಣ ಲಿಂಗವು ಮನಸ್ಸಿನಿಂದಲೇ ಅರಿತುಕೊಳ್ಳಲು ಯೋಗ್ಯವಾಗಿದ್ದು ಸಕಲ, ನಿಷ್ಕಲ ರೂಪವಾಗಿದೆ. ಇಷ್ಟಲಿಂಗವು ಕಲಾಸಹಿತವಾಗಿದ್ದು ದೃಷ್ಟಿರೂಪ ಕಲೆಯಿಂದ ಅರಿತುಕೊಳ್ಳಲು ಯೋಗ್ಯವಾಗಿದೆ. ಅವರ ಮನೋರಥವು ಪರಿಪೂರ್ಣವಾಗುತ್ತಿದ್ದು ಆದರಿಂದ ನಿರಂತರದಲ್ಲಿಯೂ ಅನಿಷ್ಟ ಪರಿಹಾರವಾಗುವದು. ಇಲ್ಲಿ ದೃಷ್ಟಿಯೆಂದರೆ ಪೂಜೆ ಯೆಂದರ್ಥ. ಪೂಜೆಯಿಂದ ಮನೋರಥವು ಸಿದ್ಧವಾಗುವದರಿಂದ ಅದಕ್ಕೆ ಇಷ್ಟಲಿಂಗವೆಂದು ಹೆಸರು. ಹೀಗೆಂದು ಅಥರ್ವಣ ಶ್ರುತಿಯು ಹೇಳುತ್ತದೆ. ಭಾವಲಿಂಗವು ಸದ್ರೂಪವಾಗಿಯೂ, ಪ್ರಾಣಲಿಂಗವು ಚಿದ್ರೂಪವಾಗಿಯೂ, ಇಷ್ಟಲಿಂಗವು ಆನಂದರೂಪವಾಗಿಯೂ ಇವೆ. ಭಾವಲಿಂಗವು ಪರತತ್ವವಾಗಿಯೂ, ಪ್ರಾಣಲಿಂಗವು ಸೂಕ್ಷ್ಮತತ್ವವಾಗಿಯೂ, ಇಷ್ಟಲಿಂಗವು ಸ್ಥೂಲತತ್ವವಾಗಿಯೂ ಇವೆ. ಸ್ಥೂಲಲಿಂಗಕ್ಕೆ ಬಾಹ್ಯಲಿಂಗವೆಂಬ ಸಂಜ್ಞೆಯೂ, ಸೂಕ್ಷ್ಮಲಿಂಗಕ್ಕೆ ಅಭ್ಯಂತರವೆಂಬ ಸಂಜ್ಞೆಯೂ, ಪರತತ್ವ ಲಿಂಗಕ್ಕೆ ಬಾಹ್ಯಾಭ್ಯಂತರವೆಂಬ ಸಂಜ್ಞೆಯೂ ಇದೆ. ಸೂಕ್ಷ್ಮಲಿಂಗವು ಅಂತರ ದೃಷ್ಟಿಗೆ ಮಾತ್ರ ಗೋಚರವಾಗುತ್ತದೆ. ಪರತತ್ವ ಲಿಂಗವು ಬಾಹ್ಯಾಭ್ಯಂತರಗಳೆರಡರಲ್ಲಿಯೂ ಗೋಚರವಾಗುತ್ತದೆ. ನಾದ, ಬಿಂದು, ಕಳೆ ಎಂದು ಲಿಂಗದಲ್ಲಿ ೩ ಪ್ರಕಾರ ಹೇಳಿದೆ. ಭಾವಲಿಂಗದಲ್ಲಿ ಮತ್ತೆ ಮಹಾಲಿಂಗ ಮತ್ತು ಪ್ರಸಾದಲಿಂಗ ಎಂದು ೨ ಸ್ಥಲಗಳನ್ನು ಪ್ರಮಾಣದಿಂದ ಸಿದ್ಧಮಾಡಿದ್ದಾರೆ. ಚರಲಿಂಗ, ಗುರುಲಿಂಗ, ಆಚಾರಲಿಂಗ ಎಂದು ಉಳಿದ ೩ ಸ್ಥಲಗಳುಂಟು. ಶಕ್ತಿಯೂ ಸಹ ೬ ಪ್ರಕಾರದ್ದಾಯಿತು. **ಶಾಂತ್ಯತೀತೋತ್ತರ** ಶಕ್ತಿಯು ಚಿನ್ಮಾತ್ರಾತ್ಮಕವಿದ್ದು ಶಿವನನ್ನು ಬಿಟ್ಟಿರುವದಿಲ್ಲ. ಅದಕ್ಕೆ ಶಿವಾ ಎಂಬ ಸಂಜ್ಞೆಯುಂಟು; ಇದಕ್ಕೆ **ಚಿಚ್ಛಕ್ತಿ**ಯೆಂದು ಹೆಸರು ಬಂದಿದೆ. **ಶಾಂತ್ಯತೀತಾ** ಶಕ್ತಿಗೆ **ಪರಾ** ಶಕ್ತಿಯೆಂದೆನ್ನುವರು. **ಶಾಂತಿ**

ಶಕ್ತಿಗೆ ಆದಿಶಕ್ತಿಯೆಂದೆನ್ನುವರು. ಇಚ್ಛಾ ಶಕ್ತಿಗೆ ವಿದ್ಯಾಶಕ್ತಿಯೆಂದೆನ್ನುವರು. ಪ್ರತಿಷ್ಠಾಶಕ್ತಿಗೆ ಜ್ಞಾನಶಕ್ತಿಯೆಂದೆನ್ನುವರು.

ಶಿವತತ್ವವು ಆದ್ಯಂತರಹಿತವಾಗಿದ್ದು, ನಿರ್ಮಲ, ಪರಿಪೂರ್ಣ, ಸೂಕ್ಷ್ಮ, ಸರ್ವಶ್ರೇಷ್ಠ ಮತ್ತು ಕೇವಲಭಾವಕ್ಕೆ ಮಾತ್ರ ಗೋಚರವಾಗತಕ್ಕದ್ದಾಗಿದೆ. ಅಂಥ ಶಿವತತ್ವ ಮಧ್ಯದಲ್ಲಿ ಚಿಚ್ಛಕ್ತಿಯ ಸ್ಫುರಣದಿಂದ ಮಹಾಲಿಂಗವು ಸದಾ ಪ್ರಕಾಶಿಸುತ್ತದೆ. ಸಾದಾಖ್ಯತತ್ವವು ಜ್ಯೋತಿಯ ಆಚೆಗಿದ್ದು ನಿಜತತ್ವವೆಂಬಹೆಸರುಳ್ಳದ್ದಾಗಿದೆ. ಅದು ಅಖಂಡವೂ, ಇಂದ್ರಿಯಾತೀತವೂ, ವಿಷಯಾತೀತವೂ ಆಗಿದೆ. ಅದು ಜ್ಞಾನದಿಂದಲೇ ಲಭಿಸತಕ್ಕದ್ದಿದ್ದು ಅಮೃತಸ್ವರೂಪವಾಗಿದೆ. ಅದಕ್ಕೆ ಪರಿಣಾಮಬೀಜವೆಂಬ ಸಂಜ್ಞೆಯುಂಟು. ಆ ತತ್ವವು ಪರಾ ಎಂಬ ತನ್ನ ಶಕ್ತಿಯಿಂದ ಪ್ರಕಾಶಿಸುತ್ತದೆ. ಮತ್ತು ಅದಕ್ಕೆ ಉಪಾಧಿರಹಿತ ಘನಲಿಂಗವೆಂದು ಹೆಸರು. ಚರಲಿಂಗವು ಅಂತರಂಗ ಬಹಿರಂಗಗಳಲ್ಲಿ ಪ್ರಕಾಶಿಸುವದಾಗಿದ್ದು ಅಮೂರ್ತತತ್ವವೆಂದು ಹೆಸರುಳ್ಳದ್ದಾಗಿದೆ. ಅದು ಜ್ಯೋತಿಸ್ವರೂಪವಿದ್ದು ನಾಶರಹಿತವಾಗಿರುವದರಿಂದ ಪರಪುರುಷವೆಂಬ ಸಂಜ್ಞೆಯುಳ್ಳದ್ದಾಗಿದೆ. ಚರಲಿಂಗವು ಮನಸ್ಸಿನಿಂದಲೇ ಧ್ಯಾನಿಸಲಿಕ್ಕೆ ಯೋಗ್ಯವಾಗಿದೆ. ಶಿವಲಿಂಗವು ವಿದ್ಯಾರೂಪಕಲೆಯಿಂದ ಯುಕ್ತವಾಗಿರುವದರಿಂದ ತನ್ನ ದಿವ್ಯಕಾಂತಿಯ ಸಮುದಾಯದಿಂದ ಶೋಭಿಸುತ್ತಿರುವದು. ಮತ್ತು ಸ್ವಶಕ್ತಿಯಿಂದಕೂಡಿದಾಗ ಅದಕ್ಕೆ ಮೂರ್ತಿತತ್ವವೆಂದು ಹೆಸರು. ಮೂರ್ತಿತತ್ವವು ಅಹಂಕಾರದ ಸ್ಥಾನವಾಗಿ ಯಾವಾಗ್ಗೆ ವ್ಯಕ್ತವಾಗುವದೋ ಆಗ ಅದಕ್ಕೆ ಶಿವಲಿಂಗವೆಂದು ಹೆಸರುಂಟಾಗುವದು. ಗುರುಲಿಂಗವು ಜ್ಞಾನಶಕ್ತಿಯ ವೈಭವದಿಂದ ತನ್ನ ಕರ್ತೃತ್ವವನ್ನು ಪ್ರಕಾಶಗೊಳಿಸತಕ್ಕದ್ದಿದ್ದು ಸರ್ವ ಉಪದೇಶವಿಧಿಪ್ರತಿಷ್ಠಿತವಾಗಿದೆ. ಅದು ಸುಖದಸಾಗರವೂ ಸದಾಬುದ್ಧಿಸ್ಥಾನದಲ್ಲಿರುವದಾಗಿಯೂ ಇದೆ. ಆಚಾರಲಿಂಗವು ಕರ್ಮಸ್ವರೂಪದಿಂದ ಸರ್ವರಿಗೂ ಆಧಾರವಾಗಿದೆ. ಇದಕ್ಕೆ ಅಚಲತತ್ವನೆಂದೂ ಹೆಸರು. ಇದು ಮನಸ್ಸಿನಿಂದಲೇ ಧಾರಣಮಾಡತಕ್ಕದ್ದಾಗಿದೆ. ಶಿವನೇ ತನ್ನ ಚಿಚ್ಛಕ್ತಿಯಿಂದ ಮಹಾಲಿಂಗ ಸ್ಥಲವಾಗಿದ್ದಾನೆ. ಇದು ಉಪಾಸಕನ ಐಕ್ಯಸ್ಥಲವಾಗಿದೆ. ಆ ಮೇಲೆ ಪ್ರಸಾದಲಿಂಗವೂಅದರ ಉಪಾಸಕತ್ವ ರೂಪದಿಂದ ಶರಣಸ್ಥಲವೂ ಪ್ರಾದುರ್ಭವಿಸಿತು. ಆ ಮೇಲೆ ಆದಿಶಕ್ತಿಯ ಪ್ರಭಾವದಿಂದ ಚರಲಿಂಗಸ್ಥಲವುತ್ಪನ್ನವಾಯಿತು. ಆ ಮೇಲೆ ಅದರ ಉಪಾಸಕ

ಸ್ವರೂಪದಿಂದ ಪ್ರಾಣಲಿಂಗಸ್ಥಲದ ಪ್ರಾದುರ್ಭಾವವುಂಟಾಯಿತು. ಆ ಮೇಲೆ ಆ ಸ್ಥಲದಲ್ಲಿ ಇಚ್ಛಾಶಕ್ತಿ ಪ್ರಭಾವದಿಂದ ಶಿವಲಿಂಗಸ್ಥಲವುಂಟಾಯಿತು. ಆ ಮೇಲೆ ಅದರ ಉಪಾಸಕಸ್ವರೂಪದಿಂದ ಪ್ರಸಾದಿಸ್ಥಲವುಂಟಾಯಿತು. ಶಿವಲಿಂಗಸ್ಥಲದಲ್ಲಿ ಜ್ಞಾನಶಕ್ತಿಯು ಸ್ಫುರಣದಿಂದ ಗುರುಲಿಂಗಸ್ಥಲವು ಕಾರಣರೂಪದಿಂದುಂಟಾಯಿತು. ಅದರ ಉಪಾಸಕಸ್ವರೂಪದಿಂದ ಮಹೇಶ್ವರಸ್ಥಲವುಂಟಾಯಿತು. ಗುರುಲಿಂಗಸ್ಥಲದಲ್ಲಿ ಕ್ರಿಯಾಶಕ್ತಿಯು ಪ್ರಭಾವದಿಂದ ಆಚಾರಲಿಂಗವುಂಟಾಯಿತು. ಅದರ ಉಪಾಸಕಸ್ವರೂಪದಿಂದ ಭಕ್ತಸ್ಥಲವುಂಟಾಯಿತು. ಮಹಾಲಿಂಗ, ಪ್ರಸಾದಲಿಂಗ, ಚರಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗ ಹೀಗೆ ಷಡ್ವಿಧಲಿಂಗಗಳ ಪ್ರವೃತ್ತಿಯು ಸೃಷ್ಟಿಮಾರ್ಗಕ್ಕನುಸರಿಸುವದು. ಷಡ್ವಿಧಲಿಂಗಗಳಲ್ಲಿ ಮತ್ತೆ ಪ್ರತಿಯೊಂದರಲ್ಲಿ ಪ್ರಭೇದಗಳುಂಟು.

**ಷಟ್ಸ್ಥಲಬ್ರಹ್ಮಸ್ವರೂಪದ ಜ್ಞಾನಕ್ಕಾಗಿ ಪಂಚಬ್ರಹ್ಮನಿರೂಪಣಮಾಡುತ್ತಾನೆ,**—ಈಶ, ತತ್ಪುರುಷ, ಅಘೋರ, ವಾಮ, ಸದ್ಯೋಜಾತ ಈ ಪಂಚಅವಸ್ಥೆಗಳು ಸದಾಶಿವಸಂಬಂಧವಾಗಿವೆ. ಸದ್ಯೋಜಾತ ಮೊದಲಾದವು ಅನುಕ್ರಮವಾಗಿ ಪಂಚಲಿಂಗಸ್ವರೂಪಗಳಾಗಿವೆ. ಇವೇ ಪರಬ್ರಹ್ಮವು. ಇದೇ ಮಹಾಲಿಂಗವಿದ್ದು ಷಟ್ಸ್ಥಲಬ್ರಹ್ಮಸ್ವರೂಪವಾಗಿದೆ. ಬ್ರಹ್ಮಜಾಬಾಲೋಪನಿಷತ್ತಿನಲ್ಲಿ ಹೀಗೆ ಹೇಳಿದೆ—'ಸದ್ಯೋಜಾತದಿಂದ ಪೃಥ್ವಿತತ್ವವೂ, ವಾಮದೇವನಿಂದ ಉದಕತತ್ವವೂ, ಅಘೋರದಿಂದ ಅಗ್ನಿತತ್ವವೂ, ತತ್ಪುರುಷದಿಂದ ವಾಯುತತ್ವವೂ, ಈಶಾನದಿಂದ ಆಕಾಶತತ್ವವೂ ಉಂಟಾಗಿವೆ. ಇದರಂತೆ ಪಂಚಬ್ರಹ್ಮರಿಂದ ಪ್ರಥಿವ್ಯಾಧಿ ಪಂಚತತ್ವಗಳಾದವು! ಸೂತಸಂಹಿತೆಯು ಜ್ಞಾನಯೋಗಖಂಡದ ೧೩ನೇ ಅಧ್ಯಾಯದಲ್ಲಿ ಹೀಗೆ ಹೇಳಿದೆ—'ಶಿವನು ತನ್ನ ಶಕ್ತಿಯಿಂದ ಐದುಪ್ರಕಾರವಾದನು. ಈಶಾನದಿಂದ ಶಬ್ದೋತ್ಪತ್ತಿಯಾಮದರಿಂದ ಶಬ್ದಕ್ಕೆ ಈಶಾನವೆಂಬ ಸಂಜ್ಞೆಯಾಯಿತು. ತತ್ಪುರುಷದಿಂದ ಸ್ಪರ್ಶೋತ್ಪತ್ತಿಯಾದ್ದರಿಂದ ಅದಕ್ಕೆ ತತ್ಪುರುಷವೆಂಬ ಸಂಜ್ಞೆಯಾಯಿತು. ಅಘೋರದಿಂದ ರೂಪವೂ, ವಾಮದೇವನಿಂದ ರಸವೂ, ಸದ್ಯೋಜಾತದಿಂದ ಗಂಧವೂ ವುಂಟಾದವು. ಸದಾಶಿವ, ಈಶ್ವರ, ರುದ್ರ, ವಿಷ್ಣು, ಬ್ರಹ್ಮರು ಶಿವನೇ ಆಗಿರುವರು. ಅಥರ್ವಶಿರಸ್ಸಿನಲ್ಲಿ ಹೇಳಿರುವದೇನಂದರೆ—'ಶಿವತತ್ವದಿಂದ ಪಂಚವಿಧಬ್ರಹ್ಮಸ್ವರೂಪ ಉಂಟಾಗಿದೆ. ಈ ತೋರುವ ಜಗತ್ತಿಗೆ ಪಂಚ

ಬ್ರಹ್ಮರು ಬೀಜವು. ಪಂಚಬ್ರಹ್ಮಗೆ ಶಿವನು ಬೀಜವು. ಆದ್ದರಿಂದ ಜಗತ್ತು ಬ್ರಹ್ಮಮಯವಾಗಿದೆಯೆಂದು ಹೇಳುವರು. ಪರಬ್ರಹ್ಮನಲ್ಲಿ ಆಸಕ್ತವಾಗುವದೇ ಅಂಗಸ್ಥಲವು. ಅಂಗಸ್ಥಲವು ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ೩ ಪ್ರಕಾರವಾಗಿದೆ. ಯೋಗಾಂಗದಿಂದ ಶಿವಯೋಗಸುಖಪ್ರಾಪ್ತಿಯೂ, ಭೋಗಾಂಗದಿಂದಶಿವನೊಡನೆ ಉಪಭೋಗಸುಖವೂ, ತ್ಯಾಗಾಂಗದಿಂದ ಸಂಸಾರಭ್ರಾಂತಿಯು ನಾಶವಾಗುವಿಕೆಯೂ ಉಂಟಾಗುವವು. ಯೋಗಾಂಗಕ್ಕೆ ಕಾರಣವೆಂತಲೂ, ಭೋಗಾಂಗಕ್ಕೆ ಸೂಕ್ಷ್ಮವೆಂತಲೂ, ತ್ಯಾಗಾಂಗಕ್ಕೆ ಸ್ಥೂಲವೆಂತಲೂ ಅನ್ನುತ್ತಾರೆ.

ಯೋಗಾಂಗದಲ್ಲಿ ಶರಣ, ಐಕ್ಯಸ್ಥಳಗಳೂ, ಭೋಗಾಂಗದಲ್ಲಿ ಪ್ರಾಣಲಿಂಗಿ, ಪ್ರಸಾದಿಸ್ಥಲಗಳೂ, ತ್ಯಾಗಾಂಗದಲ್ಲಿ ಭಕ್ತಮಹೇಶ್ವರಸ್ಥಳಗಳೂ ಸಮಾವೇಶವಾಗುವವೆಂದು ಪರಮಾರ್ಥಪ್ರತಿಪಾದಕರು ಹೇಳಿರುವರು. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಇವು ಷಟ್ಸ್ಥಲಗಳಾಗಿವೆ. ಸಂಸಾರದಸಹವಾಸವನ್ನು ಬಿಟ್ಟು ಈಶ್ವರನಲ್ಲಿ ಭಕ್ತಿ ಇಡುವದಕ್ಕೆ ಸ್ಥಲವೆಂದು ಹೆಸರು. ಶಕ್ತಿಯು ವಿಚಿತ್ರವಾದ ಯಾವಸಂಯೋಗವಾಗುತ್ತದೋ ಅದರ ಪರಿಣಾಮದ ಪ್ರಭಾವದಿಂದ ನಾಮ, ರೂಪ, ಕ್ರಿಯೆಗಳು ಭಿನ್ನವಾಗಿ ಅಂಗಸ್ಥಲದಲ್ಲಿ ೬ ಪ್ರಕಾರವಾಗಿವೆ. ಆರುಸ್ಥಲಗಳಲ್ಲಿಯೂ ಭಕ್ತಿಯು ಸೇರಿಕೊಂಡಿರುವದು. (೧) ಶರೀರ, ಪ್ರಾಣ, ಅರ್ಥ, ಜಾತಿ ಮೊದಲಾದವು ಮಿಥ್ಯಾಸ್ವರೂಪವೆಂದು ತಿಳಿದು ಅವುಗಳಿಂದ ಮನಸ್ಸು ತಿರುಗಿಸಿ ಈಶ್ವರನಲ್ಲಿ ಭಕ್ತಿರೂಪಕ್ರಿಯೆಯಿಂದ ಆಚರಿಸುವದಕ್ಕೆ ಭಕ್ತಸ್ಥಲವೆಂಬರು. (೨) ಆಸ್ತಿಕ್ಯಬುದ್ಧಿ, ನಿಯಮ, ವ್ರತ, ಸತ್ಯ, ಧರ್ಮ, ಶುದ್ಧತಾ ಮೊದಲಾದ ಲಕ್ಷಣಗಳಿಂದಸುಪ್ರಖ್ಯಾತನೂ, ಲಿಂಗದಲ್ಲಿ ಏಕನಿಷ್ಠೆಯಿಂದ ವೀರವ್ರತವು ವ್ಯಕ್ತವಾಗುವದರಿಂದಲೂ ಆದಕ್ಕೆ ಮಹೇಶ್ವರಸ್ಥಲವೆನ್ನುವರು. (೩) ನಾವು ಉಪಭೋಗ ಮಾಡುವ ಯಾವವಸ್ತುಗಳಿರುವವೋ ಆ ವಿಷಯಗಳನ್ನೆಲ್ಲ ಲಿಂಗಕ್ಕೆಸಮರ್ಪಿಸಿ ಪ್ರಸಾದಲಾಭವಾಗುವದೆಂದು ತಿಳಿಯುವದಕ್ಕೆ ಪ್ರಸಾದಿಸ್ಥಲವೆಂದು ಹೆಸರು. (೪) ಪ್ರಾಣ, ಇಂದ್ರಿಯಮೊದಲಾದವುಗಳಲ್ಲಿ „ನಾನು, ನನ್ನದು" ಎಂಬ ಮೋಹವನ್ನು ಬಿಟ್ಟು ಮತ್ತು ಮಾಯಾಮಯವಾದ ಈ ಸರ್ವಜಗತ್ತನ್ನು ಬಿಟ್ಟು ಲಿಂಗದಲ್ಲಿ ಲೀನವಾಗಿರುವದು ಪ್ರಾಣಲಿಂಗಿಸ್ಥಲವು. (೫) ದೇಹ, ಇಂದ್ರಿಯಮೊದಲಾದ ನನ್ನರೂಪವು ಸ್ವತಃ

ಲಿಂಗರೂಪವೇ ಆಗಿದೆ ಹೀಗೆಂಬ ಜ್ಞಾನಪ್ರಕಾಶದ ಬಲದಿಂದ ಯಾರಿಗೆ ತೋರುವದೋ ಮತ್ತು ಸರ್ವವಿಷಯಗಳು ಇರುವಾಗಲೂ ಸಹ ಯಾರು ಶುದ್ಧರಾಗಿರುವರೋ ಅದಕ್ಕೆ ಶರಣಸ್ಥಲವೆಂದು ಹೆಸರು. (೬)ಯಾರಲ್ಲಿ 'ನಾನು, ನೀನು' ಎಂಬ ಭೇದಬುದ್ಧಿಯು ನಾಶವಾಗಿದೆಯೋ ಮತ್ತು ಪ್ರಾಣ, ಇಂದ್ರಿಯ, ದೇಹ, ಮನ, ಪಂಚಭೂತಗಳು ಮಿಥ್ಯವೆಂದು ಯಾರಿಗೆ ತೋರುವವೋ, ಈ ಸರ್ವಜಗತ್ತು ಯಾರಿಗೆ ಭ್ರಾಮಕವಾಗಿ ತೋರುವದೋ ಅಂಥದಕ್ಕೆ ಐಕ್ಯಸ್ಥಲವೆಂದು ಹೆಸರು.

ಆತ್ಮದಿಂದ ಆಕಾಶೋತ್ಪತ್ತಿಯೂ, ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ನೀರೂ, ನೀರಿನಿಂದ ಪೃಥ್ವಿಯೂ ಹುಟ್ಟಿರುವವು. ಆತ್ಮಾಂಗವು ಐಕ್ಯಸ್ಥಲವಾಗಿಯೂ, ವ್ಯೋಮಾಂಗವು ಶರಣಸ್ಥಲವಾಗಿಯೂ, ವಾಯ್ವಂಗವು ಪ್ರಾಣಲಿಂಗಿಸ್ಥಲವಾಗಿಯೂ, ಅನಲಾಂಗವು ಪ್ರಸಾದಿಸ್ಥಲವಾಗಿಯೂ, ಜಲಾಂಗವು ಮಾಹೇಶ್ವರಸ್ಥಲವಾಗಿಯೂ, ಭೂಮ್ಯಂಗವು ಭಕ್ತಸ್ಥಲವಾಗಿಯೂ ಇವೆ. ಮಾಯಾರೂಪ ಉಪಾಧಿಯಿಂದ ಯುಕ್ತನಾಗಿ ಲಿಂಗರೂಪಿ ಸದಾಶಿವನು ಅವಿದ್ಯಾರೂಪದ ಉಪಾಧಿಯಿಂದ ಯುಕ್ತನಾಗಿ ಅಂಗಸ್ವರೂಪಿಯಾಗುತ್ತಾನೆ. "ತತ್ವಮಸಿ" ಎಂಬ ಶೃತಿವಾಕ್ಯದಲ್ಲಿ ತತ್ ಪದದರ್ಥವು ಲಿಂಗವೆಂದಿದ್ದು "ತ್ವಂ" ಎಂಬ ಪದದರ್ಥವು ಅಂಗವೆಂದಾಗಿದೆ. "ಅಸಿ" ಎಂಬದರಿಂದ ಇವೆರಡರ ಐಕ್ಯವೆಂದಾಗುವದು.

ಬ್ರಹ್ಮಲಿಂಗ ಶಬ್ದಗಳು ಪರ್ಯಾಯನಾಮಗಳಾಗಿವೆ-

"ಅಥಾತೊ ಬ್ರಹ್ಮಜಿಜ್ಞಾಸಾ" ಈ ಸೂತ್ರದಿಂದ ಬ್ರಹ್ಮಶಬ್ದಾರ್ಥವು ಶಿವ, ರುದ್ರ ಮೊದಲಾದವಾಗುತ್ತವೆ. ವಾತುಲಾಗಮದಲ್ಲಿ ಹೇಳಿರುವದೇನಂದರೆ- 'ಯಾವದು ಸರ್ವ ಪ್ರಾಣಿಗಳ ಉತ್ಪತ್ತಿ ಲಯಕ್ಕೆ ಕಾರಣವಾಗಿರುವದೋ ಅದಕ್ಕೆ ಲಿಂಗವೆಂದು ಹೆಸರು.' ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವದೇನಂದರೆ— 'ಸೃಷ್ಟಿಯ ಪೂರ್ವದಲ್ಲಿ ಬ್ರಹ್ಮನೊಬ್ಬನೇ ಇದ್ದನು. ಆ ಬ್ರಹ್ಮನಿಗೆ ಲಿಂಗವೆಂದು ಹೆಸರು.' ಸೂತಸಂಹಿತೆಯ ಯಜ್ಞವೈಭವಖಾಂಡದ ೨೮ನೆಯ ಅಧ್ಯಾಯದಲ್ಲಿ ಶಿವನೇ ಲಿಂಗಸ್ವರೂಪವಿದ್ದು ಶಿವನಯೋಗದಿಂದ ಸರ್ವ ಜಗತ್ತು ಲೀನವಾಗುವದು. ಆದರೆ ಶಿವನು ಯಾವ ವಸ್ತುವಿನ ಯೋಗದಿಂದಲೂ ಎಲ್ಲಿಯೂ ಹೋಗುವದಿಲ್ಲ. ಶಿವನು ಸ್ವಯಂಪ್ರಕಾಶಮಯನಾಗಿದ್ದು ಜಡವಸ್ತುಗಳು ಅವ

ನಿಂದ ಪ್ರಕಾಶಿಸುತ್ತವೆ. ಆಕಾಶಕ್ಕೆ ಹೇಗೆ ಆಧಾರವಿಲ್ಲವೋ ಶಿವನಿಗೂ ಹಾಗೆ ಆಧಾರವಿಲ್ಲ. ಆತ್ಮಕ್ಕೆ ಯಾವ ಇಂದ್ರಿಯುಗಳೂ ಇಲ್ಲ. ಈಶ್ವರನು ಇಂದ್ರಿಯುಗಳಲ್ಲಿ ಪ್ರವೇಶಿಸಿ ಶ್ರೋತ್ರೇಂದ್ರಿಯಕ್ಕೆ ಶ್ರವಣತ್ವವನ್ನೂ ದೃಷ್ಟಿಗೆ ನೋಟವನ್ನೂ ಕೊಡುತ್ತಾನೆ. ಈಶ್ವರನು ಸೃಷ್ಟಪದಾರ್ಥಗಳಿಂದ ಬೇರೆ ಇದ್ದಾನೆ. ಆತನು ಇಂದ್ರಿಯುಗಳಿಗೆ ಅಗೋಚರನಾಗಿದ್ದಾನೆ. ಮನಸ್ಸಿಗೆ ನಿಲುಕದವನಾಗಿದ್ದಾನೆ. ಇಂದ್ರಿಯಾಂತಃಕರಣಾದಿಗಳಲ್ಲಿ ವಿಶಿಷ್ಟ ಶಿವಚೈತನ್ಯವೇ ಆ ಆ ಉಪಾಧಿಯಿಂದ ಶಿವ, ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ ಮತ್ತು ಷಡ್ವಿಧ ಲಿಂಗರೂಪದಿಂದಿರುವದು. ಇದರಿಂದ ಇಂದ್ರಿಯುಗಳು ಶಿವಚೈತನ್ಯಾತ್ಮಕವಾಗಿ ದುರ್ಮಾರ್ಗದಲ್ಲಿ ಬೀಳದಂತಿರುವವು. ಇದೇ ಶೈವೀ ಶ್ರೇಷ್ಠತೆಯು. ತೈತ್ತರೀಯೋಪನಿಷತ್ತಿನಲ್ಲಿ— "ಯತೋವಾಚೋನಿವರ್ತಂತೆ ಅಪ್ರಾಪ್ಯ ಮನಸಾ ಸಹ ಆನಂದಂಬ್ರಹ್ಮಣೋ ವಿದ್ವಾನ್ನಬಿಭೇತಿ ಕುತಶ್ಚನ" ಎಂದು ಪರಮಾತ್ಮನು ಶಬ್ದಕ್ಕೆ ನಿಲುಕದವನಾಗಿರುವನೆಂದು ಹೇಳಿದೆ. ಪ್ರಜಾವೃದ್ಧಿಯ ಇಚ್ಛೆಯಿಂದ ಈಶ್ವರನು ಜಗತ್ತನ್ನು ಸೃಷ್ಟಿಸಿದನು. ಮತ್ತು ಜಗತ್ತಿನಲ್ಲಿ ಪ್ರವೇಶ ಮಾಡಿದನು. ಚಿದಾನಂದರೂಪನಾದ ಶಿವಶಕ್ತಿಯು ಜಗತ್ತಿನಲ್ಲಿಲ್ಲದಿದ್ದರೆ ಯಾವ ಪ್ರಾಣಿಯೂ ಪ್ರಾಣಯುಕ್ತವಾಗಲಾರದು. ಚಲನವಲನ ಕ್ರಿಯೆಗಳನ್ನು ಮಾಡಲಾರದು. ಮತ್ತು ಆನಂದಭರಿತವಾಗಿರಲಾರದು. ಬ್ರಹ್ಮಲಿಂಗವು ಆಕಾಶ ಶರೀರವುಳ್ಳದ್ದಾಗಿದೆ. ಸಿದ್ಧಾಂತ ಶಿಖಾಮಣಿಯ ಮಹಾಕಾಶಸ್ಥಲದಲ್ಲಿ— "ಆನಂದ ಸ್ವರೂಪವು ಚಿಚ್ಛಕ್ತಿಯ ಕೊನೆಯ ಮೇರೆಯು. ಆ ಶಕ್ತಿಗೇನೇ ಪರಮಾಕಾಶವೆಂದು ಸರ್ವಋಷಿಗಳೂ ಹೇಳುತ್ತಾರೆ. ಪರಮಾಕಾಶವೇ ಜ್ಯೋತಿರ್ಮಯ ಲಿಂಗವು." ಎಂದು ಹೇಳಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವದೇನಂದರೆ, ಸರ್ವಪ್ರಾಣಿಗಳು ಆಕಾಶದಲ್ಲಿ ಉತ್ಪತ್ತಿಯಾಗುವವು, ಅಲ್ಲಿಯೇ ಲಯವಾಗುವವು. ಆದ್ದರಿಂದ ಆಕಾಶವೇ ಶ್ರೇಷ್ಠವು. ಇದರ ಮೇಲಿಂದ ಚಿದಾಕಾಶ ಶಕ್ತಿಗೆ ಜಗತ್ತಿನ ಉಪಾದಾನಕಾರಣವನ್ನು ಹೇಳಿದಂತಾಯಿತು. ಕೂರ್ಮಪುರಾಣದಲ್ಲಿಯೂ, ವ್ಯಾಸ, ಶಂಕರಾಚಾರ್ಯರ ವಾಕ್ಯಗಳಲ್ಲಿಯೂ ಇದೇ ತತ್ವದ ವ್ಯಾಖ್ಯಾನವಿರುವದು. ವಾಯುವೀಯಸಂಹಿತೆಯ ಉತ್ತರಾರ್ಧದಲ್ಲಿ ಕೃಷ್ಣೋಪಮನ್ಯುಸಂವಾದದಲ್ಲಿ ಹೀಗೆ ಹೇಳಿದೆ.— ಉಪಮನ್ಯುಕೃಷ್ಣನಿಗೆ ಅಂದದ್ದು— ಅವ್ಯಕ್ತಕ್ಕೆ ಲಿಂಗವೆಂದು ಹೇಳುತ್ತಾರೆ. ಆ 'ಅವ್ಯಕ್ತ

ತ್ವವು ಸರ್ವ ಸಮರ್ಥವೂ, ನಾಶರಹಿತವೂ, ಅಮೃಂತರಹಿತವೂ, ಲಿಂಗವೆಂದು ಹೆಸರುಳ್ಳದ್ದೂ, ಜಗತ್ತಿನ ಉಪಾದಾನಕಾರಣವಾಗಿಯೂ ಇದೆ. ಅದಕ್ಕೇನೇ ಮೂಲಪ್ರಕೃತಿಯೆನ್ನುವರು. ಅಶುದ್ಧ, ಶುದ್ಧ, ಶುದ್ಧಾ ಶುದ್ಧ ಈ ಮೂರು ಪದಾರ್ಥಗಳು ಆತನ ಇಚ್ಛೆಯಿಂದ ಸೃಷ್ಟಿಸಲ್ಪಟ್ಟಿವೆ. ವಿಷ್ಣು. ಬ್ರಹ್ಮ ಮತ್ತು ಯಾವತ್ತು ಚರಾಚರ ವಸ್ತುಗಳೂ ನಿರ್ಮಾಣಹೊಂದಿರುವವು. ಮತ್ತು ಆತನಲ್ಲಿಯೇ ಅವು ಲಯವಾಗುವದರಿಂದ ಆತನಿಗೆ ಲಿಂಗವೆಂಬ ಸಂಜ್ಞೆಯುಂಟಾಗಿದೆ. ಲಿಂಗವೇ ಪಾರ್ವತೀ ಪರಮೇಶ್ವರರ ದೇಹವಾಗಿದೆ. ಹೀಗೆ ಬ್ರಹ್ಮಲಿಂಗ ಶಬ್ದವು ಪರಮಾತ್ಮನ ಪರ್ಯಾಯನಾಮವಾಗಿರುವದು.

## ಮುಮುಕ್ಷು ಗುರುಕಾರುಣ್ಯಕ್ರಮ

ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದಿಂದ ಪಾಪವು ನಾಶವಾದ ಮೇಲೆ ಅಂತಃಕರಣವು ಶುದ್ಧವಾದ ದೇಹವುಳ್ಳವನಿಗೆ ಪಿಂಡವೆಂದು ಹೆಸರು. ಶಿವಶಕ್ತಿಯಿಂದ ಉತ್ಪನ್ನವಾದ ಈ ಸವಿಕಲ್ಪ ಪ್ರಪಂಚದಲ್ಲಿ ಪುಣ್ಯಬಲದಿಂದ ಪಾಪವನ್ನು ಕಳೆದುಕೊಂಡ ಶುದ್ಧಾತ್ಮಕ್ಕೆ ಪಿಂಡವೆಂದು ಹೇಳಬೇಕು. ಅನಾದಿಕಾಲದಿಂದ ಅವಿದ್ಯೆಯ ಸಂಬಂಧವುಂಟಾಗಿ ಅದರ ಅಂಶದಿಂದಲೇ ಜೀವವೆಂಬ ಸಂಜ್ಞೆಯನ್ನು ಹೊಂದಿ ಪ್ರಾಣಿಯು ಜಗತ್ತಿನಲ್ಲಿ ಬರುವದು. ಮಾಯಾಯುಕ್ತ ಮಹೇಶ್ವರನೇ ಜೀವದ ಪ್ರೇರಕನಾಗಿ ಪ್ರಾಣಿಗಳ ಹೃದಯದಲ್ಲಿರುವನು. ಬೀಜದಲ್ಲಿ ಮೊಳಕೆ ಇರುವಂತೆಯೂ, ಸೂರ್ಯಕಾಂತಮಣಿಯಲ್ಲಿ ಅಗ್ನಿಯಿರುವಂತೆಯೂ ಆತ್ಮದಲ್ಲಿ ಶಿವನಿರುವನು. ಸೂರ್ಯನಲ್ಲಿ ಬಿಂಬಪ್ರತಿಬಿಂಬದ ಕಲ್ಪನೆಯು ಹೇಗಿರುವದೋ ಅದರಂತೆಯೇ ಒಬ್ಬ ಪರಬ್ರಹ್ಮನಲ್ಲಿಯೇ, ಆತ್ಮತ್ವ ಈಶ್ವರತ್ವಗಳು ಅಡಕವಾಗಿವೆ. ಗುಣ ತ್ರಯಗಳ ಭೇದದಿಂದ ಪರಮಾತ್ಮನಲ್ಲಿ ಭೋಕ್ತೃತ್ವ, ಭೋಜ್ಯತ್ವ, ಪ್ರೇರಕತ್ವಗಳು ಕಲ್ಪಿತವಾಗಿವೆ. ಕಿಂಚಿತ್ ಸತ್ವರಜೋರೂಪಉಪಾಧಿಯಿಂದ ಕೂಡಿದ್ದರೆ ಅವನಿಗೆ ಭೋಕ್ತಾ ಎಂಬ ಸಂಜ್ಞೆಯುಂಟಾಗುವದು. ಅತ್ಯಂತ ತಾಮಸೋಪಾಧಿಯಿಂದ ಕೂಡಿದ್ದರೆ ಅವನಿಗೆ ಭೋಜ್ಯವೆಂಬ ಸಂಜ್ಞೆಯುಂಟಾಗುವದು. ಭೋಕ್ತಾ, ಭೋಜ್ಯ ಪ್ರೇರಕ ಈ ೩ ವಸ್ತುಗಳೇ ಬ್ರಹ್ಮಚೈತನ್ಯದಲ್ಲಿ ಗುಣಭೇದದಿಂದ ಕಲ್ಪಿತವಾಗಿವೆ. ಇದರಲ್ಲಿ ಶುದ್ಧೋಪಾದಿಯುಕ್ತ ಮಹೇಶ್ವರನೇ ಪ್ರೇರಕ

ನಿದ್ದಾನೆ. ಮಿಶ್ರೋಪಾಧಿಯುಕ್ತನಾದ ಸರ್ವ ಪಶುಗಳು ಭೋಕ್ತರಾಗುವರು. ಶುದ್ಧತಾಮಸೋಪಾಧಿಯಿಂದ ಯುಕ್ತನಾದ ಅವ್ಯಕ್ತವೇ ಭೋಜ್ಯವು. ಪ್ರೇರಕನಾದ ಶಿವನು ಸರ್ವಜ್ಞನಿದ್ದು ಜೀವನು ಕಿಂಚಿಜ್ಞನಾಗಿರುವನು. ಉಪಾಧಿಯು ಶುದ್ಧ ಅಶುದ್ಧ ಎಂದು ಎರಡು ವಿಧವಾಗಿರುವದು. ಶುದ್ಧೋಪಾಧಿಯು ಶ್ರೇಷ್ಠ ಮಾಯೆಯಿದ್ದು ಸ್ವಾವಲಂಬವೂ ಮೋಹಕಾರಕವಾಗಿದೆ. ಅಶುದ್ಧ ಉಪಾಧಿಯು ಅವಿದ್ಯೆಯಿದ್ದು ಅದೂ ಸಹ ಮೋಹಕಾರಕವಾಗಿದೆ. ಅವಿದ್ಯಾಶಕ್ತಿಯ ಭೇದದಿಂದಲೇ ಬಹು ವಿಧವಾದ ಜೀವಗಳುಂಟಾಗಿವೆ. ಮತ್ತು ಮಾಯಾ ಶಕ್ತಿಯ ಯೋಗದಿಂದ ಈಶ್ವರನು ಅನೇಕ ರೂಪಗಳನ್ನು ಧರಿಸುತ್ತಾನೆ. ಮತ್ತು ಸರ್ವ ಕರ್ತನಾಗಿದ್ದಾನೆ. ಜೀವವು ಬಂಧನಕ್ಕೊಳಗಾಗಿ ಅನಾದಿಕಾಲದಿಂದಲೂ ಶರೀರ ಧಾರಣ ಮಾಡುತ್ತ ಬಂದಿರುವದು. ಜೀವಗಳು ಅವಿದ್ಯೆಯಿಂದ ಮೋಹಿತವಾಗಿ ಬ್ರಹ್ಮೈಕ್ಯಜ್ಞಾನರಹಿತವಾಗಿರುವವು. ಮತ್ತು ತಮ್ಮ ಕರ್ಮಕ್ಕನುಗುಣವಾಗಿ ಸಂಸಾರದಲ್ಲಿ ತಿರುಗುತ್ತಿರುವವು. ದೇವ, ಮನುಷ್ಯ. ಕೀಟ ಮೊದಲಾದ ಅನೇಕ ಯೋನಿಗಳಲ್ಲಿ ಜೀವಗಳು ಘಟಚಕ್ರ ನಿಯಮದಂತೆ ಸಂಚರಿಸುತ್ತಿರುವವು. ಮನುಷ್ಯನು ಕರ್ಮಕ್ಕನುಗುಣವಾಗಿ ಸುಖಿಯಾಗಲಿ, ದುಃಖಿಯಾಗಲಿ ಆಗುತ್ತಾನೆ. ಇದಕ್ಕೆಲ್ಲ ಈಶ್ವರನೇ ಸಾಕ್ಷೀಭೂತನಾಗಿದ್ದಾನೆ. ಜೀವವು ತನ್ನ ಕರ್ಮಪರಿಪಾಕದಿಂದ ಮಲವಾಸನೆಯನ್ನು ನಾಶಮಾಡಿಕೊಂಡು ಶಿವನ ಪ್ರಸಾದದಿಂದ ಶುದ್ಧ ಮನಸ್ಸುಳ್ಳದ್ದಾಗುವದು. ಶುದ್ಧಕರ್ಮದ ಪರಿಪಾಕದಿಂದ ಜೀವವು ಶುದ್ಧಾಂತಃಕರಣವುಳ್ಳದ್ದಾದ ಮೇಲೆ ಶಿವನ ಕರುಣದಿಂದಲೇ ಆ ಜೀವಕ್ಕೆ ಈಶ್ವರನಲ್ಲಿ ಶುದ್ಧ ಭಕ್ತಿಯುಂಟಾಗುತ್ತದೆ. ಇಂಥ ಆ ಜೀವವು ಅಂತ್ಯ ಶರೀರವುಳ್ಳದ್ದಾಗಿ ಪಿಂಡವೆಂಬ ಸಂಜ್ಞೆಯಿಂದ ಯುಕ್ತವಾಗುವದು. ಪರಮೇಶ್ವರನ ಅಂಶಕ್ಕೆ ಅನಾದಿಯಾದ ಅವಿದ್ಯೆಯ ಸಂಬಂಧವುಂಟಾಗಲು ಜೀವವೆಂಬ ಸಂಜ್ಞೆಯುಂಟಾಗುವದು. ಇದರಿಂದ ಸರ್ವಜೀವಿಗಳು ಶಿವಾಂಶವಾಗಿರುವವೆಂಬದು ಸಿದ್ಧವಾದಂತಾಯಿತು. ಆದ್ದರಿಂದ ಜೀವಕ್ಕೆ ಶಿವಸ್ವರೂಪವು ಹೇಳಲ್ಪಡುವದು. ಹಂಸೋಪನಿಷತ್ತಿನಲ್ಲಿ— ನಮ್ಮ ಹೃದಯ ಮಧ್ಯದಲ್ಲಿ ಹಂಸಸ್ವರೂಪನಾದ ಈಶ್ವರನನ್ನು ಧ್ಯಾನಿಸಬೇಕು. ಈ ಹಂಸದ ರೆಕ್ಕೆಗಳು ಅಗ್ನಿ ಮತ್ತು ಸೋಮರಿರುವರು. ಓಂಕಾರವು ಇದರ ಮಸ್ತಕವು, ಬಿಂದು ತ್ರಿನೇತ್ರಗಳಾಗಿರುವವು, ರುದ್ರನು ಮುಖವಾಗಿದ್ದಾನೆ, ಪಾರ್ವತಿಯು ಕಾಲು

ಗಳಾಗಿರುವಳು. ಈ ಪ್ರಕಾರ ಹಂಸವರ್ಣನೆಯುಂಟು. ಶಿವನು ಶಕ್ತಿ ವಿಶಿಷ್ಟನಿರುವನೆಂಬದು ಇದರ ತಾತ್ಪರ್ಯವು. ಹಂಸವೆಂದರೆ ಸದಾಶಿವನೆಂಬರ್ಥ. ಶಿವಜ್ಞಾನದಿಂದ ಸರ್ವ ಜನರು ಮುಕ್ತರಾಗುತ್ತಾರೆ. ಆ ಪರ ವಸ್ತುವಿನ ಸಾಕ್ಷಾತ್ಕಾರವಾದೊಡನೆ ಹೃದಯಗ್ರಂಥಿಯು ಬಿಚ್ಚುವದು. ಸರ್ವ ಸಂಶಯಗಳು ದೂರಾಗುವವು. ಸರ್ವ ಕರ್ಮಗಳು ಕ್ಷೀಣವಾಗುವವು. ಪ್ರಾಣಿಗಳ ಜಾಗ್ರತ್, ಸ್ವಪ್ನ, ಸುಷುಪ್ತ್ಯಾವಸ್ಥೆಗಳಿಗೆ ಈಶ್ವರನೇ ಸಾಕ್ಷಿಯಾಗಿದ್ದಾನೆ. ಆತ್ಮವು ಪಾಪಪುಣ್ಯಗಳಿಂದಲೂ ಜನ್ಮ, ಜರಾ, ಮೃತ್ಯುಗಳಿಂದಲೂ ರಹಿತವಾಗಿ ಸರ್ವ ಸಾಕ್ಷಿಯಾಗಿ ಈಶ್ವರನ ಉಪಾಸನೆಯಿಂದ ಮುಕ್ತವಾಗುತ್ತದೆ. ಬ್ರಹ್ಮಗೀತೆಯಲ್ಲಿ ಹೇಳಿರುವದೇನಂದರೆ— ಆತ್ಮವು ಭೋಗದಿಂದ ಬಂಧನಕ್ಕೊಳಗಾಗುವದು. ಇಂಥ ಆತ್ಮಕ್ಕೆ ಶಿವನಜ್ಞಾನದಿಂದ ಮುಕ್ತಿಯಾಗುವದು. ದೇಹದಲ್ಲಿ ಜೀವಕ್ಕೆ ಒಡೆತನವಿಲ್ಲ. ಈಶ್ವರನೇ ಒಡೆಯನು. ಪ್ರಕೃತಿಯು ಭೋಕ್ತೃ, ಭೋಗಾರ್ಥದಿಂದ ಯುಕ್ತವಾಗಿದೆ. ಈ ೩ ವಸ್ತುಗಳನ್ನು ಯಾವನು ತಿಳಿಯುತ್ತಾನೋ ಅವನಿಗೆ ಪರಬ್ರಹ್ಮನ ಲಾಭವಾಗುತ್ತದೆ.

ಪ್ರಕೃತಿಯು ಕೆಂಪು, ಬಿಳಿ, ಕಪ್ಪು ಬಣ್ಣವಾಗಿದ್ದು ನಾನಾ ಪ್ರಜೋತ್ಪತ್ತಿಗೆ ಕಾರಣವಾಗಿದೆ. ಇಂಥ ಸಮಾನ ಸ್ವರೂಪಮಾಯೆಯ ಸೇವನೆಯನ್ನು ಮಾಡಿಕೊಂಡು ಅದರಲ್ಲಿ ಒಂದು ಇರುತ್ತದೆ. ಇನ್ನೊಂದು ಭೋಗವನ್ನನುಭವಿಸಿದ ಮಾಯೆಯನ್ನು ಬಿಟ್ಟಿರುವದು. ಈ ಶರೀರರೂಪವಾದ ಗಿಡದ ಮೇಲೆ ೨ ಪಕ್ಷಿಗಳಿರುವವು. ಒಂದು ಪಕ್ಷಿಯು ಕರ್ಮದ ಕಹಿ ಮತ್ತು ಸೀಯಾದ ಹಣ್ಣುಗಳನ್ನು ತಿನ್ನುವದು. ಇನ್ನೊಂದು ಏನೂ ತಿನ್ನದೆ ಪ್ರಕಾಶಿಸುತ್ತಿರುವದು. ಜೀವವೆಂಬ ಹೆಸರಿನ ಪಕ್ಷಿಯು ಮಾಯೆಯ ಮೂಲಕ ದುಃಖ ಹೊಂದುವದು. ಮತ್ತು ಮೋಹಿಯಾದಾಗ ಪರಮಾತ್ಮರೂಪ ಪಕ್ಷಿಯನ್ನು ನೋಡಿ ಪರಮಾತ್ಮ ರೂಪವನ್ನು ಹೊಂದಿ ದುಃಖತ್ಯಾಗ ಮಾಡುವದು. ಇವೆರಡರಲ್ಲಿಯ ಭೇದವು ಮಾಯೆಯಿಂದ ಕಲ್ಪಿತವಾಗಿದೆ. ಶರೀರಧಾರಿಯಾದ ಜೀವವು ಕರ್ಮಫಲವನ್ನು ಭೋಗಿಸುತ್ತದೆ. ಶಿವನು ಅದಕ್ಕೆ ಪ್ರೇರಣೆ ಮಾಡುತ್ತಾನೆ. ಜೀವವು ಶರೀರವನ್ನು ನೋಡಬಲ್ಲದು. ಆದರೆ ಶರೀರವು ಜೀವವನ್ನು ನೋಡಲು ಸಮರ್ಥವಾಗಿರುವದಿಲ್ಲ. ಈಶ್ವರನು ಇವೆರಡನ್ನೂ ನೋಡಬಲ್ಲನು. ಆದರೆ ಇವೆ

ರಡು ವಸ್ತುಗಳು ಉಷ್ಣನನ್ನು ನೋಡಲಾರವು. ಜೀವವು ಸಾಕ್ಷಾತ್ ಶಿವನಿದ್ದಾಗ್ಯೂ ಅವಿದ್ಯೆಯಿಂದ ತನ್ನ ಶಿವತ್ವವನ್ನು ತಿಳಿದುಕೊಳ್ಳಲಾರದು. ಭಕ್ತಿ, ಶ್ರವಣ, ಮನನ, ಧ್ಯಾನದಿಂದ ಪ್ರತ್ಯಜ್ಞಾನಿಯಾಗಿ ಶಿವಸ್ವರೂಪ ವಾಗುವದು. ಮಲಪಾಶದಿಂದ ಮುಕ್ತಮಾಡಲು ಗುರುವು ಶಿಷ್ಯನಿಗೆ ಶಿವಜ್ಞಾನಮಯವಾದ ದೀಕ್ಷೆಯನ್ನು ಕೊಡುವನು. ದೀಕ್ಷೆಯು ವೇಧಾ, ಮಂತ್ರ, ಕ್ರಿಯಾ ಎಂದು ೩ ತೆರನಾಗಿರುವದು. ಕಲೆಯಂತೆ ಭಾವವೂ, ಭಾವದಂತೆ ಮನವೂ, ಮನದಂತೆ ದೃಷ್ಟಿಯೂ, ದೃಷ್ಟಿಯಂತೆ ಫಲವೂ ಇರುವದು. ಕಲೆಯು ಸೂಕ್ಷ್ಮವಾದದ್ದು. ತತ್ವಬೋಧಕವಾದದ್ದು ಇದೆ. ಆ ಕಲೆಯನ್ನು ಆಕರ್ಷಣ ಮಾಡಿ ಲಿಂಗದಲ್ಲಿ ನಿಲ್ಲಿಸಬೇಕು. ಆ ಮೇಲೆ ಲಿಂಗವು ಜ್ಯೋತಿಯಂತೆ ಪ್ರಕಾಶಿಸುವದು. ಈಶ್ವರನು ನಿಷ್ಕಲ (ಶುಭ್ರ) ನಿರುವನು. ಕಲಾರಹಿತವಾದ ಶಿವಲಿಂಗ ಸಾಕ್ಷಾತ್ಕಾರವಾದ ಮೇಲೆ ಜೀವದ ಸರ್ವ ಕರ್ಮಗಳು ಕ್ಷೀಣವಾಗುವವು. ಲಿಂಗಾಂಗ ಯೋಗ ಯುಕ್ತನಾದ ಗುರುವಿನಿಂದ ಭಕ್ತಿ ಯುಕ್ತನಾದ ಶಿಷ್ಯನು ವೀರಶೈವ ದೀಕ್ಷೆಯನ್ನು ಹೊಂದಿ, ಗುರು, ಲಿಂಗ, ಜಂಗಮ ಪೂಜೆಯನ್ನೂ ವಿಭೂತಿ, ರುದ್ರಾಕ್ಷ ಧಾರಣವನ್ನೂ ಪಾದೋದಕ, ಪ್ರಸಾದ ಸೇವನೆಯನ್ನೂ ಮಾಡಬೇಕು. ಆ ಮೇಲೆ ಶಿವಭಕ್ತಿ ಶಿವಪ್ರಸಾದಗಳ ಯೋಗದಿಂದ ಶಿವಸಾಕ್ಷಾತ್ಕಾರವಾಗುತ್ತದೆ. ಅದರ ಮೂಲಕವಾಗಿ ಜೀವದ ಪಶುತ್ವವು ನಿವೃತ್ತಿಯಾಗುವದು.

## ದೀಕ್ಷಾವಿಧಿ.

ಅನುಗ್ರಹ ಮಾಡಲು ಶಿಷ್ಯನಲ್ಲಿ ವಿನಯ ಭಕ್ತಿಗಳನ್ನೂ, ಗುರುವಿನಲ್ಲಿ ಕರುಣವನ್ನೂ ಹುಟ್ಟಿಸುವವನು ಶಿವನೇ ಇದ್ದಾನೆ. ಕಾರಣಾಗ ಮದಲ್ಲಿ ಹೇಳಿರುವದೇನಂದರೆ— ದೀಕ್ಷೆಯಲ್ಲಿ ಸಬೀಜ, ನಿರ್ಬೀಜ, ಚಿನ್ಮಯ ಹೀಗೆ ಮೂರು ಪ್ರಕಾರವದೆ. ಇವು ಕ್ರಮವಾಗಿ ಕರ್ಮ, ಜ್ಞಾನ, ಭಕ್ತಿ ಖಂಡಗಳಲ್ಲಿ ಹೇಳಲ್ಪಟ್ಟಿವೆ. ದೀಕ್ಷೆಯಲ್ಲಿ ಅನೇಕ ಪ್ರಭೇದಗಳುಂಟು. ಕಣ್ಣು ತೆರೆದು ತತ್ವಧ್ಯಾನಮಾಡಿ ಶಿಷ್ಯನ ಕಡೆಗೆ ನೋಡಿ ಪಾಶವಿಮೋಚನೆಗೋಸ್ಕರ ಯಾವ ದೀಕ್ಷೆಯು ಕೊಡಲ್ಪಡುವದೋ ಅದಕ್ಕೆ ಚಾಕ್ಷುಷೀ ದೀಕ್ಷೆಯೆಂದು ಹೆಸರು. ಬಲಗೈಯಲ್ಲಿ ಸರ್ವಾಂಗ ಯುಕ್ತ ಶಿವಲಿಂಗವನ್ನು ಇಟ್ಟು ಶಿಷ್ಯನ ಮಸ್ತಕಾದಿಗಳಲ್ಲಿ ಸ್ಪರ್ಶ ಮಾಡುವದಕ್ಕೆ ಸ್ಪರ್ಶದೀಕ್ಷೆಯೆನ್ನುವರು. ಪರಿಪೂರ್ಣವಾದ ಏಕಮನ

ಸ್ಸಿನಿಂದ ಶತ್ರುವಿನಲ್ಲಿ ಚಿತ್ತನಿಟ್ಟು ಸಂಹಿತಾ ಮಂತ್ರದ ಉಚ್ಚಾರ ಮಾಡಲು ಅದಕ್ಕೆ ವಾಚಕೀ ದೀಕ್ಷೆಯೆಂದು ಹೆಸರು. ಶಾಸ್ತ್ರಪ್ರಧಾನ ಪೂರ್ವಕವಾಗಿ ಮನಸ್ಸಿನಲ್ಲಿಯೇ ಯಾವ ದೀಕ್ಷೆಯು ಕೊಡಲ್ಪಡು ವದೋ ಅದಕ್ಕೆ ಶಾಸ್ತ್ರೀ ದೀಕ್ಷೆಯೆಂದು ಹೆಸರು. ಯೋಗಾಭ್ಯಾಸ ರೂಪದಿಂದ ಶಿವತತ್ವದಲ್ಲಿರುವ ದೀಕ್ಷೆಗೆ ಯೋಗದೀಕ್ಷೆಯೆಂದು ಹೆಸರು. ಕುಂಡದಲ್ಲಿ ಯಜ್ಞಯಾಗಾದಿ ಕರ್ಮ ಮಾಡಿ ಯಾವ ದೀಕ್ಷೆಯು ಕೊಡ ಲ್ಪಡುವದೋ ಅದು ಹೋತ್ರೀದೀಕ್ಷೆಯೆನಿಸುವದು. ಇದು ವೀರಶೈವರಿಗಿಲ್ಲ. ವಾತುಲಾಗಮದಲ್ಲಿ ಹೇಳಿರುವದೇನಂದರೆ- ಇದು ಶಿವಾಸನವಿದೆಯೆಂದು ಧ್ಯಾನಮಾಡಿ ಶಿಷ್ಯನ ಮಸ್ತಕದ ಮೇಲೆ ಶಿವತ್ವದ ಸಮಾವೇಶ ಮಾಡಿ ದಾಗ ಅದಕ್ಕೆ ವೇಧಾ ದೀಕ್ಷೆಯೆಂದು ಹೆಸರು. ಯಾವದೀಕ್ಷೆಯಲ್ಲಿ ಕೇವಲ ಮಂತ್ರದ ಉಪದೇಶವಾಗುವದೋ ಅದಕ್ಕೆ ಮಂತ್ರದೀಕ್ಷೆಯೆಂದು ಹೆಸರು. ಯಾವದರಲ್ಲಿ ಶಿವಲಿಂಗದ ಉಪದೇಶವಾಗುವದೋ ಅದಕ್ಕೆ ಕ್ರಿಯಾದೀಕ್ಷೆಯೆಂದು ಹೆಸರು. ದೀಕ್ಷೆಯಿಂದಲೇ ಮೋಕ್ಷವಾಗುತ್ತದೆ. ಶಿವನೇ ಸರ್ವರಿಗೆ ಅನುಗ್ರಹ ಮಾಡುವವನಾದ್ದರಿಂದ ಅವನೇ ಪರಮ ಕಾರಣನಾಗಿದ್ದಾನೆ.

ಗುರುವು ಮಿತಭಾಷೆಯುವನೂ, ಮಿತಾಹಾರಿಯೂ, ಮಿತನಿದ್ರೆಯು ವನೂ, ಶಿವಜ್ಞಾನಿಯೂ, ಜಿತೇಂದ್ರಿಯನೂ, ಸತ್ಯವಾದಿಯೂ, ಶೀತೋ ಷ್ಣಾದಿ ದ್ವಂದ್ವಗಳನ್ನು ಸಹಿಸುವವನೂ ಆಗಿರಬೇಕು. ಶಿಷ್ಯನಾದರೋ ವಿಚಾರ, ವಚನ, ವರ್ತನಗಳಿಂದ ಗುರುಸೇವೆಯಲ್ಲಿ ನಿರತನಾಗಿ ಶ್ರದ್ಧಾ, ಭಕ್ತಿ, ಆಸ್ತಿಕ್ಯಗಳಿಂದ ಕೂಡಿರಬೇಕು. ಶಿಷ್ಯನಿಗೆ ಪಂಚಾಕ್ಷರೀ ಮೂಲ ಮಂತ್ರೋಪದೇಶಮಾಡಿ ಪ್ರಾಣಲಿಂಗವನ್ನು ಕೊಟ್ಟು ಅದರಲ್ಲಿ ದೇಹ ಪ್ರಾಣಗಳ ಕಲ್ಪನೆಯನ್ನು ಮಾಡಬೇಕು. ಶಂಕರ ಸಂಹಿತೆಯಲ್ಲಿ ಹೇಳಿ ರುವದೇನಂದರೆ— ಗುರುಕೊಟ್ಟ ಲಿಂಗವನ್ನು ಎಂದೂ ಬಿಡದೆ ಒಂದು ವೇಳೆ ಕಳೆದು ಹೋದರೆ ಆ ಕ್ಷಣವೇ ಪ್ರಾಣ ಬಿಡಬೇಕು. ವಾತುಲಾ ಗಮದಲ್ಲಿ ಹೇಳಿರುವದೇನಂದರೆ- ಮಸ್ತಕದಲ್ಲಿ, ಕಂಠದಲ್ಲಿ, ಕಕ್ಷದಲ್ಲಿ ಎದೆಯಲ್ಲಿ, ಹಸ್ತದಲ್ಲಿ ಪ್ರಾಣಲಿಂಗವನ್ನು ಧರಿಸಬೇಕು. ಕೂಸು ಜನನ ವಾದೊಡನೆ ಗುರುವು ಕೂಸಿಗೆ ದೀಕ್ಷೆಕೊಟ್ಟು ಲಿಂಗಧಾರಣ ಮಾಡು ವನು. ಇದು ವೀರಶೈವ ದೀಕ್ಷೆಯು. ಲಿಂಗವು ಸ್ಫಟಿಕ, ಶೈಲಜ, ಚಂದ್ರ

ಕಾಂತ, ಬಾಣ, ಸೂರ್ಯಕಾಂತನಾಗಲೀ ಇವು ಸರ್ವಲಕ್ಷಣಗಳಿಂದ ಕೂಡಿರತಕ್ಕದ್ದು. ಗುರುವು ಲಿಂಗವನ್ನು ಶುದ್ಧಮಾಡಿ ಶಿವಕಳೆಯನ್ನು ಅದರಲ್ಲಿ ತುಂಬಿ ಶಿಷ್ಯನ ಪ್ರಾಣವನ್ನು ಆಕರ್ಷಿಸಿ ಶಿವಲಿಂಗದಲ್ಲಿ ನಿಲ್ಲಿಸಬೇಕು. ಸ್ವಪ್ನಕಾಲದಲ್ಲಿ ಘಟಿಸಿದ ಬ್ರಹ್ಮಹತ್ಯಾದಿ ದೋಷಗಳು ಎಚ್ಚರವಾದ ಮೇಲೆ ಹೇಗೆ ನಾಶವಾಗುವವೋ ಹಾಗೆಯೇ ಪೂರ್ವದಲ್ಲಿ ಮಾಡಿದ ಪಾಪಗಳು ಲಿಂಗಧಾರಣವಾದ ಮೇಲೆ ನಾಶವಾಗುವವು.

## ಲಿಂಗಧಾರಣವಿಧಿ.

ಯಜುರಾರಣ್ಯದಲ್ಲಿಯೂ, ತೈತ್ತರೀಯದಲ್ಲಿಯೂ, ನಾರಾಯಣೋಪನಿಷತ್ತಿನಲ್ಲಿಯೂ "ನಿಧನಾಯ ನಮಃ ಊರ್ಧ್ವಲಿಂಗಾಯ ನಮಃ- ಸೋಮಸ್ಯ, ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ- ಪಾಣಿಮಂತ್ರ ಪವಿತ್ರಂ ಎಂಬವರ ವರೆಗಿನ ಮಂತ್ರದಲ್ಲಿ ಲಿಂಗಧಾರಣವು ಹೇಳಲ್ಪಟ್ಟಿದೆ. "ಪಾಣಿಮಂತ್ರಂ ಪವಿತ್ರಂ" ಎಂಬ ಲಿಂಗ ವಿಶೇಷಣವು ಹೇಳಲ್ಪಟ್ಟಿರುವದರಿಂದ ಹಸ್ತ ಮೊದಲಾದ ಸ್ಥಳದಲ್ಲಿ ಲಿಂಗಧಾರಣವಿರುವದೆಂದಾಯಿತು. 'ಸೋಮಸ್ಯ' ಎಂಬ ವಾಕ್ಯದಿಂದ ಯಾರ ಸ್ವರೂಪವು ಶಕ್ತಿರೂಪವೆಂಬದಾಗಿಯೂ, 'ಸೂರ್ಯಸ್ಯ' ಎಂಬುದರಿಂದ ಶಿವಸ್ವರೂಪವನ್ನು ಧ್ಯಾನಮಾಡುವದರಿಂದ ಯಾವ ನಮ್ಮ ರಕ್ಷಣೆಯಾಗುವದೋ ಅಂಥ ಶಿವಲಿಂಗವನ್ನು ದೇಹದ ಮೇಲೆ ಯಜ್ಞೋಪವೀತದಂತೆ ಧರಿಸಬೇಕು. "ಬ್ರಹ್ಮೇತಿ ಲಿಂಗಮಾಖ್ಯಾತಂ" ಎಂಬ ಸಿದ್ಧಾಂತ ಶಿಖಾಮಣಿಯ ವಾಕ್ಯದಲ್ಲಿ ಮತ್ತು "ಅಲಿಂಗಮೇಕಮವ್ಯಕ್ತಂ ಲಿಂಗಂ ಬ್ರಹ್ಮೇತಿ ನಿಶ್ಚಿತಂ" ಎಂಬ ಲಿಂಗಪುರಾಣದ ವಾಕ್ಯದಲ್ಲಿಯೂ, ' ಜ್ಯೋತಿರೂಪೆ ಪರೋಕ್ಷೆ ಲಿಂಗಾಖ್ಯೆ ಬ್ರಹ್ಮರೂಪೆ" ಎಂಬ ಅಪರಾಧ ಸ್ತೋತ್ರದಲ್ಲಿಯ ಶಂಕರಾಚಾರ್ಯರ ವಾಕ್ಯದಲ್ಲಿಯೂ ಬ್ರಹ್ಮಸ್ವರೂಪವಾದ ಲಿಂಗಮೂರ್ತಿಗೆ ನಮಸ್ಕಾರವೆಂದರ್ಥವಾಗುತ್ತದೆ. ಇದರಂತೆಯೇ ವೇದ ಪುರುಷನು ಪರಬ್ರಹ್ಮನಿಗೆ ನಮಸ್ಕಾರಪೂರ್ವಕ ಲಿಂಗಧಾರಣೆಯನ್ನು ಬೇಡಿಕೊಂಡಿದ್ದಾನೆ. (ಲಿಂಗಧಾರಣಂ ಮೇ ಅಸ್ತು) ಶುದ್ಧಶೈವ ವ್ರತವು ಲೋಪವಾದಾಗ ಪ್ರಾಯಶ್ಚಿತ್ತದಿಂದ ಶುದ್ಧಿಯುಂಟಾಗುವದು. ಪ್ರಾಣಲಿಂಗ ಲೋಪವಾದರೆ ಪ್ರಾಯಶ್ಚಿತ್ತವಿಲ್ಲ. ಮರಣವೇ ಅದಕ್ಕೆ ಪ್ರಾಯಶ್ಚಿತ್ತವು. ಆಗಮ ಪುರಾಣಗಳಲ್ಲಿ ಲಿಂಗೈಕ್ಯಾನು ಸಂಧಾನದಿಂದ ಪ್ರಾಣತ್ಯಾಗ ಮಾಡಬೇ

ಕೆಂದು ಹೇಳಿದೆ. (ಪ್ರಾಣಲಿಂಗ ಸಂಜ್ಞೆಯಿಂದ ಇಲ್ಲಿ ಇಷ್ಟಲಿಂಗವು ಹೇಳಲ್ಪಟ್ಟಿದೆ.) ಇದರ ಮೇಲಿಂದ ಶಿವಭಕ್ತನು ಲಿಂಗದ ವಿಷಯದಲ್ಲಿ ಎಷ್ಟು ಜಾಗ್ರತನಾಗಿರತಕ್ಕದ್ದೆಂಬದು ಗೋಚರವಾಗುತ್ತದೆ. ಋಗ್ವೇದದಲ್ಲಿ ಹೇಳಿರುವದೇನಂದರೆ— ಪವಿತ್ರಂತೆ ವಿತತಂ ಬ್ರಹ್ಮಣಸ್ಪತೆ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ— ಬ್ರಹ್ಮಣಸ್ಪತಿರೀಶೋಯಂ ಬ್ರಹ್ಮತಲ್ಲಿಂಗಮುಚ್ಯತೆ । ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂಪರ್ಕಾತ್ತನುಃ ಶುಚಿಃ॥ ಬ್ರಹ್ಮಸ್ವರೂಪವಾದ ಲಿಂಗವು ವಿಶ್ವವ್ಯಾಪಿಯೂ, ಜಗತ್ಕರ್ತೃವೂ, ಪಾವನಕಾರಕವೂ ಆಗಿದೆ. ಜಗತ್ಪಾಲಕನಾದ ಈಶ್ವರನು ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳಲ್ಲಿಯೂ, ಅಂತಃಕರಣಾದಿ ಇಂದ್ರಿಯಗಳಲ್ಲಿಯೂ, ಪ್ರವೇಶಮಾಡಿಕೊಂಡಿದ್ದು ಶಬ್ದ, ರೂಪ, ರಸ, ಗಂಧ ಮೊದಲಾದ ವಿಷಯಗಳನ್ನು ಸ್ವೀಕರಿಸಿ ಆ ಮೇಲೆ ಪ್ರಸಾದ ರೂಪವಾದ ಆ ವಿಷಯಗಳನ್ನು ಇಂದ್ರಿಯಾದಿಗಳಿಗೆ ಕೊಟ್ಟು ಅವುಗಳನ್ನು ಪವಿತ್ರ ಮಾಡುವನು. ಸರ್ವ ದೇಹವು ಶಿವಮಯವಾಗಿರುವದೆಂದು ವೀರಶೈವನು ತಿಳಿಯುವದರಿಂದ ಶಿವಶಕ್ತಿಯ ಭಾವದಿಂದ ಅವನ ಇಂದ್ರಿಯಗಳು ನಿಗ್ರಹಿಸಲ್ಪಡುವವು. ಆದ್ದರಿಂದ ಅವನ ವಿಚಾರ, ವಚನ, ವರ್ತನಗಳು ಶಿವಮಯವಾಗಿ ಶುಭವಾದುದನ್ನೇ ಚಿಂತಿಸುತ್ತಲೂ, ಸತ್ಯವನ್ನೇ ನುಡಿಯುತ್ತಲೂ, ಸತ್ಕಾರ್ಯವನ್ನೇ ಮಾಡುತ್ತಲೂ, ಇರುವನು. ಇದರಿಂದ ದುಷ್ಟವರ್ತನೆಗೆ ಅವಕಾಶವಿಲ್ಲದಂತಾಗುವದು. ಈ ವಿಶಿಷ್ಟವಾದ ತತ್ವದಲ್ಲಿ ವೀರಶೈವ ಧರ್ಮದ ಶ್ರೇಷ್ಠತೆಯು ಹೊಳೆಯುತ್ತಿರುವದು. ಇಂದ್ರಿಯಗಳಿಂದ ಉಂಟಾದ ಸುಖವನ್ನು ಮೊದಲು ಶಿವನಿಗೆ ಅರ್ಪಿಸಿ ಆ ಮೇಲೆ ಪ್ರಸಾದ ಬುದ್ಧಿಯಿಂದ ಅವನ್ನು ಉಪಭೋಗಿಸಬೇಕು. ಇದಕ್ಕಾಗಿಯೇ ವೀರಶೈವ ಧರ್ಮವು ದೇಹದ ಪ್ರತಿಯೊಂದು ಇಂದ್ರಿಯಸ್ಥಾನದಲ್ಲಿ ಒಂದೊಂದು ಲಿಂಗವನ್ನು ಸ್ಥಾಪಿಸಿರುವದು. ವಿಷಯೇಚ್ಛೆಯಾದಾಗ ಭಕ್ತನು ಪಾಪದ ಭೀತಿಯುಳ್ಳವನಾಗಿರಲೆಂದೂ, ಆ ಆ ಇಂದ್ರಿಯಗಳಲ್ಲಿ ಸ್ಥಾಪಿತವಾದ ಲಿಂಗಗಳು ಅವನಿಗೆ ಸುವಿಚಾರವನ್ನು ಸೂಚಿಸಬೇಕೆಂದೂ, ಆತನ ದೇಹದಲ್ಲೆಲ್ಲ ಲಿಂಗಗಳು ನಿರ್ಮಿಸಲ್ಪಟ್ಟಿರುವವು. ಇಂಥ ಧಾರ್ಮಿಕ ಯೋಜನೆಯು ಮತ್ತಾವ ಧರ್ಮದಲ್ಲಿಯೂ ಕಂಡುಬರುವದಿಲ್ಲ. ಇಷ್ಟಲಿಂಗವನ್ನು ದೇಹದ ಮೇಲ್ಭಾಗದಲ್ಲಿಯೂ, ಪ್ರಾಣಲಿಂಗವನ್ನು ದೇಹದ ಒಳಭಾಗದಲ್ಲಿಯೂ ಭಾವಲಿಂಗವನ್ನು ಯಾವಾ

ಗಳೂ ಅತ್ಯಂಗದ ಮೇಲೂ ಧರಿಸಬೇಕು. ಇಂದ್ರಿಯಗಳನ್ನು ಜಯಿಸ ದವನೂ, ಜಪತಪಗಳನ್ನು ಮಾಡದವನೂ, ಲಿಂಗಹೀನನೂ ಮುಕ್ತಿ ಯನ್ನು ಹೊಂದಲಾರನು.

ಅಥರ್ವಶಿರೋಭಾಗದಲ್ಲಿ- 'ತದೇತದುಪಾಸಿ ತವ್ಯಂ' ಎಂಬದರಿಂದ ಆರಂಭವಾಗಿ 'ವ್ರತಮೇತತ್ಪಾಶುಪತಂ' ಎಂಬದರ ವರೆಗೆ ಲಿಂಗಧಾ ರಣರೂಪ ಮತ್ತು ಭಸ್ಮಧಾರಣರೂಪವಾದ ಪಾಶುಪತ ವ್ರತವು ಹೇಳ ಲ್ಪಟ್ಟಿದೆ. ಚಿತ್ಸ್ವರೂಪವೂ ಸರ್ವಕಾರಣವೂ ಆದಂಥ ಶಿವಲಿಂಗವನ್ನು ಯಾರು ತಮ್ಮ ಮನಸ್ಸಿನಲ್ಲಿ ಉಪಾಸನೆ ಮಾಡುತ್ತಾರೋ ಅಂಥದಕ್ಕೆ ಅಂತರ್ಲಿಂಗ ಧಾರಣವೆಂದು ಹೆಸರು. ಆಧಾರಚಕ್ರದಲ್ಲಿ, ಹೃದಯದಲ್ಲಿ, ಹುಬ್ಬಿನ ಮಧ್ಯದಲ್ಲಿ ಮತ್ತು ಬ್ರಹ್ಮರಂಧ್ರದಲ್ಲಿ ನಿರಂತರವಲ್ಲಿಯೂ ಜ್ಯೋತಿ ರ್ಲಿಂಗಾನು ಸಂಧಾನ ಮಾಡುವವಕ್ಕೆ ಅಂತರ್ಲಿಂಗ ಧಾರಣವೆಂದು ಹೆಸರು. (ಆಧಾರೆ ಹೃದಯೆವಾಪಿ ಭ್ರೂಮಧ್ಯೇವಾ ನಿರಂತರ। ಜ್ಯೋತಿರ್ಲಿಂ ಗಾನು ಸಂಧಾನ ಮಂತರಂ ಲಿಂಗಧಾರಣಂ). ಯಜುರ್ವೇದದಲ್ಲಿ— 'ತವಶ್ರಿಯೆ ಮರುತೊಮರ್ಜಯಂತ ರುದ್ರಯತ್ತೆ ಜನಿಮಂ ಚಾರು ಚಿತ್ರಂ ಪದಂ ಯದ್ವಿಷ್ಣೋಃ ಪರಮಂ ನಿಧಾಯಿ ಗುಹ್ಯಂನಾಮ ಗೋನಾ ಮ। ರೌದ್ರಂಲಿಂಗಂ ಮಹಾವಿಷ್ಣುರ್ಜನಿಮಾಖ್ಯಂ ಶಿವಾಮಯಂ। ಚಾರು ಚಿತ್ರಂ ಸಮಭ್ಯರ್ಚ್ಯ ಪ್ರಾಪ್ತವಾನ್ ಪರಮಂ ಪದಂ॥ ಹೇ ಆರ್ತ ಬಂಧೋ ಜನಿಮಲಿಂಗ ಸ್ವರೂಪಿ ಶಿವನೇ ನನ್ನ ಹಸ್ತದಲ್ಲಿ ವಾಸಿಸು. ಶಿಲಾಮಯವಾದ ಜನಿಮವೆಂಬ ಹೆಸರಿನ ರುದ್ರಲಿಂಗದ ಪೂಜೆಯನ್ನು ಮಾಡಿ ಮಹಾ ವಿಷ್ಣುವು ಪರಮಗತಿಯನ್ನು ಹೊಂದಿದನು ಎಂದು ಹೇಳಿದೆ. ಪರಾಶರಪುರಾಣದಲ್ಲಿ - ಇಂದ್ರನೀಲಮಯಂ ಲಿಂಗಂ ವಿಷ್ಣುಃ ಪೂಜೆಯತೆಸದಾ। ವಿಷ್ಣುತ್ವಂ ಪ್ರಾಪ್ತವಾನ್ ತೇನ ಸಾದ್ಭುತೈಕಂ ಸನಾ ತನಂ॥ ಶಿವನು ಅಣುಗಿಂತಲೂ ಸೂಕ್ಷ್ಮನೂ, ಮಹತ್ತರವಾದ ವಸ್ತು ವಿಗಿಂತಲೂ ಮಹತ್ತರವಾದವನೂ ಇದ್ದಾನೆ. ಈಶ್ವರನು ಹೃದಯ ಮಧ್ಯ ದಲ್ಲಿ ಕೂದಲಿನ ತುದಿಗಿಂತಲೂ ಸೂಕ್ಷ್ಮನಿದ್ದಾಗ್ಯೂ ಜಗದ್ವ್ಯಾಪಿಯಾ ಗಿದ್ದಾನೆ. ಯೋಗಮಣಿದರ್ಪಣದಲ್ಲಿ ಹೇಳಿರುವದೇನಂದರೆ,- 'ನೀವಾ ಶಾಂಕುರಸೂಕ್ಷ್ಮೋ ಹೇಮ ದೀಪಸ್ತ್ವಣೂಪಮಃ। ತಸ್ಯಾತ್ಮನಃ ಶಿರೋ ಗ್ರೇಚ ಶಕ್ತಿಂ ಪ್ರಣವರೂಪಿಣೀಮ್। ನಾದ, ಬಿಂದು, ಕಲಾಯುಕ್ತಂ ತಾರಕಾಕಾರರೂಪಿಣೀಮ್। ವಿಂದ್ಯಾಚ್ಛಕ್ತ್ಯೂರ್ಧ್ವಭಾಗೇತು ಲಿಂಗೆ ಕಾಲಾ

ಗ್ನಿರೂಪಕಂ - ಕಥಿತಂ ತಾರಕಬ್ರಹ್ಮೇತೀದಂ ಲಿಂಗಂ ॥ ಹೃದಯದಲ್ಲಿ ಆತ್ಮವು ಹುಲ್ಲಿನ ಅಂಕುರದಂತೆ ಸೂಕ್ಷ್ಮವಿದ್ದು ಸುವರ್ಣದಂತೆ ಪ್ರಕಾಶಿಸುತ್ತದೆ. ಆ ಆತ್ಮನ ಮಸ್ತಕದ ತುದಿಯಲ್ಲಿ ಪ್ರಣವಸ್ವರೂಪ ಶಕ್ತಿಯಿರುವದು. ಶಕ್ತಿಯು ನಾದ, ಬಿಂದು, ಕಲೆಗಳಿಂದ ಕೂಡಿದೆ. ಮತ್ತು ನಕ್ಷತ್ರದಂತೆ ಪ್ರಕಾಶಿಸುವದು. ಶಕ್ತಿಯ ಮೇಲ್ಭಾಗದಲ್ಲಿ ಕಾಲಾಗ್ನಿ ಸ್ವರೂಪಲಿಂಗವಿದೆ. ಅದು ಕೋಟಿಸೂರ್ಯ ಪ್ರಕಾಶವುಳ್ಳದ್ದಾಗಿದೆ. ಅಂಥ ಲಿಂಗಕ್ಕೆ ಯೋಗಿಗಳು ತಾರಕಬ್ರಹ್ಮವೆಂದು ಹೇಳುತ್ತಾರೆ. ಕಠವಲ್ಲ್ಯುಪನಿಷತ್ತಿನಲ್ಲಿಯೂ ಆತ್ಮವು ಸರ್ವರ ಹೃದಯ ಮಧ್ಯದಲ್ಲಿದ್ದು ಅಂಗುಷ್ಠಮಾತ್ರನಾದ ಪುರುಷನು ಈ ಆತ್ಮದ ಮಧ್ಯಭಾಗದಲ್ಲಿರುತ್ತಾನೆಂದು ಹೇಳಿದೆ. ಇದರಿಂದ ಜೀವೇಶ್ವರರ ಐಕ್ಯವು ಹೇಳಲ್ಪಟ್ಟಿದೆ. ಹೃದಯಕಮಲದಲ್ಲಿರುವ ತೇಜಃಪುಂಜವಾದ ವಸ್ತುವು ಚಿನ್ಮಯ ಪ್ರಾಣಲಿಂಗವೇ ಆಗಿದೆ. ಆದ್ದರಿಂದ "ಆತ್ಮಾನಮರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಂ। ಧ್ಯಾನನಿರ್ಮಥನಾಭ್ಯಾಸಾದ್ದೇವಂ ಪಶ್ಯೇನ್ನಿಗೂಢವತ್ ॥" ಆತ್ಮವನ್ನು ಅರಣಿಯನ್ನು ಮಾಡಿ ಪ್ರಣವವನ್ನು ಮೇಲಿನ ಅರಣಿಯನ್ನು (ಕಟ್ಟಿಗೆ) ಮಾಡಿ ಧ್ಯಾನರೂಪ ಮಥನದಿಂದ ಗುಪ್ತರೂಪವಾದ ಪ್ರಾಣಲಿಂಗವನ್ನು ನೋಡಬೇಕು, ಎಳ್ಳಿನಲ್ಲಿ ಎಣ್ಣೆಯಿರುವಂತೆ ಹಾಲಿನಲ್ಲಿ ತುಪ್ಪವಿರುವಂತೆ ಕಟ್ಟಿಗೆಯಲ್ಲಿ ಅಗ್ನಿಯಿರುವಂತೆ ಆತ್ಮದಲ್ಲಿ ಪ್ರಾಣಲಿಂಗವಿರುವದು. ಜಗತ್ತು ಬ್ರಹ್ಮಸ್ವರೂಪವಿದ್ದು ಆ ಬ್ರಹ್ಮನು ನಾನೇಯೆಂದು ಯಾವನು ತಿಳಿಯುತ್ತಾನೆಯೋ ಅವನು ಸರ್ವಪಾಶಗಳಿಂದ ಮುಕ್ತನಾಗುತ್ತಾನೆ. ಶಿವನಿಂದ ವ್ಯಾಪ್ತವಾದ **ಈ ಜಗತ್ತು ಮಿಥ್ಯವಾಗಿರದೆ ಸತ್ಯವಾಗಿರುವದು.** ಇದು ವೀರಶೈವ ಸಿದ್ಧಾಂತದ ವಿಶಿಷ್ಟ ತತ್ವವಾಗಿದೆ. ಅದ್ವೈತ ಮೊದಲಾದ ತತ್ವಗಳು ಜಗತ್ತು ಮಿಥ್ಯೆಯೆಂದು ಪ್ರತಿಪಾದಿಸುತ್ತವೆ. ಆದರೆ ಅದನ್ನು ಸಿದ್ಧಮಾಡಲಾರವು- ಮನುಷ್ಯನು ಶಿವ ಸ್ವರೂಪನೆಂದು ತಿಳಿಯುವದರಲ್ಲಿ ಉದಾತ್ತವಾದ ತತ್ವವು ಅಡಕವಾಗಿದೆ. ಶಿವನು ಸಚ್ಚಿದಾನಂದನೂ, ನಿತ್ಯಪರಿಪೂರ್ಣನೂ, ಅವಿರಳ ಪರಂಜ್ಯೋತಿಯೂ, ಇದ್ದಾನೆ. ಜಗತ್ತು ಶಿವನಿಂದಲೇ ಹುಟ್ಟಿ ಶಿವನಲ್ಲಿಯೇ ಲಯವಾಗುವದರಿಂದ ಮಿಥ್ಯೆಯಾಗಿರಲಾರದು. ಹಾಗೆ ತಿಳಿಯುವದಾದರೆ ಜಗದ್ವ್ಯಾಪಿಯಾದ ಶಿವನೂ ಮಿಥ್ಯಾರೂಪಿಯೆಂದು ತಿಳಿಯಬೇಕಾಗುವದು. ಆದರೆ ಇದು ಅಸಂಭವವಾದದ್ದೇ ಸರಿ.

ಶಂಕರ ಸಂಹಿತೆಯಲ್ಲಿ ಹೇಳಿರುವದೇನಂದರೆ, —' ಇಷ್ಟಲಿಂಗ ಮಿದಂ ಸಾಕ್ಷಾದನಿಷ್ಟ ಪರಿಹಾರಕಂ। ಧಾರಯೇದವಧಾನೇನ ಶರೀರೆ ಸರ್ವದಾ ಬುಧಃ ॥ ಇಷ್ಟಲಿಂಗವು ಅನಿಷ್ಟವನ್ನು ಹೋಗಲಾಡಿಸುವದಾಗಿದ್ದು ಜ್ಞಾನಿಯು ಸಾವಧಾನದಿಂದ ಅದನ್ನು ಯಾವಾಗಲೂ ಶರೀರದಲ್ಲಿ ಧರಿಸಬೇಕು. ಸರ್ವ ದೇಹಕ್ಕೆ ವಿಭೂತಿಯನ್ನು ಧರಿಸಿಕೊಳ್ಳುವದಕ್ಕೆ ಪಾಶುಪತವ್ರತವೆನ್ನುವರು. ಪ್ರಾಣದ ಅಂತರಂಗದಲ್ಲಿ ಮನಸ್ಸಿನಿಂದ ಧ್ಯಾನ ಮಾಡುವದಕ್ಕೆ ಯೋಗ್ಯವಾದ ಯಾವ ಶಿವಸ್ವರೂಪವಿದೆಯೋ ಅದೇ ಪ್ರಾಣಲಿಂಗವೆಂದು ಶೃತಿಯು ಹೇಳುತ್ತದೆ. ಸಕಲಂದೃಕ್ಕಲಾ ಗ್ರಾಹ್ಯಮಿಷ್ಟಲಿಂಗಸ್ಥಲಂ ಮಹತ್। ಇಷ್ಟ ಸಿದ್ಧಿಕರಂ ಶಾಶ್ವದನಿಷ್ಟ ಪರಿಹಾರಕಂ॥ ಇಷ್ಟ ಸಿದ್ಧಿಯನ್ನುಂಟು ಮಾಡತಕ್ಕ ಮತ್ತು ಕಲಾ ಸಹಿತವಾದ ಶಿವ ಸ್ವರೂಪವನ್ನು ದೃಷ್ಟಿಕಲೆಯಿಂದ ಗ್ರಹಿಸುವದಕ್ಕೆ ಯೋಗ್ಯ ವಿರುವದರಿಂದಲೂ ಇದಕ್ಕೆ ಇಷ್ಟಲಿಂಗವೆಂದು ಹೇಳುತ್ತಾರೆ.

ಸಮುದ್ರದ ತೆರೆಗಳು ಹೇಗೆ ಸಮುದ್ರ ಸ್ವರೂಪವಾಗಿರುವವೋ ಅದರಂತೆ ಚಿದಾಕಾಶ ಸ್ವರೂಪನಾದ ಶಿವನಿಂದ ಜಗತ್ತು ಬೇರೆಯಾಗಿಲ್ಲ. ವಿಶೇಷಾರ್ಥ ಪ್ರಕಾಶಿಕೆಯಲ್ಲಿ ಹೇಳಿರುವದೇನಂದರೆ,- ನೇತಿ ನೇತೀತಿ ನೇತೀತಿ ಶಿಷ್ಯತೆಯತ್ ಪರಂ ಪದಂ। ನಿರಾಕರ್ತುಮಶಕ್ಯತ್ವಾತ್ತದಸ್ಮೀತಿ ಸುಖೀಭವ॥ ಇಲ್ಲ॥ ಇಲ್ಲವೆಂದು ಹೇಳುತ್ತ ಹೇಳುತ್ತ ಯಾವಶೇಷವು ಉಳಿಯುವದೋ ಅದನ್ನು ನಿರಾಕರಿಸುವದು ಅಶಕ್ಯವಾಗಿರುವದರಿಂದ ಆ ಉಳಿದ ಭಾಗವೇ ಪರಮಪದವೆಂದು ತಿಳಿದು ಸುಖಿಯಾಗು. ಹೃದಯದಲ್ಲಿರುವ ಪರಮಾತ್ಮ ಸ್ವರೂಪ ಚೈತನ್ಯವು ಪ್ರಾಣಶಕ್ತಿಯಿಂದ ಯುಕ್ತವಾದ್ದರಿಂದ ಅದಕ್ಕೆ ಪ್ರಾಣಲಿಂಗವೆಂದು ಹೆಸರು. ನಿರಂತರ ಸ್ವಲ್ಪ ಕಣ್ಣು ತೆರೆದು ಸ್ವಲ್ಪ ಮುಚ್ಚಿ ಯಾವನು ತನ್ನ ಮನೋರೂಪ ದೃಷ್ಟಿಯಿಂದ ಪರಬ್ರಹ್ಮ ಸ್ವರೂಪವನ್ನು ನೋಡುತ್ತಾನೋ ಅವನೇ ಯೋಗಿಗಳಲ್ಲಿ ರಾಜನು ಅಹಿಂಸಾ, ಇಂದ್ರಿಯ ನಿಗ್ರಹ, ದಯಾ, ಕ್ಷಮಾ, ಜ್ಞಾನ, ಧ್ಯಾನ, ತಪಸ್ಸು, ಸತ್ಯ ಮೊದಲಾದ ಮಾನಸಿಕ ಪುಷ್ಪಗಳಿಂದ ಆತ್ಮಲಿಂಗದ ಪೂಜೆಯನ್ನು ನಿರಂತರವಾಗಿ ಮಾಡಬೇಕು. ಮುಖದ ಒಂದು ಭಾಗವಾದ ನಾಸಿಕ ಪುಟದಲ್ಲಿ ಪ್ರಾಣವಾಯುವನ್ನು ತುಂಬಿಕೊಂಡು, ಅಗ್ನಿಸ್ಥಾನವೆಂದು ಹೇಳುವ ಅಧೋಕುಂಡಲನೀ ಸ್ಥಲವಾದ ತ್ರಿಕೋಣಾಕಾರದ ಮೂಲಾಧಾರದಲ್ಲಿ ಅಪಾನವಾಯುವನ್ನು ಆಕರ್ಷಿಸಿ, ಎರಡೂ

ಕರಗಳಲ್ಲಿ ಅಂಗುಷ್ಠ, ತರ್ಜನಿ, ಮಧ್ಯಮಾ ಮೊದಲಾದ ೬ ಅಂಗುಲ ಗಳಿಂದ ಕಿವಿ, ಕಣ್ಣು, ಮತ್ತು ನಾಸಿಕಗಳನ್ನು ಗುರುವಿನ ಉಪದೇಶದ ಪ್ರಕಾರ ನಿರೋಧಿಸಿ ಈ ೬ ಮುಖವಾದ ಕರಣ ಮಾರ್ಗದಿಂದ ನಿಷ್ಟಲ ಚಿತ್ತನಾದ ಯೋಗೀಶ್ವರನು ಉತ್ತಮ ಪ್ರಣವದ ಹತ್ತುವಿಧ ನಾದದಲ್ಲಿ ಲೀನಚಿತ್ತನಾಗಿ ಹತ್ತುವಿಧ ಬಿಂದು ಸಾಕ್ಷಾತ್ಕಾರರೂಪ ಪ್ರತ್ಯಯಗಳನ್ನು ನೋಡುತ್ತಾನೆ. ಹೀಗೆ ೬ ಮುದ್ರೆಗಳ ಮೂಲಕವಾಗಿ ಚಿನ್ಮಯ ಜ್ಯೋತಿ ರ್ಲಿಂಗದ ಅನುಸಂಧಾನ ಮಾಡಬೇಕು.

ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿರುವದೇನಂದರೆ,-ಪ್ರಾಣವಾಯು ಶಕ್ತಿಯು ಕಾರಣಶಾಲಿಯಿದ್ದು, ಪ್ರಾಣಲಿಂಗವು ಸದ್ರೂಪವಿರುವದು. ಇವೆ ರಡರ ಸಾಮರಸ್ಯವನ್ನು ಯಾವನು ತಿಳಿಯುವನೋ ಅವನಿಗೆ ಪ್ರಾಣಲಿಂಗಿ ಯನ್ನುವರು. ಕಾಮಿಕಾಗಮದಲ್ಲಿ ಹೇಳಿರುವದೇನಂದರೆ, "ಲಿಂಗವು ಬ್ರಹ್ಮಸ್ವರೂಪವಿದ್ದು ಅದರ ಶಕ್ತಿಯು ಪ್ರಾಣರೂಪವಿದೆ ಆ ಪ್ರಾಣರೂಪದ ಮತ್ತು ಲಿಂಗದ ಜ್ಞಾನವು ಯಾರಿಗೆ ಆಗಿರುತ್ತದೋ ಅವನಿಗೆ ಪ್ರಾಣಲಿಂಗಿ ಯೆನ್ನುವರು." ಲಿಂಗವು ಭಾವ, ಪ್ರಾಣ, ಇಷ್ಟವೆಂಬ ೩ ತೆರನಾಗಿರು ವದು. ಭಾವಲಿಂಗವು ನಿಷ್ಕಲವಿದ್ದು ಕೇವಲ ಭಾವನೆಯಿಂದಲೇ ಗೋಚ ರವಾಗತಕ್ಕದ್ದಾಗಿದೆ. ಮತ್ತು ಸತ್ಸ್ವರೂಪವಿದೆ. ಪ್ರಾಣಲಿಂಗವು ಮನ ಸ್ಸಿನಿಂದ ಸ್ವೀಕರಿಸಲು ಯೋಗ್ಯವಿದ್ದು ಸಕಲ, ನಿಷ್ಕಲವೆರಡೂ ಆಗಿದೆ. ಇಷ್ಟಲಿಂಗವು ದೃಷ್ಟಿಯಿಂದ ಗ್ರಾಹ್ಯವಿದ್ದು ಇಷ್ಟಸಿದ್ಧಿಯನ್ನುಂಟು ಮಾಡತ ಕ್ಕದ್ದಾಗಿದೆ. (ಉತ್ತರವಾತುಲ) ಇಷ್ಟಮಾರ್ಜಂತು ತಪಸಾಪ್ಯನುಯಚ್ಛತಿ ಯದ್ಯತಃ । ತದಿಷ್ಟಲಿಂಗಮಿತ್ಯಾಹುಸ್ತಥಾಚಾಥರ್ವಣೀಶೃತಿಃ ॥ ಪ್ರಾಣಾ ಪಾನವಾಯುಗಳ ಸಮಾಗಮವು ಯಲ್ಲಾಗುವದೋ ಅಂಥಸ್ಥಾನದ ಮಧ್ಯಭಾಗದಿಂದ ಉತ್ಪನ್ನವಾದುದಕ್ಕೆ ಪ್ರಾಣಲಿಂಗವೆಂದು ಯೋಗಿಗಳು ಕರೆಯುತ್ತಾರೆ. ಇಷ್ಟಲಿಂಗದ ಹೊರತು ಉಳಿದ ದೇವತೆಗಳನ್ನು ವೀರಶೈ ವನು ಪೂಜಿಸಬಾರದು. ಆಕಳಲ್ಲಿರುವ ತುಪ್ಪವು ಅದಕ್ಕೆ ಉಪಯೋಗ ಬೀಳದು. ಆಕಳನ್ನು ಕರೆದು ಹೆಪ್ಪುಹಾಕಿ ಕಡೆದರೆ ಆ ಮೇಲೆ ಅದಕ್ಕೆ ಹೇಗೆ ತುಪ್ಪವು ಸಿಗುವದೋ ಹಾಗೆಯೇ ಆತ್ಮನಲ್ಲಿರುವ ಈಶ್ವರನು ಪೂಜೆಗೊಳ್ಳದ ಹೊರತು ವ್ಯಕ್ತನಾಗಲಾರನು. ನಿರಾಭಾರಿ ವೀರಶೈವನು ಬಹಿರಂಗದ ಸೂತ್ರ ಮತ್ತು ಶಿಖಾತ್ಯಾಗಮಾಡಿ ಲಿಂಗಧಾರಣ ಮಾಡಿ

ಕೊಳ್ಳಬೇಕು. ವೇದದ ಕರ್ಮಭಾಗವನ್ನು ವೀರಶೈವನು ಅಧ್ಯಯನ ಮಾಡಲಾಗದು. ಶಿವಾರ್ಚನೆಯೇ ಅವನಿಗೆ ಕರ್ಮವು. ಪಂಚಾಕ್ಷರಿಯ ಜಪ ವನ್ನು ಮಾಡುವ ಯೋಗಿಯೇ ಭಕ್ತನೆಂದು ಹೇಳಿದೆ.

## ವೀರಮಾಹೇಶ್ವರ ವಿವಾಹಕ್ರಮ.

ಶಿವನಲ್ಲಿಯ ನಿಷ್ಠೆಯೇ ಶೀಲವು. ಗುರುವೇ ಶಿವಸ್ವರೂಪವೆಂದು ತಿಳಿದು ಸ್ಮರಿಸುವದೇ ವೀರ ಮಾಹೇಶ್ವರ ವ್ರತವು. ಪೂಜೆಗಿಂತ ಮೊದಲು ದ್ವೈತಭಾವವನ್ನೂ ಅಂತ್ಯದಲ್ಲಿ ಅದ್ವೈತ ಭಾವವನ್ನೂ ಇಟ್ಟುಕೊಂಡಿಕ ತಕ್ಕವನು ವೀರ ಮಾಹೇಶ್ವರನು ಅವನು ಪರಸ್ತ್ರೀ ಪರದ್ರವ್ಯಗಳನ್ನು ಕನಸು ಮನಸುಗಳಲ್ಲಿಯೂ ಸಂಪರ್ಕ ಮಾಡಬಾರದು. ಮೊದಲು ಭಕ್ತ ಮತ್ತು ಶಿವ ಎಂಬ ಭೇದವಿದ್ದು ಭಕ್ತನು ಶಿವನಲ್ಲಿ ಐಕ್ಯ ಹೊಂದಿ ದಾಗ ಭಕ್ತನು ಶಿವಮಯನಾಗಿ ಅಂತ್ಯದಲ್ಲಿ ಭೇದವಳಿಯುವದು. ದ್ವೈತಮತದಲ್ಲಿ ಜೀವೇಶ್ವರರ ಭೇದವು ಯಾವಾಗಲೂ ಇದ್ದು ಜೀವಕ್ಕೆ ಈಶ್ವರ ಸ್ಥಾನವು ದೊರೆಯುವದು ಎಂದೂ ಸಾಧ್ಯವಿಲ್ಲ. ಅದ್ವೈತಮತದಲ್ಲಿ ಮೊದಲಿನಿಂದಲೂ ಜೀವೇಶ್ವರರಲ್ಲಿ ಭೇದವ ನ್ನೆಣಿಸುವದೇ ಇಲ್ಲ. ಜೀವವು ಭಕ್ತನಾಗಿ ಈಶ್ವರನನ್ನು ಪೂಜಿಸದ ಹೊರತು ಮಾಯಕ್ಕೊಳಗಾದ ಜೀವವು ಈಶ್ವರನಲ್ಲಿ ಒಂದಾಗದು. ಶಕ್ತಿ ವಿಶಿಷ್ಟಾದ್ವೈತವಾದ ವೀರಶೈವ ಧರ್ಮವು ದ್ವೈತಾದ್ವೈತಗಳ ಲ್ಲಿರುವ ಈ ದೋಷವನ್ನು ತೆಗೆದುಹಾಕಿ ಸಮಂಜಸವಾದ ತತ ವನ್ನು ಸ್ಥಾಪಿಸಿರುವದು. ಶಕುನ, ಜ್ಯೋತಿಷ, ವಾರ, ತಿಥಿಗಳನು ನೋಡಬಾರದು. 'ಧರ್ಮೇತಿಧಾರಣೋಧಾತುಃ ಮಹತ್ವೇಪಿಚಪಠ್ಯತೆ' ಎಂದು ಧರ್ಮದ ಅರ್ಥವು ರಕ್ಷಣವೆಂತಲೂ ಮಹತ್ವವಾದದ್ದೆಂತಲೂ ಆಗುತ್ತದೆ. ಬ್ರಾಹ್ಮಣರಿಗೆ ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ ಎಂದು ನಾಲ್ಕು ವಿಧವಿವಾಹಗಳು ಹೇಳಲ್ಪಟ್ಟವೆ. ವೀರಶೈವನು ಗಂಧರ್ವವಿವಾಹ ಮಾಡಬಾರದು. ಯಾವ ಕನ್ಯೆಗೆ ಅಣ್ಣ, ತಾಯಿ, ತಂದೆಗಳಿಲ್ಲವೋ ಅಂಥ ವಳಿಗೆ ಗಂಧರ್ವವಿವಾಹ ಮಾಡಬೇಕು. ಎಂಟು ಪ್ರಕಾರದ ಲಗ್ನಗಳು ನಿಷೇಧವಾಗಿವೆ-ವೃದ್ಧವಿವಾಹ, ವಿರಕ್ತವಿವಾಹ, ವಿಧವಾವಿವಾಹ, ಪತಿತ ವಿವಾಹ, ರಜಸ್ವಲಾವಿವಾಹ, ಅಪಸ್ಮಾರ ಕುಲಸ್ತ್ರೀವಿವಾಹ, ಪಿಂಗಲಾ ವಿವಾಹ, ಕುಷ್ಠರೋಗೀವಿವಾಹ.

## ವೀರಮಾಹೇಶ್ವರ ದಿನಾಚಾರ್ಯ.

ಸೂರ್ಯೋದಯದ ಪೂರ್ವದಲ್ಲೆದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ಸ್ನಾನಮಾಡಿ, ಆಸನದ ಮೇಲೆ ಉತ್ತರಾಭಿಮುಖವಾಗಿ ಕುಳಿತು ಭಸ್ಮ ರುದ್ರಾಕ್ಷಿ ಧಾರಣ ಮಾಡಿ ಶಿವಪೂಜೆ ಪ್ರಾರಂಭಿಸಬೇಕು. ಜಲಸ್ನಾನದಿಂದ ಮಲವು ಮಾತ್ರಹೋಗುವದು. ಭಸ್ಮಸ್ನಾನದಿಂದ ಕ್ರಿಮಿಗಳನಾಶವೂ, ಚರ್ಮಶುದ್ಧಿಯೂ, ಬೆವರಿನ ರಂಧ್ರಗಳ ವಿಶಾಲ್ಯವೂ ಉಂಟಾಗುವದು. ಪಂಚಾಕ್ಷರ ಮಂತ್ರಸಹಿತವಾಗಿ ತ್ರಿಪುಂಡ್ರ ಧಾರಣೆಮಾಡಿಕೊಳ್ಳಬೇಕು. ಕಂಠದಲ್ಲಿ ೧೦೮, ಕಿವಿಯಲ್ಲಿ ೬, ಶಿಖೆಯಲ್ಲಿ ೧, ತಲೆಯಲ್ಲಿ ೩೬ ರುದ್ರಾಕ್ಷಿಗಳನ್ನು ಧರಿಸಬೇಕು. ಶಿವಾರ್ಚನೆಯಕಾಲಕ್ಕೆ ದುರ್ವಸ್ತುಗಳನ್ನು ನೋಡಬಾರದು, ದುಷ್ಟವಿಚಾರಗಳನ್ನು ಮಾಡಬಾರದು. ಶಿವಪೂಜೆಯೇ ಕರ್ಮಯಜ್ಞವು. ಶಿವಸಾಯುಜ್ಯಕ್ಕಾಗಿ ದೇಹ ಒಣಗಿಸಿಕೊಳ್ಳುವದೇ ತಪಯಜ್ಞವು, ಪಂಚಾಕ್ಷರಾದಿ ಮಂತ್ರೋಚ್ಚಾರಣೆಯೇ ಜಪಯಜ್ಞವು, ಶಿವಚಿಂತನವೇ ಧ್ಯಾನಯಜ್ಞವು. ಆಗಮಗಳಲ್ಲಿ ಹೇಳಿದ ಶಿವಸ್ವರೂಪವನ್ನು ಅರಿತುಕೊಳ್ಳುವದೇ ಜ್ಞಾನಯಜ್ಞವು. ಈ ಪಂಚಯಜ್ಞಗಳಿಂದ ಯಾವನು ಶಿವನನ್ನು ಭಕ್ತಿಯಿಂದ ಪೂಜಿಸುತ್ತಾನೋ ಅವನೇ ಭಕ್ತನು. ಅದೇ ಭಕ್ತಿಯಜ್ಞವು ವೀರಶೈವಧರ್ಮವು ಯಜ್ಞಕ್ಕೆ ಈ ವಿಧವಾದ ಪಾರಮಾರ್ಥಿಕ ಸ್ವರೂಪವನ್ನು ಕೊಟ್ಟಿರುವದು ಮತ್ತು ದ್ವಿಜಾದಿಗಳು ಅನುಸರಿಸುವ ಪಶುಯಜ್ಞವು ಹಿಂಸಾಮಯವಾದ್ದರಿಂದ ಅದನ್ನು ತಿರಸ್ಕರಿಸಿರುವದು. ಲಿಂಗಮುಖದಿಂದ ಹೊರಟ ಪ್ರಸಾದಕ್ಕೆ ಶುದ್ಧಪ್ರಸಾದವೆಂತಲೂ, ಗುರುಮುಖದಿಂದ ಹೊರಟ ಪ್ರಸಾದಕ್ಕೆ ಪ್ರಸಿದ್ಧ ಪ್ರಸಾದವೆಂತಲೂ, ಹೆಸರು. ಭಕ್ತನು ಪಾದೋದಕ, ಪ್ರಸಾದಗಳನ್ನು ಸೇವಿಸಬೇಕು. ಇವೆರಡರ ರೂಪದಿಂದ ಭಕ್ತನು ಶಿವಚೈತನ್ಯವನ್ನು ಹೊಂದುತ್ತಾನೆ. ಪ್ರಸಾದ ಸೇವನೆಯು ಎಲ್ಲ ಧರ್ಮಗಳಲ್ಲಿಯೂ ಮುಖ್ಯಾಂಗವಾಗಿದೆ. ಕ್ರೈಸ್ತನು ಕೊಟ್ಟ ಪದಾರ್ಥಗಳನ್ನು ಆತನ ಭಕ್ತರು ಪ್ರಸಾದವೆಂದು ಸ್ವೀಕರಿಸುತ್ತಿದ್ದರು. ಕೃಷ್ಣನು ದುರ್ವಾಸಋಷಿಯ ಪ್ರಸಾದವನ್ನು ದೇಹಕ್ಕೆಲ್ಲ ಹಚ್ಚಿಕೊಳ್ಳಲು ವಜ್ರಶರೀರಿಯಾದನೆಂದು ಮಹಾಭಾರತದಲ್ಲಿ ಹೇಳಿದೆ. ಯಾವಾಗುಭಕ್ಷಣಕಾಲಕ್ಕೆ ವಿಷ್ಣುವು ಸರ್ವಾಂಗಕ್ಕೆ ಪ್ರಸಾದಲೇಪಿಸಿಕೊಳ್ಳಲು ಮುನಿಯು ಕೊಟ್ಟಶಾಪವು ವರರೂಪವಾಯಿ

ತೆಂದು ಸ್ಕಂದಪುರಾಣದಲ್ಲಿ ಹೇಳಿದೆ. ಜಂಗಮವು ಜ್ಞಾನರೂಪವಿದ್ದು ಲಿಂಗವು ಕ್ರಿಯಾರೂಪವಿರುವದು. ಪಾದೋದಕವನ್ನು ಲಿಂಗಕ್ಕೆ ಅರ್ಪಿಸಲು ಅದೇ ಅಭಿಷೇಕವಾಗುತ್ತದೆ. ಶಿವಭಕ್ತನು ಸರ್ವಾರ್ಥಗಳನ್ನು ಸಿದ್ಧಗೊಳಿಸಿಕೊಂಡಿರುತ್ತಾನೆ. ಅವನು ಸರ್ವ ದ್ವಂದ್ವಗಳನ್ನು ಸಹಿಸುವವನೂ, ನಿರಂತರಶಾಂತನೂ, ಸರಳಸ್ವಭಾವಿಯೂ, ಮೃದುಭಾಷಿಯೂ, ಮಂದಹಾಸಿಯೂ, ಮಂಗಲಕರನೂ, ಸತ್ಯವಾದಿಯೂ, ಇಂದ್ರಿಯನಿಗ್ರಹಿಯೂ, ದಾನಿಯೂ, ಶೂರನೂ, ನಿರಹಂಕಾರಿಯೂ, ನಿರ್ಲೋಭಿಯೂ, ನಿಸ್ವಾರ್ಥಿಯೂ, ದಯಾದಾಕ್ಷಿಣ್ಯಯುಕ್ತನೂ, ಶಾಠ್ಯರಹಿತನೂ, ನಿರ್ಮಲಾಂತಃಕರುಣಿಯೂ, ಸಾಧುಸೇವಕನೂ, ಶಿವಯೋಗದಲ್ಲಿ ನಿರತನಾದವನೂ ಇರುವನು. ಜ್ಞಾನಪ್ರಾಪ್ತವಾದಾಗ್ಯೂ ಕರ್ಮ ಮಾಡಬೇಕು. ಆದರೆ ಮನಸ್ಸಿನಲ್ಲಿ ಕರ್ಮಫಲೇಚ್ಛೆಯನ್ನು ಇಟ್ಟುಕೊಳ್ಳಬಾರದು. ಜ್ಞಾನಕರ್ಮಗಳು ಮನುಷ್ಯನಿಗೆ ಕಣ್ಣು, ಕಾಲುಗಳಂತಿರುವವು. ಆದರಲ್ಲಿ ಯಾವದಾದರೊಂದು ಅಂಗವು ಹೀನವಾದರೆ ಶರೀರಕ್ರಿಯೆಯು ಸುಲಭವಾಗಿ ಸಾಗದು.

## ವೀರಮಾಹೇಶ್ವರ ಗ್ರಾಹ್ಯಧರ್ಮ.

ಹೊಲ, ಮನೆ ಮೊದಲಾದ ಸರ್ವವಸ್ತುಗಳಿಗೆ ಲಿಂಗಮುದ್ರೆ ಹಚ್ಚಬೇಕು. ಸರ್ವಪ್ರಾಣಿಗಳಲ್ಲಿ ದಯೆಯುಳ್ಳವನಿರಬೇಕು. **ಶಿವಸಂಸ್ಕಾರವಾದವರಲ್ಲಿ ಜಾತಿಭೇದವನ್ನೆಣಿಸಬಾರದು.** ಸದಾಚಾರಸಂಪನ್ನರೂ ಶಿವೋಪಾಸಕರೂ ಆದವರು ವೀರಶೈವದೀಕ್ಷೆಯನ್ನು ಹೊಂದಲು ಯೋಗ್ಯರು. ಅವರು ಅಂತ್ಯಜರಿದ್ದಾಗ್ಯೂ ವೀರಶೈವರಾದಮೇಲೆ ಅವರ ಮೊದಲಿನ ಜಾತಿಯು ನಾಶವಾಗುವದು. ಅನ್ಯರು ವೀರಶೈವ ಧರ್ಮವನ್ನು ಸ್ವೀಕರಿಸಬಲ್ಲರೆಂಬ ಸಂಗತಿಯು ವೀರಶೈವ ಧರ್ಮದವಿಶಾಲತತ್ವವನ್ನೂ ಔದಾರ್ಯವನ್ನೂ, ಪರಧರ್ಮಸಹನೆಯನ್ನೂ, ಧರ್ಮಸ್ವಾತಂತ್ರ್ಯವನ್ನೂ, ಪ್ರಕಟಗೊಳಿಸುವದು. ಪರಸ್ತ್ರೀ ಮತ್ತು ಗುರುಪತ್ನಿಯರಸಹವಾಸವನ್ನು ಯಾವನುಮಾಡುವನೋ ಅವನು ಶಿವಭಕ್ತನಾಗಿದ್ದರೂ ಶಿವದ್ರೋಹಿಯಾಗಿರುವನು. ಜೀವ ಹಿಂಸೆಯನ್ನು ಮಾಡಕೂಡದು. ಮಾಂಸಾಹಾರವನ್ನೂ ಮದ್ಯಪಾನವನ್ನೂ ಸರ್ವಥಾಮಾಡಬಾರದು. ಧಾನ್ಯಾಹಾರ, ಫಲಾಹಾರ, ಕಾಯಿಪಲ್ಯಗಳೇ ಮುಖ್ಯಾಹಾರವಾಗಿರಬೇಕು. ವರ್ಣಾಶ್ರಮದ

ಅಭಿಮಾನವನ್ನು ಹಿಡಿಯುಬಾರದು. ಇವೆಲ್ಲ ಧಾರ್ಮಿಕ ಕಟ್ಟುಗಳು ಉದಾತ್ತವಾದ ನೀತಿಯುನ್ನೊಳಗೊಂಡಿರುವವು.

## ನಿರಾಭಾರಿ ವೀರಶೈವಾಚಾರ ಮಹಾತ್ಮ್ಯ.

ದಂಡ, ಕೌಪೀನ ಕಾಷಾಯ, ವಸ್ತ್ರಧರಿಸಿದವನೂ, ತಿಖಾರಹಿತನೂ, ಭಿಕ್ಷಾನ್ನ ಊಟಮಾಡುವವನೂ, ಸಂಸಾರತ್ಯಾಗಿಯೂ ಆದವನು ನಿರಾಭಾರಿವೀರಶೈವನೆಂದು ಹೇಳಿಸಿಕೊಳ್ಳುವನು. ಅನ್ಯದೇವತಾ ತೀರ್ಥನೈವೇದ್ಯಗಳನ್ನು ಜಂಗಮನು ಸೇವಿಸಬಾರದು; ಖಡ್ಗ, ಚಕ್ರ, ಗದಾ ಮೊದಲಾದ ಆಯುಧಗಳನ್ನು ಧರಿಸಬಾರದು. ಕಾರಾಗ್ರಹ, ಯುದ್ಧಭೂಮಿ, ಸ್ಮಶಾನಗಳಲ್ಲಿ ಜಂಗಮನು ಪ್ರವೇಶಿಸಬಾರದು. ನಿರಾಭಾರಿ ವೀರಶೈವನು ಕುದುರೆ, ಆನೆ, ಪಲ್ಲಕ್ಕಿಗಳಲ್ಲಿ ಕೂಡ್ರಬಾರದು, ಕೃಷಿ, ವ್ಯಾಪಾರಗಳನ್ನು ಮಾಡಬಾರದು; ಹಟವಾದಿಯಾಗಿಯೂ ಮತ್ಸರವುಳ್ಳವನೂ ಇರಬಾರದು. ಸುಖದುಃಖ ಮೊದಲಾದ ದ್ವಂದ್ವಗಳಿಂದ ಲಿಪ್ತನಾಗಿರಬಾರದು, ಸ್ಥಿರಬುದ್ಧಿಯುವನೂ, ಜಿತೇಂದ್ರಿಯನೂ, ದೃಢವೃತ್ತಿಯುಳ್ಳವನೂ, ತ್ರಿಕಾಲಶಿವಾರ್ಚನೆಮಾಡುವವನೂ ಉತ್ತಮವಿರಕ್ತನೆನಿಸಿಕೊಳ್ಳುವನು. ಪಂಚಾಕ್ಷರ ಅಥವಾ ಷಡಕ್ಷರ ಮಂತ್ರಜಪವನ್ನು ವಿಧಾನಪೂರ್ವಕ ಮಾಡುವದಕ್ಕೆ ಮಂತ್ರಯೋಗವೆಂತಲೂ, ಮನಸ್ಸು ಪರಶಿವನಲ್ಲಿ ಪ್ರಾಣವಾಯುವಿನೊಡನೆ ನಾದಮಧ್ಯದಲ್ಲಿ ಲೀನವಾಗುವದಕ್ಕೆ ಲಯಯೋಗವೆಂತಲೂ, ಅಷ್ಟಾಂಗಮಾರ್ಗದಿಂದ ಮತ್ತು ಮುದ್ರಾಕರಣಬಂಧನಗಳಿಂದ ಅಥವಾ ಕುಂಭಯೋಗದಲ್ಲಿಯೇ ಯಾರ ಶ್ವಾಸವು ತತ್ಪರವಾಗಿದೆಯೋ ಅದು ಹಠಯೋಗ ವೆಂತಲೂ, ೩ ಲಕ್ಷಜಪಮಾಡಿ ಜ್ಞಾನಸಂಪಾದನೆಯಿಂದ ಬ್ರಹ್ಮಸಾಕ್ಷಾತ್ಕಾರವನ್ನು ಮಾಡಿಕೊಂಡು ಮಾನಸಿಕ ವ್ಯಾಪಾರವನ್ನು ಬಿಡುವದಕ್ಕೆ ರಾಜಯೋಗವೆಂತಲೂ, ಹೇಳಲ್ಪಡುವವು. ಶಿವಜ್ಞಾನ, ಭಕ್ತಿ, ಧ್ಯಾನ, ವ್ರತ, ಪೂಜಾ ಎಂಬ ಐದುತರದ ಶಿವಯೋಗವಿರುವದು. ವೀರಾಗಮದಲ್ಲಿ-ಬ್ರಹ್ಮಚಾರಿ, ವಾನಪ್ರಸ್ಥ, ಜಂಗಮ, ಪಾಶುಪತ್ಯಾಶ್ರಮಿ, ಯತಿ ಇವರು ಜಟಾಧಾರಿಗಳಿರಬೇಕೆಂದು ಹೇಳಿದೆ. ಸಿದ್ಧಾಂತಶಿಖಾಮಣಿಯಲ್ಲಿ-'ಜಾನಂತ್ಯತಿಶಯಾದ್ಯೇತು ಶಿವಂ ವಿಶ್ವಪ್ರಕಾಶಕಂ। ಸ್ವಸ್ವರೂಪತಯಾತೇತು ಜಂಗಮಾಇತಿಕೀರ್ತಿತಾಃ॥' ಶಿವನನ್ನು ಅರಿತುಕೊಳ್ಳುವದರಿಂದ ಜಂಗಮರೆನ್ನಿ

ಸಿಕೊಳ್ಳುತ್ತಾರೆಂದು ಹೇಳಿದೆ. ಅದ್ವೈತಪರಮಾನಂದದಿಂದ ಕೂಡಿದವನಾಗಿ, ಸುಖದುಃಖಾಸಕ್ತಿ ಇಲ್ಲದವನೇ ಚರಯೋಗಿಯು, ಸ್ವಯಂಭಾವದಿಂದ ತನ್ನನ್ನು ತಾನೇ ತಿಳಿದುಕೊಳ್ಳುವದೂ, ಮತ್ತು ಸ್ವಸ್ವರೂಪದ ಹೊರತು ಮತ್ತೊಂದು ವಸ್ತುವಿಲ್ಲವೆಂದು ತಿಳಿದುಕೊಳ್ಳುವದಕ್ಕೂ ಪರತತ್ವವೆಂದು ಹೆಸರು. ಪರತತ್ವದಲ್ಲಿ ನಿಷ್ಠೆಯುಳ್ಳವನೂ, ವರ್ಣಾಚಾರತ್ಯಾಗಿಯೂ, ತನ್ನ ಆತ್ಮನೇ ಸರ್ವೋತ್ಕೃಷ್ಟವೆಂದು ತಿಳಿಯುವವನೂ, ಆನಂದದಲ್ಲಿರುವವನೂ ಪರಜಂಗಮನಾಗಿದ್ದಾನೆ, ಅಂದರೆ ಶಿವಸ್ವರೂಪಿಯು.

## ಲಿಂಗಾಂಗ ಸಾಮರಸ್ಯ ಮತ್ತು ತತ್ವಮಸ್ಯಾದಿವಾಕ್ಯಾರ್ಥ.

ಆತ್ಮದಲ್ಲಿ ಪರಬ್ರಹ್ಮದ ಅನುಸಂಧಾನಮಾಡಿ ಉಪಾಸನೆಮಾಡಬೇಕು. 'ಶಿವೋಹಂ' ಎಂಬದೂ 'ತತ್ವಮಸಿ' ಎಂಬದೂ ನಾನೇ ಬ್ರಹ್ಮನಿದ್ದೇನೆ ಎಂಬದಾಗಿ ಹೇಳುತ್ತನೆ. ಶಿವನು ಲಿಂಗರೂಪಿಯಾಗಿಯೂ ಜೀವವು ಅಂಗವಾಗಿಯೂ ಇರುವವು. ಚರಾಚರವಾದಜಗತ್ತು ಸತ್ಯವಿದ್ದು, ಪೂರ್ಣವೂ ಮತ್ತು ಚಿದಾತ್ಮಕವೂ, ಶುದ್ಧವೂ, ಅಂಗರೂಪವಾಗಿಯೂ ಇರುತ್ತದೆ. ಯಾವನು ಮಾಯಾರೂಪ ಉಪಾಧಿಯಿಂದ ಕೂಡಿ ಲಿಂಗರೂಪನಾದ ಈಶ್ವರನಿದ್ದಾನೋ ಅವನೇ ಅವಿದ್ಯಾರೂಪ ಉಪಾಧಿಯಿಂದ ಕೂಡಿ ಲಿಂಗರೂಪವಾದ ಜೀವಸಂಜ್ಞೆಯನ್ನು ಹೊಂದುವನು. ಮಾಯೆಯು ಎಲ್ಲಿ ಲೀನವಾಗುವದೋ ಅದೇ ಸದ್ರೂಪಲಿಂಗವಾಗಿದೆ.

## ಷಟಸ್ಥಲ ಬ್ರಹ್ಮಯೋಗಾಭ್ಯಾಸಕ್ರಮ.

ವೇಧಾದೀಕ್ಷೆಯಬಲದಿಂದ ಯೋಗಾಂಗದಲ್ಲಿ ಭಾವಲಿಂಗವಿರುತ್ತದೆ. ಮಂತ್ರದೀಕ್ಷಾಬಲದಿಂದ ಭೋಗಾಂಗದಲ್ಲಿ ಪ್ರಾಣಲಿಂಗವಿರುತ್ತದೆ. ಕ್ರಿಯಾದೀಕ್ಷೆಯಬಲದಿಂದ ಸತ್ಯಚಿದ್ಘನದೇಶಿಕನು ತ್ಯಾಗಾಂಗದಲ್ಲಿ ಇಷ್ಟಲಿಂಗವನ್ನು ಯೋಜಿಸುತ್ತಾನೆ. ಆಚಾರಲಿಂಗದ ಸಂಯುಕ್ತವಾದ ಅಂಗಕ್ಕೆ ಭಕ್ತಸ್ಥಲವೆಂದು ಹೇಳುತ್ತಾರೆ. ನೈಷ್ಠಿಕ ಭಕ್ತಿಯಿಂದ ಗುರುಲಿಂಗಯುಕ್ತವಾದ ಅಂಗವೇ ಮಹೇಶ್ವರಸ್ಥಲವಾಗಿದೆ. ಮಾಹೇಶ್ವರಸ್ಥಲದಲ್ಲಿರುವ ನೈಷ್ಠಿಕ ಭಕ್ತಿಗೆ ಅವಧಾನಾತ್ಮಕ ಭಕ್ತಿಯೆಂದು ಹೇಳುತ್ತಾರೆ. ಆ ಭಕ್ತಿಯಯೋಗದಿಂದ ಜೀವಕ್ಕೆ ಪ್ರಸಾದಿಸ್ಥಲವೆಂದು ಹೆಸರುಂಟಾಗಿದೆ. ಸ್ವಾನುಭವದಿಂದುಂಟಾದ ಅವಧಾನಾತ್ಮಕ ಭಕ್ತಿಗೆ ಅನುಭವಾ

ತ್ಮಿಕ ಭಕ್ತಿಯೆಂದು ಹೇಳುವರು. ಈ ಭಕ್ತಿಯು ಸಂಬಂಧದಿಂದ ಇದಕ್ಕೆ ಪ್ರಾಣಲಿಂಗಿಸ್ಥಲವು ಪ್ರಾಪ್ತವಾಗಿದೆ. ಚರಲಿಂಗದಿಂದ ಯುಕ್ತವಾದ ಅಂಗಕ್ಕೆ ಪ್ರಾಣಲಿಂಗಿಸ್ಥಲವೆನ್ನುವರು. ಆಸ್ಥಲದಲ್ಲಿ ಆನಂದಯೋಗದಿಂದ ಸ್ವಾನುಭವಾಕಾರ ಭಕ್ತಿ ಇರುತ್ತದೆ. ಆ ಭಕ್ತಿಗೆ ವೇದಾಂತಿಗಳು ಆನಂದಾತ್ಮಿಕಾ ಭಕ್ತಿಯೆನ್ನುವರು. ಆ ಭಕ್ತಿಯಿಂದ ಆತ್ಮಕ್ಕೆ ಶರಣಸ್ಥಲವುಂಟಾಗಿದೆ. ಪ್ರಸಾದಲಿಂಗದಿಂದ ಯುಕ್ತವಾದದ್ದೇ ಶರಣಸ್ಥಲವು. ಆ ಶರಣಸ್ಥಲದಲ್ಲಿ ಆನಂದರೂಪೀಭಕ್ತಿಯು ಪ್ರತಿಷ್ಠಿತವಾಗಿದೆ. ಸಾಮರಸ್ಯಪ್ರಭಾವದಿಂದ ಅದಕ್ಕೆ ಸಮರಸಾತ್ಮಕಭಕ್ತಿಯೆಂದು ಹೆಸರು. ಮಹಾಲಿಂಗದಿಂದ ಯುಕ್ತವಾದದ್ದೇ ಐಕ್ಯಸ್ಥಲವು. ಈ ಸ್ಥಲದಲ್ಲಿರುವ ಭಕ್ತಿಯು ತನ್ನಲ್ಲಿಯೇ ಇರುವದು. ಈ ಜೀವವು ಷಡಂಗಯೋಗಮಾರ್ಗದಿಂದ ಈಶ್ವರನನ್ನು ಹೊಂದುತ್ತದೆ. ಈ ಸಾಧಕನಿಗೆ ಏಕಕಾಲದಲ್ಲಿ ಷಟ್ಸ್ಥಲಪ್ರಾಪ್ತಿಯಾಗುವದರಿಂದ ಅಂಗಸ್ಥಲವು ಸಾಕ್ಷಾತ್ ಆತ್ಮವಾಗಿದೆ. ಲಿಂಗಸ್ಥಲವು ಶಿವನೇ ಆಗಿರುವದು. ಲಿಂಗಸ್ಥಲವು ತನ್ನ ಶಕ್ತಿಯಿಂದ ಅನೇಕಪ್ರಕಾರವಾಗಿರುವದು. ಉಪಾಸ್ಯನಾದ ಈಶ್ವರನು ಯಾವ ಯಾವರೂಪಧರಿಸುವನೋ ಉಪಾಸಕನಾದ ಆತ್ಮವೂ ಆ ಆ ರೂಪಗಳನ್ನೇ ಧರಿಸುವದು.

ಶಂಕರಸಂಹಿತೆಯಲ್ಲಿ ಹೇಳಿರುವದೇನಂದರೆ ಷಟ್ಸ್ಥಲವು ಮಹದಾದಿತತ್ವದ ಮತ್ತು ಲಯದಸ್ಥಾನವಿದ್ದು ಅದಕ್ಕೆ ಸ್ಥಲವೆಂದು ಹೆಸರು. ಬ್ರಹ್ಮಸ್ಥಲವು ಸ್ವಶಕ್ತಿಯಿಂದ ೬ ಪ್ರಕಾರವಾಗಿರುವದು. ಅವು ಯಾವವೆಂದರೆ,—ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಇವೇಷಟ್ಸ್ಥಲಗಳು. (೧) ಸದಾಚಾರವುಳ್ಳವನಾಗಿ, ಶಿವಭಕ್ತಿಯುಳ್ಳವನಾಗಿ, ಲಿಂಗ, ಜಂಗಮರಲ್ಲಿ ಏಕಬುದ್ಧಿಯುಳ್ಳವನಾಗಿರುವವನಿಗೆ ಭಕ್ತಸ್ಥಲವೆನ್ನುವರು. (೨) ಪರಸ್ತ್ರೀಪರಧನಕ್ಕೆ ಮನವೆಳಸದೆ ಭಾವಶುದ್ಧಿಯಿಂದಲೂ, ಲಿಂಗನಿಷ್ಠೆಯಿಂದಲೂ ಯಾರ ಆತ್ಮವು ಪಕ್ವವಾಗಿರುವದೋ ಅಂಥವನಿಗೆ ಮಹೇಶ್ವರನೆನ್ನುವರು. (೩) ಲಿಂಗಾರ್ಪಿತಪದಾರ್ಥದ ಭೋಗಿಯಾಗಿದ್ದು ಲಿಂಗದಲ್ಲಿ ಶಾಂತಮನಸ್ಕನಾಗಿಯೂ ಅರ್ಪಿತವಾಗದ ಪದಾರ್ಥಗಳನ್ನು ಸೇವಿಸದಿರುವದಕ್ಕೂ ಪ್ರಸಾದಿಸ್ಥಲವೆಂದು ಹೆಸರು. (೪) ಪ್ರಾಣರೂಪವಾಯುವಿನಲ್ಲಿ ಲಿಂಗವಿಟ್ಟು ಲಿಂಗದಲ್ಲಿ ಪ್ರಾಣವಿಟ್ಟು ಸುಖದುಃಖಗಳನ್ನು ಗಣಿಸಲಾರದವನಿಗೆ ಪ್ರಾಣಲಿಂಗಿಯೆಂದು ಹೆಸರು. (೫) ಲಿಂಗ

ಪಶಿಯೆಂತಲೂ ತಾನು ಸಶಿಯೆಂತಲೂ ಹೃದಯದಲ್ಲಿ ಯೋಜಿಸಿಕೊಂಡು ಪ್ರಾಪಂಚಿಕ ಸುಖವನ್ನು ತ್ಯಾಗಮಾಡುವವನಿಗೆ ಶರಣನೆನ್ನುವರು. (೬) ಷಡೂರ್ಮಿಗಳು ಯಾವನಲ್ಲಿಲ್ಲವೋ, ಅರಿಷಡ್ವರ್ಗಗಳು ಯಾರಿಂದ ಓಡಿಹೋಗಿರುವವೋ, ಅಷ್ಟವಿಧಪೂಜೆಯು ಯಾರಿಗಿಲ್ಲವೋ, ಭಾವರಹಿತವಾಗಿ ಯಾರಿರುವರೋ ಅಂಥವನಿಗೆ ಐಕ್ಯನೆನ್ನುವರು. ಈ ಷಟ್ಸ್ಥಲಗಳು ಅನುಕ್ರಮವಾಗಿ ಒಂದಕ್ಕಿಂತ ಒಂದು ಶ್ರೇಷ್ಠವಾಗಿರುವವು. ಷಟ್ಸ್ಥಲಜ್ಞಾನಿಗೆ ಮುಕ್ತಿಯು ನಿಶ್ಚಯವು. ಷಟ್ಸ್ಥಲಜ್ಞಾನಿಗಳು ಭಕ್ತಿ, ಕರ್ಮಕ್ಷಯ, ಬುದ್ಧಿ, ವಿಚಾರ, ದರ್ಪಸಂಕ್ಷಯ, ಕರ್ಮಜ್ಞಾನಗಳಿಗೆ ಷಟ್ಸ್ಥಲಗಳೆಂದು ಹೇಳಿರುವರು. ಶಿವಚಿಂತನಮಾಡುವವರು ಉತ್ತಮಕ್ರಿಯೆಯನ್ನು ಮಾಡಲು ಅವರಲ್ಲಿ ಭಕ್ತಿಯುಂಟಾಗುವದು. ಭಕ್ತಿಯಿಂದ ಕರ್ಮಕ್ಷಯವಾಗಿ ಬುದ್ಧಿಯು ನಿರ್ಮಲವಾಗುವದು. ನಿರ್ಮಲಬುದ್ಧಿಯಿಂದ ವಸ್ತುಗಳ ವಿಚಾರವುಂಟಾಗುವದು. ವಿಚಾರದಿಂದ ದರ್ಪಕ್ಷಯವಾಗುವದು, ಆ ಮೇಲೆ ಉತ್ತಮಜ್ಞಾನವುಂಟಾಗುವದು. ಜ್ಞಾನದಿಂದ ಕಡೆಗೆ ಮೋಕ್ಷವಾಗುವದು. ಸರ್ವಜ್ಞತಾ, ತೃಪ್ತಿ, ಅನಾದಿಬೋಧ, ಸ್ವತಂತ್ರತಾ, ನಿತ್ಯ, ಅಲುಪ್ತಶಕ್ತಿ, ಅನಂತಶಕ್ತಿ, ಹೀಗೆ ಷಡಂಗಗಳೆಂತಲೂ ಇವೇ ಷಟ್ಸ್ಥಲಗಳೆಂತಲೂ ವಿಧಿಜ್ಞರು ಹೇಳುತ್ತಾರೆ.

(೧) ವಿಭೂತಿಸ್ನಾನ, ತ್ರಿಪುಂಡ್ರಧಾರಣ, ರುದ್ರಾಕ್ಷಭೂಷಣ ಮೊದಲಾದ ಆಚಾರಕ್ಕೆ ಆಚಾರಲಿಂಗವೆಂದು ಹೆಸರು. (೨) ಷಡಕ್ಷರಿ ಮಂತ್ರವು ಆಜ್ಞಾಕಾರಕವಾಗಿರುವದರಿಂದ ಇದಕ್ಕೆ ಗುರುಲಿಂಗವೆನ್ನುವರು. (೩) ದೇಹದಲ್ಲಿ ಧರಿಸಿದ ಮತ್ತು ಕರಪೀಠದಲ್ಲಿಟ್ಟುಕೊಂಡ ಮತ್ತು ಮೂಲ ಮಂತ್ರದ ಅರ್ಥಕ್ಕೆ ವಿಷಯವಾದದ್ದು ಶಿವಲಿಂಗವು. (೪) ಅರ್ಚನಾ, ಅರ್ಪಣ, ಸದ್ಭಾವ, ಕ್ರಿಯಾ ಈ ಸ್ವರೂಪದ ಮತ್ತು ೩ ಸಾಧನಗಳಿಂದ ಯುಕ್ತವಾದದ್ದು ಚರಲಿಂಗವು. (೫) ಕ್ರಿಯಾಕಲಾದ ಪರಿಣಾಮದಲ್ಲಿ ಹೇಳಿದ ಫಲರೂಪವಾದ ವಸ್ತುವು ಯಾವದಿರುವದೋ ಅದಕ್ಕೆ ಪ್ರಸಾದಲಿಂಗವೆಂದು ಹೆಸರು. (೬) ಆದಾನ ಸೇವನದಿಂದ ನಿರಂತರ ತೃಪ್ತಿರೂಪವಾದ ಮತ್ತು ನಿರುಪಮ ಸುಖರೂಪವಾದದ್ದೇ ಮಹಾಲಿಂಗವು, ದೇಹವು ಅನಾತ್ಮವೂ ಆತ್ಮವು ದೇಹದಿಂದ ಬೇರೆಯಾದದ್ದೂ ಇದೆ. ತ್ರಿಗುಣಗಳನ್ನು ಬಿಡುವದೇ ತ್ರಿಪುಂಡ್ರ ಚಿನ್ಹವಾಗಿದೆ. ಸರ್ವೇಂದ್ರಿಯಗಳನ್ನು ಮನಸ್ಸಿನ ಕಡೆಗೆ ಮುಖಮಾಡಿ ಇಂದ್ರಿಯ ರೂಪ

ವಾದ ೧೪ ರುದ್ರಾಕ್ಷಿಗಳನ್ನು ಕ್ರಮವಾಗಿ ಧರಿಸಬೇಕು. ಕರಪೀಠವು ಸರ್ವೇಂದ್ರಿಯಗಳ ಸಮಾಧಿಯುಂಟಿರುವದು. ಯಾಕೆಂದರೆ ಕರವಲ್ಲಿಯ ಲಿಂಗ ಜಪಿಸುವಾಗ ಯಾವತ್ತು ಇಂದ್ರಿಯ ಮನಗಳನ್ನು ಶಿಳಿದು ಅಲ್ಲಿಯೇ ಚಿತ್ತವು ಸ್ಥಿರವಾಗಿ ನಿಲ್ಲುವದು. ಆದ್ದರಿಂದ ಲಿಂಗಪೂಜೆಯು ಇಂದ್ರಿಯಗಳನ್ನು ಗೆಲ್ಲುವದಕ್ಕೆ ಒಂದು ಬಲವಾದ ಸಾಧನವಾಗಿದೆ. ಭಕ್ತನೇ ಶಿವಾಶ್ರಯ ಮಾಡಿರಲು ಮಾಹೇಶ್ವರನಾಗುತ್ತಾನೆ. ಆಮೇಲೆ ಅವನೇ ಜ್ಞಾನಿಯ ಪ್ರಸಾದದಿಂದ ಪ್ರಸಾದಿಯಾಗುತ್ತಾನೆ. ಅವನೇ ಪ್ರಾಣವೇಲಿಂಗವೆಂಬ ಬುದ್ಧಿಯಿಂದ ಉಪಾಸನೆ ಮಾಡಹತ್ತಿದನೆಂದರೆ ಪ್ರಾಣಲಿಂಗಿಯೆನಿಸಿಕೊಳ್ಳುವನು. ಆ ಭಕ್ತನೇ ಪ್ರಾಣಾರ್ಪಣಕೌಶಲ್ಯದಿಂದ ಶರಣನಾಗುತ್ತಾನೆ. ಮತ್ತು ಅವನೇ ಐಕ್ಯನಾಗುತ್ತಾನೆ.

## ಸರ್ವಾಂಗಲಿಂಗ ಸಾಹಿತ್ಯ

ಆಕಾಶವು ಆಆ ಪದಾರ್ಥಗಳಲ್ಲಿದ್ದು ಆ ಆ ಪದಾರ್ಥಗಳ ರೂಪವನ್ನು ಹೇಗೆ ಧರಿಸುವದೋ ಹಾಗೆಯೇ ಪರಮಾತ್ಮವು ನಾನಾ ಪ್ರಾಣಿಗಳಲ್ಲಿದ್ದು ನಾನಾ ರೂಪಗಳುಳ್ಳದ್ದಾಗಿದೆ. ಸೂರ್ಯನು ಸರ್ವರ ದೃಷ್ಟಿಯೂದಾಗ್ಯೂ ಕಣ್ಣಿನಲ್ಲಿರುವ ದೋಷದಿಂದ ಹೇಗೆ ಲಿಪ್ತನಾಗುವದಿಲ್ಲವೋ ಹಾಗೆಯೇ ಸರ್ವಪ್ರಾಣಿಗಳ ಅಂತರ್ಯಾಮಿಯಾದ ಪರಮಾತ್ಮನು ದುಃಖದಿಂದ ಲಿಪ್ತನಾಗದಂತಿರುತ್ತಾನೆ. ಯಾವಧೀರನು ತನ್ನ ಆತ್ಮದಲ್ಲಿರುವ ಶಿವನನ್ನು ಅರಿತುಕೊಳ್ಳುವನೋ ಅನನೇ ಮುಕ್ತಿ ಹೊಂದುವನು. ವಿಶೇಷಾರ್ಥ ಪ್ರಕಾಶಿಕೆಯಲ್ಲಿ ಹೇಳಿರುವದೇನಂದರೆ, ಆತ್ಮವು ದೇಹವನ್ನು ನೋಡಬಲ್ಲದು ಆದರೆ ದೇಹವು ಆತ್ಮವನ್ನು ನೋಡಲಾರದು. ಇವೆರಡನ್ನೂ ಶಿವನು ನೋಡಬಲ್ಲನು. ಆದರೆ ಅವೆರಡು ಶಿವನನ್ನು ನೋಡಲಾರವು. ಯಾಕೆಂದರೆ ಆತ್ಮವು ಅವಿದ್ಯೆಯಿಂದ ಕೂಡಿರುವದರಿಂದ ಆತ್ಮವು ತನ್ನಲ್ಲಿರುವ ಶಿವನನ್ನು ನೋಡಲು ಶಕ್ತವಾಗುವದಿಲ್ಲ. ಪಂಚಬ್ರಹ್ಮರಿಂದ ಪಂಚಮಹಾಭೂತಗಳುಂಟಾದವು. ಈಶಾನ ಮುಖದಿಂದ ಆಕಾಶವೂ, ತತ್ಪುರುಷದಿಂದ ವಾಯುವೂ, ಅಘೋರದಿಂದ ಅಗ್ನಿಯೂ, ವಾಮದಿಂದ ಉದಕವೂ, ಸದ್ಯೋಜಾತದಿಂದ ಪೃಥ್ವಿಯೂ ಉಂಟಾಗಿವೆ. ಆದ್ದರಿಂದ ಜಗತ್ತು ಶಿವಮಯವಾಗಿದ್ದು ಸತ್ಯವಾಗಿದೆ. ಶಂಕರಾಚಾರ್ಯರು ರಚಿಸಿದ ಶಿವಭುಜಂಗ ಸ್ತೋತ್ರದಲ್ಲಿ ಹೇಳಿರುವದೇನಂದರೆ

ಶಿವ, ಈಶಾನ, ತತ್ಪುರುಷ, ಅಘೋರ, ವಾಮ, ಸದ್ಯೋಜಾತಗಳೇ ಬ್ರಹ್ಮಸ್ವರೂಪ ಯೋಗದಿಂದ ೬ ಮುಖಗಳಿಂದ ೬ ಅಂಗಗಳಿಂದ ಷಡ್ಬ್ರ ಹ್ಮಸ್ವರೂಪ ಮತ್ತು ಷಡಂಗ ಸ್ವರೂಪಗಳಾಗಿವೆ. ದೇಹದಲ್ಲಿ ಲಿಂಗ ವನ್ನೂ ಲಿಂಗದಲ್ಲಿ ಅಂಗವನ್ನೂ ಯಾವನು ನಿಯೋಜಿಸುತ್ತಾನೋ ಅವನೇ ಲಿಂಗಾಂಗಿಯು. ತೇಜೋರೂಪನಾದ ಪರಮಾತ್ಮನಲ್ಲಿ ಮನ ಸ್ಸನ್ನು ತನ್ಮಯ ಮಾಡುವವನೇ ಪ್ರಾಣಲಿಂಗಿಯು. ಶಿವರಹಸ್ಯದಲ್ಲಿ ಚತುರ್ದಲಕಮಲಕ್ಕೆ ಆಧಾರ ಚಕ್ರವೆಂದು ಹೆಸರಿದ್ದು ವಕಾರದಿಂದ ಸಕಾರದ ವರೆಗೆ ಬೀಜಾಕ್ಷರದಿಂದ ಕೂಡಿದೆ, ಕರ್ಣಿಕೆಯಲ್ಲಿ ನಕಾರ ಬೀಜಾಕ್ಷರವಿದ್ದು ಕ್ರಿಯಾ ಶಕ್ತ್ಯಾತ್ಮಕವಾಗಿಯೂ ಕೆಂಪುವರ್ಣದ್ದಾ ಗಿಯೂ ಇದೆ. ಸ್ವಾಧಿಷ್ಠಾನದಲ್ಲಿರುವ ಆರು ದಲಕಮಲವು ಬಕಾರ ದಿಂದ ಲಕಾರದ ವರೆಗೆ ಕೂಡಿದ್ದಾಗಿದೆ. ಮಕಾರವು ಕರ್ಣಿಕೆಯಲ್ಲಿದ್ದು ಇಚ್ಛಾಶಕ್ತ್ಯಾತ್ಮಕವಾಗಿ ಮಿಂಚಿನಂತೆ ಹೊಳೆಯುವದು. ಮಣಿಪೂರ ಕವು ರತ್ನದಂತೆ ತೇಜಸ್ವಿ ಇದ್ದು ಜ್ಞಾನಶಕ್ತಿಯಿಂದ ಕೂಡಿದೆ ಮತ್ತು ಡಕಾರದಿಂದ ಪಕಾರದವರೆಗೆ ಬೀಜಾಕ್ಷರದಿಂದ ಕೂಡಿದ್ದು ೧೦ ದಳ ವಾಗಿರುವದು. ಇದರ ಕರ್ಣಿಕೆಯಲ್ಲಿ ಶಿಕಾರ ಬೀಜಾಕ್ಷರವಿದೆ. ವಿಶು ದ್ಧಿಚಕ್ರವು ಪರಾಶಕ್ತ್ಯಾತ್ಮಕವಿದ್ದು ಜ್ಯೋತಿರ್ವರ್ಣವಾಗಿದೆ. ಇದು ೧೭ ದಳ (ಪಟಲ) ಗಳುಳ್ಳದ್ದಾಗಿದೆ. ಈ ಚಕ್ರದಲ್ಲಿ ಅಕಾರಾದಿ ೧೬ ಬೀಜಾ ಕ್ಷರಗಳಿದ್ದು ಇದರ ಕರ್ಣಿಕೆಯಲ್ಲಿ ಯಕಾರವಿದೆ. ಚಿಚ್ಛಕ್ತ್ಯಾತ್ಮಕ ಜ್ಞೇಯ ಚಕ್ರವು ೨ ದಳವುಳ್ಳದ್ದಾಗಿ ಹಂಸಬೀಜಾಕ್ಷರಗಳಿಂದ ಯುಕ್ತವಾಗಿದೆ. ಇದರ ಕರ್ಣಿಕೆಯಲ್ಲಿ ಪ್ರಣವವಿದ್ದು ಇದರ ಕಾಂತಿಯು ಮಿಂಚಿನಂತಿ ರುವದು. ಈ ಆರು ವಿಧವಾದ ಚಕ್ರಗಳಲ್ಲಿ ಯೋಗಿಗಳು ಪ್ರಾಣಲಿಂಗ ವನ್ನು ಪೂಜಿಸುತ್ತಾರೆ. ಸಿದ್ಧಾಂತ ಶಿಖಾಮಣಿಯ ಶಿವಯೋಗ ಸಮಾಧಿ ಸ್ಥಲದಲ್ಲಿ ಹೇಳಿರುವದೇನಂದರೆ- ಮೂಲದಿಂದ ಭ್ರೂಮಧ್ಯದವರೆಗೆ ಬ್ರಹ್ಮಾದಿಸ್ಥಾನಗಳಾಗುತ್ತವೆ. ಭ್ರೂಮಧ್ಯದ ಮೇಲ್ಭಾಗದಲ್ಲಿ ಸಾವಿರದಳ ಕಮಲವಿರುವದು. ಅದರ ಮಧ್ಯ ಭಾಗದಲ್ಲಿ ನಿರ್ಮಲ ಚಂದ್ರಬಿಂಬದ ಭಾವನೆಯನ್ನು ಮಾಡಬೇಕು. ಅದರಲ್ಲಿಯ ಸೂಕ್ಷ್ಮರಂಧ್ರವೇ ಕೈಲಾಸ ಪದವೆಂದು ಜ್ಞಾನಿಗಳು ಹೇಳುತ್ತಾರೆ. ಆ ಸ್ಥಾನದಲ್ಲಿ ಸರ್ವ ಕಾರಣಗಳಿಗೆ ಕರ್ತೃವಾದ ಈಶ್ವರನ ಭಾವನೆ ಮಾಡಬೇಕು. ಷಟ್ಚಕ್ರದ ಮೇಲ್ಭಾಗ ದಲ್ಲಿರುವ ಬ್ರಹ್ಮರಂಧ್ರದಲ್ಲಿ ಪರಮಹಂಸ ಸ್ವರೂಪವಾದ ಸದಾಶಿವಲಿಂ

ಗದ ಉಪಾಸನೆ ಮಾಡಬೇಕು. ಭ್ರೂಮಧ್ಯವಾದ ಅವಿಮುಕ್ತಸ್ಥಾನವು ಆತ್ಮಪರಮಾತ್ಮರ ಸ್ಥಾನವಾಗಿದೆ. ಅಲ್ಲಿಯೇ ಅದರ ಉಪಾಸನೆ ಮಾಡಬೇಕು.

ಕೈವಲ್ಯೋಪನಿಷತ್ತಿನಲ್ಲಿ " ಅಣೋರಣೀಯಾನಹಮೇವಸತ್ಯಂ ಮಹಾನಹಂ ವಿಶ್ವಮಿದಂ ಪುರಾಣಂ । ಪುರಾತನೋಽಹಂ ಪುರುಷೋ ಹಮಿಶೋ ಹಿರಣ್ಮಯೋಽಹಂ ಶಿವರೂಪಮಸ್ಮಿ ॥ " ಹಿರಣ್ಮಯನೂ ಪುರಾತನ ಪುರುಷನೂ ಇರುವೆನೆಂದು ಶಿವನು ಹೇಳಿದ್ದಾನೆ. ತಲವಕಾರೋಪನಿಷತ್ತಿನಲ್ಲಿ, ಸೂರ್ಯಚಂದ್ರರು ಶಿವನ ಚೈತನ್ಯದಿಂದಲೇ ಪ್ರಕಾಶಿಸುತ್ತಾರೆ. ಪ್ರಾಣವು ಅವನಿಂದಲೇ ಪ್ರೇರಿತವಾಗಿದೆ. ಸರ್ವೇಂದ್ರಿಯಗಳು ಅವನ ಶಕ್ತಿಯಿಂದಲೇ ಜಾಗ್ರತವಾಗಿರುವವು ಎಂದು ಹೇಳಿದೆ. ಷಡಿಂದ್ರಿಯಾಂತಃಕರಣಗಳಲ್ಲಿ ಸಾಕ್ಷೀಭೂತವಾಗಿರುವ ಚೈತನ್ಯವೇ ಆ ಸ್ಥಳಗಳಲ್ಲಿ ಷಡ್ವಿಧ ಲಿಂಗದಿಂದ ವ್ಯಕ್ತವಾಗಿರುವದೆಂಬದು ಸಿದ್ಧವಾಗುತ್ತದೆ. ಸರ್ವ ಜಗತ್ತಿಗೆ ಸರ್ವಾಂತರ್ಯಾಮಿಯಾದ ಈಶ್ವರನೇ ಸಾಕ್ಷಿಯಾಗಿದ್ದಾನೆ. ಜಗತ್ತಿನಲ್ಲಿ ಈಶ್ವರನಿರದಿದ್ದರೆ ಚರಾಚರಾತ್ಮಕವಾದ ಈ ಜಗತ್ತು ನಡೆಯಲಾರದು. ಜಡವಸ್ತುವಿಗೆ ಮಾತ್ರವೇ ಹುಟ್ಟುವಿಕೆಯಿರುವದರಿಂದ ಕೊಡ ಮೊದಲಾದ ವಸ್ತುಗಳನ್ನು ತಯಾರಿಸಲು ಕುಂಬಾರನು ಬೇಕಾಗಿರುವಂತೆ ಜಡದೇಹಗಳಲ್ಲಿ ಜೀವವನ್ನು ತುಂಬುವದಕ್ಕೆ ಈಶ್ವರನು ಬೇಕು. ಜಗತ್ತಿನಲ್ಲಿ ಈಶ್ವರನಿಲ್ಲದಿದ್ದರೆ ಯಾರು ಜೀವಿಸಬಲ್ಲರು ? ದುಃಖಿಯಾದ ಜೀವಕ್ಕೆ ಈಶ್ವರನು ತನ್ನ ಕೃಪಾಬಲದಿಂದ ಆನಂದವನ್ನುಂಟು ಮಾಡುವನು. ಜಗತ್ತೇ ಅವನ ದೇಹವು. ಸರ್ವ ವಸ್ತುಗಳಲ್ಲಿ ಈಶ್ವರೀ ಪ್ರತಿಷ್ಠೆಯು ಪ್ರತಿಷ್ಠಿತವಾಗಿದೆ. ಮೂಗಿನಲ್ಲಿ ಆಚಾರಲಿಂಗವಿದೆಯೆಂದೂ ನಾಲಿಗೆಯಲ್ಲಿ ಗುರುಲಿಂಗವೂ, ಕಣ್ಣಿನಲ್ಲಿ ಶಿವಲಿಂಗವೂ, ಚರ್ಮದಲ್ಲಿ ಜರಲಿಂಗವೂ, ಕಿವಿಯಲ್ಲಿ ಪ್ರಸಾದಲಿಂಗವೂ, ಹೃದಯದಲ್ಲಿ ಮಹಾಲಿಂಗವಿರುವದೆಂದೂ ಪುರಾತನರ ವಚನವುಂಟು. ಹೀಗೆ ಇಂದ್ರಿಯಗಳೆಲ್ಲವು ಲಿಂಗಗಳಿಂದ ಕೂಡಿರುವದರಿಂದ ಅವುಗಳಿಂದ ದುಷ್ಪ್ರವೃತ್ತಿಯುಂಟಾಗುವದಿಲ್ಲ. ತಾನು ಲಿಂಗದೇಹಿಯೆಂದು ವೀರಶೈವನು ಸದಾ ನಿರ್ಮಲ ಮನಸ್ಸಿನವನಾಗಿರುವನು. ಅವನು ಪಾಪಕ್ಕೆ ಹೆದರುವನು ಇದೇ ಷಟ್‌ಸ್ಥಲ ಬ್ರಹ್ಮವಿದ್ಯೆಯು. ಪರಮಾತ್ಮನ ಮಾಯೋಪಾಧಿಯಿಂದ ದೇಹಧಾರಿಯಾಗಿ ಸ್ತ್ರೀಭೋಗ, ಅನ್ನಪಾನ ಮೊದಲಾದ ಭೋಗಗಳನ್ನ

ಜಾಗ್ರದವಸ್ಥೆಯಲ್ಲಿ ಅನುಭವಿಸುವನು. ಸ್ವಪ್ನ ಸುಷುಪ್ತಿಯಲ್ಲಿಯೂ ಹೀಗೆಯೇ ಅನುಭೋಗವನ್ನು ತೆಗೆದು ಕೊಳ್ಳುವನು. ಈ ಮೂರು ಅವಸ್ಥೆಗಳುಳ್ಳ ಜಗತ್ತೇ ಪರಬ್ರಹ್ಮವಾದ ನಾನೇ ಎಂದು ತಿಳಿಯುವ ಮಾನವನು ಸರ್ವಬಂಧನಗಳಿಂದ ಮುಕ್ತನಾಗುತ್ತಾನೆ. ಶಿವನ ಪ್ರಕಾಶದಿಂದ ಉಳಿದ ವಸ್ತುಗಳು ಪ್ರಕಾಶಿಸುತ್ತವೆ. ಆಕಾಶಕ್ಕೆ ಹೇಗೆ ಆಧಾರ ವಿಲ್ಲವೋ ಹಾಗೆ ಶಿವನಿಗೆ ಆಧಾರವಿಲ್ಲ. ಆತನು ಕಾರಣರಹಿತನೂ, ಅನಾದ್ಯನಂತನೂ ಇದ್ದಾನೆ. ನಾದಬಿಂದೋಪನಿಷತ್ತಿನಲ್ಲಿ—"ಏವಂಸರ್ವಾಣಿಭೂತಾನಿ ಮಣಿಸೂತ್ರೇ ಇವಾತ್ಮನಿ। ತಿಲಾನಾಂತುಯಥಾತೈಲಂ ಪುಷ್ಪೇಗಂಧಮಿವಾಶ್ರಿತಂ॥ ಪುರುಷಸ್ಯ ಶರೀರೇತುಸಹಿಬಾಹ್ಯಾಭ್ಯಂತರೆ ಸ್ಥಿತಂ॥ ಕಟ್ಟಿಗೆಯಲ್ಲಿರುವ ಅಗ್ನಿಯು ಮಥನಮಾಡದ ಹೊರತು ಉತ್ಪನ್ನವಾಗದಂತೆ ಹೃದಯದಲ್ಲಿರುವ ಪರಮಾತ್ಮನು ಚಿಂತನೆಯ ಹೊರತು ಸಾಕ್ಷಾತ್ಕಾರವಾಗನು." ಎಂದು ಹೇಳಿದೆ. ವಸ್ತುವಿನಿಂದ ಭಾವವೂ, ಭಾವದಿಂದ ಜ್ಞಾನವೂ, ಜ್ಞಾನದಿಂದ ಮನವೂ, ಮನದಿಂದ ಅಹಂಕಾರವೂ, ಅಹಂಕಾರದಿಂದ ಬುದ್ಧಿಯೂ, ಬುದ್ಧಿಯಿಂದ ಚಿತ್ತವೂ, ಹುಟ್ಟುವವು. ವಸ್ತುವಿನ ಸತ್ತಾಗುಣಕ್ಕೆ ಭಾವವೆನ್ನುವರು. ಜ್ಞಾನವು ಅದನ್ನು ನಿಶ್ಚಯದಲ್ಲಿ ತಿಳಿಯುತ್ತದೆ. ಮನಸ್ಸು ಅದನ್ನು ಮನ್ನಿಸುತ್ತದೆ. ಅದೇ ನಾನು ಎನ್ನುವದರಿಂದ ಅದಕ್ಕೆ ಅಹಂಕಾರವೆನ್ನುವರು. ಬುದ್ಧಿಯು ಅದನ್ನು ನಿಶ್ಚಿತ ಮಾಡುವದು. ಚಿತ್ತವು ಸ್ಥಿರಗುಣದಿಂದ ಆ ವಸ್ತುವನ್ನು ಧಾರಣ ಮಾಡುತ್ತದೆ.

## ಲಿಂಗಾರ್ಪಣ ಸದ್ಭಾವನಿರೂಪಣ.

ಇಂದ್ರಿಯ ಸುಖವನ್ನೂ, ದೇಹವನ್ನೂ ಶಿವಾರ್ಪಿತ ಮಾಡಲು ಆವನು ಶಿವರೂಪಿಯಾಗುವನು. ಇಂದ್ರಿಯಗಳಲ್ಲೆಲ್ಲ ಮನಸ್ಸು ಮುಖ್ಯವು. ಅದನ್ನು ವಶಮಾಡಿಕೊಂಡರೆ ಶಿವನೂ ವಶವಾಗುತ್ತಾನೆ. ( ಇಂದ್ರಿಯಾಣಾಂ ವಶೀಕಾರೊ ನಿವೃತ್ತಿರಿತಿ ಗೀಯತೆ ) ಮನಸ್ಸು ವಶವಾದರೆ ಅದರ ಅನುವರ್ತಿಗಳಾದ ಉಳಿದ ಇಂದ್ರಿಯಗಳು ತಾವೇ ವಶವಾಗುವವು. ಅಹಂಕಾರ ಮದದಿಂದ ಕೊಬ್ಬಿದ ಅಂತಃಕರಣರೂಪವಾದ ಆನೆಯನ್ನು ಶಿವಾಲಯವೆಂಬ ಬಂಧುರವಾದ ದೇಹದಲ್ಲಿ ಕಟ್ಟಿಹಾಕಿರಲು ಆ ಧೀರನು ಸರ್ವಸಿದ್ಧಿಯನ್ನು ಹೊಂದುವನು. ಇಂದ್ರಿಯಗಳಿಂದ

ಪುಣ್ಯ ಪಾಪಗಳು ಘಟಿಸುವವು. ಇಂದ್ರಿಯುಗಳನ್ನೇ ಶಿವನಿಗೆ ಅರ್ಪಿಸಿದರೆ ಕರ್ಮಬಂಧನವೆಲ್ಲಿಂದುಂಟಾಗುವದು? ಭೋಕ್ತೃಸ್ವರೂಪನೂ ಭೋಗ್ಯಸ್ವರೂಪನೂ ಆದ ಶಿವನು ನಾನೇ ಎಂಬ ಭಾವನೆಯಿಂದ ವಿಷಯುಗಳನ್ನು ಉಪಭೋಗಿಸುವವನು ವಿಷಯುಗಳಿಂದ ಲಿಪ್ತನಾಗುವದಿಲ್ಲ.

**ಪ್ರಸಾದಸದ್ಭಾವಃ**—ಜೀವಕ್ಕೆ ಶಿವಾರ್ಪಿತ ಪದಾರ್ಥವೇ ಪ್ರಸಾದವಿದ್ದು ತಾದಾತ್ಮ್ಯವೇ ಸಮರ್ಪಣವಾಗುವದು. ಪ್ರಸಾದವು ಸಾಕ್ಷಾತ್ ಈಶ್ವರನಿದ್ದು ಸಚ್ಚಿದಾನಂದ ಲಕ್ಷಣವುಳ್ಳದ್ದಾಗಿದೆ. ಜ್ಞಾನಕ್ರಿಯೆಗಳ ಐಕ್ಯವಾದಾಗ ಈಶ್ವರೀ ಭಕ್ತಿಯು ಉತ್ಪನ್ನವಾಗುತ್ತದೆ.

**ವೀರಶೈವ ಮಹಾತ್ಮ್ಯಃ**—ಇಷ್ಟಲಿಂಗದ ಪ್ರಸಾದ ತೆಗೆದುಕೊಳ್ಳುವವನು ಚಂಡಾಲನಾದಾಗ್ಯೂ ಅವನ ಸಹ ಭೋಜನ ಮಾಡಬಹುದು. ಶಿವಸಂಸ್ಕಾರ ಹೊಂದಿದ ಮೇಲೆ ಅವನ ಹಿಂದಿನ ಜಾತಿಯು ಉಳಿಯುವದಿಲ್ಲ. ಗಾರುಡ ಪುರಾಣದಲ್ಲಿ—"ವಂಶಾವಲಿ ಪ್ರಯೂತಾನಾಂ ಲಿಂಗಧಾರಣ ಶಾಲಿನಾಂ। ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವಂ ನೈವವಿದ್ಯತೆ॥ ಅಂದರೆ ಶಿವಭಕ್ತರಿಗೆ ಶೂದ್ರತ್ವವಿಲ್ಲವೆಂದು ಹೇಳಿದೆ. ಸಾಮವೇದದಲ್ಲಿ ಇಂದ್ರನು ಶೂದ್ರನೆಂತಲೂ, ಬ್ರಹ್ಮನು ವೈಶ್ಯನೆಂತಲೂ, ಹರಿಯು ಕ್ಷತ್ರಿಯನೆಂತಲೂ, ರುದ್ರನು ಬ್ರಾಹ್ಮಣನೆಂತಲೂ ಹೇಳಿದೆ. ಸ್ಕಂದಪುರಾಣದಲ್ಲಿ—"ಚತುರ್ವೇದ ಧರೋವಿಪ್ರಃ ಶಿವಭಕ್ತಿ ವಿವರ್ಜಿತಃ। ವೇದಭಾರಭರಾಕ್ರಾಂತಃ ಸವೈಬ್ರಾಹ್ಮಣ ಗಾರ್ದಭಃ॥ ನಾಲ್ಕು ವೇದಗಳನ್ನೋದಿದ ವಿಪ್ರನು ಶಿವಭಕ್ತಿಹೀನನಾಗಿದ್ದರೆ ವೇದಗಳ ಭಾರವನ್ನು ಹೊತ್ತುಕೊಂಡ ಬ್ರಾಹ್ಮಣ ಗರ್ದಭನಾಗಿರುವನು." ಎಂದು ಹೇಳಿದೆ.

**ಸತ್ಪಾತ್ರದಾನಃ**—ದಾನಗಳಲ್ಲಿ ನಿತ್ಯ, ನೈಮಿತ್ತಿಕ, ಕಾಮ್ಯ, ವಿಮಲಗಳೆಂದು ನಾಲ್ಕು ಪ್ರಕಾರಗಳುಂಟು. ಪ್ರತ್ಯುಪಕಾರವನ್ನು ನಿರೀಕ್ಷಿಸದೆ ಮಾಡುವ ದಾನಕ್ಕೆ ನಿತ್ಯದಾನವೆಂತಲೂ, ಉಪಶಾಂತಿಗೋಸ್ಕರ ಮಾಡುವ ದಾನಕ್ಕೆ ನೈಮಿತ್ತಿಕವೆಂತಲೂ, ಮಕ್ಕಳು, ಐಶ್ವರ್ಯ ಮೊದಲಾದ ಸ್ವಾರ್ಥಸಾಧನೆಗೆ ಮಾಡುವ ದಾನಕ್ಕೆ ಕಾಮ್ಯವೆಂತಲೂ, ಕೇವಲ ಶಿವಪ್ರೀತ್ಯರ್ಥ ಬ್ರಹ್ಮವೇತ್ತರಿಗೆ ಕೊಡುವ ದಾನಕ್ಕೆ ವಿಮಲವೆಂತಲೂ ಹೆಸರು. ಈ ದಾನವೇ ಶ್ರೇಷ್ಠವಾದದ್ದು. ಸತ್ಪಾತ್ರದಲ್ಲಿ ದಾನವಾಡಬೇಕಲ್ಲದೆ ಸೋಮಾರಿಗಳಿಗೆ ದಾನಮಾಡಬಾರದು.

**ವೀರಮಾಹೇಶ್ವರ ದಾನಪೂಜಾಫಲ**:—ಕನ್ಯಾ, ಗೋ, ಭೂಮಿ, ವಿದ್ಯಾದಾನಗಳು ಶ್ರೇಷ್ಠವಾಗಿವೆ

**ವೀರ ಮಾಹೇಶ್ವರ ಅಂತ್ಯವಿಧಿ**:—ವೀರಶೈವರಿಗೆ ಪ್ರೇತ ದಹನ ಕ್ರಿಯೆಯು ನಿಷಿದ್ಧವಿರುವದರಿಂದ ಸಮಾಧಿಕ್ರಿಯ ಮಾಡುವದು ಉಚಿತವು. ಲಿಂಗಾಂಗಿ, ಯತಿ, ಧ್ಯಾನಯೋಗಿ ಇವರ ಪ್ರಾಣ ಹೋದ ಮೇಲೆ ಅವರ ಶರೀರಗಳನ್ನು ಬುದ್ಧಿವಂತರು ಸಮಾಧಿಯಲ್ಲಿಡಬೇಕು. ಇವರ ಶ್ರಾದ್ಧ, ದಿನ ಕರ್ಮಗಳನ್ನು ಮಾಡಬಾರದು. ಪಿಂಡದಾನ ಮಾಡಬಾರದು. ಸೂತಕ ಹೆಚ್ಚಿಕೊಳ್ಳಬಾರದು. ಅವರು ತೀರಿಹೋದರೆಂದು ದುಃಖ ಪಡಬಾರದು.

**ಮರಣಾಂತರ ಸ್ಥಿತಿ ( Eschatalagy )**:—ಶಿವಸ್ವರೂಪವನ್ನು ಹೊಂದುವದೇ ಮುಕ್ತಿಯು. ಲಿಂಗರೂಪವಾದ ಶಿವನ ಮತ್ತು ಅಂಗ ರೂಪವಾದ ಜೀವನ ಸಂಯೋಗವೇ ಲಿಂಗಾಂಗ ಸಾಮರಸ್ಯವೆನಿಸುವದು. ಈ ಸಂಯೋಗವೇ ಸಾಯುಜ್ಯ ಮುಕ್ತಿಯು. ವೀರಶೈವರಿಗೆ ಒಂದೇ ಜನ್ಮದಲ್ಲಿ ಮುಕ್ತಿಯೂ, ಉಳಿದ ಶೈವರಿಗೆ ಮೂರು ಜನ್ಮದಲ್ಲಿ ಮುಕ್ತಿಯೂ ಉಂಟಾಗುವದು. ಲಿಂಗಾಂಗ ಸಾಮರಸ್ಯದ ಯೋಗದಿಂದ ಶಿವಭಕ್ತರಿಗೆ ಶಿವನ ಸಾಕ್ಷಾತ್ಕಾರವಾಗಿ ಸಂಸಾರ ಪಾಶದ ನಿವೃತ್ತಿಯಾಗುವದು. ಆ ಮೇಲೆ ಅವನಿಗೆ ಪುನರ್ಜನ್ಮ ವುಂಟಾಗದು. ಕ್ರಿಸ್ತರ ನಂಬಿಗೆ ಯೇನಂದರೆ ಕ್ರೈಸ್ತಾನುಯಾಯಿಯು ಮರಣದ ತರುವಾಯ ಪ್ರಲಯ ಕಾಲದವರೆಗೆ ಮೋಕ್ಷದ ದಾರಿಯನ್ನು ನೋಡುತ್ತ ಕೂಡ್ರಬೇಕೆಂಬುವದು. ಆದರೆ ವೀರಶೈವನ ನಂಬಿಗೆ ಹಾಗಲ್ಲ. ಆತನಿಗೆ ಮರಣಾಂತ್ಯದಲ್ಲಿಯೇ ಶಿವನಲ್ಲಿ ಐಕ್ಯವುಂಟಾಗುವದು, ಸಾರೂಪ್ಯ, ಸಾಯುಜ್ಯಮುಕ್ತಿಯು ಲಭಿಸುವದು. ಜೀವಿತಕಾಲದಲ್ಲಿ ಶಿವಜ್ಞಾನವಾದ ಮೇಲೆ ಸಂಸಾರ ಬಂಧನಗಳು ಸಡಿಲುವವು. ಅವಿದ್ಯಾ, ರಾಗ, ದ್ವೇಷಗಳು ಕ್ಷೀಣವಾಗುವವು. ಆ ಮೇಲೆ ಜೀವನ್ಮುಕ್ತಿಯುಂಟಾಗುವದು. ಆತನು ನಿಮಿತ್ಯಮಾತ್ರಕ್ಕಾಗಿ ದೇಹಧಾರಿಯಾಗಿರುವನು. ಸಾಲೋಕ್ಯ ಮುಕ್ತಿಯೆಂದರೆ ಸ್ವರ್ಗದಲ್ಲಿ ಸುಖವನ್ನನುಭವಿಸಿ ಪುಣ್ಯ ತೀರಿದ ಮೇಲೆ ಪುನಃ ಭೂಮಿಗೆ ಬರುವದು. ಇದು ವೀರಶೈವರಿಗೆ ಸಂಬಂಧವಿಲ್ಲ. ಲಿಂಗಾಂಗಿಯು ಧೀರನೂ, ಕಾಲಜ್ಞಾನಿಯೂ ಇರುವನು. ಲಿಂಗ ಹೋದಾಗ ಪ್ರಾಣ ಬಿಡುವ ಉಪಾಯಗಳು ಮೂರು ಇರುತ್ತವೆ. ಭೂಮಿ, ನೀರುಗಳಲ್ಲಿ

ಮುಳುಗಿ ಪ್ರಾಣ ಬಿಡುವದು ಒಂದನೇದು ಅಗ್ನಿವಾಯುಗಳಲ್ಲಿ ಬೆರೆತು ಕೊಂಡು ಪ್ರಾಣಬಿಡುವದು ಎರಡನೆಯದು. ಆದರ್ಶನವು ಮೂರನೆ ಯದು. ಆದರ್ಶನವೆಂದರೆ ಆತ್ಮವನ್ನು ಶಿವಯೋಗಬಲದಿಂದ ದೇಹ ದಿಂದ ಬೇರೆ ಮಾಡುವದೆಂದರ್ಥವು. ಇದೇ ಶ್ರೇಷ್ಠವಾದ ಮಾರ್ಗವು. ಲಿಂಗಹೋದರೆ ಪ್ರಾಣಹತ್ಯ ಮಾಡಿಕೊಳ್ಳಬಾರದೆಂದು ಕೆಲವು ಗ್ರಂಥ ಗಳೂ ಚನ್ನಬಸವ ಮೊದಲಾದ ವಚನಕಾರರೂ ಹೇಳುತ್ತಾರೆ. ಭಕ್ತಾಂಗ ಸ್ಥಲದಲ್ಲಿರುವ ಪೃಥ್ವಿ ಲಕ್ಷಣಾತ್ಮಕ ಆಚಾರಲಿಂಗಕ್ಕೆ ಕ್ಷೇತ್ರ ವೆನ್ನುವರು, ಮಹೇಶ್ವರನ ಅಂಗದಲ್ಲಿರುವ ಉದಕಲಕ್ಷಣಾತ್ಮಕ ಗುರು ಲಿಂಗಕ್ಕೆ ತೀರ್ಥವೆನ್ನುವರು, ಪ್ರಸಾದಿಯ ಅಂಗದಲ್ಲಿರುವ ಅಗ್ನಿ ಲಕ್ಷಣಾ ತ್ಮಕ ಶಿವಲಿಂಗಕ್ಕೆ ಹೋಮವೆನ್ನುವರು, ಪ್ರಾಣಲಿಂಗಿಯ ಅಂಗದಲ್ಲಿರುವ ವಾಯು ಲಕ್ಷಣಾತ್ಮಕವಾದ ಚರಲಿಂಗಕ್ಕೆ ಜಪವೆನ್ನುವರು. ಶರಣನ ಅಂಗದಲ್ಲಿರುವ ಆಕಾಶ ಲಕ್ಷಣಾತ್ಮಕವಾದ ಪ್ರಸಾದ ಲಿಂಗಕ್ಕೆ ಧ್ಯಾನ ವೆನ್ನುವರು. ಐಕ್ಯನ ಅಂಗದಲ್ಲಿರುವ ಜೀವಲಕ್ಷಣಾತ್ಮಕವಾದ ಮಹಾ ಲಿಂಗಕ್ಕೆ ಸಮಾಧಿಯನ್ನುವರು. ಪ್ರಾರಬ್ಧಕರ್ಮವು ಪರಿಪಕ್ವವಾಗುವ ವರೆಗೆ ಜೀವಿಸಿದ್ದು ಆ ಮೇಲೆ ಪಕ್ವವಾದ ಫಲವು ತಾನಾಗಿಯೇ ಉದುರು ವಂತೆ ದೇಹವನ್ನು ತ್ಯಜಿಸಿದವನು ಶಿವನೇ ಆಗುವನು. ಶಿವದ್ರೋಹಿ ಯನ್ನು ಕೊಲ್ಲುವದು ಹಿಂಸೆಯಲ್ಲ, ಲಿಂಗಹೋದಾಗ ಪ್ರಾಣ ತೊರೆ ಯುವದು ಆತ್ಮಘಾತಕವಲ್ಲ.

ಶ್ರೀ ನಂಜಣಾಚಾರ್ಯರು ಪ್ರತಿಪಾದಿಸಿದ ವಿಷಯದ ಮೇಲಿಂದ ವೀರ ಶೈವ ಧರ್ಮವು ವೇದೋಪನಿಷತ್ತುಗಳ ಸಾರವೆಂಬದು ಬೋಧವಾಗು ತ್ತದೆ. ವೀರಶೈವ ಧರ್ಮದಲ್ಲಿಯೂ, ಸಿದ್ಧಾಂತದಲ್ಲಿಯೂ ಅಮೌಲ್ಯ ವಾದ ತತ್ವಗಳಿದ್ದು ಜ್ಞಾನಿಯಾದ ಪರಧರ್ಮಿಯೂ ಸಹ ಅಗಾಧ ಪಡದೆ ಇರನು. ಉಳಿದ ಪೌರ್ವಾತ್ಯ ಗ್ರಂಥಕಾರರಂತೆಯೇ ನಮ್ಮ ಧರ್ಮಗ್ರಂಥ ಕಾರರಾದರೂ ಧಾರ್ಮಿಕ ವಿಷಯದಲ್ಲಿ ತತ್ವಸಿದ್ಧಾಂತವನ್ನು ಬೆರಸಿರು ವರು. ಓದುವವರಿಗೆ ತತ್ವಸಿದ್ಧಾಂತವು ಒಂದು ಕಡೆಯಲ್ಲಿ ಶಾಸ್ತ್ರರೀತಿ ಯಿಂದ ಸಿದ್ಧಗೊಳಿಸಿದ್ದು ಸಿಗಲಾರದಾಗಿದೆ. ವೀರಶೈವ ಧರ್ಮದಲ್ಲಿ ಅಡ ಕವಾಗಿರುವ ತತ್ವಸಿದ್ಧಾಂತ, ನೀತಿ, ಮಾನಸಶಾಸ್ತ್ರ ಮೊದಲಾದ ತತ್ವಾಂಗಗಳನ್ನು ವಿಂಗಡಿಸಿ ಪೌರ್ವಾತ್ಯ ಮತ್ತು ಪಾಶ್ಚಾತ್ಯ ತತ್ವಸಿದ್ಧಾಂ ತಗಳೊಡನೆ ಹೋಲಿಸಿ ಬರೆಯತಕ್ಕ ಕಾರ್ಯವು ಅವಶ್ಯವಾಗಿರುವದು.

---

# ಬಸವನು ವೇದಬಾಹಿರನೇ?

ಲೇಖಕ:— ವ್ಹಿ. ಬಿ. ಜಿಳೇ ಅಂಗಡಿ ಬಿ. ಎ. ಎಲ್. ಎಲ್. ಬಿ.
ವಕೀಲ ಹುಬ್ಬಳ್ಳಿ

ಭರತ ಖಂಡದಲ್ಲಿ ನೆಲೆಗೊಂಡ ಧರ್ಮಗಳಲ್ಲಿ ಆರ್ಯ ಧರ್ಮವೇ ಮುಖ್ಯವಾದುದು. ಇದಕ್ಕೆ ವೇದಗಳೇ ತಳಹದಿಯು. ಇವುಗಳಲ್ಲಿ ಉಪ ನಿಷತ್ತುಗಳು ಆಗಮಗಳು ಅಂತರ್ಭಾವವಾಗುವವು. ಇವುಗಳಿಗೆ ಶೃತಿ ಗಳೆಂದೂ ಪರ್ಯಾಯನಾಮವುಂಟು. ಶೃತಿ ಸ್ಮೃತಿಪುರಾಣೇತಿಹಾಸಗ ಳಲ್ಲಿ ಆರ್ಯಧರ್ಮವು ವಿಸ್ತರಿಸಲ್ಪಟ್ಟಿದೆ. ಹೀಗೆ ಪ್ರತಿಪಾದಿತವಾದ ಧರ್ಮವೇಸನಾತನ ಧರ್ಮವಾಗಿರುವದು. ದೇಶೀಯರಾಗಲಿ ವಿದೇಶೀಯ ರಾಗಲಿ ಹಿಂದುಸ್ಥಾನದಲ್ಲಿಯ ಯಾವದೊಂದು ಧರ್ಮವು ಹೊಸದೋ ಹಳೆಯದೋ ಎಂಬದನ್ನು ತೂಗಿನೋಡಬೇಕಾದರೆ, ಶ್ರುತ್ಯಾಧಾರವೆಂಬ ತಕ್ಕಡಿಯನ್ನುಪಯೋಗಿಸುವರು. ಶ್ರುತಿ ಸಿದ್ಧವಾದ ಮತವು ಪುರಾತ ನದ್ದು— ತದಿತರ ಮತಗಳು ನೂತನವಾದವುಗಳು ಎಂದು ಕಂಡು ಹಿಡಿಯುವ ಪರಿಪಾಠವುಂಟು.

ಇತ್ತೀಚೆಗೆ ಪೌರ್ವಾತ್ಯ ಮತ್ತು ಪ್ರಾಚ್ಯ ಸಂಶೋಧಕರು ಇನ್ನೊಂದು ಮಾತನ್ನು ಕಂಡು ಹಿಡಿದಿದ್ದಾರೆ. ಅದೇನಂದರೆ— ಜೈನ ಬೌದ್ಧ ಚಾರ್ವಾ ಕಮತಗಳು ಶ್ರುತಿಸಿದ್ಧವಾಗದೆ ಶ್ರುತಿಯ ಹೊರಗಿನವಾದರೂ ಅವು ವೇದಕಾಲದಲ್ಲಿದ್ದ ಬಗ್ಗೆ ವೇದಗಳಲ್ಲಿ ಅವುಗಳ ಉಲ್ಲೇಖವಿದೆಯೆಂದು ಪ್ರಮಾಣ ಪೂರ್ವಕವಾಗಿ ಪ್ರತಿಪಾದಿಸುವರು. ಅಂದ ಮೇಲೆ ಹಿಂದೂ ಸಂಸ್ಕೃತಿಯ ಅಂಗಭೂತವಾದ ಜೈನ ಬೌದ್ಧಚಾರ್ವಾಕಾದಿಮತಗಳು ಸನಾತನ ಧರ್ಮಗಳೆಂದು ಹೇಳಿಕೊಳ್ಳುವ ಧರ್ಮದ ಸಮಕಾಲೀನ ಮತಗಳೆಂದು ಧರ್ಮಗಳೆಂದು ಸ್ಪಷ್ಟವಾಗುತ್ತದೆ. ಪುರಾಣ ಮತವಾ ದಿಗಳು ಈ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಹೇಗೆ ವ್ಯಕ್ತಗೊ ಳಿಸಿದರೂ ಗೊಳಿಸಲಿ, ಆದರೆ ಸಾರಾ ಸಾರ ವಿಚಾರವಂತರ ಮತ್ತು ಸಂಶೋಧಕರ ಮಾತಿಗೆ ಕಿವಿಗೊಡುವುದು ಹೆಚ್ಚು ಸಮಂಜಸವಾಗಿ ತೋರುತ್ತದೆ.

ವೈದಿಕ ಕಾಲದ ಸಮಾಜ ಸ್ಥಿತಿಯನ್ನು ಪರಾಮರ್ಶಿಸಿದರೆ ಆಗ ನೀತಿವಂತರೂ ದುರ್ಮಾರ್ಗ ಗಾಮಿಗಳೂ ಜ್ಞಾನಿಗಳೂ ಅಜ್ಞಾನಮಯರೂ ತತ್ತ್ವವೇತ್ತರೂ ಸಂಸಾರ ವಿಷಯಲಂಪಟರೂ ಸಗುಣ ದೇವತೋಪಾಸಕರೂ ನಿರ್ಗುಣ ದೇವತೋಪಾಸಕರೂ ಆಸ್ತಿಕರೂ ನಾಸ್ತಿಕರೂ ಮುಂತಾದ ಬಗೆಬಗೆಯ ವಿಚಾರ ತರಂಗಗಳು ಅಸ್ತಿತ್ವದಲ್ಲಿದ್ದದ್ದು ಗೋಚರವಾಗುತ್ತದೆ. ಅಂದರೆ ಯಜ್ಞಯಾಗಾದಿಗಳಿಂದ ಮಾತ್ರ ನಿಜಸುಖವಿದೆ ಎಂಬ ಪಂಥವೂ, ಯಜ್ಞಯಾಗಗಳಿಂದ ಸ್ವರ್ಗವು ಲಭಿಸಿದರೂ ಅದು ಶಾಶ್ವತವಾದ ಸುಖವಲ್ಲದ್ದರಿಂದ ಜ್ಞಾನಮಾರ್ಗವೊಂದರಿಂದಲೇ ಕೈವಲ್ಯ ಪ್ರಾಪ್ತಿಯೆಂದೂ ಹೇಳುವ ಪಂಥವೂ, ಕೇವಲ ಜ್ಞಾನದಿಂದ ಮೋಕ್ಷವು ಲಭಿಸದೆ, ಜ್ಞಾನ ಕ್ರಿಯೆಗಳ ಸಮ್ಮೇಳನದಿಂದಲೇ ಅದು ಸುಲಭಸಾಧ್ಯವೆಂದು ಪ್ರತಿಪಾದಿಸುವ ಪಂಥವೂ, ಹೀಗೆ ವೇದಕಾಲದನಂತರ ಸ್ಪಷ್ಟವಾಗಿತೋರುವ ಬೇರೆ ಬೇರೆ ದರ್ಶನಗಳ ದ್ಯೋತಕವು ವೈದಿಕ ಕಾಲದಲ್ಲಿಯೂ ದಿಗ್ದರ್ಶವಾಗುತ್ತದೆಂದು ವೇದವೇತ್ತರು ಹೇಳುವರು. ಉದಾಹರಣಾರ್ಥ— ಶಂಕರಾಚಾರ್ಯರ ವೇದಾಂತ- ಅದ್ವೈತ- ವಿಚಾರ ಪ್ರತಿಷ್ಠಾಪಕತ್ವವೂ, ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ವಿಚಾರವೂ, ಶ್ರೀಕಂಠ ಅಥವಾ ನೀಲಕಂಠ ಶಿವಾಚಾರ್ಯರ ಶಕ್ತಿ ವಿಶಿಷ್ಟಾದ್ವೈತ ಪ್ರತಿಪಾದಕತ್ವವೂ, ವೇದಕಾಲದಲ್ಲಿ ಕೂಡ ಬೀಜರೂಪದಿಂದ ಇದ್ದವೆಂದು ಆಧುನಿಕ ಸಂಶೋಧಕರ ಮತವಿದೆ.

ಪೂರ್ವಕರ್ಮಾನುಗುಣವಾಗಿ ಜನರ ಗುಣಕರ್ಮ ಸ್ವಭಾವಗಳು ಭಿನ್ನಭಿನ್ನವಾಗಿರುವವು. ಒಬ್ಬನಿಗೊಂದು ಸೇರುತ್ತಿದ್ದರೆ, ಇನ್ನೊಬ್ಬನಿಗೆ ಮತ್ತೊಂದರಲ್ಲಿ ರುಚಿಯುಂಟಾಗುವದು; ಮುಗದೊಬ್ಬನು ಮೇಲಿನವೆರಡನ್ನು ಬಿಟ್ಟು ಮೂರನೆಯದೊಂದನ್ನು ಪ್ರೀತಿಸುವನು. ಹೀಗೆ ಜನರು ಭಿನ್ನ ರುಚಿಯುವರಿದ್ದರೂ ಅವರು ಒಬ್ಬರಿಗೊಬ್ಬರು ವಿರೋಧಿಗಳಲ್ಲ. ಅವರವರ ಮಾನಸಿಕ ಸ್ಥಿತಿಯು ಅವರನ್ನು ತಮಗಿಷ್ಟವಾದ ಪದಾರ್ಥದ ಕಡೆಗೆಳಸುವದರಿಂದ ಅವರಲ್ಲಿ ಪರಸ್ಪರ ವಿರೋಧ ಭಾವವನ್ನು ಕಲ್ಪಿಸುವದು ಯುಕ್ತವೆನಿಸದು. ಹಾಗೆಯೆ ವೇದರಾಶಿಯು. ಇದನೊಂದು ಗಿಡಕ್ಕೆ ಹೋಲಿಸುವಾ. ಗಿಡದ ಎಲೆಗಳನ್ನು ಒಬ್ಬನು ತಕ್ಕೊಂಡು ಸೇವಿಸುವದು; ಮತ್ತೊಬ್ಬನು ಕಸುಗಾಯಿಗಳನ್ನು ಪ್ರೀತಿಸಿ ಸೇವಿಸುವನು. ಬೇರೊಬ್ಬನು

ಪಕ್ವವಾದ ಹಣ್ಣುಗಳನ್ನು ತರಿದು ತಿನ್ನುವನು. ಇನ್ನೊಬ್ಬನು ಆ ಗಿಡದ ತೊಗಟೆಯೊಂದನ್ನೇ ಕಿತ್ತಿ ತೆಗೆದುಕೊಂಡು ಬಂದು ಅದನ್ನುಪಯೋಗಿಸುವನು. ಹೀಗೆ ಗಿಡವೊಂದೇಯಾದರೂ ಅದರ ಉಪಯೋಗವನ್ನು ಒಬ್ಬೊಬ್ಬರು ಒಂದೊಂದು ರೀತಿಯಿಂದ ತಮಗಿಷ್ಟವಿದ್ದಂತೆ ಮಾಡುವರು. ಆದರೂ ಯಾರೂ ಗಿಡವನ್ನು ವಿರೋಧಿಸಿದಂತಾಗಲಿಲ್ಲ. ಅದರಂತೆ ವೇದದಲ್ಲಿ ಅನೇಕ ಕರ್ಮಗಳ ವಿಚಾರವೂ ತಾತ್ವಿಕ ವಿಚಾರವೂ ಅಡಕವಾಗಿದ್ದರೂ ಕರ್ಮಕಾಂಡಿಯೂ ಕರ್ಮಪರವಾದ ಮಂತ್ರಗಳನ್ನಷ್ಟೇ ಕಲಿಯಲಿಚ್ಛಿಸುವನು. ಜ್ಞಾನಕಾಂಡಿಯು ಜ್ಞಾನಮಾರ್ಗ ಸೂಚಕವಾದ ಮಂತ್ರಗಳನ್ನು ಅಭ್ಯಾಸಿಸಲು ಮನಸ್ಸು ಮಾಡುವನು. ಇವರೀರ್ವರು ವೇದ ವಿರೋಧಿಗಳೂ—ವೇದಬಾಹಿರರೂ ಎಂದು ಕರೆಯಲ್ಪಡುವದು ಯುಕ್ತಿಯುಕ್ತವಲ್ಲ.

ಇನ್ನು ವೇದಗಳಲ್ಲಿಯ ಶಬ್ದಗಳು ಅರ್ಥವಿಸ್ತಾರವುಳ್ಳವು ಇರುವದರಿಂದ (ವಿಭವೋ ವೈ ವೇದಶಬ್ದಾಃ) ಆಯಾಮತ ಸಾಂಪ್ರದಾಯಿಕರು ವೇದ ಮಂತ್ರಗಳಿಗೆ ತಮಗಭಿಮತವಾದ ಅರ್ಥವನ್ನೇ ಪ್ರತಿಪಾದಿಸಿರುವರು. "ಅಗ್ನಿಮೀಳೆ ಪುರೋಹಿತಮ್" ಎಂಬ ಮಂತ್ರದ ಅರ್ಥವನ್ನು ಅಗ್ನಿದೇವತಾ ಉಪಾಸಕರು ಅಗ್ನಿಪರವಾಗಿ ಅರ್ಥ ಮಾಡಿರುವರು. ವೀರಶೈವ ಶಿವಾಚಾರ್ಯರು ಅದನ್ನು ಇಷ್ಟಲಿಂಗ ಪರವಾಗಿ ಅನ್ವಯಿಸಿರುವರು. "ಅತಪ್ತತನೂರ್ನ ತದಾಮೋಽಶ್ನುತೆ" ಎಂಬ ಋಗ್ವೇದ ಮಂತ್ರವನ್ನು ದ್ವೈತ ಸಾಂಪ್ರದಾಯದವರು ತಮ್ಮ ತಪ್ತ ಮುದ್ರಾ ಸಂಪ್ರದಾಯಕ್ಕನುಸರಿಸಿ ಪ್ರತಿಪಾದಿಸಿರುವರು. ವೀರಶೈವಾಚಾರ್ಯರು ಅದನ್ನೇ ಇಷ್ಟಲಿಂಗ ಪೂಜಾಪರವಾಗಿ ಹೇಳಿರುವರು. ಅಂದಮೇಲೆ ವೈದಿಕ ಮಂತ್ರಗಳಲ್ಲಿಯೇ ಭಿನ್ನ ಭಿನ್ನ ಅರ್ಥಕೊಡುವ ಸಾಮರ್ಥ್ಯವಿರುವಾಗ ಒಬ್ಬ ಆಚಾರ್ಯನು ಮಾಡಿದ ಅರ್ಥವು ತಪ್ಪು, ಇನ್ನೊಬ್ಬ ಆಚಾರ್ಯನು ಮಾಡಿದ್ದು ನಿಜವೆಂದು ಹೇಗೆ ಅನ್ನುವದಕ್ಕಾದೀತು? ಅವರವರ ಬುದ್ಧಿಮತ್ತೆ ಮತ್ತು ಮನಸ್ಸಿನ ಒಲವು ಹಾಗು ಸಂಪ್ರದಾಯಕ್ಕನುಸರಿಸಿ ಮತ್ತು ಶಬ್ದಗಳ ಯೌಗಿಕ ಬಲವನ್ನನುಲಕ್ಷಿಸಿ ಮಾಡಿದ ಅರ್ಥ ವಿವೇಚನೆಯು ಬಲ್ಲವರು ಸರಿಯಾದುದೆಂದೇ ಒಪ್ಪಿಕೊಳ್ಳ ಬೇಕಾಗುವದು. ಈ ಭಿನ್ನ ಭಿನ್ನಾರ್ಥ ಪ್ರತಿಪಾದಕರು ವೇದ ವಿರೋಧಿಗಳೆಂದು ಅನ್ನಲಾಗದು.

ಈ ಸಾಮಾನ್ಯ ವಿಚಾರಗಳನ್ನು ನೆನಪಿನಲ್ಲಿಟ್ಟುಕೊಂಡು ಇನ್ನು ವೀರಶೈವ ಮತವು ವೇದ ವಿರೋಧವಾದದ್ದೋ ವೇದ ಬಾಹಿರವಾದದ್ದೋ ಎಂಬದನ್ನು ವಿಚಾರಿಸುವಾ. ವೀರಶೈವರು ಉಳಿದ ಶೈವರಂತೆ ನಾಲ್ಕು ವೇದಗಳೂ ಇಪ್ಪತ್ತೆಂಟು ಶಿವಾಗಮಗಳೂ ಈಶ್ವರ ನಿರ್ಮಿತವಾದ್ದರಿಂದ ಅವು ಅನಾದಿಯೆಂದು ತಿಳಿಯುವರು. ವೇದಗಳಲ್ಲಿ ಸೂತ್ರರೂಪದಿಂದ ಸಾಮಾನ್ಯವಾಗಿ ಹೇಳಿದ್ದೇ ಶಿವಾಗಮಗಳಲ್ಲಿ ಭಾಷ್ಯರೂಪದಿಂದ ವಿಶೇಷವಾಗಿ ವಿವೇಚಿಸಲ್ಪಟ್ಟಿದೆ ಎಂದು ನಂಬುವರು. ವೀರಶೈವ ಮತಕ್ಕೆ ಆಧಾರಭೂತವಾದ ಗುರು ಲಿಂಗ ಜಂಗಮ ವಿಭೂತಿ ರುದ್ರಾಕ್ಷ ಶಿವಮಂತ್ರ ಪಾದೋದಕ ಪ್ರಸಾದವೆಂಬ ಅಷ್ಟಾವರಣಗಳು ನಿಗಮಾಗಮಗಳ ತಳಹದಿಯುಳ್ಳವಾಗಿವೆ. ಇವುಗಳ ಬಗ್ಗೆ ವಿಸ್ತೃತ ವಿವೇಚನೆಯನ್ನು ನನ್ನ ವೀರಶೈವಮತ ಪ್ರಾಚೀನತ್ವ ಮತ್ತು ಶ್ರೀ ಪಾಲ್ಕುರಿಕೆ ಸೋಮಾರಾಧ್ಯ ವಿಜಯವೆಂಬ ಗ್ರಂಥಗಳಲ್ಲಿ ನೋಡಬಹುದು.

ಇಂತಹ ಸನಾತನ ವೀರಶೈವ ಮತವನ್ನೇ ಬಸವನು ಹನ್ನೆರಡನೆಯ ಶತಮಾನದಲ್ಲಿ ಉದ್ಧರಿಸಿದನು. ಅವ್ಯಕ್ತ ಸ್ಥಿತಿಯಲ್ಲಿದ್ದ ವೀರಶೈವ ತತ್ವಗಳನ್ನು ಒಂದು ವಿಶಿಷ್ಟ ಸಮಾಜರೂಪದಿಂದ ಬಸವನು ವ್ಯಕ್ತಗೊಳಿಸಿದನು. ಬಸವನ ಪೂರ್ವದಲ್ಲಿ ಅಲ್ಪ ಸಂಖ್ಯಾಕವಾದೀ ಮತಾನುಯಾಯಿಗಳು ಉಳಿದ ಹಿಂದೂ ಸಮಾಜದಲ್ಲಿದ್ದುಕೊಂಡು ವ್ಯಕ್ತಿಮಾತ್ರವಾಗಿ ತಮ್ಮ ಧರ್ಮತತ್ವಗಳನ್ನಾಚರಿಸುತ್ತಿದ್ದರು. ವೀರಶೈವ ತತ್ವಗಳಿಗ ಸಮಾಜ ರೂಪವೂ ಅಭಿವ್ಯಕ್ತಿದೆಸೆಯೂ ಬಸವನಿಂದಲೇ ಬಂದಿತೆಂದು ಹೇಳಿದರೆ ತಪ್ಪಾಗದು. ಬಸವನು ಬ್ರಾಹ್ಮಣ ಕುಲದಲ್ಲಿ ಜನಿಸಿ ಉಪನಯನ ಸಂಸ್ಕಾರವನ್ನು ತದ್ವಾರಾ ಜಾತಿ ಬ್ರಾಹ್ಮಣ್ಯವನ್ನು ನಿರಾಕರಿಸಿದ್ದರಿಂದ ಇವನಿಗೆ ಬ್ರಾಹ್ಮಣರು ವೇದವಿರೋಧಿಯೆಂದು ಅಪಲಾಪಿಸುವರು. ಈಶ್ವರನ ಅಭಿವ್ಯಕ್ತಿಗೆ ಕಾರಣವಾದದ್ದೆ ಉಪನಯನ. ಇಂತಹ ಅಭಿವ್ಯಕ್ತಿಯು ಆತನು ಜನಿಸಿದಾಗಳೆ ತನ್ನ ಗುರುವಾದ ಸಂಗಮೇಶ್ವರ ಸ್ವಾಮಿಯು ಇಷ್ಟಲಿಂಗ ಸಂಬಂಧವನ್ನು ಅಂದರೆ ಶಿವದೀಕ್ಷೆಯನ್ನು ಮಾಡಿದ್ದರಿಂದ, ಉಂಟಾಗಿತ್ತು. ಅದ್ದರಿಂದ ಅವನು ಸಂಸಾರಬಂಧನ, ಕರ್ಮಪಾಶ, ಸೂಚಕವಾದ ಜನ್ನಿವಾರವನ್ನು ತಿರಸ್ಕರಿಸಿದನು.

"ಹೊನ್ನು ಹೆಣ್ಣು ಮಣ್ಣೆಂಬ ಕರ್ಮದಬಲೆಯಲ್ಲಿ ಸಿಲುಕಿ ವೃಥಾ ಬರುದೊರೆಹೋಹ ಕೆಡುಕ ಹಾರುವನಾನಲ್ಲ. ಹಾರುವೆನಯ್ಯ ನಿಮ್ಮ ಭಕ್ತರ ಬರವಗಡಿಗಟ್ಟಿ. ಹಾರುವೆನಯ್ಯ ನಿಮ್ಮ ಶರಣರ ಬರವ ಗುಡಿಗಟ್ಟಿ. ಕೂಡಲಸಂಗಮದೇವ ವಿಪ್ರಕರ್ಮವಬಿಡಿಸಿ ಅಶುದ್ಧನ ಶುದ್ಧನ ಮಾಡದನಾಗಿ." (ಮಹೇಶ್ವರನ ಭಕ್ತಸ್ಥಲವಚನ ೧೨)

ಸಾರಸಂಸಾರ ದ್ವಿಜತ್ವವ। ಪಾರಪತಿತವಲಾ ಸದುಮುಳಾ।
ಚಾರ ಸದ್ಗುರುವಿನ ಕರಾಬ್ಜದಿ ಜನ್ಮನಾದಂಗೆ॥
ಧಾರುಣೀಸುರ ಜನ್ಮಕರ್ಮಂ। ಕ್ರೂರಕರ್ಮ ಮಂಸುಗುರುಭಿಜ।
ನಾರತಂಗಗ್ನಿಗೆ ಹತಿಯನಿಕ್ಕಿದೊಡೆ ದೋಷವಲಾ॥೪೫॥

"ವಿರಸವೆನಗಿದು ಮುಂಜೆಯೆಂಬುದ ನೊರೆಯದಿರು"

(ಭೀಮಕವಿಯ ಬಸವಪುರಾಣ)

ಹೀಗೆ ಬಸವನು ಕರ್ಮಕಾಂಡದಲ್ಲಿ ಸಿಲುಕಿದ ಬ್ರಾಹ್ಮಣರಲ್ಲಿ ಹುಟ್ಟಿದ್ದರಿಂದಾದ ಪ್ರಾಕೃತತ್ವ ಅಥವಾ ಜಡತ್ವವನ್ನು ಅರಿತು ಸದ್ಗುರುವಿನಿಂದ ಇಷ್ಟಲಿಂಗ ಸಂಬಂಧವನ್ನು ಪಡೆದು ಅಪ್ರಾಕೃತಶರೀರಿಯಾದನು. ಶರೀರವು ಪಂಚಧಾತುವಿನಿಂದ ಪುಷ್ಟಿಯನ್ನು ಹೊಂದುತ್ತದೆ. ನಾನು ಎಂಬ ಅಭಿಮಾನಕ್ಕೆ ಈ ಶರೀರವು ಒಳಗಾಗಿದೆ. ಇದಕ್ಕೆ ಲಿಂಗ ಸಂಬಂಧವಾಗುದರಿಂದ ನಾನು ಎಂಬ ಅಭಿಮಾನವಳಿದು, ಶರೀರವು ಲಿಂಗಸ್ವರೂಪವಾಗುವದು. ಮಲಮಾಯಾಕರ್ಮಗಳು ಬಂಧನಕ್ಕೆ ಕಾರಣ. ಜಾತಿವರ್ಣಾಶ್ರಮಗಳಿಂದ ಜೀವನಿಗೆ ಸಂಕುಚಿತ ಭಾವವುಂಟಾಗುವದು. ಇಷ್ಟ ಪ್ರಾಣಭಾವಲಿಂಗಗಳಿಂದ ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮೂರು ಮಲಗಳು ನಾಶವಾಗುವದರಿಂದ ಬಸವನು ಉಪನಯನಸಂಸ್ಕಾರವನ್ನು ಬಿಟ್ಟನು. ಆತನು ಹತ್ತಿದ ಮೆಟ್ಟಲು ದ್ವಿಜತ್ವದ ಮೆಟ್ಟಲಿಗಿಂತ ಮೇಲಾದದ್ದಿತ್ತು. ಸನ್ಯಾಸವ್ರತವನ್ನು ಸ್ವೀಕರಿಸಿದ ಯತಿಗಳು ಜನ್ನಿವಾರವನ್ನು ಧರಿಸುವದಿಲ್ಲ. ಅವರಿಗೆ ಸೂತಕಾದಿಗಳಿಲ್ಲ. ಹೀಗಿದ್ದರೂ ಅವರಿಗೆ ವೇದವಿರೋಧಿಗಳೂ ವೇದಬಾಹಿರರೂ ಎಂದು ಯಾರೂ ಅನ್ನುವದಿಲ್ಲ.

ಇನ್ನು ಬಸವನ ವಚನಗಳ ಮೇಲಿಂದ ನೋಡಲು ಆತನು ವೇದ ವಿರೋಧಿಯೋ ಅಥವಾ ವೇದಬಾಹಿರನೋ ಹೇಗೆಂಬುದನ್ನು ಓದುಗರೇ ಗೊತ್ತು ಮಾಡಲಿ.

ವೀರಶೈವಧರ್ಮವು ಶಿವಸರ್ವೋತ್ತಮತ್ವವನ್ನು ಸಾರುತ್ತದೆ. ಇದನ್ನು ತಿಳಿದು ಬಸವನು ತನ್ನ ವಚನಗಳಲ್ಲಿ ಕೆಳಗಿನ ಶ್ರುತಿ ವಾಕ್ಯಗಳನ್ನು ಆಧಾರವಾಗಿ ಉದಹರಿಸಿದ್ದಾನೆ.

"ಶ್ರುತಿಗಗವ್ಯ ದ್ವಾದಶಾದಿತ್ಯನಪ್ರತಿಮ ಮಹಿಮಂಗೆ ಪ್ರತಿಯುಂಟೆ? "ಸೋಮಪವತೆ" ಎಂಬಶ್ರುತಿಯುನರಿದು ಶಿವಏಕೋದೇವರುದ್ರೋನದ್ವಿತೀಯನೆಂದು ನಂಬುವದು ಕಾಣಿರಂಣಾ। ಕೂಡಲಸಂಗಮದೇವನಲ್ಲದೆ ಇಲ್ಲವೆಂದೆತ್ತಿದೆ ಬಿರಿದ ಜಗವೆಲ್ಲವರಿಯಲು. (೨)

ಉಪ್ಪರಗುಡಿ, ನಂದಿವಾಹನ, ಸದ್ಯೋಜಾತನಬಾಗಿಲಮುಂದೆ ಸಾರುತ್ತಿದ್ದಾವೆ ನೋಡಾ ಶ್ರುತಿಗಳು ನಾಲ್ಕುವೇದಗಳುಹುಸಿಯವೆ "ಭರ್ಗೋದೇವಸ್ಯ ಧೀಮಹಿ" ಎಂದುದಾಗಿ ಕೂಡಲಸಂಗನಲ್ಲಿದಿಲ್ಲೆಂದುದು ವೇದ. (೩)

ವೇದಸ್ವಯಂಭುವೆಂಬವಾದಿನೀಕೇಳಲಿನೋ. ಏಕೋದೇವರುದ್ರನದ್ವಿತೀಯನೆಂದು ನಂಬುವುದು ಕಾಣಿರಣ್ಣಾ. "ಓಂದ್ಯಾವಾಭೂಮಿಮಜಿಯನ್‌ದೇವಾ। ಏಕೋದೇವನದ್ವಿತೀಯನೆಂದು ನಂಬುವುದುಕಾಣಿರಣ್ಣಾ. "ಚಕಿತಮಭಿಧತ್ತೆ" ಎಂದುಶ್ರುತಿಸಾರುತ್ತಿದ್ದಾವೆ. ಜಗದ ಕರ್ತ ಕೂಡಲಸಂಗಮದೇವನೊಬ್ಬನೇ ಕಾಣಿರಣ್ಣಾ (೪)

ಶ್ರುತಿತತಿಶಿರದಮೇಲೆ "ಅತ್ಯತಿಷ್ಠದ್ದಶಾಂಗುಲನ" ನಾನೇನೆಂಬೆನಯ್ಯಾ. ಘನಕ್ಕೆ ಘನಮಹಿಮನ ಮನಕ್ಕಗೋಚರನ "ಅಣೋರಣೀಯಾನ್ ಮಹತೋರ್ಮಹೀಯಾನ್" ಮಹಾದಾಸಿಕೂಡಲಸಂಗಮದೇವ. (೫)

ಹೀಗೆ ಮಹೇಶ್ವರ ಸ್ಥಲದವಚನಗಳಲ್ಲಿ "ವಿಶ್ವತೊಚಕ್ಷುನೀನೇದೇವಾ ವಿಶ್ವತೊಮುಖನೀನೇದೇವಾ ವಿಶ್ವತೊಪಾದನೀನೇದೇವಾ ವಿಶ್ವತೊಬಾಹುನೀನೇದೇವಾ" ಎಂದುದಾಗಿ ತನ್ನವಚನಗಳಬೆಂಬಲಕ್ಕಾಗಿ ಉಪನಿಷದ್ವಾಕ್ಯಗಳನ್ನು ಉದಾಹರಿಸಿದ್ದಾನೆ. ಬಸವನು ತನ್ನ ವಚನಗಳಲ್ಲಿ ಪುರಾಣವಾಕ್ಯಗಳನ್ನೂ ಭಾರತರಾಮಾಯಣದಲ್ಲಿಯ ಕಥಾತಾತ್ಪರ್ಯವನ್ನೂ ಶೈವಶಾಸ್ತ್ರದ ವಚನಗಳನ್ನೂ ಅಪರಿಮಿತವಾಗಿ ಉದಾಹರಿಸಿರುವನು. ಬಸವನ ವಚನಗಳನ್ನು ಚನ್ನಾಗಿ ಪರಾಮರ್ಶಿಸಿದಲ್ಲಿ ಬಸವನು ಸಂಸ್ಕೃತಭಾಷೆಯಲ್ಲಿ ಚನ್ನಾಗಿ ಗತಿಯನ್ನು ಸಂಪಾದಿಸಿದ್ದನೆಂದೂ ಸಕಲಶಾಸ್ತ್ರಪಾರಂಗತನಿದ್ದನೆಂದೂ ಒಡೆದುಕಾಣುವದು.

"ಈಶ್ವರ ಸದ್ಭಾವೇ ಕಿಂಪ್ರಮಾಣವೆಂಬ ಮೀಮಾಂಸಕ ಮೂಗಿನ ಕೊನೆಯನು 'ವಿಶ್ವತೊ ಚಕ್ಷುರುತ ವಿಶ್ವತೊ ಮುಖ ವಿಶ್ವತೊ ಬಾಹು ರುತ ವಿಶ್ವತೊ ಪಾದ್ ಸಬಾಹುಭ್ಯಾಂದಮತಿ ಸಂಪತತ್ರೈ ದ್ಯಾವಾ ಭೂಮೀ ಜನಯನ್ ದೇವಯೇಕಂ' ಎಂಬ ಸುರಿಗಿಯಿಂದಿರಿದು ವೈಶೀ ಷಿಕನೆಂಬ ಇಟ್ಟಿಗೆಯುಲೊರಸಿ, ಕೂಡಲ ಸಂಗಯ್ಯನೆಂಬ ಕನ್ನಡಿಯ ತೋರುವೆನು." (ಮಹೇಶ್ವರನ ಶರಣಸ್ಥಲ ವಚನ ೧೦)

ಇದಲ್ಲದೆ ಬಸವನು ಯಜ್ಞಯಾಗದ ನೆವಮಾಡಿ ಮಾಂಸ ಭಕ್ಷ ಣೆಯಲ್ಲಿ ಆಸಕ್ತರಾದ ವೈದಿಕರನ್ನು 'ಹೋಮದ ನೆವ ಮಾಡಿ ಹೋತನ ತಿಂಬುವ ದ್ವಿಜರ ಮಾತೇಕೊ' ಎಂದು ಮೊದಲಾದ ತನ್ನ ವಾಕ್ಪ್ರಹಾರ ದಿಂದ ಚನ್ನಾಗಿ ತಳಿಸಿರುವನು; ಮತ್ತು ವೇದಗಳಲ್ಲಿ ಮುಖ್ಯವಾಗಿ ಹೇಳಿದ ಯಾಗಾದಿ ಕರ್ಮಗಳನ್ನು ತನ್ನ ಯುಕ್ತಿ ಪ್ರಯುಕ್ತಿಗಳಿಂದ ಖಂಡಿಸಿರುವನು. ಈ ಕಾರಣದಿಂದ ಬಸವನು ವೇದ ವಿರೋಧಿ ಅಥವಾ ವೇದ ಬಾಹಿರನಾಗಬಲ್ಲನೇ? ಹಾಗಾದರೆ, ಶ್ರೀ ಶಂಕರಾಚಾರ್ಯರು ಅದ್ವೈತ ಜ್ಞಾನವೇ ಮಾನವರ ಮುಕ್ತಿಗೆ ಮೂಲ ಕಾರಣವೆಂದು ಹೇಳುವಾಗ ಯಜ್ಞಯಾಗಾದಿ ಕರ್ಮಗಳು ಆತ್ಮಜ್ಞಾನಕ್ಕೆ ಪ್ರತಿಬಂ ಧಕಗಳಾಗಿರುತ್ತವೆಂದು ಅವುಗಳನ್ನು ಸಂಪೂರ್ಣವಾಗಿ ನಿರಾಕರಿಸಿ ರುವರು. ಇದರಿಂದ ಶ್ರೀ ಶಂಕರಾಚಾರ್ಯರು ವೇದ ವಿರೋಧಿಗಳೆಂದೂ ಅಥವಾ ವೇದ ಬಾಹಿರರೆಂದೂ ಹೇಳಲಿಕ್ಕಾದೀತೆ? ಯಜ್ಞಯಾಗಾದಿ ಕರ್ಮಗಳನ್ನು ಹಳಿದ ಮಾತ್ರದಿಂದ ವೇದಗಳು ಅವರಿಗೆ ಅಪ್ರಮಾಣ ಗ್ರಂಥಗಳೆಂದು ಯಾರೂ ತಿಳಿಯುವದಿಲ್ಲ. ಅದ್ವೈತ ಮತವಾದಿಗಳು ಸನ್ಯಾಸಾಶ್ರಮಿಗಳಿಗೆ ಯಜ್ಞಾದಿ ಕರ್ಮಗಳನ್ನು ಹೇಳುವದಿಲ್ಲ.

ಪರಮತೀಯರು ಬಸವನ ವಿಷಯವಾಗಿ ಇನ್ನೊಂದು ಆಕ್ಷೇಪವ ನೆತ್ತುವರು. ಅದೇನೆಂದರೆಃ— ಬಸವನು ಬ್ರಾಹ್ಮಣ ಕುಲದಲ್ಲಿ ಹುಟ್ಟಿ ಲಿಂಗಧಾರಿಯಾಗಿ ತನ್ನ ಬ್ರಾಹ್ಮಣ ಧರ್ಮವನ್ನೂ ಬಂಧುಗಳನ್ನೂ ನಿರಾ ಕರಿಸಿ ವೀರಶೈವ ಭಕ್ತಿಯನ್ನು ಸರ್ವತ್ರ ಪ್ರಚಾರಗೊಳಿಸುವದಕ್ಕಾಗಿ ಜಾತಿ ತಾರತಮ್ಯವಿಲ್ಲದೆ ಕುಲಹದಿನೆಂಟು ಜಾತಿಯವರಿಗೂ ಲಿಂಗದೀಕ್ಷೆ ಯನ್ನು ಕೊಡಿಸಿ ಅವರೊಡನೆ ಬಳಿಕೆ ಭೋಜನ ಮುಂತಾದ ವ್ಯವಹಾರ ಮಾಡಿ ಜಾತಿ ಸಾಂಕರ್ಯಕ್ಕೆ ಅನುವಾದನು. ಕಾರಣ ವೇದ ಸಮ್ಮತ

ವಾದ ವರ್ಣಾಶ್ರಮ ಧರ್ಮಗಳನ್ನು ಕಿತ್ತುಹಾಕಿದ್ದರಿಂದ ಅವನು ವೇದ ವಿರೋಧಿಯು ಹೇಗಲ್ಲ? ಎಂದು ಪ್ರಶ್ನೆ ಮಾಡುವರು. ಇದಕ್ಕೆ ಉತ್ತರ. ಈ ಆಕ್ಷೇಪವು ವೀರಶೈವ ಮತಕ್ಕೇನೇ ಹತ್ತುವದು. ಬಸವನೊಬ್ಬನಿಗೆ ಮಾತ್ರ ಸಂಬಂಧಿಸುವದಿಲ್ಲ. ವೀರಶೈವ ಮತವು ನಿಗಮಾಗಮ ಸಮ್ಮತ ವಾದದ್ದೆಂಬ ಬಗ್ಗೆ ಅನೇಕ ಗ್ರಂಥಗಳು ಪ್ರಚಾರದಲ್ಲಿವೆ. ಆ ಪ್ರಮಾಣ ಗಳನ್ನೆಲ್ಲ ಉದಾಹರಿಸುತ್ತ ಹೋದರೆ ಈ ಚಿಕ್ಕ ನಿಬಂಧವು ವಿಸ್ತಾರವ ನ್ನೈದುವದರಿಂದ ಈ ಬಗ್ಗೆ ವಾದಿಗಳು ನಂಜಣಾಚಾರ್ಯರಿಂದ ಸಂಸ್ಕೃತ ದಲ್ಲಿ ರಚಿಸಲ್ಪಟ್ಟ "ವೇದಾಂತಸಾರ ವೀರಶೈವ ಚಿಂತಾಮಣಿ" ಎಂಬ ಗ್ರಂಥವನ್ನೂ ಮತ್ತು ಅಂಗ್ಲಭಾಷೆಯಲ್ಲಿ ಪ್ರಸಿದ್ಧವಾದ "Veerashaiva philosophy of Shaivagamas." ಎಂಬ ಗ್ರಂಥವನ್ನೂ ಮುಖ್ಯವಾಗಿ ಓದಿಕೊಂಡು ತಮ್ಮ ಶಂಕಾನಿರಸನ ಮಾಡಿಕೊಳ್ಳಬೇಕು. ಇವೆರಡಲ್ಲದೆ ಇನ್ನೂ ಅನೇಕ ಗ್ರಂಥಗಳಲ್ಲಿ ಈ ವಿಷಯವು ಪ್ರತಿಪಾದಿತವಾಗಿದ್ದು ಅವನ್ನು ಕೂಡ ವಾದಿಗಳು ತಮ್ಮ ವಿರಾಮ ಕಾಲದಲ್ಲಿ ಓದಿಕೊಂಡು ಸಮಾಧಾನಹೊಂದಬೇಕು. ನಿಷ್ಪಕ್ಷಪಾತಿಗಳಿಗೆ ನನ್ನೀ ಮಾತು. ಮತಾಂ ಧತೆಯಿಂದ ಅಸೂಯಾಪರರಾಗಿ ತಮ್ಮ ದುರಭಿಮಾನವನ್ನೂ ಹಟವನ್ನೂ ಸಾಧಿಸುವವರಿಗೆ ಈ ನಿಬಂಧವು ಸಮಾಧಾನಗೊಳಿಸದು.

ಬಸವನು ವೀರಶೈವ ಮತ ತತ್ವಗಳನ್ನು ಪುನರುಜ್ಜೀವನಗೊಳಿಸಿದ ನೆಂದು ಮೇಲೆ ಹೇಳಿದೆ. ಅಂದಮೇಲೆ ವೀರಶೈವ ಮತ ತತ್ವಗಳು ನಿಗಮಾಗಮಗಳ ಆಧಾರಸ್ತಂಭದ ಮೇಲೆ ನಿಂತಿವೆಯೆಂದಬಳಿಕ ಬಸವನು ವೇದಬಾಹಿರನಲ್ಲ; ವೇದ ವಿರೋಧಿಯೂ ಅಲ್ಲ. ಭವಿಯು ಹೋಗಿ ಭಕ್ತ ನಾದ ಬಳಿಕ ಆತನಲ್ಲಿ ಜಾತಿ ಭೇದವನ್ನು ಕಲ್ಪಿಸಲಾಗದೆಂದು ಶಾಸ್ತ್ರದ ಕಟ್ಟು. ಭಕ್ತರೆಲ್ಲರು ಶಿವ ಸಹೋದರರು. ಅವರಿಗೆ ಪಾರ್ವತೀ ಪರಮೇ ಶ್ವರರೇ ತಾಯಿತಂದೆಗಳು. ಅವರ ಕುಲವು ಶಿವಕುಲವು; ಒಬ್ಬ ಚಾಂ ಡಾಲನಾದರೂ ಸುಶೀಲನಿದ್ದು ಸಂಸಾರಕ್ಕೆ ಹೇಸಿ ಗುರು ಕಾರುಣ್ಯವಂ ಪಡದು ಲಿಂಗಧಾರಿಯಾದಲ್ಲಿ ಅಂಥವನ ಪೂರ್ವಜಾತಿಗಳು ನಷ್ಟನಾಗಿ ಗುರುಕರ ಜಾತನಾಗುವನು. ಅವರ ಪೂರ್ವಜಾತಿಯನ್ನು ಸ್ಮರಿಸಲು ಬಾರದು. ಎತ್ತಿ ಆಡಲುಬಾರದೆಂದು ಸೂಕ್ಷ್ಮಾಗಮ ವಚನವು ಕೈಯೆತ್ತಿ ಸಾರುತ್ತಿದೆ. ಅಂಥವನು ಲಿಂಗಧಾರಿಯಲ್ಲದ ಬ್ರಾಹ್ಮಣನಕ್ಕಿಂತಲೂ ಶ್ರೇಷ್ಠನು.

"ಉಂಬಲ್ಲಿ ಉಡುವಲ್ಲಿ ಕುಲವಳಿಯಿತ್ತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ ಮಾದಿಗರ ನೇನೆಂಬೆನಯ್ಯ. ಇವರೆಂತು ಭಕ್ತರೆಂಬೆನಯ್ಯ? ಇವರೆಂತು ಯುಕ್ತರೆಂಬೆನಯ್ಯ? ಇವರು ವಚ್ಯೋಚ್ಚಿ ಭಕ್ತರು; ಇವರು ವಚ್ಯೋಚ್ಚಿ ಭವಿಗಳು; ಅದೆಂತೆಂದೊಡೆ ಲೈಂಗೆ "ಸ್ತ್ರೀವಾಪುರುಷ ಷ್ಷಂಡ ಚಾಂಡಾಲ ದ್ವಿಜವಂಶಜಃ। ನಜಾತಿಭೇದೊ ಲಿಂಗಾರ್ಚೇ ಸರ್ವೇ ರುದ್ರಗಣಾಃ ಸ್ಮೃತಾಃ" ಇಂತೆಂಬ ಪುರಾಣ ವಾಕ್ಯವ ತಿಳಿದು ನೋಡಿರೇ. ಸರ್ವರೂ ರುದ್ರಗಣಂಗಳೆಂಬೆ. ಸರ್ವರೂ ಸದ್ಭಕ್ತರೆಂಬೆ. ಅವರಲ್ಲಿ ಕುಲವ ನೋಡದೆ ಆಚಾರವ ನೋಡಿ, ಅವರಿಗೆ ಬೇಕಾದ ಹೆಣ್ಣು ಕೊಟ್ಟು ತನಗೆ ಬೇಕಾದುದ ತೆಗೆದುಕೊಂಬುವದು. ಈ ಕ್ರಮುವನರಿಯದವನ ಭಕ್ತಿ ಹೊಲತಿ ಶುದ್ಧ ನೀರ ಮಿಂದಂತಾಯಿತ್ತು ಕೂಡಲ ಸಂಗಮ ದೇವಾ. (ಮಹೇಶ್ವರನ ಸ್ಥಲ ವಚನ. ೯೩)

"ದೇವ ದೇವ ಬಿನ್ನಪವ ಅವಧಾರು. ವಿಪ್ರಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೆಲ್ಲರನೊಂದೇ ಎಂಬೆ..................

(ಮಹೇಶ್ವರನ ಭಕ್ತಸ್ಥಲ ವಚನ. ೭)

"ಆವಕುಲವಾದರೇನು ಶಿವಲಿಂಗವಿದ್ದವನೇ ಕುಲಜನು. ಕುಲವನರಸುವರೇ ಶರಣರಲ್ಲಿ ಜಾತಿ ಸಂಕರನಾದ ಬಳಿಕ. ಇದಕ್ಕೆ ಪ್ರಮಾಣ "ಶಿವೆಜಾತ ಕುಲೆಧರ್ಮ ಪೂರ್ವಜನ್ಮ ವಿವರ್ಜಿತಂ। ಉಮಾಮಾತಾ ಪಿತಾ ರುದ್ರ ಈಶ್ವರಃ ಕುಲಮೇವಚ"......(ಆದರಲ್ಲಿ ವಚನ ೧೪)

ಕಟ್ಟಿಗೆಯಲ್ಲಿ ಅವ್ಯಕ್ತವಾಗಿದ್ದ ಅಗ್ನಿಯು ಅವುಗಳ ಮಥನ ಕ್ರಿಯೆಯಿಂದ ಹೊರಬಿದ್ದು ಕಟ್ಟಿಗೆಯನ್ನು ಸುಟ್ಟು ಅಗ್ನಿಯಾಗಿಯೇ ಉಳಿಯುವಂತೆ, ಗುರುವಿನ ಹಸ್ತಮಸ್ತಕ ಸಂಯೋಗದಿಂದ ಒಳಗಿನ ಚೈತನ್ಯವೇ ಇಷ್ಟಲಿಂಗವಾಗಿ ಅಭಿವ್ಯಕ್ತಿಯನ್ನು ಹೊಂದಿ ತನುಗುಣವಳಿದು ಅಂದರೆ ಅಂಗಗುಣಗಳನ್ನು ನಷ್ಟಮಾಡಿ ಲಿಂಗಕ್ರಿಯೆಗಳಾಗಿ ಪರಿಣಮಿಸುವದರಿಂದ ಜಾತಿಭೇದಗಳು ಉಳಿಯಲಾರವು. ಈ ವಿಷಯದಲ್ಲಿ ಸಿದ್ಧರಾಮಪ್ಪನವರ ರಸವತ್ತಾದ ವಾಣಿಯಿಂದ ಆಡಿದ ನುಡಿಗಳನಿಲ್ಲ ಉಲ್ಲೇಖಿಸುವೆನು.

" ಲಿಂಗಧಾರಣವಿಂದ ಅಂಗನಕ್ರಿಯೆಗಳೆಲ್ಲ ಲಿಂಗಕ್ರಿಯೆಗಳಾಗುವುದರಿಂದ ಶರಣರ ಉದ್ಯೋಗ ಭೇದದಿಂದ ಅವರಲ್ಲಿ ಜಾತಿ ಭೇದಗಳಾಗವು. ಜಾತಿ ಭೇದಕ್ಕೆ ಆಯಾ ಆಶ್ರಮಗಳು ಮಾಡುವ ಕ್ರಿಯೆಗಳು ತಮ್ಮತಮ್ಮವೆ ಆಗಿರುವದರಿಂದ ಅವುಗಳಿಂದವರಲ್ಲಿ ಹಿರಿದು ಕಿರಿದು ಜಾತಿಗಳನೆಣಿಸಲಾಗುವುದು. ಆದರೆ ಲಿಂಗಕ್ರಿಯೆಗಳೆ ಕ್ರಿಯೆಗಳಾದ ಶರಣರಲ್ಲಿ ಜಾತಿ ಭೇದವು ತಲೆದೋರದು. "

ಅಂದರೆ ಭವಿಜಾತಿಯಲ್ಲಿ ಕನಿಷ್ಠ ನೆನಿಸಿಕೊಂಡು ಭಕ್ತನಾದಲ್ಲಿ ಅವನ ಕೀಳುತನವು ತೊಲಗಿ ಕುಲೀನನಾಗುವನು. ಪೂರ್ವಾಶ್ರಯದ ಕುರುಹುಯಾವದೂ ಆತನಲ್ಲಿ ತೋರುವದಿಲ್ಲ. ಅಂದ ಮೇಲೆ ಸಾಂಕರ್ಯ ದೋಷವು ಇಲ್ಲವಾಗಿ ಶಿವಕುಲಕ್ಕೆ ಸಂಬಂಧಿಸಿದವನಾದನು. ವಿಷಯಾಭಿಲಾಷೆಯಿಂದಾಗಲೀ ಕಾಮೋದ್ರೇಕದಿಂದಾಗಲೀ ಬೇರೆ ಬೇರೆ ಕುಲದ ಹೆಣ್ಣು ಗಂಡು ಬೆರೆದರೆ, ಅಥವಾ ಧರ್ಮಾಂತರ ಮಾಡಿದರೆ ಅದರಲ್ಲಿ ಸಾಂಕರ್ಯದೋಷವಿರುವದು. ಆದರೆ ಲಿಂಗಧಾರಣ ದೀಕ್ಷೆಯು ಕಂಡಕಂಡವರಿಗೆ ಸಲುವಳಿಯಾಗತಕ್ಕ ಕ್ರಿಯೆಯಲ್ಲಿ ಸಂಸಾರದಲ್ಲಿ ವಿರಕ್ತಿ ಭಾವವನ್ನು ತಾಳಿದ ಸುಶೀಲರಿಗೆ ಮಾತ್ರ ಲಿಂಗಧಾರಣವಿಧಿಯು ಹೇಳಲ್ಪಟ್ಟದೆ.

ಇನ್ನೊಂದು ಮಾತನ್ನು ಹೇಳಿ ಈ ಲೇಖವನ್ನು ಮುಗಿಸುವೆನು.

" ವೇದಕ್ಕೆ ಒರೆ ಕಟ್ಟುವೆ. ಶಾಸ್ತ್ರಕ್ಕೆ ನಿಗಳವನಿಕ್ಕುವೆ. ತರ್ಕದ ಬೆನ್ನ ಬಾರನೆತ್ತುವೆ. ಆಗಮದ ಮೂಗ ಕೊಯ್ಯುವೆ ನೋಡಯ್ಯ ಮಹಾದಾಸಿ ಕೂಡಲ ಸಂಗಯ್ಯ ಮಾದರ ಚನ್ನಯ್ಯನ ಮನೆಯಲುಂಡ ಕಾರಣ. " (ಮಹೇಶ್ವರನ ಭಕ್ತಸ್ಥಲ ವಚನ. ೧೩)

" ವೇದನಡನಡುಗಿತ್ತು. ಶಾಸ್ತ್ರವಗಲಿ ಕೆಲಸಾರಿತ್ತಯ್ಯ. ತರ್ಕತರ್ಕಿಸಲರಿಯದೆ ಮೂಗು ವಟ್ಟಿತ್ತಯ್ಯ. ಆಗಮ ಹೊರತೊಲಗಿ ಅಗಲಿದ್ದುದಯ್ಯ. ನಮ್ಮ ಕೂಡಲ ಸಂಗನು ಮಾದಾರ ಚನ್ನಯ್ಯನ ಮನೆಯಲುಂಡ ಕಾರಣ." ( ಮಹೇಶ್ವರನ ಶರಣಸ್ಥಲ ವಚನ. ೧೨ )

ಬಸವನು ತನ್ನ ವಚನದಲ್ಲಿ ವೇದಾಗಮ ಶಾಸ್ತ್ರ ಪುರಾಣಗಳ ನಿಂದೆಯನ್ನು ಮಾಡಿದ್ದರಿಂದ ಆತನು ವೇದಬಾಹಿರನೇಕಲ್ಲ ? ಎಂದು ವಾದಿಸಿದರೆ ಅದಕ್ಕುತ್ತರವೇನೆಂದರೆ, ಈ ವಚನಗಳ ನಿಜಾರ್ಥವನ್ನು ತಿಳಿಯದೆ ನೀವು ವಾದಿಸುವಿರಿ. ಮೇಲಿನ ವಚನಗಳಿಂದ ಬಸವನು

ಚಿಕ್ಕಸಂಕಣ್ಣ ನಾಯಕನ ಕಾಲದ ವರೆಗೆ ಕೆಳದಿಯ ರಾಜರು ವಿಜಯನಗರಕ್ಕೆ ಸಹಾಯಕರೂ ಅಧೀನರೂ ಆಗಿ ರಾಜ್ಯವಾಳಿದರು. ವಿಜಯನಗರದ ಕೃಷ್ಣ ದೇವರಾಯ ಮೊದಲಾದ ರಾಜರು ಕೆಳದಿಯ ನಾಯಕರನ್ನು ನಾನಾವಿಧವಾಗಿ ಮರ್ಯಾದಿಸಿರುವರು.

ಕರ್ನಾಟಕ ಸಾಮ್ರಾಜ್ಯ ಭಾಸ್ಕರನು ಅಸ್ತಂಗತನಾಗುವ ಕ್ರಿ. ಶ. ೧೫೬೫ ನೇ ವರ್ಷವು ಸಂಧಿಸಿತು. ಆಗ ತುರುಕರೆಲ್ಲ ಒಟ್ಟಾಗಿ ವಿಜಯನಗರದ ಮೇಲೆ ದಂಡೆತ್ತಿ ಬಂದರೂ ರಾಜದ್ರೋಹಿಗಳಾದ ಕೆಲರ ಕೌಟಿಲ್ಯವೂ ಕನ್ನಡಿಗರ ದುರದೃಷ್ಟ ಅನೈಕ್ಯ ಮತ್ಯಗಳೂ ತುರುಕರ ಪರಾಕ್ರಮವೂ ಆ ಮಹಾ ಸಾಮ್ರಾಜ್ಯವನ್ನು ನೆಲಸಮ ಮಾಡಿದವು.

ಇಂತಹ ಕಾಲದಲ್ಲಿ ದಕ್ಷಿಣ ಪ್ರಾಂತದಲ್ಲಿದ್ದ ಮೈಸೂರೊಡೆಯರೂ ಕೆಳದಿಯ ನಾಯಕರೂ ಸಾಹಸದಿಂದ ತಮ್ಮ ತಮ್ಮ ನಾಡುಗಳನ್ನು ಸ್ವತಂತ್ರವಾಗಿ ಆಳಲಾರಂಭಿಸಿದರು.

ಕೆಳದಿಯ ಚಿಕ್ಕ ಸಂಕಣ್ಣ ನಾಯಕನು ವಿಜಯನಗರ ನಾಶವಾದ ಮೇಲೆ ಸ್ವತಂತ್ರವಾಗಿ ರಾಜ್ಯವಾಳಲಾರಂಭಿಸಿದನು. ಇನ್ನು ಮುಂದೆ ಬಂದ ರಾಜರು ದಿನೇ ದಿನೇ ರಾಜ್ಯವನ್ನು ಅಭಿವೃದ್ಧಿ ಮಾಡುತ್ತಾ ಬಂದರು.

ಮೊದಲು ಕೆಳದಿಯಲ್ಲಿಯೂ ಆ ಮೇಲೆ ಇಕ್ಕೇರಿಯಲ್ಲಿಯೂ ಅನಂತರ ಬಿದನೂರು (ನಗರ) ದಲ್ಲಿಯೂ ರಾಜ್ಯ ಭಾರ ಮಾಡಿರುವದರಿಂದ ಕೆಳದಿಯ ನಾಯಕರಿಗೆ ಇಕ್ಕೇರಿಯ ಅರಸರು ಬಿದನೂರು ರಾಜರು ಎಂದೂ ಬೇರೆ ಬೇರೆ ಹೆಸರುಗಳುಂಟು. ರಾಜಧಾನಿಗಳು ಮೂರಾದರೂ ರಾಜ್ಯಭಾರ ಒಂದೇ ಆಗಿದೆ.

ಬಿದನೂರು ರಾಜ್ಯವು ತನ್ನ ವಿಸ್ತಾರದ ಕಾಲದಲ್ಲಿ ಈಗಿನ ಉತ್ತರ ಕನ್ನಡ ಜಿಲ್ಲೆಯ ದಕ್ಷಿಣಾರ್ಧ, ಸಂಪೂರ್ಣ ದಕ್ಷಿಣ ಕನ್ನಡ ಜಿಲ್ಲೆ ಶಿವಮೊಗ್ಗ ಮತ್ತು ಕಡೂರು ಜಿಲ್ಲೆಗಳು ಹಾಸನ ಜಿಲ್ಲೆಯ ಉತ್ತರಾರ್ಧ ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಯ ಹಲಕೆಲವು ಭಾಗಗಳು ಇಷ್ಟನ್ನು ಒಳಗೊಂಡು ಒಂದು ವಿಸ್ತಾರ ರಾಜ್ಯವೆನಿಸಿದ್ದಿತು.

ದಿನ ಕ್ರಮದಲ್ಲಿ ಗರಿಗಟ್ಟಿಕೊಂಡ ಕೆಳದಿಯ ರಾಜರು ಸ್ವಾದಿ, ಬಿಳಗಿ, ತರೀಕರೆಯ, ಪಾಳೆಯ ಪಟ್ಟುಗಳನ್ನೂ ಜಯಿಸಿ ಸ್ವಾಧೀನ ಮಾಡಿಕೊಂಡರು. ತುಳುವರು ಮರಾಟಿಗರು ತುರುಕರು ಮೊದಲಾದ

ದೇಶಘಾತಕರಾಜ ಜನರ ಹಿಂಸೆಯಿಂದ ಕನ್ನಡಿಗರನ್ನು ಬಹುಕಾಲ ಕಾಪಾಡಿದರು.

ಕೆಳದಿ ಅಥವಾ ಬಿದನೂರು ರಾಜ್ಯವು ದುರ್ಗಮವಾದ ಮಲೆನಾಡಿನಲ್ಲಿ ಸ್ಥಾಪಿಸಲ್ಪಟ್ಟಿತ್ತು. ಈಗಿನ ಜನರಿಂದ ಸಾಮಾನ್ಯವಾಗಿ ಅನಾರೋಗ್ಯ ಹಾಗೂ ಅನಾನುಕೂಲ ಸ್ಥಳವೆಂದು ಭಾವಿಸಲ್ಪಟ್ಟಿರುವ ಮಲೆನಾಡು ಈ ರಾಜ್ಯಭಾರದ ಕಾಲದಲ್ಲಿ ಸೌಭಾಗ್ಯದ ನೆಲೆವೀಡಾಗಿದ್ದಿತು.

ಕರ್ಣಾಟಕದ ಪಶ್ಚಿಮ ಸಮುದ್ರ ತೀರವು ಕೆಳದಿಯ ಅರಸರ ಅಧೀನದಲ್ಲಿಯೇ ಇದ್ದಿತು. ಈ ಸಮುದ್ರ ತೀರದಲ್ಲಿದ್ದ ಕಾರವಾರ, ಮಂಗಳೂರು ಮೊದಲಾದ ಬಂದರುಗಳು ಈ ರಾಜರ ಅಧೀನದಲ್ಲಿಯೇ ಇದ್ದುವು. ವೀರಭದ್ರನಾಯಕ ಮತ್ತು ಶಿವಪ್ಪನಾಯಕ ಇವರುಗಳ ಆಳ್ವಿಕೆಯಲ್ಲಿ ಪೋರ್ತುಗೀಸರು ವ್ಯಾಪಾರದ ನಿಮಿತ್ತದಿಂದ ಈ ಬಂದರುಗಳಿಗೆ ಕಾಲಿಟ್ಟರು.

ಪೋರ್ತುಗೀಸರು ಕೆಳದಿಯ ರಾಜರಲ್ಲಿ ವಿಧೇಯರಾಗಿದ್ದು ಕುಳಿತುಕೊಳ್ಳುವುದಕ್ಕೆ ಸ್ಥಳವಾದ ಮೇಲೆ ಅರಸರನ್ನು ಕೆಣಕಲು ಪ್ರಯತ್ನಪಟ್ಟರು. ಅಲ್ಲದೆ ತಮ್ಮ ಪಾದ್ರಿಗಳಾದ ಕ್ರೈಸ್ತಮತ ಪ್ರಚಾರ ಮಾಡಲು ಪ್ರಾರಂಭಿಸಿದರು. ಇದನ್ನು ಕಂಡ ವೀರಭದ್ರ ನಾಯಕನು ಇವರನ್ನು ಚೆನ್ನಾಗಿ ಶಾಸನ ಮಾಡಿ ಪಾದಾಕ್ರಾಂತರಾಗಿರುವಂತೆ ಮಾಡಿಕೊಂಡುದನ್ನು ಕೆಳದಿನೃಪ ವಿಜಯದಲ್ಲಿ ಓದಬಹುದು.

ಮಹಾರಾಷ್ಟ್ರ ದೇಶದಲ್ಲಿ ಶಿವಾಜಿಯೂ, ಕರ್ಣಾಟಕದಲ್ಲಿ ವೀರಭದ್ರ ನಾಯಕನೂ ಧೈರ್ಯದಿಂದ ಪೋರ್ತುಗೀಸರನ್ನು ಸದೆಬಡಿಯದಿದ್ದರೆ ಆಗ ಪಶ್ಚಿಮಸಮುದ್ರ ತೀರದಲ್ಲಿ ಪೋರ್ತುಗೀಸರು ಒಂದು ರಾಜ್ಯ ಸ್ಥಾಪನೆ ಮಾಡುವುದಕ್ಕೆ ಹಿಂದುಮುಂದು ನೋಡುತ್ತಿರಲಿಲ್ಲ. ಇಂತಹ ಪ್ರಸಂಗದಲ್ಲಿ ವೀರಭದ್ರ ನಾಯಕನೂ, ಶಿವಪ್ಪ ನಾಯಕನೂ ಕರ್ಣಾಟಕದ ಕೀರ್ತಿಯನ್ನುಳಿಸಿರುವರೆಂಬುದನ್ನು ಯಾವ ಇತಿಹಾಸವಿದನೂ ಮರೆಯಲಾರನು.

ಕೆಳದಿಯ ವೀರಶೈವ ರಾಜರು ಪರಾಕ್ರಮಿಗಳೂ, ರಾಜನೀತಿವಿಶಾರದರೂ, ಧಾರ್ಮಿಕರೂ, ನಿಷ್ಪಕ್ಷಪಾತಿಗಳೂ, ಸಾಹಿತ್ಯ ಶಿಲ್ಪಕಲಾದಿಗಳ ಉದ್ಧಾರಕರೂ, ಎಂಬುದನ್ನು ಯಾರೂ ಅಲ್ಲಗಳೆಯಲಾರರು. ಇವರ

ರಾಜ್ಯಭಾರವನ್ನು ಆಗ ಈ ಪ್ರಾಂತದಲ್ಲಿ ಸಂಚರಿಸಿದ ಪೋರ್ತುಗೀಸ ಹಾಗೂ ಆಂಗ್ಲೀಯ ಪ್ರಯಾಣಿಕರು ಚೆನ್ನಾಗಿಯೇ ಕೊಂಡಾಡಿರುವರು.

ಕೆಳದಿ, ಇಕ್ಕೇರಿಗಳ ಸಂಪತ್ತನ್ನೂ ಈ ರಾಜರ ಗುಣವನ್ನೂ ಇವರ ಆಶ್ರಿತರಾದ ಕವಿಗಳು ಮನೋಹರವಾಗಿ ವರ್ಣಿಸಿರುವರು. ಬಿದನೂರು ರಾಜ್ಯ ಚರಿತ್ರೆಯನ್ನು ಓದಿದ ಯಾವನಿಗೂ ಈ ಪದ್ಯಗಳು ಅತಿಶಯೋಕ್ತಿಯೆಂದು ಕಂಡು ಬರುವುದಿಲ್ಲ.

ಶ್ಲೋ॥ ವಾಣೀವಾರ್ಧಿ ಭುವೋರುಹಂ ಪ್ರಥಮಿಕಾಲಾ ಸ್ವೈಕರಂಗಸ್ಥಲೀ।
ದೇವಾನುಗ್ರಲಬ್ಧ ವೃಷ್ಟಿ ವಿಭವೋದಂಚತ್ಸುಭಿಷೋದಯಃ॥
ಭೂಕಾಂತಾ ಮುಖ ಕರ್ಣ ಭೂಷಣತಯಾ ಕರ್ಣಾಟನಾಮಾಂಚಿತೋ।
ಭಾತಿಶ್ರೀ ಕೆಳದೀತಿ ಲೋಕವಿದಿತೋ ದೇಶೋತಿದೇಶೋದಿವಃ ॥೧॥
(ವೀರಶೈವ ಧರ್ಮಶಿರೋಮಣಿ)

ವಾ॥ ಷ॥ ಕರ್ಣಸಮುದಾನ ಶೂರರ್ ಸಕಲಮುನಿಜನಾ।
ಕರ್ಣನೀಯ ಚರಿತ್ರ ಕೆಳದಿಯ ನೃಪರ್ಗೆ ಗೋ।
ಕರ್ಣದಿಂದಾರು ಯೋಜನದೊಳಿಹುದಾಗ್ನೇಯ ದಿಗ್ಭಾಗದಲ್ಲಿ
ಮೆರೆವಾ ॥

ಕರ್ಣಾಟಕಾವನೀಕಾಮಿನಿಯುವದನಕಿದು।
ಕರ್ಣತಾಟಂಕವೆನೆ ಶೋಭಿಸುತ್ತೀಗಳದ।
ಕರ್ಣವಾವೃತಮುಹಿಳೆಣೆಯಿಲ್ಲವೆನಿಸಿಕೊಂಡಿಕ್ಕೇರಿಯೆಂಬ ನಗರಂ॥
(ಕರ್ಣಾಟಕ ಶಿವಗೀತೆ.)

ಮೇಲ್ಕಂಡ ಪದ್ಯಗಳನ್ನು ಬರೆದಿರುವ ಷಡಕ್ಷರಮಂತ್ರಿ ಮತ್ತು ತಿರುಮಲ ಭಟ್ಟ ಇವರು ಅಕ್ಷರಶಃ ಸತ್ಯಾಂಶವನ್ನೇ ಬರೆದಿರುವರೆಂಬುದು ಮುಂದಿನ ವಿಷಯವನ್ನು ಗಮನಿಸಿದವರಿಗೆ ವಿದಿತವಾಗದಿರದು.

**ರಾಜ್ಯ ಪ್ರಸರಣೆಃ—** ರಾಜನಾದವನಿಗೆ ಪರಾಕ್ರಮ, ಸಾಹಸ, ಇವು ಅತ್ಯಂತ ಗಣನೀಯವಾದವುಗಳು. ಕೆಳದಿಯ ಅರಸರಲ್ಲಿ ಸುಪ್ರಸಿದ್ಧರಾದ ಸದಾಶಿವನಾಯಕ, ದೊಡ್ಡಸಂಕಣ್ಣನಾಯಕ, ಚಿಕ್ಕಸಂಕಣ್ಣನಾಯಕ, ವೆಂಕಟಪ್ಪನಾಯಕ, ವೀರಭದ್ರನಾಯಕ, ಶಿವಪ್ಪನಾಯಕ, ಬಸವಪ್ಪನಾಯಕ ಮೊದಲಾದವರು ಅತುಲ ಪರಾಕ್ರಮಿಗಳು. ಇವರು ಉತ್ತರದ ಕಡೆ ಮರಾಟೆಯವರು ವಿಜಾಪುರದ ಸುಲ್ತಾನ ದಕ್ಷಿಣದ ಕಡೆ ಮೈಸೂರೊಡೆಯರು; ಶೀರ್ಯನವಾಬ; ಪಶ್ಚಿಮದಂಡೆ ತುಳುವ ದೊರೆ

ಗಳು; ಮತ್ತು ಪರದೇಶಿಗಳು; ಪೂರ್ವದಿಕ್ಕಿನಲ್ಲಿ ತುಂಟರಾವ ಪಾಳೆಯಗಾರರು ಇವರಲ್ಲದೆ ಅಕ್ಕಪಕ್ಕದ ಸ್ವಾದಿ, ಬಿಳಗಿ, ತರೀಕೆರೆಯ ಅರಸರು ಇವರುಗಳೊಡನೆಲ್ಲ ಯುದ್ಧ ಮಾಡಿ ತಮ್ಮ ಬಾಹುಬಲದಿಂದ ರಾಜ್ಯವನ್ನು ಕಾಪಾಡಿಕೊಂಡಿರುವರು.

ಕರ್ನಾಟಕದರಾಣಿಯರೆನಿಸಿದ ಚೆನ್ನಮ್ಮಾಜಿ ಹಾಗೂ ವೀರಮ್ಮಾಜಿ ಇವರ ಸಾಹಸವು ಯಾವ ಶೂರ ಪುರುಷನಿಗೂ ಕಡಿಮೆಯಾದುದಲ್ಲ.

ಬಿದನೂರರಸರಲ್ಲಿ ಅತ್ಯಂತ ವಿಖ್ಯಾತನಾದವನು ಶಿವಪ್ಪನಾಯಕನು. ಇವನ ಕಾಲದಲ್ಲಿಯಂತೂ ಈ ರಾಜ್ಯವು ಅತ್ಯಂತ ಊರ್ಜಿತಾವಸ್ಥೆಗೆಬಂದಿತು. ಚತುರನೂ ಸಾಹಸಿಯೂ ಆದಿವನು ನಾನಾದೇಶಗಳಿಂದ ಹಸ್ತ ಕೌಶಲ್ಯವುಳ್ಳವರು ವ್ಯಾಪಾರಿಗಳು ವಿದ್ವಾಂಸರು ಮೊದಲಾದವರನ್ನು ಕರೆಸಿ ತನ್ನ ರಾಜ್ಯದ ವಿದ್ಯಾ ವ್ಯಾಪಾರವ್ಯವಸಾಯ ಕೈಗಾರಿಕೆಗಳನ್ನು ಅಭಿವೃದ್ಧಿಗೆ ತಂದನು. ತನ್ನ ರಾಜ್ಯವನ್ನೆಲ್ಲ ಅಳೆಯಿಸಿ ನ್ಯಾಯವಾದ ಕಂದಾಯವನ್ನು ವಿಧಿಸಿದನು. ವ್ಯರ್ಥವಾಗಿದ್ದ ಭೂಮಿಯನ್ನೆಲ್ಲ ಹದಮಾಡಿಸಿದನು. ದೊಂಬಿಕಾರರ ಹುಟ್ಟಡಗಿಸಿದನು. ಜನರಿಗೆ ಭಾರವಾಗಿದ್ದ ವಿಶೇಷನಾದ ಸುಂಕ, ತೆರಿಗೆಗಳನ್ನೆಲ್ಲ ತೆಗೆದು ಹಾಕಿದನು. ವಿದ್ಯೆ ಕಲೆ ಇವುಗಳನ್ನು ಪ್ರಚಾರ ಮಾಡಿದನು. "ಶಿವಪ್ಪನಾಯಿಕನ ಸಿಸ್ತುಎಂಬುದು ಈಗಲೂ ಮಲೆನಾಡಿನಲ್ಲಿ ಗೌರವಾರ್ಹ" ವಾಗಿದೆ. ಎಷ್ಟೋ ಮಂದಿ ಆಧುನಿಕರು ಇವನ ರಾಜ ನೀತಿಯನ್ನು ಕೊಂಡಾಡಿದ್ದಾರೆ.

ಧರ್ಮಕಾರ್ಯಗಳುಃ— ಈ ರಾಜರು ಹಲವು ಧರ್ಮಕಾರ್ಯಗಳನ್ನು ಮಾಡಿರುವರು. ಕೆಳದಿಯಲ್ಲಿ ರಾಮೇಶ್ವರ ದೇವಾಲಯ, ವೀರಭದ್ರ ದೇವಾಲಯ, ಪಾರ್ವತೀ ದೇವಾಲಯಗಳನ್ನು ಕಟ್ಟಿಸಿರುವರು. ಇಕ್ಕೇರಿಯ ಅಘೋರೇಶ್ವರ ದೇವಾಲಯ, ಕೊಲ್ಲೂರು ಮೂಕಾಂಬಿಕೆ ದೇವಾಲಯ, ಸಾಗರದ ವಿಶ್ವೇಶ್ವರ ದೇವಾಲಯ ಮೊದಲಾದುವುಗಳನ್ನು ಕಟ್ಟಿಸಿದ್ದಾರೆ. ಬಾಳೆಹಳ್ಳಿಯ ಧರ್ಮಪೀಠ, ಶೃಂಗೇರಿಯ ಶಾರದಾಪೀಠ, ಮುಳಬಾಗಿಲು ಕೃಷ್ಣಾ ನಂದಸ್ವಾಮಿಗಳ ಮಠ ಮೊದಲಾದುವುಗಳಿಗೆ ನಿಷ್ಪಕ್ಷಪಾತ ಬುದ್ಧಿಯಿಂದ ಸಹಾಯ ಮಾಡಿದ್ದಾರೆ. ಅಲ್ಲದೆ ಕೆಳದಿ, ಕ್ಯಾಸನೂರು, ಗೌರೀಕೆರೆ, ಗೊಗ್ಗೀಹಳ್ಳಿ, ತೊಗರ್ಸಿ ಸಾಗರ ಮೊದಲಾದೆಡೆಗಳಲ್ಲಿ ಹಲವು ಜಂಗಮರ ಮಠಗಳನ್ನು ಕಟ್ಟಿಸಿಕೊಟ್ಟಿದ್ದಾರೆ.

ಅಲ್ಲದೆ ತಮ್ಮ ಆಶ್ರಯದಲ್ಲಿದ್ದ ಕವಿಗಳಿಗೂ ಪಂಡಿತರಿಗೂ ಎಷ್ಟೋ ಮಾನ್ಯಗಳನ್ನು ಬಿಟ್ಟುಕೊಟ್ಟಿದ್ದಾರೆ. ತಮಗೆ ವಿಧೇಯರಾಗಿನಡೆದ ಈಸ್ಟ ಇಂಡಿಯಾ ಕಂಪೆನಿಯ ಹಾಗೂ ಕ್ರೈಸ್ತರಿಗೂ ಸಹಾಯಮಾಡಿದ್ದಾರೆ.

ವಿಶ್ವನಾಥಪುರ, ತೀರ್ಥರಾಜಪುರಿ, ಶಿವರಾಜಪುರ, ವೆಂಕಟಪುರ, ಮೊದಲಾದನೂರಾರು ಗ್ರಾಮಗಳನ್ನು ಬ್ರಾಹ್ಮಣರಿಗೆ ದಾನಮಾಡಿದ್ದಾರೆ.

ಇದಲ್ಲದೆ ತಮ್ಮರಾಜ್ಯದಲ್ಲಿನಎಲ್ಲದೇವಾಲಯಗಳಲ್ಲಿಯೂ ಪೂಜಾದಿಕಾರ್ಯಗಳು ನಡೆಯುವಂತೆ ವ್ಯವಸ್ಥೆ ಮಾಡಿದ್ದಾರೆ. ಶ್ರಾವಣಮಾಸ ಕಾರ್ತೀಕಮಾಸಗಳಲ್ಲಿ ದೇವತಾಸೇವೆಯೂ ದೀಪಾರಾಧನೆಮುಂತಾದ ಕಾರ್ಯಗಳೂ ಉತ್ತಮರೀತಿಯಿಂದ ನಡೆಯುವಂತೆ ವ್ಯವಸ್ಥೆಮಾಡಿದ್ದಾರೆ.

ರಾಜಕೀಯಕ್ಕೂ ಅನುಕೂಲವಾಗುವಂತೆ ಭುವನಗಿರಿದುರ್ಗ ಚನ್ನಗಿರಿದುರ್ಗ ಮೊದಲಾದ ದುರ್ಗಮದುರ್ಗಗಳನ್ನೂ ಕೋಟೆಕೊತ್ತಲಗಳನ್ನೂ ವಿಪುಲವಾಗಿಕಟ್ಟಿಸಿ ದೇಶೋಪಕಾರಮಾಡಿದ್ದಾರೆ.

**ಸಾಹಿತ್ಯಸೇವೆ**:—ಕೆಳದಿಯರಾಜರು ಸಾಹಿತ್ಯಸೇವೆಯಲ್ಲಿಯೂ ಉತ್ತಮಸ್ಥಾನವನ್ನೇ ಸೇರುವರು. ಶಿವತತ್ವ ರತ್ನಾಕರವನ್ನು ಬರೆದಬಸವರಾಜನು ಕರ್ಣಾಟಕಭೋಜನೆಂದರೂ ಸಲ್ಲುವದು. ಅಲ್ಲದೆ ಇವನು ಸಂಸ್ಕೃತದಲ್ಲಿಯೇ ಸುಭಾಷಿತ ಸುರದ್ರುಮವೆಂಬಗ್ರಂಥವನ್ನೂ ಕರ್ಣಾಟಕ ಸಂಸ್ಕೃತಮಿಶ್ರವಾಗಿ ಸೂಕ್ತಿಸುಧಾಕರವೆಂಬ ವಸ್ತುಕ ಕಾವ್ಯವನ್ನೂ ರಚಿಸಿರುವನು. ಹರದತ್ತಾಚಾರ್ಯನ ಪಂಚಶ್ಲೋಕಿಗೆ ವ್ಯಾಖ್ಯಾನವನ್ನು ಬರೆದವನೂ ಈ ಮಹಾರಾಯನೇ ಷಡಕ್ಷರಮಂತ್ರಿಯು ವೀರಶೈವಧರ್ಮಶಿರೋಮಣಿಯನ್ನು ಬರೆದುದು, ನಿರ್ವಾಣಮಂತ್ರಿಯು ಕವಿಕರ್ಣರಸಾಯನಕ್ಕೆ ವ್ಯಾಖ್ಯಾನಬರೆದುದೂ ಇವನಪ್ರೇರಣೆಯಿಂದಲೇ ಎಂದುತಿಳಿದು ಬರುವುದು.

ಹಿರಿಯವೆಂಕಟಪ್ಪನಾಯಕನು ಕವಿತಿರುಮಲಭಟ್ಟನಿಂದ ಕರ್ಣಾಟಕಶಿವಗೀತೆ ಶಿವಾಷ್ಟಪದಿಗೀತ ಗೌರೀವರಗಳನ್ನು ಬರೆಸಿದನು. ರಂಗನಾಥ ದೀಕ್ಷಿತನಿಂದ ತಂತ್ರಸಾರವೆನಿಪ ಗ್ರಂಥದವ್ಯಾಖ್ಯಾನವನ್ನೂ ಅಶ್ವಪಂಡಿತನಿಂದ ಸೂಪ್ರಯ ಎಂಬಅಶ್ವಶಾಸ್ತ್ರವನ್ನೂ ಬರೆಯಿಸಿದವನು ಈ ವೆಂಕಟಪ್ಪನಾಯಕನೇ.

ಶಿವಸಹಸ್ರನಾಮವ್ಯಾಖ್ಯಾನವನ್ನು ಬರೆದ ಸಂಗಮೇಶನೂ, ವೀರಶೈವಾನಂದ ಚಂದ್ರಿಕೆಯನ್ನು ಬರೆದ ಮರಿತೋಂಟದಾರ್ಯನೂ ಶಿವತತ್ವರ

ತ್ನಾಕರಾದಿಗ್ರಂಥಕರ್ತನಾದ ಬಸವಭೂಪಾಲನ ಆಸ್ಥಾನಕವಿಗಳೇ ಎಂದು ತಿಳಿದು ಬರುತ್ತದೆ.

ಮೇಲ್ಕಂಡ ಗ್ರಂಥಗಳೇ ಅಲ್ಲದೆ ಈಅರಸರು ಇನ್ನೂ ಹಲವುಗ್ರಂಥಗಳನ್ನೂ ಬರೆಯಿಸಿರಬಹುದೆಂದು ಕಂಡುಬರುತ್ತದೆ. ಈ ರಾಜರುಗಳವಿಷಯವಾಗಿ ಲಿಂಗಣ್ಣಮೊದಲಾದಕವಿಗಳು "ಕೆಳದಿ ನೃಪವಿಜಯವೇ ಮೊದಲಾದ ಚರಿತ್ರಗ್ರಂಥಗಳನ್ನೂ ಬರೆದಿದ್ದಾರೆ."

ಇದುವರೆಗೂ ಹೇಳಿದಂತೆ ಕೆಳದಿಯವೀರಶೈವರಾಜರು ಪರಾಕ್ರಮಿಗಳೂ, ಸಾಹಿತ್ಯವಿದರೂ ನಿಷ್ಪಕ್ಷಪಾತಿಗಳೂ ಜನಾನುರಾಗಿಗಳೂ ಆಗಿ ೨॥ ಶತಮಾನಕಾಲದಕ್ಷತೆಯಿಂದ ಕರ್ಣಾಟಕದಸೇವೆಮಾಡಿದರೆಂದು ವಾಚಕರಿಗೆತಿಳಿದು ಬಂದಂತಾಯ್ತು. ಇನ್ನು ಇಂತಹರಾಜ್ಯವು ಹೇಗೆನಾಶವಾಯಿತೆಂಬುದನ್ನು ವಿವೇಚಿಸಿ ಈ ಲೇಖನವನ್ನು ಮುಗಿಸಲಾಗುವದು.

**ಕೆಳದಿರಾಜ್ಯದ ಕಡೆಗಾಲಃ**—ಕೆಳದಿಯರಾಜ್ಯವನ್ನು ಆಳಿದವರಲ್ಲಿ ಸೋಮಶೇಖರರಾಜನೇ ಕಡೆಯವನು. ಇವನು ಕ್ರಿ. ಶ. ೧೭೫೭ರಿಂದ ೧೭೬೩ರ ವರೆಗೆ ರಾಜ್ಯವಾಳಿದನು. ಹೆಸರಿಗೆಮಾತ್ರ ಸೋಮಶೇಖರ ನಾಯಕನಿದ್ದರೂ ರಾಜಸೂತ್ರವೆಲ್ಲ ಇವನ ಸಾಕುತಾಯಿಯಾದ ವೀರಮ್ಮಾಜಿಯ ಕೈಯಲಿತ್ತು.

ವೀರಮ್ಮಾಜಿಯ ರಾಜ್ಯಭಾರದಲ್ಲಿ ಬಹಳ ಅಮಂಗಲಹಾಗೂ ಅಸಮಂಜಸ ಕಾರ್ಯಗಳಾದುವೆಂದುತಿಳಿಯುತ್ತದೆ. ಈಕೆಯು ಅಸದ್ವರ್ತನೆಯುಳ್ಳವಳಾಗಿದ್ದಳೆಂದು ಕೆಲವು ಇತಿಹಾಸಕರು ಹೇಳುವರು. ಬಹುಮಟ್ಟಿಗಲ್ಲದಿದ್ದರೆ ಕೆಲಮಟ್ಟಿಗಾದರೂ ಇದು ನಿಜವೆಂದು ತೋರುತ್ತದೆ.

ವೀರಮ್ಮಾಜಿಗೂ ಆಗಿನ ಕಾಲದಲ್ಲಿದ್ದ ಬಾಳೆಹಳ್ಳಿ ವೀರಸಿಂಹಾಸನಾಧೀಶ್ವರರಿಗೂ ಏನೋ ಕಾರಣಾಂತರದಿಂದ ವೈಮನಸ್ಯ ಬಂದಿತೆಂದೂ ಆಗ ವೀರಮ್ಮಾಜಿಯು ಆ ಸಂಸ್ಥಾನದ ಮೇಲೆ ಸೈನ್ಯ ಕಳುಹಿಸಿ ಲೂಟಿ ಮಾಡಿಸಿ ಮಠಕ್ಕೆ ಬೆಂಕಿ ಇಡಿಸಿದಳೆಂದೂ ಅದರ ಐಶ್ವರ್ಯವನ್ನೆಲ್ಲ ಶೃಂಗೇರೀ ಮಠಕ್ಕೆ ಕೊಡಿಸಿದಳೆಂದೂ ಜನ ಜನಿತವಾದ ಒಂದು ವಾರ್ತೆಯಿದೆ.

ಆದರೆ ಕೆಳದೀ ನೃಪ ವಿಜಯದಲ್ಲಿ ಇದು ಹೇಳಲ್ಪಟ್ಟಿಲ್ಲ. ವೀರಮ್ಮಾಜಿಯು ತನ್ನ ಆಳಿಕೆಯ ಕಡೆಗಾಲದಲ್ಲಿ ಚಿನ್ನ ಭಂಡಾರದ ಹೂವ

ಯ್ಯನನ್ನು ಕಳುಹಿಸಿ ಆಗ ಶೃಂಗೇರಿಯಲ್ಲಿದ್ದ ಸಚ್ಚಿದಾನಂದ ಭಾರತಿ ಸ್ವಾಮಿಗಳನ್ನು ವೇಣು ಪುರಕ್ಕೆ (ಬಿದನೂರಿಗೆ) ಕರತರಿಸಿ ಬಣ್ಣದ ಚಾವಡಿಯಲ್ಲಿ ಸ್ವಾಮಿಗಳ ದರ್ಶನತೆಗೆದುಕೊಂಡು ಅವರಿಗೆ ಸ್ಫಟಿಕ ಲಿಂಗ, ರತ್ನಖಚಿತ ಗೋಪಾಲ ಕೃಷ್ಣ ಪ್ರತಿಮೆ, ತಾಲಿ, ಸರಪಣಿ ಪದಕ ಮೊದಲಾದ ಬೆಲೆ ಬಾಳುವ ಆಭರಣಗಳನ್ನು ಕೊಟ್ಟು ದೇವರಿಗೆ ಎಪ್ಪತ್ತುನಾಲ್ಕು ವರಹ ಭೂಸ್ವಾಸ್ತಿಯನ್ನೂ ಮಠಕ್ಕೆ ಮುನ್ನೂರು ವರಹ ಆಸ್ತಿಯನ್ನೂ ಕೊಟ್ಟು ಮಠದ ಆಗಿನ ಸಾಲವನ್ನೆಲ್ಲ ತೀರಿಸಿದಳೆಂದೂ ಕೆಳದಿ ನೃಪ ವಿಜಯದಲ್ಲಿದೆ. ಈ ಕಥೆಯನ್ನು ಓದಿದರೆ ಬಾಳೆಹಳ್ಳಿ ಪೀಠದ ವಿಷಯವು ನಿಜವೆಂದು ಊಹಿಸಲು ಕಾರಣವಿದೆ.

ಕೆಳದಿಯ ರಾಜರು ವೀರಶೈವರು. ಎಷ್ಟೋ ಜಂಗಮ ಮಠಗಳನ್ನು ಉದ್ಧಾರ ಮಾಡಿದವರು. ವೀರಶೈವ ಧರ್ಮ ಗ್ರಂಥಗಳನ್ನು ಬರಿಸಿದವರು. ಇಂತಹ ವಂಶದಲ್ಲಿ ಹುಟ್ಟಿ ಬೆಳೆದ ವೀರಮ್ಮಾಜಿಯು ಏನು ಕಾರಣ ಬಾಳೆಹಳ್ಳಿ ಧರ್ಮ ಪೀಠವನ್ನು ಮರೆತಳು ? ಪರ ಧರ್ಮದವರಿಗೆ ಸಹಾಯ ಮಾಡುವುದು ನೀತಿಯಾದರೂ ಅಂತಹ ಸಮಯದಲ್ಲಿ ಸ್ವಧರ್ಮದ ಗುರುಗಳನ್ನು ಮರೆಯುವುದರ ರಹಸ್ಯವೇನು ? ಇತ್ಯಾದಿ ಪ್ರಶ್ನೆಗಳಿಗೆ ವೀರಮ್ಮಾಜಿ ಚರಿತ್ರೆಯಲ್ಲಿ ಉತ್ತರಗಳು ಕಂಡು ಬರದೇ ಇರುವುದರಿಂದ ಜನ ಜನಿತವಾದ ವಾರ್ತೆಯು ನಿಜವೆಂದು ನಂಬಲವಕಾಶವಿದೆ.

ವೀರಮ್ಮಾಜಿಯ ರಾಜ್ಯಭಾರದಲ್ಲಿ ರಾಜ್ಯದಲ್ಲಿ ಬಿಗಿತಪ್ಪಿತು. ಪುಂಡಾಟಗಳು ವೃದ್ಧಿಯಾದುವು. ಒಳಸಂಚಗಳು ನಡೆಯಲಾರಂಭವಾದವು. ರಾಜ ದ್ರೋಹಿಗಳು ಮುಂದುವರಿದರು. ಇಂತಹ ಸಮಯವನ್ನೇ ಎದುರು ನೋಡುತ್ತಿದ್ದ ಧೂರ್ತನೂ, ಸ್ವಾಮಿ ದ್ರೋಹಿಯೂ, ಚಾಣಾಕ್ಷನೂ ಆದ ಹೈದರನಿಗೆ ಬಿದನೂರು ರಾಜ್ಯದ ರಹಸ್ಯವನ್ನೆಲ್ಲ ಅರಿತಿದ್ದ ಲಿಂಗಣ್ಣ ಮೊದಲಾದವರ ಸಹಾಯ ಸಿಕ್ಕಿತು. ಕ್ರಿ. ಶ. ೧೭೬೩ರಲ್ಲಿ ಹೈದರನು ಬಿದನೂರನ್ನು ಹಿಡಿದನು. ಆಗವೀರಮ್ಮಾಜಿಯು ಸಾಮ, ದಾನಗಳಿಂದ ಹೈದರನನ್ನು ತೃಪ್ತಿ ಪಡಿಸ ಹೋದರೂ ಧೂರ್ತನಾದ ಹೈದರನ ಮುಂದೆ ಸಾಗದಂತಾಯ್ತು.

ವೀರಮ್ಮಾಜಿಯು ಕಡೆಗೆ ಯತ್ನವಿಲ್ಲದೆ ಸಂಜಯ್ಯನೊಡನೆ ಬಳ್ಳಾಳರಾಯನ ದುರ್ಗಕ್ಕೆ ಓಡಿ ಹೋದಳು. ವೀರಮ್ಮಾಜಿಯು ಓಡಿ ಹೋಗುವಾಗ ಅರಮನೆಗೆ ಬೆಂಕಿಹಾಕಿಸಿದ್ದಳು. ಜನರು ಮಕ್ಕಳು ಮರಿಗಳನ್ನೆಲ್ಲ ಕಟ್ಟಿಕೊಂಡು ಕಾಡಿಗೆ ಓಡಿದರು. ಹೈದರನು ಲಿಂಗಣ್ಣನು ತೋರಿಸಿದ ಗುಪ್ತಮಾರ್ಗದಿಂದ ಕೋಟೆಯೊಳಗೆ ಬಂದು ಅರಮನೆಯ ಬೆಂಕಿಯನ್ನೂ ಆರಿಸಿ ಸುಮಾರು ೧೮ ಕೋಟಿ ರೂಪಾಯಿಯಷ್ಟು ಐಶ್ವರ್ಯವನ್ನು ವಶಪಡಿಸಿಕೊಂಡು ಸಂಪೂರ್ಣವಾಗಿ ನಗರ ಸ್ವಾಧೀನವಾದ ಮೇಲೆ ಬಿದನೂರೆಂಬ ಹೆಸರನ್ನು ತೊಡೆದು ಹೈದರ್ ನಗರವೆಂದು ಹೆಸರಿಟ್ಟನು. ಅದು ಈಗ 'ನಗರ' ಎಂದು ಮಾತ್ರ ರೂಢಿಯಾಗಿದೆ.

ಸಾಹಸಿಯಾದ ಹೈದರನು ಬಳ್ಳಾಳರಾಯನದುರ್ಗದಲ್ಲಿದ್ದ ವೀರಮ್ಮಾಜಿ,ನಂಜಯ್ಯ ಮುಂತಾದವರನ್ನು ಸೆರೆ ಹಿಡಿಸಿಮಧುಗಿರಿ (ಮದ್ದಗಿರಿ) ಯಲ್ಲಿ ಸೆರೆಹಾಕಿದನು. ತನಗೆ ಸಹಾಯ ಮಾಡಿದ್ದ ಬಿದನೂರುರಾಜದ್ರೋಹಿಗಳನ್ನೂ ಕಡೆಗೆ ಕೊಲ್ಲಿಸಿದನು. ನಗರದಲ್ಲಿ ತನ್ನರಾಜ್ಯವನ್ನು ಸ್ಥಾಪಿಸಿದನು.

ಇತ್ತ ಪುಣೆಯ ಶ್ರೀಮಂತ ಮಾಧವರಾಯ ಪೇಶ್ವೆಯು ಮದ್ದಗಿರಿಯನ್ನು ಮುತ್ತಿ ಸ್ವಾಧೀನಪಡಿಸಿಕೊಂಡು ಅಲ್ಲಿ ಸೆರೆಬಿದ್ದಿದ್ದ ಕೆಳದಿಯ ರಾಣಿ ವೀರಮ್ಮಾಜಿ ಇತರ ರಾಜ ಬಂಧುಗಳನ್ನು ನೋಡಿ ಮನಮರುಗಿ ಅವರನ್ನು ಪುಣೆಗೆ ಸಾಗಿಸಲು ಅಪ್ಪಣೆ ಮಾಡಿದನು. ವೀರಮ್ಮಾಜಿಯು ಮಾರ್ಗದಲ್ಲೇ ವಿಧಿವಶಳಾದಳು.

ಉಳಿದವರು ಪುಣೆಯಲ್ಲಿಯೂ ಆ ಮೇಲೆ ಮರಾಟಿಗರು ಮತ್ತು ಹೈದರ ಇವರಿಗೆ ಮತ್ತೆ ಯುದ್ಧ ಪ್ರಾರಂಭವಾಗುವ ಸಂದರ್ಭ ಒದಗಿದುದರಿಂದ ನರಗುಂದಕ್ಕೆ ಸಾಗಿಸಲ್ಪಟ್ಟರು. ಗತವೈಭವವುಳ್ಳ ಕೆಳದಿಯ ರಾಜಸಂತತಿಯವರು ಇಂದಿಗೂ ನರಗುಂದದಲ್ಲಿರುವರು.

ಇಂತು ಶಿವಕೃಪಾಬಲದಿಂದ ಚೌಡಪ್ಪನಾಯಕನು ಕ್ರಿ. ಶ. ೧೫೦೦ ರಲ್ಲಿ ಸ್ಥಾಪಿಸಿದ್ದ ಈ ರಾಜ್ಯವು ವೀರಮ್ಮಾಜಿಯ ಕಾಲವಲ್ಲಿ ಕ್ರಿ. ಶ. ೧೭೬೩ರಲ್ಲಿ ಕಾಲಪುರುಷನ ಕಠಿಣ ವಕ್ತ್ರಕ್ಕೆ ಸಿಕ್ಕು ನಾಶವಾಯ್ತು.

ವೀರಶೈವರು ಪಾರಮಾರ್ಥಿಕ ಸಾಮ್ರಾಜ್ಯದಲ್ಲಿಯೂ ಸಾಹಿತ್ಯಸಾಮ್ರಾಜ್ಯದಲ್ಲಿಯೂ ಹೆಸರ್ಪಡೆದಿರುವಂತೆಯೇ ರಾಜ್ಯಭಾರದಲ್ಲಿಯೂ

ಅದ್ವಿತೀಯ ಶಕ್ತಿಯುಳ್ಳರಾಗಿದ್ದರೆಂಬುದಕ್ಕೆ ಇನ್ನೂರೈವತ್ತು ವರ್ಷಕಾಲ ಕರ್ಣಾಟಕದಲ್ಲಿ ಉದಾರ ಭಾವದಿಂದ ರಾಜ್ಯಭಾರ ಮಾಡಿದ ಕೆಳದಿಯ ವೀರಶೈವ ಅರಸರೇ ಸಾಕ್ಷಿಯಾಗಿರುವರು.

**ಕಂದ**—ವರವೀರಶೈವ ರಾಜರ್ ।
ಧರೆಯೊಳ್ ಜಸವಾಂತು ಬಾಳ್ದ ಚರಿತೆಯನೆಲ್ಲಂ ॥
ಕರದರ್ಪಣದೊಳ್ ತೋರುವ ।
ಪರಿಯಂ ಪಿರಿದೆಂದು ಪೇಳ್ವರಲ್ಲವೆ ಜಾಣರ್ ॥

ಇತಿ ಶಾಂತಿ ಶ್ಶಾಂತಿ ಶ್ಶಾಂತಿಃ

---

# ಶ್ರೀ ಬಸವಣ್ಣನವರ ಬಗ್ಗೆ ಹೊಸದಾಗಿ ಸಿಕ್ಕ ಶಿಲಾಲೇಖವು.

(ಲೇಖಕ:— ರಾ॥ ಸಾ॥ ಪಿ. ಜಿ. ಹಳಕಟ್ಟಿ-ವಿಜಾಪುರ.)

---

[ ಟೀಪು:— ಈ ಶಿಲಾಶಾಸನವನ್ನು ಮೊದಲು ಶೋಧಿಸಿದವರು ಧಾರವಾಡ ಇತಿಹಾಸ ಮಂಡಲದ ಪರವಾಗಿ ಪ್ರಯತ್ನಿಸುತ್ತಲಿರುವ ಮಿ॥ ರಾಜಪುರೋಹಿತರವರು. ಇವರು ಹುಕ್ಕೇರಿ ಭಾಗದಲ್ಲಿ ಪ್ರವಾಸ ಮಾಡುತ್ತಿರುವಾಗ ಇದರ ಅಚ್ಚನ್ನು ತೆಗೆದುಕೊಂಡಿದ್ದರು. ಆ ಮೇಲೆ ಇವರು ವಿಜಾಪುರಕ್ಕೆ ಬಂದಾಗ್ಗೆ ಅದನ್ನು ನನ್ನ ಕಡೆಗೆ ಕೊಡಲಾಗಿ, ಅದನ್ನು ಓದುವ ಕುರಿತು ನಾನು ರಾ। ರಾ। ಹಲಸಂಗಿ ಚನ್ನಮಲ್ಲಪ್ಪನವರ ಕಡೆಗೆ ಕಳಿಸಿದೆನು. ಅಚ್ಚು ಚನ್ನಾಗಿರದಿದ್ದರೂ, ಅವರು ಬಹಳ ಶ್ರಮಪಟ್ಟು ಶಿಲಾಲೇಖದ ಬಹು ಭಾಗವನ್ನು ಓದಿದರು. ಆದರೆ ಅಚ್ಚಿನಲ್ಲಿಯ ಕೆಲವು ಮಹತ್ವದ ಭಾಗಗಳು ಚನ್ನಾಗಿ ಮೂಡದೆ ಇದ್ದದರಿಂದ ಮೂಲ ಶಿಲಾಲೇಖವನ್ನು ಪರೀಕ್ಷಿಸುವ ಕುರಿತು ಅವರೂ ರಾಜಾರಾಮ ಕಾಲೇಜದ ಸಂಸ್ಕೃತ ಪ್ರೊಫೆಸರರಾದ ಮಿ॥ ನಂದೀಮಠ ಇವರೂ ಅರ್ಜುನವಾಡಕ್ಕೆ ಹೋಗಿ ಶಿಲಾಲೇಖದ ಹೊಸ ಅಚ್ಚುಗಳನ್ನು ತೆಗೆದುಕೊಂಡು ಬಂದರು. ಈ ಎಲ್ಲ ಅಚ್ಚುಗಳ ಸಹಾಯದಿಂದ

ಮೇಲ್ಕಂಡ ಉಭಯ ಮಹಾಶಯರು ಈ ಶಿಲಾಲೇಖದ ಬರಹವನ್ನು ಕಂಡು ಹಿಡಿದು ಅದರ ಪ್ರತಿಯನ್ನು ನನ್ನ ಕಡೆಗೆ ಕಳಿಸಿಕೊಟ್ಟಿರುವರು. ಇದೇ ಇಲ್ಲಿ ಪ್ರಸಿದ್ಧಿಸಲ್ಪಟ್ಟದೆ. ...ಸಂಪಾದಕ]

## ಮೂಲ ಶಿಲಾಲೇಖವು.

೧. ನಮಸ್ತುಂಗ ಸಿರ(=ಶಿರ)ಶ್ಚುಂಬಿ ಚಂದ್ರ ಚಾಮರ ಚಾರ-

೨. ವೇ ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂ-

೩. ಭವೇ॥ ಶ್ರೀಯಂ ಶ್ರೀಕಳ್ಲಿನಾಥಂ ಕುಡು-

೪. ಗೆ ಭವಹರಂ ಭಕ್ತ ಬ್ರಿಂದಕೆ(=ವೃಂದಕ್ಕೆ) ಗೌರೀ ಜಾಯಾ ಕಾಯಾ-

೫. ನುಷಂಗಾಕಳಿತ ಲಳಿತತಾ ಪ್ರೋಲ್ಲಸದ್ವಾಮಭಾಗಂ ಸ್ವೀಯ ಸ್ವಾ-

೬. ಯತ್ತ ಶಕ್ತಿತ್ರಯ ಮಯಮಹಿಮಂ ದೇವ ದಾಯಾದ ಮಾ-

೭. ಯಾ ಪಾಯಾಭಿಪ್ರಾಯಲೀಲಂ ಪ್ರಣತ ಜನ ದುರಂತಾಸ ಸಂಘಟಿ ಶೀಲಂ॥

೮. [ಶ್ರೀ]ಮತ್ತರದವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಸ್ವರ (=ಶ್ವರ) ಮಾದಿರಾಜನ ತನೂ-

೯. ಜಂ ಬಸವರಾಜನ ಮಹಿಮೆಯೆಂತೆಂದಡೆ॥ ಮಂಗಳಕೀರ್ತಿ ಪುರಾತನ ಜಂಗಮ-ಲಿಂ-

೧೦. ಗೈಕಭಕ್ತಿ ನಿಭ್ಭರಲೀಲಾ ಸಂಗಂ ಸಂಗನಬಸವಂ ಸಂಗತಿಯಂ ಮಾಳ್ಕೆ ಭಕ್ತಿಯೊಳ-

೧೧. ಗನವರತಂ॥ ಯಾದವ ಭೂಮಿಪಾಳರಿಳೆಯಂ ಚತುರಧ್ಧಿ (=ಚತುರಬ್ಧಿ) ಪರೀ-

೧೨. ತೆಯಂ ನಿಸಗ್ಗೋದಯರಾಳ್ವ ರನ್ತವರೊಳಸ್ವ(=ಶ್ವ) ಚಮೂಚಯ ವಾಧ್ಧಿ ಸಿಂಹಣ-

೧೩. ಕ್ಷ್ಮಾದಯಿತಂ ತದಗ್ರ ತನಯ ಪ್ರಭವಂ ನ್ರಿಪ (=ನೃಪ)ಕಂನರಂ ಸಮಸ್ತೋದಧಿ-

೧೪. ವೇಳೆಯಿಂ ಪೊರಗೆ ಜೆಳ್ಗೊಡೆಯೊಳ್ನೆಳಲಂ ನಿಮಿರ್ಚಿದಂ॥ ಸಲೆ ಭೂದೇವ-

೧೫. ಕ್ಕಳ್ಗಿತ್ತಲಸದೆ ಗೋ—ಭೂಮಿ—ಹೇಮ—ವಸ್ತ್ರಾದಿಗಳಂ ಮಲೆ ವರಸುಗಳೊ-

೧೬. ಕೊಂಬಂ ಬಲವಂತಂ ಕಂನರಂ ಪ್ರತಾಪಸಹಾಯಂ॥ ಸ್ವಸ್ತಿ ಸಮಸ್ತ-

೧೭. ಭುವನಾಶ್ರಯ ಶ್ರೀ ಪ್ರಿಥ್ವೀ (ಪೃಥ್ವೀ) ವಲ್ಲಭ ಮಹಾರಾಜಾಧಿರಾಜ ಪರಮೇ-

೧೮. ಶ್ವರ ಪರಮಭಟ್ಟಾರಕ ದ್ವಾರಾವತೀ ಪುರವರಾಧೀಶ್ವರಯಾ-

೧೯. ದವ-ಕುಳ-ಕಮಳ-ಕಳಿಕಾ-ವಿಕಾಸ-ಭಾಸ್ಕರರಯರಿರಾಯ(=ಅರಿರಾಯ)

೨೦. ಜಗಜ್ಝಂಪ ಮಾಳವರಾಯ- ಮದನ- ತ್ರಿನೇತ್ರ ಗೂರ್ಜ್ಜರರಾಯ-ಭಯಂಕರ-

೨೧. ತೆಲುಂಗರಾಯ- ಸ್ಥಾಪನಾಚಾರ್ಯ್ಯ ಇತ್ಯಾದಿ ನಾಮಾವಳೀ ಸಮಳಂಕ್ರಿತ (=ಕೃತ)

೨೨. ಶ್ರೀಮತ್ಪ್ರೌಢ ಪ್ರತಾಪ ಚಕ್ರವರ್ತ್ತಿ ಶ್ರೀ ಕಂನರ ದೇವಂ ದೇವಗಿ-

೨೩. ರಿಯ ನೆಲೆವೀಡಿನೊಳು ಸುಖಸಂಕಥಾ ವಿನೋದದಿನನವರತಂ ರಾ-

೨೪. ಜ್ಯಂ ಗೆಯ್ಯುತ್ತುಮಿರೆ ತತ್ಪಾದ ಪದ್ಮೋಪಜೀವಿ॥ ಚಿಕ್ಕನ ಚಿಕ್ಕಮಗಂ ವಿಭವಕ್ಕೆ-

೨೫. ಕುಬೇರಂಗೆ ಸೆಣಸುವಂ ರಾಯರುಮಂ ಮಿಕ್ಕಂ ಬೀಚುಗಿಯೌ-

೨೬. ದಾರ್ಯ್ಯಕ್ಕಾರಿಂ ಪಿರಿಯನಾತನಂಣಂ ಮಲ್ಲಂ|| ಆತನ ತನೂಭವಂ॥

೨೭. ಚಾವುಂಡಂ ಪಾರ್ವ್ವತೀ ವಲ್ಲಭ ಚರಣ ಸರೋಜದ್ವಯಾಮೋದಭ್ರಿಂಗಂ (=ಭೃಂಗಂ) ಚಾವುಂ-

೨೮. ಡಂ ತ್ಯಾಗ-ಭೋಗಾನುಭವ ಭವಸುಖಶ್ರೀ- ವಧೂನ್ರಿತ್ಯ (=ನೃತ್ಯ)-ರಂಗಂ ಚಾವುಂಡಂ ಸಾಮ-

೨೯. ಭೇದ ಪ್ರಭ್ರುತಿ (=ಪ್ರಭೃತಿ) ಸಕಳ ಮಂತ್ರಾಂಗ ವಿದ್ಯಾಸಮುದ್ರಂ ಚಾವುಂಡಂ ವೀರ- ವೈರಿ- ಪ್ರ-

೩೦. ಕರ ಸಮರ ಸಂಘಟ್ಟ ಕಾಳಾಗ್ನಿ ರುದ್ರಂ|| ಯೆನೆ (=ಎನೆ) ನೆಗಳ್ದಾ ಚಾವುಂಡನ ಮನದನ್ನಂ-

೩೧. ನಾಗರಾಜನಕ್ಖಿಳ (=ನಖಿಳ) ನಿಯೋಗಜ್ಞ (=ನಿಯೋಗಜ್ಞ) ನೆನಿಪ್ಪ ದಿವಾಕರ ದೇವನ ಪುತ್ರಂ ವಾಣಸಾನ್ವ-

೩೨. ಯಾಂಬರಮಿತ್ರಂ॥ ತ್ಯಾಗಗುಣಕ್ಕೆ ತಾಯ್ವನೆ ಸಮಸ್ತ ನ್ರಿಪಾಳ (=ನೃಪಾಳ) ನಿಯೋಗ ವ-

೩೩. ತ್ರ್ಯನಾ ಶ್ರೀಗೆ ನಿವಾಸಮಿಪ್ಪರ ವಿಶಿಷ್ಟರ ತೋಸಣ ಪೋಸಣಂಗ ಳೊಳಪ್ಪಗ-

೩೪. ರಮೆಂದು ಬಂಣ್ನಿಸುವುದೀ ಧರೆ ಪಂಡಿತಪಾರಿಜಾತನಂ ನಾಗನನಾ ಜನಾರ್ದನನ ಭ.

೩೫. ಕ್ತಿ ಭರ ಪ್ರಭವಾನುರಾಗನಂ॥ ಸಂಗನಬಸವನ ಅಪ್ರ...ಗ್ಯಕಂ-

೩೬. ದೇವರಾಜ ಮುನಿಪನ ತನಯಂ ಜಂಗಮ ಪುರುಸಂ...ರ-

೩೭. ಸಂಗಂ ಪ್ರಿಯ ಸುತನೆನಿಪ್ಪ ಕಲಿದೇವರಸಂ॥ ಕಲಿದೇವಮುನಿ-

೩೮. ಪನಾತ್ಮಜ ಸಲೆ ಮೂಜಗದೊಳಗೆ ಮೆರೆವ ಮಾನವ ದೇವಂ ಗೆಲಿದಂ ಅಸನ (=ಅಶನ)-

೩೯. ಬೆಸಸವ[ಂ] ಭಲರಧಿಕಂ ಹಾಲಬಸವಿದೇವ ಮುನೀಸಂ(=ಮುನೀಶಂ) ಸ್ವಸ್ತಿಸನುಸ್ತ-

೪೦. ಭುವನಾಸ್ರೆಯಂ [=ಶ್ರಯಂ] ಮಹಾಮಾಹೇಸ್ವರಂ [=ಶ್ವರಂ] ಕಪಿ ಳಾಸಪುರವ-

೪೧. ರಾಧೀಸ್ವರರುಂ (=ಶ್ವರರುಂ) ಸುವಂರ್ಣ್ನ ಪ್ರಿಸಭ (=ವೃಸಭ)ಧ್ವಜಂ ತೇಸಠ್ಠಿ ಪುರಾಥ ಪಾದಾರ್ಚ್ಚಕ—

೪೨. ರುಂ ಮಹಾಲಿಂಗ—ಜಂಗಮ- ಪ್ರಸಾದನಿಯುತರುಂ ಸಮ-

೪೩. ಯಭಕ್ತಿ ಸಂಪನ್ನ ಶ್ರೀ ಬಸವರಾಜನಂನ್ವಯರುಮಪ್ಪ ತಪಚಕ್ರ—

೪೪. [ವ] ರ್ತ್ತಿ ವೀರಪ್ರಿತಿ ( =ಬ್ರತಿ, ವ್ರತಿ ) ಹಾಲಬಸವಿದೇವಂಗೆ ಅ ಮಹಾಪ್ರಧಾನ ರ*-

೪೫. ಟ್ಟ ರಾಜ್ಯ ಪ್ರತಿಷ್ಠಾಚಾರ್ಯ್ಯನುಮಪ್ಪ ನಾಗರಸರು ಸಕ ( =ಶಕ ) ವರುಷಂ ಸಾಸಿರ-

೪೬. ದ ನೂರ*ಯೆಂಭತ್ತ ಯೆರಡನೆಯ ಸಿಧ್ಧಾರ್ಥಿ ಸಂವಛರದ ಜ್ಯೈ—

೪೭. ತ್ರ ಬಹುಳ ಅಮಾಸೆ ಸೋಮವಾರ ಸೂರ್ಯ್ಯ ಗ್ರಹಣದಲ್ಲಿ ಪುಲಿಗೆ-

೪೮. ರಿ*ಯ ಸೋಮನಾಥದೇವರ ಸಂನಿಧಿಯಲ್ಲಿ ಆ ಚೌಡಿಸೆಟ್ಟಿಯರ

೪೯. ತೀರ್ತ್ಥ ವಿಶೇಸವಮಂ (=ವಿಶೇಷವಮಂ ) ಬೆಸಗೊಳಲು ನೂಲೆನಾಡೊ ಳಗಿನ ಕವಿಳಾಲಸತೀ [ರ್ತ್ಥಂ]

೫೦. ನಾಲ್ಕುಯುಗದ ಪುರಾಣೋಕ್ತದಿಂ ಬಂದ ಕ್ಷತ್ರ (=ಕ್ಷೇತ್ರ ) ವಪ್ಪಿ ತೆಂದಡೆ ಕ್ರಿತ-

೫೧. ದಲ್ಲಿ ಕವಿಳಾಸ ಮುನಿ ಕವಿಳಾಸನಾಥ [ ; ] ತ್ರೇತೆಯುಲಿ ಅಂಕ
ರಾಜಮುನಿ ಅಂಕ

೫೨. ನಾಥ [ ; ] ದ್ವಾಪರದಲ್ಲಿ ಮಹಾರಾಜ ಮುನಿ ಮಹಾಲಿಂಗದೇವ
[ ; ] ಕಲಿಯುಗದಲ್ಲಿ

೫೩. ಕಲಿರಾಜಮುನಿ ಕಲಿದೇವನಾಮ [ || ] ಇ (=ಈ) ಮುನಿಗಳು
ಮುಕ್ಷ(=ಮುಖ್ಯ) ಸಮಸ್ತ ಗಣೇಸ್ವ—

೫೪ [ರ] ರು (=ಗಣೇಶ್ವರರು) ಆರಾಧಿಸಿ ಸಾಲೋಕ್ಯ ಸಾಮಿೂಪ್ಯ ಸಾಯು
ಜ್ಜವಂ (=ಸಾಯುಜ್ಯವಂ) ಪಡ-

೫೫. ದರು ಆ ದೇವರಿಗೆ ಅಂಕನಾಥವೆಸರಿಂ ಅಂಕವಲ (=ಪೊಲ) ತಳ
ವಿತ್ರಿ (=ವೃತ್ತಿ) ಕೊ-

೫೬. ತ್ತಸಿಕುರು* ವನಿಗೆ (= ? ) ಇ (=ಈ ) ಹಳ್ಳಿ ಮೂಂಧಾತ ಚಕ್ರ
ವರ್ತ್ತಿ ಬಿಟ್ಟ ಧಂಮ್ಮ [ || ] ಆ—

೫೭. ಶೀರ್ಥಕ್ಕದು ಸಾಸನಸ್ಥವೆಂಬುದಂ ಚವುಡಿಸೆಟ್ಟಿಯುರು ಕೇಳಿ ಪು[ನಾ]
ನಾಗ-

೫೮. ರಸರೂ ತಾವು ಏಕಸ್ಥವಾಗಿ ಕವಿಳಾಸ ಪುರದೊಳಗೆ ಸ್ವಯಂಭು
(=ಭೂ) ಮ-

೫೯. ಲ್ಲಿಕಾರ್ಜುನ ಸಂಗಮೇಸ್ವರ (=ಶ್ವರ) ನಾಗೇಸ್ವರ (=ಶ್ವರ)
ಯಿೂ [=ಈ] ಮೂರು* ಲಿಂಗಕಂ ಅಂಗ-

೬೦. ಭೋಗ ರಂಗಭೋಗ ಜೀರ್ಣ್ನೋಧಾರಕಂ ಪಾರಣಿಯು ಜಂಗಮಾ-

೬೧. ರಾಧನೆಗಂ ಕೊತ್ತಸೆಕುರು* ವನಿಗೆ ತಳವ್ರಿತ್ತಿ (=ವೃತ್ತಿ) ಅಂಕ
ವಲ ಕೂಂ....

೬೨.ನಾಡೊಳು ಸಲುವಂತೆ ಹೆಜ್ಜುಗ್ಗಿಯ ವೊಭತ್ತು . . ಸುಂಕ
ನೂರ್*ತಿನ ಪರಿಹಾರ ಯಿಂತಿನಿತುಮಂ ಸರ್ವ್ವ ಬಾಧೆ[ಪರಿಹಾರಾರ್ಥಂ]

೬೪. ಸರ್ವ್ವನಮುಸ್ಯವಂ ಮಾಡಿ ಚವುಡಿಸೆಟ್ಟಿಯುರು ನಾಗರಸರು

೬೫. ಯತಿರಾಯ ಹಾಲಬಸವಿದೇವಂಗೆ ಪೂರ್ವ್ವದತ್ತವೆಂದು

೬೬. ಧಾರಾಪೂರ್ವ್ವಕಂ ಮಾಡಿಕೊಟ್ಟರು. [|| ] ಆ ಚವುಡಿಸೆಟ್ಟಿಯರ ನಿ-

೬೭. ಯಾಮದಿಂ ನಾಗರಸರು ಪುರದಿಂ ಪಡುವಲು ತೊರೆ* ಯ ಕೂ-

೬೮. ಡಿದಹಳ್ಳ ನೀರುವರಿಯ ಮೇರೆಯಾಗಿ ನೋಗೆ ಕಲಗಡಿಗ ಗೆರೆ*
೬೯. ...ಸವ ಗೋಡಿ ಒಡಗಲು ಮೊಸರಗುತ್ತಿ ಊರಾರ(=?) ವಿಡಿದು ಮೂಡಲು.
೭೦. ...ಗಲ್ಲಕಣಿ .. ಗೋಡಿಯ ಬಂದ ಹಳ್ಳ ನೀರುವರಿವಿ ( =ಯೇ ) ತೆಂಕ—
೭೧. ಲು ತೊರೆ*ಯ ಕೂಡಲು ಯಿೂ [= ಈ] ಚತುಸ್ಸೀಮಾಭ್ಯಂತರ ಕವಿ ಳಾಸಪು—
೭೨. ದಲ್ಲಿ ಸುಂಕ ........................................................ನಿ-
೭೩. ಧಿ ನಿಕ್ಷೇಪ ಅಂಕೆ ಟಂಕೆ... ಗೋಸನೆ ಮುದ್ರೆ ನಾಗೇಸ್ವರ [ಶ್ವರ] ಮಮಲ್ಲೇಸ್ವರ (=ಮಲ್ಲೇಶ್ವರ)-
೭೪. ಕೆ ಕುರು * ವನಿಗೆ [।] ಸಂಗಮೇಶ್ವರಕೆ ಪಾರಣೆಯ ಜಂಗಮಾ ರಾಧ-
೭೫ ನೆಗೆ ಕೊತ್ತಸಿಗೆ (=?) ಇ [=ಈ] ಧಂಮ್ಮ್ರಕೆಯಿದು ವಿವರವೆಂದು ನಾಗರಸರು ಕೊಟ [=ಕೊಟ್ಟ]
೭೬. ಸಾಸನ [=ಶಾಸನ] ನಾಲ್ಕು...ಪಟ್ಟಣಂಗಳು ನೂಲೆನಾಡೊಳಗೆ ಸಂತೆ ಗಳ .
೭೭. ಆಯದಾಯ ಇ [=ಈ] ಪರಿ...ನೆಯಿದೆರೆ* ಸುಂಕ ಹದಿನೆಂ
೭೮. ಟ್ಬ ಸಮಯನೆಲ್ಲರು * ಮತ ಮೂವರು ಬಣಜು ಭಕುತಿ ಭೇದವಿ.
೭೯. . . [ =? ]ಕವಿಳಾಸಪುರವೆ ಸಾಸನ (=ಶಾಸನ) ದವನೆ ಬಸವರಾಜನೆ ಸಾಸನಿಕ (=ಶಾಸನಿಕ) ನೆಂ-
೮೦. ದುಮುಭಯ ನಾನಾದೇಸಿ ಮುಂಮುರಿ ದಂಡಂಗಳು ಕಾವ ಸಾಸನ [=ಶಾಸನಂ] [ ॥ ]

(ಒಪ್ಪ— ಮೂಲ ಶಿಲಾಲಿಪಿಯನ್ನು ನಾನು ಕಣ್ಣಾರೆ ಕಂಡು ಪರಿ· ಕ್ಷಿಸಿರುವಲ್ಲಿ ಲೇಖನ ಪದ್ಧತಿಯು ಶಾಸನೋಕ್ತ ಕಾಲಕ್ಕೆ ತುಂಬಾ ಸರಿ ಹೋಗುತ್ತದೆ. ಆದ್ದರಿಂದ ಇದು ಖೊಟ್ಟಿ ಲೇಖನವಲ್ಲ.— ಚೆನ್ನಮಲ್ಲ

* ಹೀಗೆ ನಕ್ಷತ್ರ ಚಿಹ್ನ ವಿರುವ ರ ಕಾರವು ಶಕಟರೇಫವೆಂಬುದಾಗಿ ತಿಳಿಯಬೇಕು

## ಮೂಲಶಿಲಾಶಾಸನದ ಸ್ಥೂಲಭಾಷಾಂತರ.

ಕಿರಣಸಮೂಹದಿಂದ ರಾಜಿಸುವ ಚಂದ್ರನಿಂದ ಒಪ್ಪುವ ಮಸ್ತಕವುಳ್ಳವನೂ ಮೂಲೋಕವೆಂಬ ನಗರಾರಂಭಕ್ಕೆ ಮೂಲಸ್ತಂಭನಂತೆಯೂ ಇರುವ ಶಂಭುವಿಗೆ ನಮಸ್ಕಾರವು.

ಪಾರ್ವತಿಗೆ ಅರ್ಧಮಯ್ಯನ್ನಿತ್ತು ಪ್ರಕಾಶಿಸುವವನೂ ಶಕ್ತಿತ್ರಯಗಳನ್ನು ತನ್ನಲ್ಲುಂಟುಮಾಡಿಕೊಂಡು ಮಹಾಮಹಿಮೆಯಿಂದಿರುವವನೂ ಶರಣಾಗತಜನರ ದುಃಖವನ್ನು ದೂರಮಾಡುವ ಶೀಲವುಳ್ಳವನೂ ಆದ ಕಲ್ಲಿನಾಥನು ಭಕ್ತಸಮುದಾಯಕ್ಕೆ ಐಶ್ವರ್ಯವನ್ನು ಕೊಡಲಿ.

ತದ್ದೇವಾಡಿಯ ಮಧ್ಯಗ್ರಾಮವಾದ ಬಾಗವಾಡಿ ಎಂಬ ಶ್ರೇಷ್ಠಗ್ರಾಮದ ಒಡೆಯನಾದ **ಮಾದಿರಾಜನ** ಮಗನಾದ **ಬಸವರಾಜನ** ಮಹಿಮೆಯು ಎಂಥದೆಂದರೆ:—

ಮಂಗಳವಾದ ಕೀರ್ತಿಯುಳ್ಳವನಾದಂಥ ಪುರಾತನಜಂಗಮ ಮತ್ತು ಲಿಂಗಇವುಗಳಲ್ಲಿ ನಿರ್ಭರವಾದ ಏಕಭಕ್ತಿಯಿಂದ ಕೂಡಿದಂಥ ಸಂಗನಬಸವನು ನಮ್ಮಲ್ಲಿಯೂವಾಗಲೂ ಭಕ್ತಿಯಸಂಬಂಧವನ್ನುಂಟುಮಾಡಲಿ.

ಯಾದವರಾಜರು ಶ್ರೇಷ್ಠವಂಶದಲ್ಲಿ ಹುಟ್ಟಿದವರಾಗಿ ನಾಲ್ಕು ಸಮುದ್ರಗಳಿಂದ ಬಳಿಸಲ್ಪಟ್ಟಂಥ ಭೂಮಿಯನ್ನು ಆಳುತ್ತಲಿರುವರು. ಹೀಗಿರಲು ಅವರಲ್ಲಿ ಅಶ್ವಸೈನ್ಯದ ಒಡೆಯನಾದ ದಯಾಳುವಾದ ಸಿಂಹಣನೆಂಬ ಅರಸನು ಆಳಿದನು. ಆಮೇಲೆ ಅವನ ಹಿರಿಯಮಗನೂ ಬಲಶಾಲಿಯೂ ಆದ ಕನ್ನರರಾಜನು ಎಲ್ಲ ಸಮುದ್ರಗಳಿಂದ ಸುತ್ತಲ್ಪಟ್ಟ ಭೂಮಿಗೆ ತನ್ನ ಶ್ರೇಷ್ಠವಾದ ಛತ್ರದಿಂದ ಆಶ್ರಯವನ್ನು ಮಾಡಿಕೊಟ್ಟನು.

ಶೌರ್ಯವೇ ಸಹಾಯವಾಗಿರುವಂಥ ಕನ್ನರನು ಬ್ರಾಹ್ಮಣರಿಗೆ ಗೋ ಭೂಮಿ, ದ್ರವ್ಯವಸ್ತ್ರಾದಿಗಳನ್ನು ಆಲಸ್ಯಪಡದೆ ಕೊಟ್ಟು ಅವುಗಳನ್ನು ಅವನು ತನ್ನ ಬಾಹುಬಲದಿಂದ ತನ್ನನ್ನು ಇದಿರಿಸುವರಾಜರಿಂದ ಮರಳಿ ತಿರುಗಿತೆಗೆದುಕೊಳ್ಳುವನು.

ಸ್ವಸ್ತಿಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ದ್ವಾರಾವತೀಪುರವರಾಧೀಶ್ವರಯಾ

ದವ ಕುಳಕಮುಳ ಕಳಿಕಾವಿಕಾಸ ಭಾಸ್ಕರ ಯರಿರಾಯ ಜಗಜ್ಝಂಪ, ಮಾಳವರಾಯಮರ್ದನ, ತ್ರಿನೇತ್ರ, ಗೂರ್ಜರ ರಾಯಭಯಂಕರ, ತೆಲುಗರಾಯ ಸ್ಥಾಪನಾಚಾರ್ಯ ಎಂಬಿವೇ ಮೊದಲಾದ ಬಿರುದುಗಳಿಂದ ಅಲಂಕೃತರಾದಂಥ ಶ್ರೀಮತ್ ಪ್ರೌಢ ಪ್ರತಾಪಚಕ್ರವರ್ತಿಗಳಾದ ಕನ್ನರ ದೇವನು ದೇವಗಿರಿಯ ರಾಜಧಾನಿಯಲ್ಲಿ ಸುಖಕರವಾದ ಮಾತಿನ ವಿನೋದದಿಂದ ಬಹುಕಾಲ ರಾಜ್ಯವಾಳುತ್ತಿರಲು,

ಆತನ ಪಾದಪದ್ಮ ಪದ್ಮೋಪಜೀವಿಯಾದ ಚಿಕ್ಕನೂ, ಸಂಪತ್ತನ್ನೂ ಕುಬೇರನನ್ನೂ ಎದುರಿಸುವಂಥ ರಾಜರಿಗೆ ಮಿಗಿಲಾಗಿ ನಿಂತಂಥ ಆತನ ಕಿರಿಯ ಮಗನಾದ ಬೀಚುಗಿಯೂ ಔದಾರ್ಯದಲ್ಲಿ ಎಲ್ಲರಿಗೂ ಶ್ರೇಷ್ಠನಾದಂಥ ಅವನ ಅಣ್ಣನಾದ ಮಲ್ಲನೂ ಅವನಮಗನಾದ ಚಾವುಂಡನೂ ಇದ್ದರು.

ಈ ಚಾವುಂಡನು ಪಾರ್ವತೀವಲ್ಲಭನಾದ ಶಿವನ ಪಾದಕಮಲದಲ್ಲಿ ಭೃಂಗನೆಂತಲೂ, ತ್ಯಾಗ ಭೋಗಗಳಲ್ಲಿ ತತ್ಪರನಾದವನೆಂತಲೂ, ಭವಸುಖವೆಂಬ ಸ್ತ್ರೀಯಳ ನಾಟ್ಯಕ್ಕೆ ರಂಗಭೂಮಿ ಎಂತಲೂ ಸಾಮ ಭೇದ ಮೊದಲಾದವುಗಳಿಗೆ ಮತ್ತು ಮಂತ್ರಾಂಗ ವಿದ್ಯೆಗಳಿಗೆ ಸಮುದ್ರನೆಂತಲೂ ವೀರವೈರಿಗಳ ಕಾಳಗದಲ್ಲಿ ಕಾಲರುದ್ರನೆಂತಲೂ ಹೆಸರುಪಡೆದವನಾಗಿದ್ದನು.

ಆ ಚಾವುಂಡನ ಪ್ರೀತಿಗೆ ಪಾತ್ರನಾದ ನಾಗರಾಜನು ಯಾವತ್ತು ನಿಯೋಗಗಳನ್ನು ಬಲ್ಲವನಾದ ದೀವಾಕರನ ಪುತ್ರನಾಗಿ ವಾಣಸವಂಶವೆಂಬ ಆಕಾಶಕ್ಕೆ ಸೂರ್ಯನಂತೆ ಇದ್ದನು.

ಪೃಥ್ವಿಯ ಜನರೆಲ್ಲರು ನಾಗನೆಂದರೆ ತ್ಯಾಗಗುಣಕ್ಕೆ ತವರುಮನೆ ಎಂತಲೂ ಎಲ್ಲ ಅರಸರ ನಿಯೋಗವನ್ನು ಪಾಲಿಸುವವನೆಂತಲೂ ಲಕ್ಷ್ಮಿಗೆ ನಿವಾಸಸ್ಥಾನವೆಂತಲೂ ಮಿತ್ರರನ್ನೂ ಪಂಡಿತರನ್ನೂ ಸಂತೋಷಪಡಿಸುವವನೆಂತಲೂ ಪೋಷಿಸುವವನೆಂತಲೂ ಒಳ್ಳೇಜನರಿಗೆ ಆಶ್ರಯದಾತನೆಂತಲೂ ಶ್ರೇಷ್ಠವಾದಪಂಡಿತನೆಂತಲೂ ವಿಷ್ಣುವಿನ ಬಗ್ಗೆ ದಟ್ಟವಾದ ಭಕ್ತಿಪ್ರೀತಿಯುಳ್ಳವನೆಂತಲೂ ಅವನನ್ನು ಹೊಗಳುವರು.

ಸಂಗನಬಸವಹಿರಿಯ..............., ದೇವರಾಜ ಮುನಿಪನಮಗನೂ ಜಂಗಮ ಪರುಷ..................... ಅವನಪ್ರೀತಿಯಮಗನಾದ ಕಲಿದೇವರಸನೂ ಇದ್ದರು. ಈ ಕಲಿದೇವ ಮುನಿಪನ ಮಗನಾದ

ಹಾಲಬಸವಿದೇವ ಮುನೀಶ್ವರನೆಂಬವನು ಮಾನವಶ್ರೇಷ್ಠನೆಂತಲೂ, ಅಶನವ್ಯಸನಾದಿಗಳನ್ನು ಗೆದ್ದಂಥವನೆಂತಲೂ, ಛಲವಂತರಲ್ಲಿ ಅಧಿಕನೆಂತಲೂ ಮೂಜಗದಲ್ಲಿ ಹೆಸರುಗೊಂಡಿದ್ದಾನೆ.

ಸ್ವಸ್ತಿಸಮಸ್ತ ಭುವನಕ್ಕೆ ಆಶ್ರಯರಾದಂಥ ಮಹಾಮಾಹೇಶ್ವರರಾದಂಥ, ಕವಿಳಾಸಪುರವರಾಧೀಶ್ವರರಾದಂಥ ಬಂಗಾರದ ವೃಷಭಧ್ವಜವುಳ್ಳವರಾದಂಥ ೬೩ ಪುರಾತನರ ಪಾದಾರ್ಚಕರಾದಂಥ ಮಹಾಲಿಂಗ ಜಂಗಮ ಪ್ರಸಾದದಲ್ಲಿ ಮಗ್ನರಾದಂಥ ತಮ್ಮ ಧರ್ಮದಲ್ಲಿ ಭಕ್ತಿಸಂಪನ್ನರಾದಂಥ ಶ್ರೀ ಬಸವರಾಜನ ವಂಶದವರಾದಂಥ, ತಪಚಕ್ರವರ್ತಿಗಳಾದಂಥ ವೀರ ವ್ರತಿಗಳಾದಂಥ ಹಾಲಬಸವಿ ದೇವರಿಗೆ ಆ ಮಹಾ ಪ್ರಧಾನನೂ ರಟ್ಟರಾಜ್ಯಪ್ರತಿಷ್ಠಾಪನಾಚಾರ್ಯನೂ ಆದ ನಾಗರಸನು ಶಕವರ್ಷ ೧೧೫೨ನೆಯ ಸಿದ್ಧಾರ್ಥಿ ಸಂವತ್ಸರದ ಚೈತ್ರ ಬಹುಳ ಅಮಾವಾಸ್ಯ ಸೋಮವಾರ ಸೂರ್ಯಗ್ರಹಣದಲ್ಲಿ ಪುಲಿಗೆರೆಯ ಸೋಮನಾಥದೇವರ ಸನ್ನಿಧಿಯಲ್ಲಿ ಆ ಚೌಡಿಸೆಟ್ಟಿಯರು ತೀರ್ಥದ ಮಹತ್ವವನ್ನು ಕೇಳಲು ನೊಲೆ ನಾಡಿನಲ್ಲಿ ಕವಿಳಾಲಸ ತೀರ್ಥವು ನಾಲ್ಕೂಯುಗದಲ್ಲಿ ಪುರಾಣೋಕ್ತವಾಗಿ ಬಂದಂಥ ಕ್ಷೇತ್ರವಿರುತ್ತದೆ. ಅದು ಹ್ಯಾಗೆಂದರೆ:—ಕೃತಯುಗದಲ್ಲಿ ಕವಿಳಾಸಮುನಿ ಕವಿಳಾಸನಾಥನೆಂತಲೂ, ತ್ರೇತೆಯುಗದಲ್ಲಿ ಅಂಕರಾಜಮುನಿ ಅಂಕನಾಥನೆಂತಲೂ, ದ್ವಾಪರದಲ್ಲಿ ಮಹಾರಾಜಮುನಿ ಮಹಾಲಿಂಗದೇವನೆಂತಲೂ, ಕಲಿಯುಗದಲ್ಲಿ ಕಲಿರಾಜಮುನಿ ಕಲಿದೇವನೆಂತಲೂ ಹೀಗೆ ಈ ಮುನಿಗಳು ಮುಖ್ಯಸಮಸ್ತ ಗಣೇಶ್ವರರು ಇಲ್ಲಿ ಆರಾಧಿಸಿಸಾಲೋಕ್ಯ, ಸಾಮಿಪ್ಯ, ಸಾಯುಜ್ಯ, ಪದವಿಯನ್ನು ಹೊಂದಿದರು.

ಆದೇವರಿಗೆ ಅಂಕನಾಥ ಹೆಸರಿನಿಂದ ಅಂಕವಲ, ತಳವೃತ್ತಿ, ಕೊತ್ತಸಿ, ಕುರುವನಿಗೆ ಈಹಳ್ಳಿ ಇವುಗಳನ್ನು ಮಾಂಧಾತಚಕ್ರವರ್ತಿಯು ಬಿಟ್ಟುಕೊಟ್ಟ ಧರ್ಮ

ಇದು ಈ ತೀರ್ಥಕ್ಕೆ ಶಾಸನವಾಗಿ ಕೊಟ್ಟಿತೆಂಬದನ್ನು ಚೌಡಿಸೆಟ್ಟಿಯರು ಕೇಳಿ, ನಾಗರಸರೂ ತಾವೂಕೂಡಿ ಕವಿಳಾಸಪುರದೊಳಗೆ ಸ್ವಯಂಭು ಮಲ್ಲಿಕಾರ್ಜುನ, ಸಂಗಮೇಶ್ವರ, ಮತ್ತು ನಾಗೇಶ್ವರ ಹೀಗೆ ಮೂರುಲಿಂಗಗಳ ಅಂಗಭೋಗ, ರಂಗಭೋಗ, ಜೀರ್ಣೋದ್ಧಾರ ಇವುಗಳಿಗೋಸ್ಕರವೂ ಪಾರಣೆಯ ಜಂಗಮಾರಾಧನೆಗೋಸ್ಕರವೂ ಕೊತ್ತಸೆ,

ಕುರುವಸಿಗೆ, ತಳವೃತ್ತಿ ಅಂಕವಲಿ ×× ನಾಡಿನಿಂದ ಸಲುವಂತೆ ಹೆಜ್ಜುಗಿ ...... ಸುಂಕ, ನೂರೆತ್ತಿನ ಪರಿಹಾರ ಹೀಗೆ ಇವುಗಳನ್ನು ಸರ್ವಬಾಧಾ ಪರಿಹಾರ ವಾಗುವಉದ್ದಿಶ್ಯವಾಗಿ ಚವುಡಿಸೆಟ್ಟಿಯರೂ ನಾಗರಸರೂ ಯತಿರಾಯನಾದ ಹಾಲಬಸವಿದೇವರಿಗೆ ಮೊದಲಿಗೆ ಕೊಟ್ಟದ್ದನ್ನು ಧಾರಾಪೂರ್ವಕವಾಗಿ ದಾನಮಾಡಿಕೊಟ್ಟರು.

ಆ ಚವುಡಿಸೆಟ್ಟಿಯರ ಹೇಳಿಕೆಯಿಂದ ನಾಗರಸರು ಊರಪಶ್ಚಿಮಕ್ಕೆ ತೊರೆಯು ಕೂಡಿದ ಹಳ್ಳಹರಿಯುತ್ತಿರಲು ಅದರಮೇರೆ ಮೆಲುಗಡಿಗೆ ಕಲ ಗಡಿಗ ಗೆರೆ××× ಉತ್ತರಕ್ಕೆ ಮೊಸರಗುತ್ತಿ ಊರು ×× ಪೂರ್ವಕ್ಕೆ ××× ಕಲ್ಲಿನಕಣಿ ×× ಗೋಡಿಯ ಹಳ್ಳನೀರು ಹರಿಯುವವರೆಗೆ ದಕ್ಷಿಣಕ್ಕೆ ನದಿಯ ಸಂಗಮದಸ್ಥಳ ಈ ನಾಲ್ಕು ಸೀಮೆಯಲ್ಲಿರುವ ಕವಿಳಾಸಪುರದಲ್ಲಿಯ ಸುಂಕ ××× ನಿಧಿನಿಕ್ಷೇಪ ಅಂಕೆ ಟಂಕೆ.........ಗೋಸನೆ ಮುದ್ರೆ ನಾಗೇಶ್ವರ, ಮಲ್ಲೇಶ್ವರ ಕುರುವಸಿಗೆ ಇವುಗಳನ್ನು ಸಂಗಮೇಶ್ವರನಿಗೋಸ್ಕರ ಪಾರಣೆಯ ಜಂಗಮ ರಾಧಾನೆಗೋಸ್ಕರ ××× ಈ ಪ್ರಕಾರಧರ್ಮವನ್ನು ಮಾಡಬೇಕೆಂದು ನಾಗರಸರು ಕೊಟ್ಟಶಾಸನವು......... ನೂಲೆನಾಡೊಳಗೆ ಸಂತೆಗಳ ಆಯದಾಯ ಈ ಪರಿ......ಬರಲು ಸುಂಕ ಹದಿನೆಂಟು ಜಾತಿಯವರೆಲ್ಲರು ಮೂರುಮಠಸ್ತರು ........ಬಸವರಾಜನೇ ಶಾಸನಿಕನೆಂದು...............

## ಶಿಲಾಶಾಸನದಿಂದ ತಿಳಿದುಬರುವ ಮಹತ್ವದ ಸಂಗತಿಗಳು.

ಈ ಶಿಲಾಶಾಸನದಲ್ಲಿ ಬಸವೇಶ್ವರನ ಉಲ್ಲೇಖವಿರುತ್ತದೆ. ಇದು ಬೆಳಗಾವಿಜಿಲ್ಹಾ ಹುಕ್ಕೇರಿಯ ನೈರುತ್ಯದಿಕ್ಕಿಗೆ ೧॥ ಮೈಲುಗಳ ಮೇಲಿರುವ ಅರ್ಜುನವಾಡದ ಸಮೀಪದಲ್ಲಿದೆ. ಬಸವೇಶ್ವರನ ಉಲ್ಲೇಖವಿದ್ದ ಶಿಲಾಲಿಪಿಗಳು ಈ ವರೆಗೆ ಎಲ್ಲಿಯೂ ಸಿಕ್ಕಿದ್ದಿಲ್ಲ. ನಾವು ಈಗ ಪ್ರಸಿದ್ಧಿಸಿರುವ ಶಿಲಾಶಾಸನವೇ ಮೊದಲನೆಯದು. ಇದರಲ್ಲಿ ಈ ವರೆಗೆ ಅಪರಿಚಿತವಾದ ಅತ್ಯಂತ ಮಹತ್ವದ ಅನೇಕ ವಿಷಯಗಳಿರುವದರಿಂದ

ಕರ್ನಾಟಕಸ್ಥರೆಲ್ಲರೂ ಇದಕ್ಕೆ ವಿಶೇಷ ಲಕ್ಷವನ್ನು ಪೂರೈಸುವರೆಂದು ನಾವು ನಂಬಿದ್ದೇವೆ.

ಈ ಶಿಲಾಶಾಸನದ ಕಾಲವು ಶಕೆ ೧೧೮೨ ಅಂದರೆ ಇಸ್ವಿ ಸನ್ನ ೧೨೬೦ ಇರುತ್ತದೆ. ಅಂದರೆ ಬಸವೇಶ್ವರನ ತರುವಾಯ ಸುಮಾರು ನೂರು ವರ್ಷದ್ದು ಇರುತ್ತದೆ. ಇದರಲ್ಲಿ ಬಸವೇಶ್ವರನ ಮತ್ತು ಅವನ ವಂಶದವರ ವೃತ್ತಾಂತವಿದೆ. ಈ ಶಿಲಾಶಾಸನದಿಂದ ಬಸವೇಶ್ವರನ ಮೊಮ್ಮಗನು ದೇವರಾಜ ಮುನಿಪನು, ಈ ದೇವರಾಜನ ಮೊಮ್ಮಗನು ಕಲಿದೇವನು, ಅವನ ಮಗನು ಹಾಲಬಸವಿದೇವ ಮುನಿಪನು, ಹೀಗೆ ಇದ್ದರೆಂದು ತಿಳಿದುಬರುತ್ತದೆ. ಈ ವಿಷಯುಗಳಿದ್ದ ಶಿಲಾಲೇಖದ ಭಾಗ ದಲ್ಲಿ ತೂತುಗಳು ಬಿದ್ದದರಿಂದ ಬಸವೇಶ್ವರನ ಮಗ ಮತ್ತು ಅವನ ಮೊಮ್ಮಗ ಇವರ ಹೆಸರುಗಳು ತಿಳಿದು ಬರುವದಿಲ್ಲ. ಇವರೆಲ್ಲರೂ ಕವಿ ಳಾಸಪುರದ ಅಧೀಶ್ವರರಾಗಿ ಇದ್ದರೆಂದು ಇಲ್ಲಿ ವರ್ಣಿಸಲ್ಪಟ್ಟಿದೆ. ಈ ಕವಿ ಳಾಸಪುರವು ಆ ಕಾಲಕ್ಕೆ ಒಂದುದೊಡ್ಡ ಕ್ಷೇತ್ರಸ್ಥಾನವಾಗಿತ್ತೆಂದು ತೋರಿ ಬರುತ್ತದೆ. ಅಲ್ಲಿ ಕಲ್ಲಿನಾಥನ ಗುಡಿಯು ಪ್ರಸಿದ್ಧವಾಗಿತ್ತು. ಇದಲ್ಲದೆ ಅಲ್ಲಿ ಮಲ್ಲಿಕಾರ್ಜುನ, ಸಂಗಮೇಶ್ವರ, ನಾಗೇಶ್ವರ ಎಂಬ ಹೆಸರಿನ ಮೂರು ದೇವಾಲಯುಗಳಿದ್ದು ಅವುಗಳ ಅಂಗಭೋಗ, ರಂಗಭೋಗ, ಜೀರ್ಣೋದ್ಧಾರ, ಪಾರಣೆಯು ಜಂಗಮಾರಾಧನೆ ಇವುಗಳಿಗೋಸ್ಕರ ಹಾಲಬಸವಿ ದೇವನಿಗೆ ದೇವಗಿರಿ ಯಾದವರಾಜನಾದ ಕನ್ನರನ ಪ್ರಧಾನಿಯಾದ ನಾಗ ರಸನು ಈ ಕವಿಳಾಸಪುರದಲ್ಲಿಯು ಕೆಲವುಹಕ್ಕು ಬಾಬುಗಳನ್ನು ದಾನ ಕೊಟ್ಟಂತೆ ಈ ಶಾಸನದಿಂದ ತಿಳಿದುಬರುತ್ತದೆ.

ಈ ಶಾಸನದಿಂದ ನಮಗೆ ತೋರಿಬಂದಿರುವ ಕೆಲವು ಮಹತ್ವದ ವಿಷಯುಗಳನ್ನು ಇಲ್ಲಿ ವಿವರಿಸಲು ಯತ್ನಿಸುತ್ತೇವೆ.

## ಬಸವೇಶ್ವರನ ಉಲ್ಲೇಖವು.

ಈ ಶಾಸನದ ಆರಂಭದಲ್ಲಿ ಶಂಭುವಿನ ಮತ್ತು ಕಲ್ಲಿನಾಥನ ಸ್ತುತಿ ಪರ ಶ್ಲೋಕಗಳಿದ್ದು ಆ ಮೇಲೆ ಬಸವೇಶ್ವರನ ಸ್ತುತಿಯು ಇದೆ. ಅದು ಏನಂದರೆ:—

"ಶ್ರೀ ಮತ್ತರದವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಶ್ವರ ಮಾದಿರಾಜನ ತನೂಜಂ ಬಸವರಾಜನ ಮಹಿಮೆ ಎಂತೆಂದೊಡೆ:-- ಮಂಗಳ ಕೀರ್ತಿ ಪುರಾತನ ಜಂಗಮಲಿಂಗ ಲಿಂಗೈಕ ಭಕ್ತಿ ಸಿರ್ಭರಲೀಲಾಸಂಗಂ ಸಂಗನಬಸವಂ ಸಂಗತಿಯಿಂ ಬಾಳ್ಕೆ ಭಕ್ತಿಯೊಳಗನವರತಂ" ಎಂದು ಇದೆ.

ಈ ಉಕ್ತಿಯಲ್ಲಿ ಬಸವೇಶ್ವರನ ಉಲ್ಲೇಖವಿರುವದು ಸ್ಪಷ್ಟವಿದೆ. ಇಲ್ಲಿ ಅವನು ಬಾಗವಾಡಿ ಪುರದ ಅಧಿಪತಿಯಾದ ಮಾದಿರಾಜನ ಮಗನೆಂದು ಹೇಳಲ್ಪಟ್ಟಿದೆ. ಈ ಬಾಗವಾಡಿಯು ತರದವಾಡಿ ಸೀಮೆಯ ಮಧ್ಯ ಗ್ರಾಮವೆಂದು ಇಲ್ಲಿ ಹೇಳಲ್ಪಟ್ಟಿದೆ. 'ತರದವಾಡಿ, ಎಂದರೆ ಈಗ ಇಂಡೀ ತಾಲೂಕಿನಲ್ಲಿ ಭೀಮಾನದಿಯ ತೀರದಲ್ಲಿರುವ ತದ್ದೇವಾಡಿ ಗ್ರಾಮವಿರುತ್ತದೆ. ಶಿಲಾಲೇಖಗಳಲ್ಲಿ ತರದವಾಡಿ ಸಾವಿರವೆಂದು ಉಲ್ಲೇಖವಿದ್ದು ಅದರ ದಕ್ಷಿಣಭಾಗಕ್ಕೆ ಕೆಲವಡಿ ಮುನ್ನೂರು ಕಿಸುಕಾಡು ಎಪ್ಪತ್ತು ಹೀಗೆ ಪ್ರದೇಶಗಳು ಇದ್ದದ್ದು ತಿಳಿದು ಬರುತ್ತದೆ. 'ಕೆಲವಡಿ, ಗ್ರಾಮವು ಈಗ ಬಾದಾಮಿ ತಾಲೂಕಿನಲ್ಲಿ ಇದೆ. 'ಕಿಸುಕಾಡು' ಈಗಿನ ಪಟ್ಟದಕಲ್ಲೆಂದು ಪ್ರಸಿದ್ಧವು. ಇದಾದರೂ ಇದೇ ತಾಲೂಕಿನಲ್ಲಿಯೇ ಇದೆ. ಆದ್ದರಿಂದ ತದ್ದೇವಾಡಿ ಭಾಗವು ಈಗಿನ ಬಾದಾಮಿ ತಾಲೂಕನ್ನು ಬಿಟ್ಟು ಉಳಿದ ವಿಜಾಪುರ ಜಿಲ್ಹೆ ಎಂಬುದು ಸ್ಪಷ್ಟವಾಗುತ್ತದೆ. ಈ ಭಾಗದ ಮಧ್ಯದಲ್ಲಿಯೇ ಈಗಿನ ಬಾಗೇವಾಡಿ ಗ್ರಾಮವು ಇರುತ್ತದೆ. ಬಾಗೇವಾಡಿ ಎಂಬ ಹೆಸರಿನ ಗ್ರಾಮವು ಇದರ ಹೊರ್ತು ಬೇರೆ ಯಾವುದೂ ಈ ಪ್ರದೇಶದಲ್ಲಿ ಇರುವದಿಲ್ಲ. ಆದ್ದರಿಂದ ಈ ಶ್ಲೋಕದಲ್ಲಿ ಉಲ್ಲೇಖಿಸಲ್ಪಟ್ಟ ಬಾಗೇವಾಡಿಗ್ರಾಮವು ವಿಜಾಪುರ ಜಿಲ್ಹಿಯಲ್ಲಿಯ ಈಗಿನ ಬಸವನ ಬಾಗೇವಾಡಿಯೇ ಎಂಬದು ಸ್ಪಷ್ಟವಾಗುತ್ತದೆ.

ಈ ಶ್ಲೋಕದಲ್ಲಿ ಬಸವೇಶ್ವರನು ಪುರಾತನರು, ಜಂಗಮರು ಮತ್ತು ಲಿಂಗ ಇವುಗಳಲ್ಲಿ ಅತ್ಯಂತ ಭಕ್ತಿಯುಳ್ಳವನೆಂದು ಹೇಳಲ್ಪಟ್ಟಿದ್ದಾನೆ ಮತ್ತು ಸಂಗನಬಸವನೆಂತಲೂ ಕರೆಯಲ್ಪಟ್ಟಿದ್ದಾನೆ. ವಚನಕಾರರು ಬಸವೇಶ್ವರನನ್ನು ಸಂಗನಬಸವನೆಂದು ಮೇಲಿಂದಮೇಲೆ ಕರೆಯುವದುಂಟು ಈ ಹೆಸರು ಈ ಶಿಲಾಲೇಖದಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಬಸವೇಶ್ವರನು ಸಂಗಮೇಶ್ವರನಿಂದ ದೀಕ್ಷೆಯನ್ನು ಹೊಂದಿದವನಾದ್ದರಿಂದ ಅವನಿಗೆ ಸಂಗನಬಸವನೆಂದು ಹೆಸರು ಬಂದಿರಬಹುದೆಂದು

ತೋರುತ್ತದೆ. ಅವನು ಪುರಾತನರಲ್ಲಿಯೂ ಲಿಂಗಜಂಗಮದಲ್ಲಿಯೂ ಪ್ರೇಮವುಳ್ಳವನೆಂತಲೂ ಇಲ್ಲಿ ಹೇಳಿದೆ. ಈ ಎಲ್ಲ ಸಂಗತಿಗಳಿಂದ ಈ ಶಿಲಾಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಬಸವರಾಜನು ವೀರಶೈವಮತೋದ್ಧಾರಕನಾದ ಬಸವೇಶ್ವರನೇ ಇರಬೇಕೆಂದು ಗೊತ್ತಾಗುತ್ತದೆ.

## ಬಸವೇಶ್ವರನ ವಂಶಪವರ ಉಲ್ಲೇಖವು.

ಮುಂದೆ ಬಸವೇಶ್ವರನ ವಂಶಜರ ವರ್ಣನೆಯು ಬಂದಿರುತ್ತದೆ. ಹೀಗೆ ಬಸವೇಶ್ವರನಿಗೆ ವಂಶದವರು ಉಳಿದದ್ದು ವೀರಶೈವ ಯಾವ ಗ್ರಂಥದಲ್ಲಿಯೂ ಉಪಲಬ್ಧವಿಲ್ಲ. ಕೆಲವು ಗ್ರಂಥಗಳಲ್ಲಿ ಮಾತ್ರ ಅವನಿಗೆ ಬಾಲಸಂಗನೆಂಬ ಒಬ್ಬ ಮಗಸಿದ್ದನೆಂತಲೂ ಅವನು ಚಿಕ್ಕವಯಸ್ಸಿನಲ್ಲಿ ಮರಣಹೊಂದಿದವನೆಂತಲೂ ತಿಳಿದು ಬರುತ್ತದೆ. ಆದರೆ ಈ ಶಿಲಾಶಾಸನದಿಂದ ಬಸವೇಶ್ವರನಿಗೆ ವಂಶಜರು ಇದ್ದರೆಂಬ ಸಂಗತಿಯು ಸ್ಪಷ್ಟವಾಗುತ್ತದೆ. ಅವರು ಕಲ್ಯಾಣ ಪಟ್ಟಣ ಮತ್ತು ಸ್ವಗ್ರಾಮವಾದ ಬಾಗೇವಾಡಿಯನ್ನು ಬಿಟ್ಟು ಈ ಕವಿಳಾಸಪುರದಲ್ಲಿ ಹಿಂದುಗಡೆ ಬಂದು ನಿಂತಿದ್ದರೆಂದು ಕಂಡು ಬರುತ್ತದೆ. ಈ ಶಿಲಾಶಾಸನದ ಆಚ್ಚಿನಲ್ಲಿ ಈ ಹೆಸರುಗಳಿದ್ದ ಭಾಗಗಳಲ್ಲಿಯ ಅಕ್ಷರಗಳು ಮೂಡದೇ ಇದ್ದದರಿಂದ ಶಾಸನವನ್ನು ಪ್ರತ್ಯಕ್ಷ ನೋಡಿಬರಲಿಕ್ಕೆ ಶ್ರೀ ಚನ್ನಮಲ್ಲಪ್ಪ ಹಲಸಂಗಿಯವರಿಗೆ ನಾನು ತಿಳಿಸಲಾಗಿ ಅವರೂ ಪ್ರೊ. ನಂದೀಮಠ ಇವರೂ ಅದನ್ನು ಸಮಕ್ಷಮನೋಡಲಾಗಿ ಈ ಭಾಗದಲ್ಲಿಯ ಕಲ್ಲಿನಲ್ಲಿ ತೂತುಗಳು ಬಿದ್ದವರಿಂದ ಬಸವೇಶ್ವರನ ವಂಶಜರಲ್ಲಿ ಈರ್ವರ ಹೆಸರುಗಳು ಗೊತ್ತಾಗದೆ ಉಳಿದಿವೆ. ಇದು ಬಹು ವಿಷಾದಕರವಾಗಿರುತ್ತದೆ.

ಈ ಶಿಲಾಲೇಖದಲ್ಲಿ ಬಸವೇಶ್ವರನ ಮಗನಹೆಸರು ಉಪಲಬ್ಧವಿಲ್ಲ. ಅಲ್ಲಿ ಸಂಗನಬಸವನ ಅಗ್ರಂ ಎಂಬ ಶಬ್ದಗಳು ಮಾತ್ರ ಉಳಿದಿವೆ. ಈ ಶಬ್ದಗಳು "ಸಂಗನ ಬಸವನ ಅಗ್ರಜ,, ಎಂದು ಇರಬಹುದು. ಅಗ್ರಜನೆಂದರೆ ಹಿರಿಯ ಮಗಎಂದು ಅರ್ಥವಾಗುತ್ತದೆ. ಅದ್ದರಿಂದಬಸವೇಶ್ವರನಿಗೆ ಒಬ್ಬನಕಿಂತಲೂ ಹೆಚ್ಚಿಗೆ ಮಕ್ಕಳು ಇರಬಹುದೆಂಬ ಊಹಿಗೆ ಆಸ್ಪದವಾಗುತ್ತದೆ.

ಈ ಬಸವೇಶ್ವರನ ಹಿರಿಯಮಗನ ಮಗನು ಅಂದರೆ ಮೊಮ್ಮಗನಹೆಸರು **ದೇವರಾಜ**ನೆಂದು ಇದ್ದುದಾಗಿ ಗೊತ್ತಾಗುತ್ತದೆ. ಇವನ

ವರ್ಣನಾತ್ಮಕ ವಿಶೇಷಣಗಳು ಶಿಲಾಲೇಖದಲ್ಲಿ ನಷ್ಟವಾಗಿವೆ. ಆದರೆ ಅವನಶಿಷ್ಟಭಾಗದಲ್ಲಿ ಇವನು ಮುನಿಪನೆಂದು ಕರೆಯಲ್ಪಟ್ಟಿದ್ದಾನೆ.

ಈ ದೇವರಾಯನ ಮಗನ ಹೆಸರುಶಿಲಾಲೇಖದಲ್ಲಿ ಅಳಿಸಿ ಹೋಗಿದೆ. ಆದರೆ ಆತನು "ಜಂಗಮ ಪರುಷ" ಅಂದರೆ ಶ್ರೇಷ್ಠನಾದ ಜಂಗಮ ಎಂದು ವರ್ಣಿಸಲ್ಪಟ್ಟಿದ್ದಾನೆ.

ಈತನ ಪ್ರಿಯ ಸುತನು ಕಲಿದೇವರಸನೆಂದು ಇಲ್ಲಿ ಹೇಳಲ್ಪಟ್ಟಿದೆ. ಈತನ ವರ್ಣನಾತ್ಮಕ ಭಾಗವಾದರೂ ಶಾಸನದಲ್ಲಿ ಹೊರಟು ಹೋಗಿದೆ.

ಈ ಕಲಿದೇವ ಮುನಿಯ ಮಗನ ಹೆಸರು ಹಾಲಬಸವಿದೇವ ಮುನೀಶ್ವರನೆಂದು ಇದ್ದು ಈತನು ಮೂಲೋಕದಲ್ಲಿ ಪ್ರಸಿದ್ಧ ಹೊಂದಿದವನೆಂತಲೂ ಮನುಷ್ಯ ಶ್ರೇಷ್ಠನೆಂತಲೂ ಅಶನ ಮತ್ತು ವ್ಯಸನ ಇವುಗಳನ್ನು ಗೆದ್ದಂಥವನೆಂತಲೂ ಛಲದಲ್ಲಿ ಅಧಿಕನೆಂತಲೂ ಹೇಳಲ್ಪಟ್ಟಿದ್ದಾನೆ.

ಈ ಪ್ರಕಾರ ಬಸವೇಶ್ವರನ ವಂಶಜರ ವರ್ಣನಾ ವಿಷಯಗಳು ಇದರಲ್ಲಿ ಬಂದಿವೆ. ಮುಂದೆ ಹಾಲ ಬಸವಿದೇವನ ಬಗ್ಗೆ ವಿಶೇಷ ವೃತ್ತಾಂತವು ಕೊಡಲ್ಪಟ್ಟಿದೆ. ಅದಾದರೂ ಅತ್ಯಂತ ಮಹತ್ವದ್ದಾಗಿದೆ.

ಹಾಲಬಸವಿದೇವನು "ಮಹಾಮಹೇಶ್ವರ" ಎಂದು ಹೇಳಲ್ಪಟ್ಟಿದ್ದಾನೆ. ಅದರಂತೆಯೇ ಮುನೀಶ್ವರನೆಂತಲೂ ಕರೆಯಲ್ಪಟ್ಟಿದ್ದಾನೆ. ಈ ವಿಶೇಷಣಗಳು ಈ ಯಾವತ್ತೂ ವಂಶಜರಿಗೆ ಉಪಯೋಗಿಸಲ್ಪಟ್ಟಿವೆ. ಇದರ ಮೇಲಿಂದ ಆ ಕಾಲಕ್ಕಿನ ವೀರಶೈವರು ಬಸವೇಶ್ವರನ ವಂಶಸ್ಥರೆಲ್ಲರು ಒಂದು ಶ್ರೇಷ್ಠತರ ಧಾರ್ಮಿಕವರ್ಗದಲ್ಲಿ ಎಣಿಸಲ್ಪಟ್ಟು ಅತ್ಯಂತ ಆದರಣೀಯರಾಗಿದ್ದರೆಂದು ತಿಳಿದುಬರುತ್ತದೆ. ಅವರು "ಮುನಿಪ, ಜಂಗಮ ಪರುಷ, ಮಹಾಮಹೇಶ್ವರ" ಎಂದು ಕರೆಯಲ್ಪಟ್ಟಿದ್ದಾರೆ. ಇವರೆಲ್ಲರೂ ಪ್ರಾಪಂಚಿಕರಾಗಿದ್ದುದು ಸ್ಪಷ್ಟವು.

ಹಾಲಬಸವಿದೇವನು "ಸುವರ್ಣ ವೃಷಭಧ್ವಜ"ವುಳ್ಳವರೆಂದು ಹೇಳಲ್ಪಟ್ಟಿದ್ದಾನೆ. ಇವನ ವಂಶಕ್ಕೆ ಮೂಲಭೂತನಾದವನು ಬಸವೇಶ್ವರನಾಗಿದ್ದದರಿಂದ ಅವನ ಗುರುತಾದ ವೃಷಭನನ್ನು ಇವರು ತಮ್ಮನಿಶಾನೆಯಲ್ಲಿ ಇಟ್ಟು ಕೊಂಡಿದ್ದ ಹಾಗೆ ತೋರುತ್ತದೆ.

ಅವನು "ತ್ರಿಷಷ್ಠಿ ಪುರಾತ ಪಾದಾರ್ಚಕ" ಎಂದು ಹೇಳಲ್ಪಟ್ಟಿದ್ದಾನೆ ಅಂದರೆ ಅರವತ್ತು ಮೂರು ಪುರಾತನರಿಗೋಸ್ಕರ ಭಕ್ತಿಯುಳ್ಳವನೆಂದು ಹೇಳಲ್ಪಟ್ಟಿದೆ. ಈ ಪುರಾತನರೆಲ್ಲರೂ ವೀರಶೈವರಿಗೆಯಾವಾಗಲೂ ಪೂಜ್ಯರಾಗಿರುತ್ತಾರೆ.

ಇವನು "ಮಹಾಲಿಂಗ ಜಂಗಮ ಪ್ರಸಾದ ನಿಯುತ" ಎಂದು ಹೇಳಲ್ಪಟ್ಟಿದ್ದಾನೆ. ಈ ಲಿಂಗ, ಜಂಗಮ, ಪ್ರಸಾದಗಳು ಅಷ್ಟಾವರಣಗಳಲ್ಲಿ ಬರುತ್ತಿದ್ದು ಇವುಗಳಿಗೆ ಒಳಪಟ್ಟು ನಡೆಯುವವನೆಂದು ಇಲ್ಲಿ ಹೇಳಲ್ಪಟ್ಟಿದೆ.

ಇವನು ಸಮಯ ಭಕ್ತಿ ಸಂಪನ್ನನೆಂತಲೂ ಹೇಳಲ್ಪಟ್ಟಿದೆ. ಅಂದರೆ ಯಾವ ಧರ್ಮ ಮಾರ್ಗಕ್ಕೆ ಅವನು ಹೊಂದಿದವನೋ ಅವರಲ್ಲಿಯೇ ವಿಶ್ವಾಸವುಳ್ಳವನೆಂದು ಹೇಳಲ್ಪಟ್ಟಿದೆ.

" ಶ್ರೀ ಬಸವರಾಜ ನನ್ವಯರು " ಎಂದು ಹೇಳಲ್ಪಟ್ಟಿದೆ. ಇವರಲ್ಲಿ ಬಸವೇಶ್ವರನ ವಂಶದವನೆಂದು ಸ್ಪಷ್ಟವಾಗಿ ಇಲ್ಲಿ ಹೇಳಲ್ಪಟ್ಟಿದ್ದಾನೆ. ಮುಂದೆ ತಪ ಚಕ್ರವರ್ತಿ ಮತ್ತು ವ್ರತಿ ಎಂದು ಹೇಳಲ್ಪಟ್ಟಿದ್ದಾನೆ.

ಈ ಪ್ರಕಾರ ಹಾಲಬಸವಿದೇವನ ವರ್ಣನೆ ಇದ್ದು ಇದು ಅವನ ಪೂರ್ವಜರೆಲ್ಲರಿಗೂ ಹತ್ತುವಂತೆ ಇದೆ. ಇದರಿಂದ ಬಸವೇಶ್ವರನ ವಂಶಜರ ಸ್ಥಿತಿಯು ಚನ್ನಾಗಿ ವ್ಯಕ್ತವಾಗುತ್ತದೆ. ಈ ಶಾಸನದಲ್ಲಿ ಲಿಂಗ, ಜಂಗಮ, ಪ್ರಸಾದ, ಪುರಾತನರು, ಮಹೇಶ್ವರರು, ಗಣೇಶ್ವರ ಮೊದಲಾದ ಶಬ್ದಗಳು ಮೇಲಿಂದ ಮೇಲೆ ಬರುತ್ತವೆ. ಇವುಗಳೆಲ್ಲವೂ ವೀರಶೈವ ಮತಗ್ರಂಥಗಳಲ್ಲಿ ಮಾತ್ರ ಉಪಲಬ್ಧವಿರುವ ಶಬ್ದಗಳು. ಇವರ ಮೇಲಿಂದ ಈ ಬಸವೇಶ್ವರನ ವಂಶಸ್ಥರೆಲ್ಲರೂ ವೀರಶೈವ ಮತಾನುಯಾಯಿಗಳಾಗಿ ಜನರಲ್ಲಿ ಅತ್ಯಂತ ವಂದ್ಯರಾಗಿ ಜೀವಿಸುತ್ತಿದ್ದರೆಂಬದು ಸಿದ್ಧವಾಗುತ್ತದೆ.

## ಕವಿಳಾಸ ಪುರ

ಇನ್ನು ಮುಂದೆ ಇವರು ವಾಸಿಸುತ್ತಿದ್ದ ಕವಿಳಾಸಪುರದ ಬಗ್ಗೆ ವಿಚಾರಿಸುವಾ; ಈ ಗ್ರಾಮವು 'ನೂಲೆ' ನಾಡೊಳಗೆ ಇದ್ದ ಬಗ್ಗೆ ಈ ಶಿಲಾಶಾಸನದಿಂದ ತಿಳಿದು ಬರುತ್ತದೆ. ನೂಲೆ ಗ್ರಾಮವು ಈಗಲೂ ಹುಕ್ಕೇರಿ ತಾಲೂಕಿನಲ್ಲಿದೆ. ಅದು ಹುಕ್ಕೇರಿಯ ಪಶ್ಚಿಮಕ್ಕೆ ಸಮಾರು ೧೫ ಮೈಲು

ಗಳ ಮೇಲೆ ಇವೆ. ಬೆಳಗಾವ ಜಿಲ್ಲೆಯ ಉತ್ತರಭಾಗಕ್ಕೆ ಮೊದಲಿನ ಕಾಲದಲ್ಲಿ 'ಕುಹುಂಡಿ' ಅಥವಾ 'ಕುಂಡಿ ಮೂರು ಸಾವಿರ' ಎಂಬ ಹೆಸರು ಇತ್ತು. ಈ ಸೀಮೆಯಲ್ಲಿ ನೂಲೆ ನಾಡು ಒಂದು ತಾಲೂಕಿನಂತೆ ಇರಬಹುದು. ನೂಲೆ ಗ್ರಾಮದಿಂದ ಕವಿಳಾಸಪುರವು ೭—೮ ಮೈಲು ಆಗಬಹುದು. ಈ ಕವಿಳಾಸಪುರವು ಆ ಕಾಲಕ್ಕೆ ಒಂದು ತೀರ್ಥವೆಂತಲೂ ನಾಲ್ಕುಯುಗದ ಪುರಾಣೋಕ್ತದಿಂದ ಬಂದ ಕ್ಷೇತ್ರವೆಂತಲೂ ತಿಳಿಯಲ್ಪಡುತ್ತಿತ್ತು. ಹೀಗೆ ಈ ಸ್ಥಾನಕ್ಕೆ ಪಾವಿತ್ರ್ಯವು ಬಂದದ್ದು ಕಲ್ಲಿನಾಥ ದೇವಸ್ಥಾನದಿಂದಲೇ ಇರುತ್ತದೆ. ಕೃತಯುಗದಲ್ಲಿ ಕವಿಳಾಸಮುನಿಯು ಅದನ್ನು ಪೂಜಿಸಿದ್ದರಿಂದ ಕವಿಳಾಸನಾಥನೆಂತಲೂ ತ್ರೇತಾಯುಗದಲ್ಲಿ ಅಂಕರಾಜ ಮುನಿಯು ಪೂಜಿಸಿದ್ದರಿಂದ ಅಂಕನಾಥನೆಂತಲೂ ದ್ವಾಪರದಲ್ಲಿ ಮಹಾರಾಜ ಮುನಿಯು ಆರಾಧಿಸಿದ್ದರಿಂದ ಮಹಲಿಂಗದೇವನೆಂತಲೂ ಕಲಿಯುಗದಲ್ಲಿ ಕಲಿರಾಜ ಮುನಿಯು ಆರಾಧಿಸಿದ್ದರಿಂದ ಕಲಿದೇವನೆಂತಲೂ ಈ ದೇವಸ್ಥಾನವು ಹೆಸರು ಪಡೆದಿತ್ತು. ಅಲ್ಲದೆ ಇದನ್ನು ಅನೇಕ ಗಣೇಶ್ವರರು ಆರಾಧಿಸಿ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರೂಪ್ಯ ಪದವಿಯನ್ನು ಪಡೆದಿದ್ದರು. ಆದ್ದರಿಂದ ಆ ಕಾಲಕ್ಕೆ ಈ ಗ್ರಾಮವು ಜನರಲ್ಲಿ ಒಂದು ಪ್ರಸಿದ್ಧ ತೀರ್ಥವೆಂದು ಭಾವಿಸಲ್ಪಡುತ್ತಿತ್ತು.

ಆದರೆ ಈ ಕವಿಳಾಸಪುರವು ಈ ಕಾಲಕ್ಕೆ ಅಸ್ತಿತ್ವದಲ್ಲಿ ಇರುವದಿಲ್ಲ. ಆದರೆ ಈ ಕವಿಳಾಸಪುರದ ಮೊದಲಿನ ವಿಸ್ತಾರವು ಎಷ್ಟಿತ್ತೆಂಬದನ್ನು ಈ ಶಿಲಾಲೇಖದಿಂದ ಸ್ಥೂಲಮಾನವಾಗಿ ಕಂಡು ಹಿಡಿಯಬಹುದಾಗಿದೆ. ಯಾಕಂದರೆ ಇದರಲ್ಲಿ ಈ ಪುರದ ಚತುಸ್ಸೀಮೆಯು ಹೇಳಲ್ಪಟ್ಟಿದೆ. ಈ ವಿವರಣೆ ಇದ್ದ ಭಾಗವು ಕೆಲವೆಡೆಗಳಲ್ಲಿ ಭಿನ್ನವಾಗಿದೆ. ಆದರೂ ಅದರಿಂದ ತಿಳಿಯುವದೇನಂದರೆಃ— ನದಿಯನ್ನು ಕೂಡಿದ ಹಳ್ಳದ ಪೂರ್ವದ ದಂಡೆಯು ಈ ಗ್ರಾಮದ ಪಶ್ಚಿಮಕ್ಕೆಂತಲೂ, ಮೊಸರಗುತ್ತಿ ಗ್ರಾಮವು ಉತ್ತರದಿಕ್ಕಿಗೆಂತಲೂ, ಅದರ ಪೂರ್ವಕ್ಕೆ ಕಲ್ಲಿನ ಕಣಿ ಇದ್ದ ಕೆರೆಯ ಕೋಡಿಯಿಂದ ಬಂದ ಹಳ್ಳದ ದಂಡೆಯು ಪೂರ್ವಕ್ಕೆಂತಲೂ, ನದಿಯ ಸಂಗಮಸ್ಥಳವು ದಕ್ಷಿಣಕ್ಕೆಂತಲೂ ಹೇಳಿದೆ. ಈ ಚತುಃ ಸೀಮೆಯ ಸಹಾಯದಿಂದ ಮುಂಚಿನ ಕವಿಳಾಸಪುರದ ಸ್ಥಳವನ್ನು ಈಗ ಗುರ್ತಿಸಬಹುದಾಗಿದೆ. ಹುಕ್ಕೇರಿ ಗ್ರಾಮದ ಪಶ್ಚಿಮಕ್ಕೆ ಸಮಿ ಸಮೀಪವಾಗಿ

ಮೂರು ಸಣ್ಣ ಸಣ್ಣ ಹಳ್ಳಗಳಿವೆ. ಅವುಗಳಲ್ಲಿ ಮಧ್ಯದ ಹಳ್ಳವು ಬಹಳ ಸಣ್ಣದು ಇದೆ. ಅವೆಲ್ಲವುಗಳು ಹಿರಣ್ಯಕೇಶಿ ಹೊಳೆಯನ್ನು ಕೂಡುತ್ತವೆ. ಈ ಮೂರು ಹಳ್ಳಗಳಲ್ಲಿ ಎಲ್ಲಕ್ಕೂ ಪಶ್ಚಿಮ ಕಡೆಯ ಹಳ್ಳವೇ ಕವಿಳಾಸಪುರದ ಪಶ್ಚಿಮ ಮೇರೆಯು. ಶಿಲಾಲೇಖದಲ್ಲಿ ಉಲ್ಲೇಖಿಸಿದ ಮೊಸರಗುತ್ತಿ ಗ್ರಾಮವು ಈಗ್ಗೆಯೂ ಅಲ್ಲಿಯೇ ಇದೆ. ಈ ಗ್ರಾಮವೇ ಈ ಕವಿಳಾಸ ಪುರದ ಉತ್ತರ ಮೇರೆಯಾಗಿತ್ತು. ಈ ಗ್ರಾಮದ ಮೇರೆಗೆ ಹೊಂದಿ ಈಗ ಒಂದು ಗುಡ್ಡವು ಇದ್ದು ಅಲ್ಲಿ ಒಂದು ಕಲ್ಲುಕಣಿಯೂ ಜಲಾಶಯವೂ ಮೊದಲು ಇರಬಹುದು. ಇದರ ಪೂರ್ವಕ್ಕೆ ಹಳ್ಳವು ಇದ್ದು ಇದರ ದಂಡೆಯೇ ಕವಿಳಾಸಪುರದ ಪೂರ್ವ ಮೇರೆಯಾಗಿತ್ತು. ಮತ್ತು ಈ ಹಳ್ಳವು ಹಿರಣ್ಯಕೇಶಿ ಹೊಳೆಯನ್ನು ಕೂಡಿದಂಥ ಸ್ಥಳವೇ ಇದರ ದಕ್ಷಿಣ ದಿಕ್ಕಿನ ಮೇರೆಯಾಗಿತ್ತು. ಅಂದರೆ ಈ ಗ್ರಾಮವು ಮೇಲ್ಕಂಡ ಮೂರು ಹಳ್ಳಗಳಲ್ಲಿ ನೆಲಿಸಿದ್ದು ಅದರ ಉದ್ದ ಸುಮಾರು ಎರಡು ಮೈಲು ಮತ್ತು ಅಗಲು ೧॥ ಮೈಲು ಇರಬಹುದಾಗಿ ತೋರುತ್ತದೆ. ಈ ಪ್ರದೇಶವು ಹುಕ್ಕೇರಿಗ್ರಾಮದ ಪಶ್ಚಿಮಕ್ಕೆ ೨ ಅಥವಾ ೨॥ ಮೈಲು ಅಂತರದ ಮೇಲೆ ಇರುತ್ತದೆ. ಈ ಭಾಗದಲ್ಲಿ ಈಗ ಹಾಲಶಂಕರ ಲಿಂಗನ ಗುಡಿ ಇದೆ. ಗುಡಿ ಎಂದರೆ ಚನ್ನಾಗಿ ಕಟ್ಟಿದ ದೇವಸ್ಥಾನವಲ್ಲ. ಈಗಿನ ಕಾಲದ ಮಣ್ಣಿನ ಮನೆ. ಇದರ ಹೊರ್ತು ಯಾವ ದೇವಾಲಯವೂ ಅಲ್ಲಿ ಇರುವದಿಲ್ಲ. ಆದರೆ ಅರ್ಜುನವಾಡ, ಕೊಚ್ಚರಿಗಿ, ಮುಸರಗುಪ್ಪಿ ಈ ಮೂರು ಊರು ಕೂಡಿ ಮೊದಲು ಒಂದೇ ಊರು ಇದ್ದ ಹಾಗೂ, ಕಾರಣಾಂತರದಿಂದ ಆ ಊರು ಮುರಿದು ಮೂರು ಹಳ್ಳಿಗಳಾದ ಹಾಗೂ ಅಲ್ಲಿ ಆಖ್ಯಾಯಿಕೆ ಉಂಟು. ಅಲ್ಲದೆ ಈ ಮೂರೂ ಊರುಗಳಲ್ಲಿ ಒಂದೇ ವಂಶದ ಗೌಡರು, ಒಂದೇ ವಂಶದ ಕುಲಕರ್ಣಿಯರು, ಒಂದೇ ವಂಶದ ವತನೀ, ಹೊಲೇರು ಇರುವರಂತೆ

ಈ ಶಾಸನವು ಕೇವಲ ವೀರಶೈವ ಪರವಾಗಿರುತ್ತದೆಂದು ಹೇಳಲಿಕ್ಕೆಏನೂ ಪ್ರತ್ಯವಾಯವಿಲ್ಲ. ಶ್ರೀಕಲ್ಲಿನಾಥನ ವರ್ಣನೆಯಲ್ಲಿ "ಸ್ವಾಯತ್ತ ಶಕ್ತಿತ್ರಯಮಯ ಮಹಿಮಂ" ಎಂದುಬರೆಯಲ್ಪಟ್ಟಿದೆ. ಈ ಶಕ್ತಿತ್ರಯಗಳು ವೀರಶೈವರ ಷಟ್ಸ್ಥಲ ವಿವರಣೆಯಲ್ಲಿ ವಿಶೇಷವಾಗಿ ಬರುತ್ತವೆ. ಅಲ್ಲದೆ ಈ ಶಾಸನದಲ್ಲಿ ಲಿಂಗ, ಜಂಗಮ, ಪುರಾತನರು, ಮಹಾಮಹೇಶ್ವರ, ಪ್ರಸಾದ, ಗಣೇಶ್ವರರು, ಮೊದಲಾದ ಶಬ್ದಗಳು ಮೇಲಿಂದ ಮೇಲೆ

ಬಂದಿರುತ್ತವೆ. ಈ ಶಬ್ದಗಳು ವೀರಶೈವಮತ ಗ್ರಂಥಗಳಲ್ಲಿಯೇ ವಿಶೇಷ ವಾಗಿ ದೊರಕುತ್ತವೆ.

ಇದರಲ್ಲಿ ಇನ್ನೊಂದು ವಿಶೇಷ ಸಂಗತಿಯೇನಂದರೆ, ಹಾಲಿಬಸವಿ ದೇವನಿಗೆ ದಾನ ಕೊಟ್ಟ ನಾಗರಾಜ ಮಂತ್ರಿಯು "ಜನಾರ್ದನನ ಭಕ್ತಿಭರ ಪ್ರಭಾವಾನುರಾಗ" ನೆಂದು ವರ್ಣಿಸಲ್ಪಟ್ಟಿದ್ದಾನೆ. ಎಂದರೆ ಆತ ನೊಬ್ಬ ವಿಷ್ಣು ಭಕ್ತನಾಗಿದ್ದನು. ಆದರೂ ಕೂಡ ಶಿವಭಕ್ತಿಯುತನಾದ ಹಾಲಬಸವಿದೇವನಿಗೆ ದಾನವನ್ನು ಕೊಟ್ಟಿರುತ್ತಾನೆ. ಇದರಿಂದ ಬಸವೇ ಶ್ವರನ ವಂಶಜರು ಆ ಕಾಲಕ್ಕೆ ರಾಜರಲ್ಲಿಯೂ ಎಲ್ಲವರ್ಗದವರಲ್ಲಿಯೂ ಎಷ್ಟು ಆದರಣೀಯರಾಗಿದ್ದರೆಂದು ತಿಳಿದುಬರುತ್ತದೆ.

ಈ ಲೇಖದಿಂದ ತಿಳಿದು ಬರುವ ಮತ್ತೊಂದು ಮಹತ್ವದ ಸಂಗತಿ ಏನಂದರೆ ಬಸವೇಶ್ವರನ ಉಲ್ಲೇಖವಿರುವ ಇದರಲ್ಲಿಯ ವಾಕ್ಯಗಳನ್ನು ನೋಡಿದರೆ ಅವನು ವೀರಶೈವ ಮತಸ್ಥಾಪಕನಾಗಿರಲಿಕ್ಕಿಲ್ಲೆಂಬ ಅನು ಮಾನವು ದೃಢವಾಗುತ್ತದೆ. ಅವನ ವರ್ಣನಾತ್ಮಕ ವಾಕ್ಯಗಳಲ್ಲಿ ವೀರ ಶೈವ ಮತಸ್ಥಾಪನಾಚಾರ್ಯ ಅಥವಾ ಈ ಅರ್ಥವನ್ನು ಬೋಧಿಸುವಂಥ ಯಾವ ವಿಶೇಷಣವೂ ಇರುವದಿಲ್ಲ. ಅವನು ಮತಸ್ಥಾಪಕನಾಗಿದ್ದರೆ ಇದನ್ನು ಸೂಚಿಸತಕ್ಕ ವಾಕ್ಯಗಳು ಸಹಜವಾಗಿಯೇ ಇದರಲ್ಲಿ ಬರುತ್ತಿ ದ್ದವು. ಆದರೆ ಇಂಥ ಶಬ್ದಗಳ ಬದಲು ಆತನು "ಪುರಾತನ ಜಂಗಮ ಲಿಂಗೈಕ ಭಕ್ತಿ ನಿರ್ಭರ ಲೀಲಾಸಂಗಂ" ಎಂದು ಮೊದಲಾಗಿ ವರ್ಣಿಸ ಲ್ಪಟ್ಟಿದ್ದಾನೆ. ಇದರ ಮೇಲಿಂದ ಅವನಕ್ಕಿಂತಲೂ ಮೊದಲು ಶಿವಮ ತವು ಅಸ್ತಿತ್ವದಲ್ಲಿತ್ತೆಂಬ ಊಹೆಗೆ ಆಸ್ಪದವಾಗುತ್ತದೆ.

## ಬೇರೆ ಐತಿಹಾಸಿಕ ವಿಷಯಗಳು.

ಇನ್ನುಮೇಲೆ ಈ ಶಿಲಾಶಾಸನದಿಂದ ಕಂಡುಬರುವ ಬೇರೆ ಐತಿ ಹಾಸಿಕ ವೃತ್ತಾಂತಗಳನ್ನು ನೋಡುವಾ.

ಇದರಲ್ಲಿ ಯಾದವ ಭೂಪಾಲಕನಾದ ಸಿಂಹಣನ ಉಲ್ಲೇಖವಿದೆ. ಇವನು ಈ ರಾಜವಂಶದಲ್ಲಿ ಪ್ರತಾಪಶಾಲಿಯಾದ ಅರಸನು. ಅವನು ೧೨೧೦ ರಿಂದ ೧೨೪೭ರ ವರೆಗೆ ದೇವಗಿರಿಯಲ್ಲಿ ಆಳಿದನು. ಇವನೇ ಮೊದಲು ಉತ್ತರ ಕರ್ನಾಟಕ ಪ್ರಾಂತವನ್ನು ವಶಮಾಡಿಕೊಂಡು ಆಳಿ ದನೆಂದು ಇತಿಹಾಸದಿಂದ ತಿಳಿದು ಬರುತ್ತದೆ.

ಇವನ ಹಿರಿಯಮಗನಾದ ಕನ್ನರನು ಇಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ. ಇವನು ೧೨೪೭ರಿಂದ ೧೨೬೦ರ ವರೆಗೆ ಆಳಿದನು. ಈ ಅರಸನ ಕಾಲದಲ್ಲಿಯೇ ಅವನ ಮಂತ್ರಿಯಾದ ನಾಗರಸನು ಹಾಲಿಬಸವಿದೇವನಿಗೆ ಈ ಶಾಸನವನ್ನು ಕೊಟ್ಟಿದ್ದು ಇರುತ್ತದೆ.

ಈ ಶಿಲಾಲೇಖದಲ್ಲಿ ಆಗ ಕರ್ನಾಟಕಪ್ರಾಂತದಲ್ಲಿ ಮಾಂಡಲಿಕರಾಗಿ ಆಳುತ್ತಿದ್ದಂಥ ಚಿಕ್ಕ ಅವನ ಮಕ್ಕಳಾದ ಮಲ್ಲ ಮತ್ತು ಬೀಚಿಗಿ ಮತ್ತು ಮಲ್ಲನಮಗನಾದ ಚಾವುಂಡ ಇವರ ಉಲ್ಲೇಖಗಳು ಬಂದಿವೆ ಇವರ ಉಲ್ಲೇಖವಿದ್ದ ಶಿಲಾಶಾಸನಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸಿಗುತ್ತವೆ. ಅವುಗಳ ಮೇಲಿಂದ ತಿಳಿದುಬರುವದೇನಂದರೆ ಇವರಲ್ಲಿ ಬೀಚುಗಿಯೇ ಅತ್ಯಂತ ಪ್ರಸಿದ್ಧನೂ ಶೂರನೂಆಗಿದ್ದನು. ಅವನು ಅನೇಕ ಸಮರಾಂಗಣದಲ್ಲಿ ದೇವಗಿರಿ ಯಾದವರಿಗೆ ಸಹಾಯಕನಾಗಿದ್ದನು. ಧಾರವಾಡ ಜಿಲ್ಲಾ ಬ್ಯಾಹಟ್ಟಿಯಲ್ಲಿ ಈತನ ಒಂದು ಶಿಲಾಶಾಸನವಿದ್ದು ಅದರಲ್ಲಿ ಅವನು ರಟ್ಟರನ್ನು ಗೆದ್ದಂತೆ ಉಲ್ಲೇಖವಿದೆ. ಲಕ್ಷ್ಮೇಶ್ವರದಲ್ಲಿ ೧೨೪೭ನೇ ಇಸ್ವಿಯ ಒಂದುಶಿಲಾಶಾಸನವಿದ್ದು ಇದರಲ್ಲಿ ಇವನು ಯಾದವರ ಮಹಾ ಪ್ರಧಾನನೆಂತಲೂ ಸೇನಾಪತಿಯೆಂತಲೂ ವರ್ಣಿಸಲ್ಪಟ್ಟಿದ್ದಾನೆ. ಇದರಿಂದ ಇವನು ಲಕ್ಷ್ಮೇಶ್ವರದಲ್ಲಿದ್ದು ಅಲ್ಲಿಂದ ಅವನು ಕರ್ನಾಟಕದ ರಾಜ್ಯಭಾರ ಮಾಡುತ್ತಿದ್ದಹಾಗೆ ತೋರುತ್ತದೆ. ಅವನ ಅಣ್ಣನಾದ ಮಲ್ಲನು ಮುದುಗಲದಲ್ಲಿದ್ದು ಕರ್ನಾಟಕದ ಪೂರ್ವಭಾಗವನ್ನು ಆಳುತ್ತಿದ್ದನು. ಈ ಮಲ್ಲ ಅಥವಾ ಮಲ್ಲಿಶೆಟ್ಟಿಯ ಶಿಲಾಶಾಸನವು ಬಸವನ ಬಾಗೇವಾಡಿಯಲ್ಲಿಯೇ ಇದೆ. ಈ ಮಲ್ಲನಮಗನೇ ಚಾವುಂಡನು. ಈ ಚಾವುಂಡನು ಈ ಕವಿಳಾಸಪುರದ ಶಾಸನದಲ್ಲಿ ಶಿವಭಕ್ತನೆಂತಲೂ ಮಂತ್ರಾಂಗ ವಿದ್ಯಾಸಮುದ್ರನೆಂತಲೂ ಹೊಗಳಲ್ಪಟ್ಟಿದ್ದಾನೆ. ಈ ಚಾವುಂಡನ ಒಂದು ಶಿಲಾಶಾಸನವು ಸವದತ್ತಿಯ ಸಮೀಪದಲ್ಲಿರುವ ಮುನವಳ್ಳಿಯಲ್ಲಿ ಇದೆ. ಇದರಲ್ಲಿ ಇವನು ಯಾದವರಾಯನ ದಕ್ಷಿಣ ಪ್ರಾಂತವನ್ನೆಲ್ಲ ಆಳುತ್ತಿದ್ದನೆಂದು ಉಲ್ಲೇಖವಿದೆ. ಇವನು ತನ್ನ ಕಿರಿಯಪ್ಪನಾದ ಬೀಚುಗಿಯು ಆಳುತ್ತಿದ ಲಕ್ಷ್ಮೇಶ್ವರದಲ್ಲಿಯೇ ಆಳುತ್ತಿರಬಹುದು.

ಈ ಕವಿಳಾಸಪುರದ ಶಿಲಾಶಾಸನದಲ್ಲಿ ನಾಗರಸನು ಈ ಚಾವುಂಡನ ಮಿತ್ರನೆಂದೂ ವಾಣಸವಂಶದವನೆಂದೂ ರಟ್ಟರಾಜ್ಯ ಪ್ರತಿಷ್ಠಾಚಾರ್ಯನೆಂ

ತಲೂ ಮಹಾಪ್ರಧಾನನೆಂತಲೂ ವರ್ಣಿಸಲ್ಪಟ್ಟಿದ್ದಾನೆ. ಶಿಲಾಲೇಖಗಳಲ್ಲಿ ಬೀಚುಗಿಯು ರಟ್ಟ ರಾಜ್ಯವನ್ನು ಕೈವಶ ಮಾಡಿಕೊಂಡದ್ದರ ಉಲ್ಲೇಖ ವಿದೆ. ಆದರೆ ಈ ನಾಗರಸನು ಈ ರಾಜ್ಯದ ಪ್ರತಿಷ್ಠಾಪಕನೆಂದು ಇಲ್ಲಿ ಹೇಳಲ್ಪಟ್ಟಿದ್ದಾನೆ. ಆದ್ದರಿಂದ ಈತನು ರಟ್ಟ ಮನೆತನದವರೊಬ್ಬರಿಗೆ ಕೆಲವು ಉಂಬಳಿ ಹಾಕಿ ಕೊಟ್ಟಿರಬಹುದಾಗಿ ತೋರುತ್ತದೆ. ಆದರೆ ರಟ್ಟ ರವಂಶದವರ ಶಿಲಾಶಾಸನಗಳು ೧೨೨೮ ರ ತರುವಾಯು ಎಲ್ಲಿಯೂ ಸಿಗುವದಿಲ್ಲ. ಆದ್ದರಿಂದ ಇದರ ಮುಂದೆ ಅವರು ಸ್ವತಂತ್ರರಾಗಿ ಆಳಿ ರಲಿಕ್ಕಿಲ್ಲೆಂದು ತೋರುತ್ತದೆ.

ಹಾಲಿಬಸವಿದೇವರಿಗೆ ಸಿದ್ಧಾರ್ಥಿ ಸಂವತ್ಸರದ ಚೈತ್ರ ಬಹುಳಅಮಾವಾಸ್ಯ ಸೋಮವಾರ ಸೂರ್ಯ ಗ್ರಹಣದಲ್ಲಿ ಪುಲಗೆರೆಯ ಸೋಮನಾಥ ದೇವರ ಸನ್ನಿಧಿಯಲ್ಲಿ ದಾನ ಕೊಟ್ಟ ಬಗ್ಗೆ ಈ ಶಾಸನದಲ್ಲಿ ಹೇಳಲ್ಪಟ್ಟಿದೆ. ಚಾಂಡರಸರು ಪುಲಗಿರಿಯಲ್ಲಿ ಆಳುತ್ತಿದ್ದದರಿಂದ ಮಹಾಪ್ರಧಾನನಾದ ನಾಗರಸನು ಅಲ್ಲಿಗೆ ಬಂದಾಗ್ಗೆ ಹಾಲಬಸವಿದೇವನನ್ನು ಅಲ್ಲಿಯೇ ಕರಿಸಿಕೊಂಡು ಸೋಮನಾಥ ದೇವರ ಸನ್ನಿಧಿಯಲ್ಲಿ ಈ ದಾನವನ್ನು ಕೊಟ್ಟಿರಬಹುದೆಂದು ತೋರುತ್ತದೆ.

ದೇವರಿಗೆ ದಾನ ಕೊಟ್ಟ ವಿಷಯಗಳನ್ನು ನೋಡಿದರೆ ಅವೆಲ್ಲವೂ ಆಗಿನ ಕಾಲದ ನಾನಾ ಬಗೆಯ ಸುಂಕಗಳಿದ್ದ ಹಾಗೆ ತೋರುತ್ತದೆ. ಇದರ ಮೇಲಿಂದ ಈ ಕವಿಳಾಸಪುರವು ಆಗಿನ ಕಾಲಕ್ಕೆ ಒಂದು ದೊಡ್ಡ ವ್ಯಾಪಾರೀ ಪಟ್ಟಣವಾಗಿರ ಬಹುದೆಂದು ತೋರುತ್ತದೆ. ಇಂಥ ವ್ಯಾಪಾರಿ ಪಟ್ಟಣಗಳಲ್ಲಿ ಶೆಟ್ಟರ ಯಾಜಮಾನ್ಯವು ಹಿಂದಿನ ಕಾಲಕ್ಕೆ ವಿಶೇಷವಾಗಿರುವದು ಎಲ್ಲರಿಗೂ ಗೊತ್ತಿದೆ. ಇವರ ಅಧಿಕಾರವು ಸುಂಕಗಳ ಮೇಲೆಯೂ ಇರುತ್ತಿದ್ದದರಿಂದ ನಾಗರಸ ಮಹಾ ಪ್ರಧಾನನು ಹಾಲಬಸವಿದೇವನಿಗೆ ಕವಿಳಾಸಪುರದ ಸುಂಕ ಬಾಬುಗಳನ್ನು ಅಲ್ಲಿಯ ಚೌಡಿಶೆಟ್ಟಿಯರ ನಿಯಮದಿಂದ ದಾನ ಕೊಟ್ಟಿರಬಹುದು.

## ಶಿಲಾಲೇಖದ ಅಳತೆ

ಈ ಶಿಲಾಶಾಸನವು ಹಾಲ ಶಂಕರಲಿಂಗನ ಗುಡಿಯ ಮುಂಗೋಡೆಗೆ ಮೂಡಲ ಮುಖವಾಗಿ ನಿಲ್ಲಿಸಲ್ಪಟ್ಟಿದೆ. ಇದರ ಅಳತೆಃ– ಎತ್ತರು ೯ ಗೇಣು ೧೦ ಅಂಗುಲ, ಅಗಲು ೧ ಗೇಣು ೮ ಅಂಗುಲ, ದಪ್ಪ ೧ ಗೇಣು

೩ ಅಂಗುಲ, ಮೇಲೆ ಚಿತ್ರವಿರುವಸ್ಥಳ ೧ ಗೇಣು ೪ ಅಂಗುಲ, ಬಳಿಕ ಲೇಖವಿರುವಸ್ಥಳ ೬ ಗೇಣು ೮ ಅಂಗುಲ, ಕೆಳಗೆ ತೆರವಿದ್ದ ಸ್ಥಳ ೧ ಗೇಣು ೧೦ ಅಂಗುಲ.

## ಶಿಲಾಶಾಸನದ ಮಹತ್ವ.

ಪುರಾಣಗಳಲ್ಲಿ ಅಂಧ ವಿಶ್ವಾಸವುಳ್ಳವರಿಗೆ ಈ ಶಿಲಾಶಾಸನದಲ್ಲಿಯ ವಿಷಯಗಳು ಏನೂಮಹತ್ವವಾದವುಗಳಲ್ಲೆಂದು ತೋರಬಹುದು. ಆದರೆ ಈಗಿನ ಕಾಲಕ್ಕೆ ಐತಿಹಾಸಿಕ ದೃಷ್ಟಿಯಿಂದ ಕರ್ನಾಟಕದಲ್ಲಿ ಆಗಿ ಹೋಗಿರುವ ಮಹಾಪುರುಷರ ಚರಿತ್ರೆಗಳನ್ನು ಶೋಧಿಸಿ ಯಥಾರ್ಥ ವಿಷಯಗಳನ್ನು ನಿರೂಪಿಸುವದು ಅವಶ್ಯವಾಗಿರುತ್ತದೆ. ಈ ರೀತಿಯಿಂದ ಬಸವೇಶ್ವರನ ಚರಿತ್ರೆಯನ್ನು ಬರೆಯುವವರಿಗೆ ಈ ಶಿಲಾಶಾಸನವು ಬಹಳಮಹತ್ವದ್ದಿರುತ್ತದೆ. ಕರ್ನಾಟಕದಲ್ಲಿ ಬಿಜ್ಜಳನ ಶಿಲಾಶಾಸನಗಳು ಅನೇಕವಿರುತ್ತವೆ. ಅವುಗಳಲ್ಲಿ ಅವನ ಮಾಂಡಲಿಕರ ಮತ್ತು ಅವನ ಅಧಿಕಾರಿಗಳ ಅನೇಕ ಹೆಸರುಗಳು ಉಪಲಬ್ಧವಿದ್ದರೂ ಬಸವೇಶ್ವರನ ಉಲ್ಲೇಖವು ಮಾತ್ರ ಅವುಗಳಲ್ಲಿ ಏನೂ ಇಲ್ಲ. ಇದು ಆಶ್ಚರ್ಯಕರವಾಗಿದೆ. ಇದರಿಂದ ಬಿಜ್ಜಳನಕಾಲದಲ್ಲಿ ಬಸವೇಶ್ವರನು ಇದ್ದ ಬಗ್ಗೆ ಮತ್ತುಅವನು ಅವನ ಮಂತ್ರಿಯಾಗಿದ್ದ ಬಗ್ಗೆ ಸಹ ಅನುಮಾನವು ಉತ್ಪನ್ನವಾಗುತ್ತದೆ. ಫ್ಲೀಟಸಾಹೇಬರು ಒಂದೆಡೆಗೆ ವೀರಶೈವ ಧರ್ಮಪ್ರವರ್ತಕನು ಬಸವೇಶ್ವರನಿರದೆ ಏಕಾಂತದ ರಾಮಯ್ಯನಿರಬಹುದೆಂದು ಬರೆದಿದ್ದಾರೆ. ಈ ತರದ ವಿಚಾರಗಳು ವಿದ್ವಜ್ಜನರಲ್ಲಿ ಇರುವದರಿಂದ ಇವುಗಳನ್ನು ದೂರ ಮಾಡಲಿಕ್ಕೆ ಈ ಶಿಲಾಶಾಸನವು ಬಹು ಮಟ್ಟಿಗೆ ಸಹಾಯಕವಾಗಿದೆ. ಈ ದೃಷ್ಟಿಯಿಂದ ಇದರ ಮಹತ್ವವು ಬಹಳವಿರುತ್ತದೆ.

# ಗ್ರಂಥ ವಿಮರ್ಶೆ

**ಶಿವಾಗಮಗಳಲ್ಲಿಯ ವೀರಶೈವ ತತ್ವಜ್ಞಾನಃ—** ಮಃ ರಾ॥ ವೀರಪ್ಪ ಬಸಪ್ಪ ಬಿಳೇಅಂಗಡಿ ಬಿ. ಎ. ಎಲ್. ಎಲ್. ಬಿ. ವಕೀಲ ಹುಬ್ಬಳ್ಳಿ ಇವರು "ಶಿವಾಗಮಗಳಲ್ಲಿಯ ವೀರಶೈವ ತತ್ವಜ್ಞಾನ" ಎಂಬ ಹೆಸರಿನಿಂದ ಒಂದು ಗ್ರಂಥವನ್ನು ಇಂಗ್ಲಿಷದಲ್ಲಿ ಪ್ರಕಟ ಪಡಿಸಿದ್ದಕ್ಕೆ ನಾವು ಅವರನ್ನು ಬಹಳ ಅಭಿನಂದಿಸುತ್ತೇವೆ. ಈ ಗ್ರಂಥವು ರಾ|| ರಾ॥ ಶಿದ್ಧರಾಮಪ್ಪ ದುಂಡಪ್ಪ ಪಾವಟೆ. ಬಿ. ಎ. ಎಲ್. ಎಲ್. ಬಿ. ಇವರಿಂದ ಬರೆಯಲ್ಪಟ್ಟಿದೆ. ಮಿ. ಪಾವಟೆಯವರು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಅತ್ಯಂತ ಪಾಂಡಿತ್ಯವನ್ನು ಹೊಂದಿದವರಿದ್ದು ಅವರು ವೀರಶೈವ ಮತದ ಗ್ರಂಥಗಳನ್ನು ಬಹಳ ಪರಿಶೀಲಿಸಿದ್ದಾರೆ. ಆದ್ದರಿಂದ ಅವರು ಈ ಬಗ್ಗೆ ಬರೆದ ಗ್ರಂಥಗಳು ಅತ್ಯಂತ ಆದರಣೀಯಗಳೆಂದು ನಾವು ಬೇರೆ ಹೇಳಲಿಕ್ಕೆ ಕಾರಣವಿಲ್ಲ. ಆದರೆ ಅವರು ಈಗ ತಮ್ಮ ವಿಚಾರಗಳನ್ನು ಇಂಗ್ಲಿಷದಲ್ಲಿ ಪ್ರಕಟ ಪಡಿಸಿದ್ದು ಬಹಳ ಸ್ತುತ್ಯವಾಗಿರುತ್ತದೆ. ಇದರಿಂದ ವೀರಶೈವ ಮತದ ತತ್ವಗಳನ್ನು ಹಿಂದುಸ್ತಾನದಲ್ಲಿಯ ಎಲ್ಲ ವಿದ್ವಜ್ಜನರು ಅರಿಯಲಿಕ್ಕೆ ಆಸ್ಪದವಾಗುತ್ತದೆ.

ಈ ಗ್ರಂಥದ ಮೊದಲನೆಯ ಭಾಗದಲ್ಲಿ ಶೈವಾಗಮಗಳ ಸಾಮಾನ್ಯ ಸ್ವರೂಪ ಮತ್ತು ಎರಡನೇ ಭಾಗದಲ್ಲಿ ಶಕ್ತಿ ವಿಶಿಷ್ಟಾದ್ವೈತ ಅಂದರೆ ವೀರಶೈವ ಮತದ ತತ್ವಗಳು ಬಹು ಸುಲಭವಾಗಿಯೂ ಸಂಕ್ಷೇಪವಾಗಿಯೂ ವಿವರಿಸಲ್ಪಟ್ಟಿವೆ. ಶೈವಾಗಮಗಳು ಹಿಂದುಸ್ತಾನದಲ್ಲಿ ಮಹತ್ವದ ಧಾರ್ಮಿಕ ಗ್ರಂಥಗಳಿರುತ್ತವೆಂಬ ಸಂಗತಿಯು ಇನ್ನೂ ಬಹು ಜನರಿಗೆ ಗೊತ್ತಾಗಿರುವದಿಲ್ಲ. ಅವುಗಳ ವಿಚಾರಗಳ ಪರಿಣಾಮಗಳು ಹಿಂದುಸ್ತಾನದ ಬೇರೆ ಬೇರೆ ಧಾರ್ಮಿಕ ವಾಙ್ಮಯಗಳ ಮೇಲೆ ಬಹಳ ಆಗಿರುತ್ತದೆ. ಈ ಸಂಗತಿಯನ್ನು ಮಿ॥ ಸಿದ್ಧರಾಮಪ್ಪನವರು ಅನೇಕ ಉದಾಹರಣೆಗಳನ್ನು ಕೊಟ್ಟು ಈ ಗ್ರಂಥದಲ್ಲಿ ಸಿದ್ಧಪಡಿಸಿದ್ದಾರೆ. ಅವರು ಭಗವದ್ಗೀತೆಯಲ್ಲಿಯ ಅನೇಕ ಉಕ್ತಿಗಳನ್ನು ತೆಗೆದುಕೊಂಡು ಅವುಗಳಿಗೂ ಆಗಮಗಳಲ್ಲಿಯ ಉಕ್ತಿಗಳಿಗೂ ಇರುವ ಸಾಮ್ಯತೆಗಳನ್ನು ತೋರಿಸಿದ್ದಾರೆ. ಈ ವಿಷಯವು ಬಹಳ ವಿಚಾರಾರ್ಹವಾಗಿದೆ. ಇದಲ್ಲದೆ ಆಗಮ ಧರ್ಮದಲ್ಲಿ ಪರಮಾತ್ಮನ ಸ್ವರೂಪು ಹ್ಯಾಗೆ ಇದೆ, ಜಗತ್ತಿನ ಉತ್ಪತ್ತಿ ಹ್ಯಾಗೆ

ಆಯಿತು, ಮಾಯೆ ಮತ್ತು ಶಕ್ತಿಗಳು ಹ್ಯಾಗೆ ವ್ಯವಹರಿಸುತ್ತವೆ, ಇವೇ ಮೊದಲಾದ ಅನೇಕ ಮಹತ್ವದ ವಿಷಯಗಳು ಈ ಗ್ರಂಥದಲ್ಲಿ ಬಹು ಚನ್ನಾಗಿ ವಿವರಿಸಲ್ಪಟ್ಟಿವೆ. ಎರಡನೇ ಭಾಗದಲ್ಲಿ ವೀರಶೈವ ಧರ್ಮದ ಮುಖ್ಯ ತತ್ವಗಳು ವಿವೇಚಿಸಲ್ಪಟ್ಟಿವೆ. ಇದರಲ್ಲಿ ವೀರಶೈವ ಧರ್ಮದ ವೈದಿಕತ್ವವೂ, ಜೀವಾತ್ಮ ಪರಮಾತ್ಮ ಸಂಬಂಧವೂ, ಷಟ್ಸ್ಥಲಗಳ ತತ್ವಗಳೂ ಹೇಳಲ್ಪಟ್ಟಿವೆ. ಅದರಂತೆಯೇ ಆಗಮ ಧರ್ಮವನ್ನು ಶಿವಶರಣರು ಹ್ಯಾಗೆ ಪುನರುಜ್ಜೀವನ ಗೊಳಿಸಿದರೆಂಬ ವಿಷಯವಾದರೂ ಇದರಲ್ಲಿ ಬಂದಿದೆ. ನಮ್ಮಲ್ಲಿಯ ಇಂಗ್ಲಿಷ ಸುಶಿಕ್ಷಿತರು ಕನ್ನಡ ಮತ್ತು ಸಂಸ್ಕೃತ ಗ್ರಂಥಗಳನ್ನೋದಿ ಅವುಗಳಲ್ಲಿಯ ತತ್ವಗಳನ್ನು ಪರಿಶೀಲಿಸುವದಕ್ಕೆ ಬಹುತರ ಮನಸ್ಸು ಮಾಡುವದಿಲ್ಲ. ಇಂಥವರು ಈ ಗ್ರಂಥವನ್ನು ಅವಶ್ಯವಾಗಿ ತರಿಸಿ ಓದಬೇಕೆಂದು ನಮ್ಮ ಆಗ್ರಹದ ಸೂಚನೆ ಇದೆ. ಈ ಗ್ರಂಥವನ್ನು ಪ್ರಸಿದ್ಧ ಮಾಡಿದ್ದಕ್ಕೆ ಮಿ॥ ಪಾವಟೆ ಮತ್ತು ಮಿ. ಬಿಳಿಗಂಗಡಿ ಈ ಇಬ್ಬರೂ ಮಹನೀಯರಿಗೆ ವೀರಶೈವ ಸಮಾಜವೆಲ್ಲ ಅತ್ಯಂತ ಋಣಿಯಾಗಿರುತ್ತದೆ.

**ಶಿವತತ್ವ ರತ್ನಾಕರಃ—** ಈ ಗ್ರಂಥವನ್ನು ಮದ್ರಾಸ ಸರಕಾರದ ಸೀನಿಯರ ಟ್ರಾನ್ಸಲೇಟರರಾದ ಮಿ॥ ಬಿ. ರಾಮರಾವ ಎಮ್. ಎ. ಎಲ್. ಎಲ್. ಬಿ. ಇವರು ಪರಿಶೋಧಿಸಿ ಅಚ್ಚು ಹಾಕಿಸಿರುವರು. ಇದೊಂದು ಸಂಸ್ಕೃತದಲ್ಲಿಯ ಮಹತ್ತರವಾದ ಗ್ರಂಥವು. ಇದು ಐದು ಭಾಗಗಳಾಗಿ ಪ್ರಸಿದ್ಧಿಸಲ್ಪಟ್ಟಿದೆ. ಇದರಲ್ಲಿ ಹಿಂದೂ ಸಂಸ್ಕೃತಿಗೆ ಸಂಬಂಧಪಟ್ಟ ನಾನಾ ವಿಷಯಗಳು ಸುಂದರ ಮತ್ತು ಸುಲಭವಾದ ಶ್ಲೋಕಗಳಲ್ಲಿ ವಿವರಿಸಲ್ಪಟ್ಟಿವೆ. ಇದೊಂದು ನಿಜವಾಗಿ ವಿಶ್ವಕೋಶವೆಂದೇ ನಾವು ನಿಃಸಂದೇಹವಾಗಿ ಹೇಳಬಹುದು. ಈ ಗ್ರಂಥದಿಂದ ಮೊದಲಿನ ಕಾಲದ ಕರ್ನಾಟಕಸ್ಥರು ಜ್ಞಾನ ಸಂಪಾದನೆಯ ಕಾರ್ಯದಲ್ಲಿ ಎಷ್ಟು ಮುಂದುವರಿದಿದ್ದರೆಂಬದು ಸ್ಪಷ್ಟವಾಗುತ್ತದೆ. ಈ ಗ್ರಂಥವನ್ನು ಕೆಳದಿಯ ಅರಸನಾದ ಬಸವಪ್ಪ ನಾಯಕನು ರಚಿಸಿದನು. ಇದರಲ್ಲಿಯ ವಿಷಯಗಳು ಶಿವಪುರಾಣ ಮತ್ತು ಆಗಮ ಇವುಗಳ ಆಧಾರದಿಂದ ಬರೆಯಲ್ಪಟ್ಟವೆಂದು ಅವನು ಹೇಳಿದ್ದಾನೆ. ಈ ಗ್ರಂಥದಲ್ಲಿ ಯಾವತ್ತು ಕಲೆಗಳ ವಿಷಯವಾಗಿ ಬಹಳ ಉಪಯುಕ್ತ ವಿವರಣೆಗಳು ಬಂದಿರುತ್ತವೆ. ಅಲ್ಲದೆ ಖಗೋಲ

ಶಾಸ್ತ್ರ, ಸಮಾಜ ಶಾಸ್ತ್ರ, ನೈತಿಕ ಶಾಸ್ತ್ರ, ನಗರ ರಚನೆ, ನಾಟ್ಯ, ನೃತ್ಯ, ಚಿತ್ರಕಲೆ ಈ ವಿಷಯಗಳೂ ಹೇಳಲ್ಪಟ್ಟಿವೆ. ಅದರಂತೆಯೇ ಕುದುರೆ, ಆನೆಗಳ ವಿಷಯವಾಗಿಯೂ, ಕೋಟೆಗಳನ್ನು ಕಟ್ಟುವ ವಿಷಯವಾಗಿಯೂ, ಯುದ್ಧಕಲೆ ಶಸ್ತ್ರಾಸ್ತ್ರಗಳ ವಿಷಯವಾಗಿಯೂ ವಿವೇಚನೆಗಳು ಇದರಲ್ಲಿಬಂದಿವೆ. ಅಲ್ಲಲ್ಲಿ ಷಟ್‌ಸ್ಥಲ, ಲಿಂಗಪೂಜೆ, ಯೋಗಾಭ್ಯಾಸ ಇಂಥ ಧಾರ್ಮಿಕ ವಿಷಯಗಳೂ, ಉಲ್ಲೇಖಿಸಲ್ಪಟ್ಟಿವೆ. ಅನೇಕ ಐತಿಹಾಸಿಕ ವಿಷಯಗಳು ಇದರಲ್ಲಿ ಬಂದಿದ್ದು ನಾವು ವಿಶೇಷವಾಗಿ ಲಕ್ಷ್ಯಕೊಡತಕ್ಕ ಸಂಗತಿಯಾಗಿದೆ. ಕೆಳದೀ ರಾಜರು, ವಿಜಯನಗರದ ಅರಸುಗಳು ಇವರೇ ಮೊದಲಾದವರ ಚರಿತ್ರೆಗಳು ಇದರಲ್ಲಿ ಬಂದಿವೆ. ಅದರಂತೆಯೇ ಬಸವೇಶ್ವರ ಮೊದಲಾದ ಶಿವಶರಣರ ಕಥೆಗಳೂ ಇದರಲ್ಲಿ ಉಲ್ಲೇಖಿಸಲ್ಪಟ್ಟಿವೆ. ಗ್ರಂಥಕರ್ತನು ತಾನು ವಿವರಿಸುವ ವಿಷಯಗಳಿಗೆ ಆಧಾರವಾಗಿಟ್ಟುಕೊಂಡ ಅನೇಕ ಗ್ರಂಥಗಳ ಹೆಸರುಗಳನ್ನು ಇದರಲ್ಲಿ ಕೊಟ್ಟಿದ್ದಾನೆ. ಈ ಗ್ರಂಥಗಳಲ್ಲಿ ಅನೇಕವುಗಳು ಈಗ ಉಪಲಬ್ಧವಾಗಿರುವದಿಲ್ಲ. ಇವರ ಮೇಲಿಂದ ಕೆಳದಿಯ ರಾಜರು ಮೊದಲಿನ ಕಾಲದಲ್ಲಿ ನಾಗರೀಕತೆಯಲ್ಲಿ ಎಷ್ಟು ಮುಂದುವರಿದವರಾಗಿದ್ದರೆಂಬದು ಸ್ಪಷ್ಟವಾಗುತ್ತದೆ. ಈ ಎಲ್ಲ ಸಂಗತಿಗಳಿಂದ ಈ ಗ್ರಂಥದ ಮಹತ್ವವು ವಾಚಕರ ನಿದರ್ಶನಕ್ಕೆ ಕೂಡಲೇ ಬರದೆ ಇರಲಾರದು. ಮಿ॥ ರಾಮರಾಯರು ಈ ಗ್ರಂಥವನ್ನು ತಪ್ಪುತಡೆಗಳಿಲ್ಲದೆ ಬಹು ಚನ್ನಾಗಿ ಮುದ್ರಣಗೊಳಿಸಿದ್ದಾರೆ. ಅದರ ಮುನ್ನುಡಿಯನ್ನು ಕೈ. ವಾ. ರಾ॥ ಬ॥ ಎಚ್. ಕೃಷ್ಣಶಾಸ್ತ್ರಿಗಳು ಬಿ. ಏ. ಇವರು ಬರೆದಿರುತ್ತಾರೆ. ಮತ್ತು ಅದರಲ್ಲಿಯ ವಿಮರ್ಶನಾತ್ಮಕ ಲೇಖವನ್ನು ರಾಜಮಹೇಂದ್ರಿಯ ರಾ॥ ರಾ॥ ಎಮ್. ರಾಮಕೃಷ್ಣ ಕವಿಗರು ಎಮ್. ಏ. ಇವರು ಬರೆದಿದ್ದಾರೆ. ಮತ್ತು ಗ್ರಂಥಕರ್ತರು ಗ್ರಂಥವನ್ನು ಮೈಸೂರು ಮಹಾರಾಜರವರಿಗೆ ಅರ್ಪಣ ಮಾಡಿದ್ದಾರೆ. ಇಂಥ ಮಹತ್ತರ ಗ್ರಂಥವನ್ನು ಅತ್ಯಂತ ಶ್ರಮವಹಿಸಿ ಪ್ರಕಟಗೊಳಿಸಿದ್ದಕ್ಕಾಗಿ ನಾವು ಮಿ॥ ಬೆನಗಲ್ಲ ರಾಮರಾಯರನ್ನು ಅತ್ಯಂತವಾಗಿ ಶ್ಲಾಘಿಸುತ್ತೇವೆ. ಕರ್ನಾಟಕಸ್ಥರು ಅದರಲ್ಲಿ ವಿಶೇಷವಾಗಿ ವೀರಶೈವರು ಈ ಗ್ರಂಥವನ್ನು ತರಿಸಿ ಸಂಗ್ರಹಿಸಿ ಗ್ರಂಥಕರ್ತರ ಶ್ರಮ, ಮತ್ತು ಸಾಹಸವನ್ನು ಸಾರ್ಥಕಗೊಳಿಸಬೇಕೆಂದು ನಾವು ಅತ್ಯಾಗ್ರಹಪೂರ್ವಕವಾಗಿ ಸೂಚಿಸುತ್ತೇವೆ.

---

# ಶಿವಾನುಭವದ ೩ನೇ ವರ್ಷ

ಈ ಸಂಚಿಕೆಯು ಶಿವಾನುಭವದ ಮೂರನೇ ವರ್ಷದ ಮೊದಲ ನೆಯದು. ಈ ಪತ್ರಿಕೆಯು ಈ ವರೆಗೆ ಮಾಡುತ್ತ ಬಂದಿರುವ ಕಾರ್ಯಗಳ ಮಹತ್ವವನ್ನು ಇನ್ನು ಮೇಲೆ ನಾವು ವಿಶೇಷವಾಗಿ ವಿವರಿಸುವ ಅವಶ್ಯ ತೋರುವದಿಲ್ಲ. ಈ ಬಗ್ಗೆ ಬೆಂಗಳೂರಿನಲ್ಲಿ ನೆರೆದ ಮಹಾಸಭೆಯ ಠರಾವೇ ಸಾಕ್ಷಿಯಾಗಿದೆ. ಅದು ಏನೆಂದರೆ:- " ಅನೇಕ ವೀರಶೈವ ಧಾರ್ಮಿಕ ಪ್ರಾಚೀನ ಗ್ರಂಥಗಳನ್ನು ಅತ್ಯಂತ ಶ್ರಮವಹಿಸಿ ಅವನ್ನು ಮುದ್ರಣಗೊಳಿಸಿ ಧರ್ಮ ಪ್ರಸಾರಣೆಯ ಕಾರ್ಯವನ್ನು ಮಾಡುತ್ತ ಶಿವಾನುಭವನೆಂಬ ತ್ರೈಮಾಸಿಕ ಪತ್ರಿಕೆಯನ್ನು ಹೊರಡಿಸಿ ತನ್ಮೂಲಕ ಸಮಾಜ ಸೇವೆಯನ್ನೂ, ಧರ್ಮ ಸಂರಕ್ಷಣೆಯನ್ನೂ, ಕರ್ನಾಟಕ ಭಾಷೆಯ ಅಭಿವೃದ್ಧಿಯನ್ನೂ ಮಾಡುತ್ತಲಿರುವ ರಾ|| ಸಾ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಯವರನ್ನು ಈ ಮಹಾಸಭೆಯು ಅಭಿನಂದನ ಮಾಡುತ್ತದೆ. "

ಈ ಎರಡು ವರ್ಷಗಳಲ್ಲಿ ೧೩ ಹಳೇ ಗ್ರಂಥಗಳು ಪ್ರಸಿದ್ಧಿಸಲ್ಪಟ್ಟಿವೆ. ಅವುಗಳಲ್ಲಿ ಈ ವರುಷ ಅಚ್ಚಾದವುಗಳು ೬ ಇವೆ. ಅವು ಯಾವವೆಂದರೆ: (೧) ಸಂಗನ ಬಸವೇಶ್ವರನ ವಚನ (೨) ಘನಲಿಂಗನ ವಚನ (೩) ನೈತಿಕ ಮತ್ತು ಭಕ್ತಿಯ ವಚನಗಳು (೪) ಲಿಂಗ ಮತ್ತು ಪರಮಾತ್ಮ ಇವು ಸಂಪೂರ್ಣ ಗ್ರಂಥಗಳು. ಅಲ್ಲದೆ(೧) ಬಿಳಗಿ ಅರಸುಗಳ ವಂಶಾವಳಿ (೨) ಏಕೋತ್ತರ ಶತಸ್ಥಲ ಇವು ಇನ್ನೂ ಅಚ್ಚಾಗುತ್ತಲಿವೆ. ಲಿಂಗ ಪೂಜೆಯ ತತ್ವಗಳು ಈ ಪುಸ್ತಕದ ದ್ವಿತೀಯ ಮುದ್ರಣ ವಾಗಿರುತ್ತದೆ. ಈ ಪ್ರಕಾರ ಗ್ರಂಥಗಳು ಪ್ರಸಿದ್ಧವಾಗಿರುವದಲ್ಲದೆ ಈ ಪತ್ರಿಕೆಯ ದ್ವಾರಾ ಅನೇಕ ಮಹತ್ವದ ಧಾರ್ಮಿಕ ಮತ್ತು ಐತಿಹಾಸಿಕ ಲೇಖಗಳು ಪ್ರಸಿದ್ಧವಾಗಿವೆ. ಅವುಗಳೆಲ್ಲವೂ ಯಾವ ತರದ ಪಕ್ಷಪಾತ ವಹಿಸದೆ ಕೇವಲ ತತ್ವ ಸಂಶೋಧನ ಬುದ್ಧಿಯಿಂದ ಬರೆಯಲ್ಪಟ್ಟವುಗಳಾಗಿವೆ. ಈ ಲೇಖವನ್ನು ಕಳಿಸಿ ಕೊಟ್ಟ ವಿದ್ವಜ್ಜನರಿಗೆ ಶಿವಾನುಭವ ಪತ್ರಿಕೆಯು ಅತ್ಯಂತ ಋಣಿಯಾಗಿದೆ. ಶಿವಾನುಭವದ ಮಹತ್ವವು ಈಗ ಜನರಿಗೆ ಕ್ರಮೇಣ ತಿಳಿಯಹತ್ತಿರುವದು ಸಮಾಧಾನಕರವಾಗಿರುವದು. ಅನೇಕರು ಇದರಲ್ಲಿ

ಪ್ರಕಟವಾಗಿರುವ ಗ್ರಂಥಗಳನ್ನೂ ಲೇಖಗಳನ್ನೂ ಅತ್ಯಾದರ ಪೂರ್ವಕ ವಾಗಿ ಓದುತ್ತಿರುವದು ನಮಗೆ ಕಂಡು ಬಂದಿದೆ. ರಬಕವಿಯಲ್ಲಿರುವ ಶ್ರೀ ಮಾ|| ಮುರಿಗೆಯ್ಯ ಬಾಗೋಜಿ ಇವರು ಇದರಲ್ಲಿಯ ಗ್ರಂಥಗಳನ್ನು ಅನೇಕ ಜನರೊಂದಿಗೆ ನಿತ್ಯ ಪಠನ ಮಾಡುವ ಪರಿಪಾಠವನ್ನು ಇಟ್ಟುಕೊಂಡಿರುವರು. ಆ ಕಾಲಕ್ಕೆ ೪೦-೫೦ ಜನ ಸ್ತ್ರೀ ಪುರುಷರು ಕೂಡುತ್ತಲಿದ್ದಾರೆ. ಈ ಕ್ರಮವನ್ನು ಎಲ್ಲ ಗ್ರಾಮಗಳಲ್ಲಿ ಅನುಸರಿಸಿದರೆ ನಮ್ಮ ಸಮಾಜದಲ್ಲಿ ನಿಜವಾದ ಧಾರ್ಮಿಕ ಬುದ್ಧಿಯು ನೊಳೆಗೊಳ್ಳುವದರಲ್ಲಿ ಏನೂ ಸಂದೇಹವಿರಲಾರದು.

ಎರಡನೇ ವರ್ಷದ ಅಂತ್ಯದಲ್ಲಿ ಇಲ್ಲಿಯ ಕಲೇಕ್ಟರಸಾಹೇಬ ವಿ|| ವ್ಹಿ. ಎಚ್. ನಾಯಿಕ ಎಮ್. ಎ. ಬಾರ-ಆ್ಯಟ-ಲಾ ಇವರ ಅಧ್ಯಕ್ಷತೆಯಲ್ಲಿ ಹಿತಚಿಂತಕ ಪ್ರೆಸ್ಸಿನ ವಾರ್ಷಿಕ ಸಮಾರಂಭವು ಬಹು ವಿಜೃಂಭಣೆಯಿಂದ ಜರಗಿಸಲ್ಪಟ್ಟಿತು. ಆ ಕಾಲಕ್ಕೆ ಒಂದು ಸಾಹಿತ್ಯ ಪ್ರದರ್ಶನವು ನೆರವೇರಿಸಲ್ಪಟ್ಟಿತು. ಆಗ ಅಧ್ಯಕ್ಷರು ಸಂಶೋಧನಕಾರ್ಯಕ್ಕೋಸ್ಕರ ೫೦ ರೂಪಾಯಿಗಳು ಮತ್ತು ರಾ|| ರಾ|| ಚನಮಲ್ಲಪ್ಪ ಅಬಕಾರ ಮು|| ಬನಹಟ್ಟಿ ಸಂ|| ಜಮಖಂಡಿ ಇವರು ೧೦೦ ರೂಪಾಯಿಗಳು ಹೀಗೆ ಸಹಾಯವನ್ನು ಮಾಡಿದರು. ಇದಕ್ಕೋಸ್ಕರ ನಾವು ಅವರ ಉಪಕಾರವನ್ನು ಮನ್ನಿಸುತ್ತೇವೆ.

ಈ ಪ್ರಕಾರ ನಮ್ಮ ಪ್ರಯತ್ನಗಳಿಗೆ ಕಾಲಕಾಲಕ್ಕೆ ಸಹಾಯವನ್ನು ಮಾಡುತ್ತ ಬಂದ ಪರಮಾತ್ಮನನ್ನು ಅನನ್ಯಭಾವದಿಂದ ಸ್ಮರಿಸಿ ಮುಂದಿನ ವರ್ಷವಾದರೂ ಹೀಗೆಯೇ ಅವನು ನಮಗೆ ಸಹಾಯ ಮಾಡಲೆಂದು ಬೇಡಿಕೊಂಡು ನಾವು ಮುಂದಿನ ಪ್ರಯತ್ನಗಳಿಗೆ ತೊಡಗುತ್ತೇವೆ.



ಕಂದ॥

ಅರಿಗಳ ಪಣೆಯುಕ್ಕರವುಂ।
ಕರವೊರೆಸುವ ಜಠರ ಜನಿತನೆಂಬಂತೆ ವೊಲಾ॥
ತರುಣಿಗೆ ತ್ರಿವಳಿಯು ಪೋಗುತ।
ಪರಿಶೋಭಿತವಾಯ್ತು ಚಿಕುರವುಂ ಶಾಖೆಗಳಿಂ ॥೧೫೮॥

ಕ್ಷಿತಿಧರನು ಜಠರದೊಳಗಿರ।
ಲತಿಶಯುವೇ ಮಂದಗಮನ ಪೆರಗಂ ಮೇಗಂ॥
ಕ್ಷಿತಿಧರರಾ ಭರವೆಂಬುದು।
ಕ್ಷಿತಿಪನ ರಾಣಿಯೊಳು ಚಿತ್ರಮಂ. ಸೂಚಿಸುಗುಂ ॥೧೫೯॥

ಗಜ ಘಟೆಯುಂ ತುರಗಂಗಳ।
ಭುಜಬಲದೊಳಜೇಯರಾದ ಭಟ ಸಂತತಿಯುಂ॥
ನಿಜಮಾತೆ ಬಯಸಿ ನೋಳ್ಪುದ।
ವಿಜಿಗೀಷು ಕುಮಾರನಪ್ಪುದಂ ಸೂಚಿಪವೊಲ್ ॥೧೬೦॥

ಭೂಮಿಪತಿ ತಿಳಿದು ಬಯಕೆಯ॥
ಪ್ರೇಮ ವ[ದಿ?]ನೆಲ್ಲವನು ಸಲಿಸಿ ಸೀಮಂತಮುಮಂ॥
ಸೋಮಶೇಖರನು ವಿರಚಿಸಿ।
ಕಾಮಿಸಿದರ್ಥವನು ತಂದೀ[ದು?]ಜನಗಳಿಗಿತ್ತಂ ॥೧೬೧॥

ಕಂತುರತಿರೂಪರೀರ್ವರ್।
ಸಂತತ ಸೌಭಾಗ್ಯ ಸೌಖ್ಯ ಶರಧಿ ನಿಮಗ್ನರ್॥
ಸ್ವಾಂತದೊಳು ನೆರೆದರಾ ಭೂ।
ಕಾಂತನು ತತ್ಸತಿಯು ಪಾತ್ರದಾನವ ನೊಲವಿಂ ॥೧೬೨॥

ಶ್ರೀ ವೀರಶೈವ ಚರರೊಳು।
ಪಾವನ ಚಾರಿತ್ರ ನಿಷ್ಠರಂ ಗುರುಕುಲರಂ॥
ಕೈವಲ್ಯಪತಿಯ ಭಕ್ತರ।
ದೇವ ಮಹಾ ಪೃಥ್ವಿಗಧಿಕ ಜಂಗಮ ವರರಂ ॥೧೬೩॥
ಅಂತೆಕಂತೆಗಳ ಭೇದದ।
ಪಂತಿಯ ಪನ್ನೆರಡು ಸಾಸಿರದ ಯತಿವರರಂ॥

ಮುಂತಾಗಿ ಕರೆಸಿ ಮುದದಿಂ ।
ಶಾಂತದಿ ಪಾದ್ಯಾರ್ಘ್ಯ ವಿಧಿಯ ನೆಸಗಿದ ರಾಗಳ್ ॥೧೬೪॥
ತೊಂಬತ್ತಾರುಂ ಸಾಸಿರ ।
ವೆಂಬಿದು ಮಿಗಿಲಾದ ಲಕ್ಷ ಜಂಗಮ ದೇವ ॥
ರ್ಗಂ ಭಕ್ತಿಗೂಡಿ ನೀಡಿದ ।
ತ್ರ್ಯಂಬಕ ಪದಭಕ್ತ ಸೋಮಶೇಖರ ಭೂಪಂ ॥೧೬೫॥
ವಿಪ್ರರ ಸಂತತಿಗಂ ಲೋ ।
ಕಪ್ರಸ್ತುತ ಷೋಡಶಾದಿ ದಾನದ ವಿಧಿಯಂ॥
ಕ್ಷಿಪ್ರದೊಳು ನೆಗಳ್ದ ಗುಣದೊಳ ।
ಗಪ್ರತಿಮಂ ಸೋಮಶೇಖರಂ ನೃಪತಿಲಕಂ ॥೧೬೬॥

**ಚಂಪಕ॥**

ಗಿರಿಜೆಗಮಾಮಹೇಶ್ವರಗಮೆಂತು ಷಡಾನನನಂತು ಸೋಮಶೇ ।
ಖರ ನರನಾಥಗಂ ಸ್ಮರನರಾಣಿಯ ನೇಳಿಪ ನೀಲಮಾಂಬೆಗಂ ।
ನೆರೆದ ಜಯಂತನಾಶಚಿಗಮಿಂದಿರೆಗಂ ಸಲೆ ಪುಟ್ಟಿದಂತೆ ತಾಂ।
ನೆರೆ ನವ ಮಾಸದಂತ್ಯದೊಳು ಜನ್ಮಿಸಿದಂ ಸುಕುಮಾರ ಭಾಸ್ಕರಂ ॥೧೬೭॥

**ಮತ್ತೇಭ॥**

ಶುಭಲಗ್ನಂ ಶುಭತಾರೆ ಯೋಗಕರಣಂ ದ್ರೇಕ್ಕಾಣ ಹೋರಾಸಮಂ
( ರಾಂಶಮುಂ? ) ।
ಶುಭಮಾಕೇಂದ್ರಚತುಷ್ಟಯಂ ಶುಭಕರಂ ವರ್ಗೋತ್ತಮಾಂಶಂಗಳುಂ ।
ಶುಭಮಾಚಂದ್ರನ ಮೇಲೆ ಸತ್ಕ್ರಿಯೆಗಳುಂ ಖದ್ಯೋತ ಪುತ್ರೇಶರುಂ ।
ಶುಭಮೇಕಾದಶದೊಳ್ ಜನಾಧಿಪತಿಯುಂ ಸರ್ವತ್ರ ಸನ್ಮಂಗಳಂ ॥೧೬೮॥

**ಕಂದ॥**

ದೈವಜ್ಞ ರ್ಕ್ನೆರೆದೆಲ್ಲಂ ।
ಈ ವಿಧ ಮೆಂದುಸಿರೆ ಜನನ ಕಾಲದ ಬಲಮಂ ॥
ಭೂವರ ಹರುಷಿತ ನಾದಂ ।
ಪಾವನ ಮಾಯ್ತೆಂದು ಕ್ಷಾತ್ರ ಸಂತತಿಯೆಲ್ಲಂ ॥೧೬೯॥

ಸಕ್ಕರೆಯುಂ ರಥಗಜದೊಳ್ ।
ಮೊಕ್ಕಳಮೆನೆ ಹೇರಿ ಕೇರಿ ಕೇರಿಯೆಸುಳೆಲ್ಲಂ॥
ಚಿಕ್ಕನೆ ಸರ್ವ ಜನಕ್ಕಂ ।
ಲೆಕ್ಕಿಸದೆ ಮಹೋತ್ಸವಂಗಳಂ ನೆರೆಕೊಟ್ಟರ್ ॥೧೭೦॥
ಒಸಗೆಯನು ಪೇಳ್ದ ಜನರಿಗೆ ।
ಪೊಸ ಸಿರಿಯುಂ ಮೆರೆವ ಮೆ [ಯ್ಯ] ತೊಡಿಗೆಗಳಂ [ತಾಂ] ॥
ಒಸೆದಿತ್ತು ಮನ್ನಿಸಿದನಾ ।
ವಸುಧೇಶಂ ಸೋಮಶೇಖರೇಂದ್ರ ನರೇಂದ್ರಂ ॥೧೭೧॥
ನೃಪವರರಿಗೆ ಮಂತ್ರಿಗಳಿಗೆ ।
ಲಿಪಿ ಶಾಸ್ತ್ರ ಪ್ರಮುಖ ಗಣಕ ಸಭ್ಯರ್ಗೆಲ್ಲಂ॥
ಅಪರಿಮಿತ ದುಡುಗೆರೆಗಳಂ ।
ಕೃಪೆಯಿಂ [ದಂ] ಕೊಟ್ಟನಾ ನೃಪಾಲ ಲಲಾಮಂ ॥೧೭೨॥
ಜಾತಕರ್ಮವನು ರಚಿಸಿದ ।
ನಾತತ ಸತ್ಕೀರ್ತಿ ವಿಜಯ ಲಕ್ಷ್ಮೀರಮಣಂ ॥
ಖ್ಯಾತಿಗೆ ನೆಲೆಯಪ್ಪಂತಿರೆ ।
ಸ್ವೇತಪುರಾಧೀಶ ಸೋಮಶೇಖರ ಭೂಪಂ ॥೧೭೩॥
ನಾನಾದೇಶದ ವಿಪ್ರವಿ ।
ತಾನಕ್ಕಂ ಸಕಲ ಶಾಸ್ತ್ರವಿದ್ಯಾವಿದರ್ಗಂ ॥
ದೀನಾನಾಥರ್ಗಂ ಸಂ ।
ತಾನಂ ಕೊಟ್ಟಂತೆ ಕೊಟ್ಟ ನೃಪ ಪುನ್ನಾಗಂ ॥೧೭೪॥

ಮತ್ತೇಭ॥

ನವರತ್ನಾಂಕಿತ ದಿವ್ಯ ವಸ್ತ್ರ ಚಯದಿಂ ಮಂದಾರ ಮಾಲ್ಯಾದಿಯಿಂ।
ವಿವಿಧೋತ್ತುಂಗ ನಿಕೇತ ಬದ್ಧವರ ಮುಕ್ತಾಜಾಲ ಸಂಕ್ರಾಂತ ಕೈ ।
ರವ ಸಂರಂಜಿತ ಕೇತನ ಪ್ರಚಯದಿಂ ಸದ್ಗಂಧ ಸಂದೋಹದಿಂ ।
ಭುವನಸ್ತುತ್ಯ ಮೆನಿಪ್ಪ ರಾಜ ಗೃಹಮುಂ ಶೃಂಗಾರ [ಮಂ] ಮಾಡಿದರ್ ॥೧೭೫॥

ಕಂದ॥

ಅಲ್ಲಲ್ಲಿಗೆ ಗುಡಿ ತೋರಣ ।
ವಲ್ಲಿಲ್ಲಿಗೆ ಕಲಶ ದರ್ಪಣಂಗಳ ನನುವಿಂ ॥

ದಲ್ಲಕ್ಷ್ಮಿಗೆ ಕುರುಜುಗಳಂ ।
ಚೆಲ್ವಿತ್ತೆಸೆವಂತೆ ಮೇರು ವಿರಚಿಸಿಯಿರ್ದ್ದರ್ ॥೧೭೬॥

ಜಾಗೆಗಳಿಂ ದೂರ್ವೆಗಳಿಂ ।
ಬಾಗದ ಕೇತಕಿಗಳಿಂದೆ ಕದಳೀಕುಲದಿಂ॥
ಪೂಗ ಪುನ್ನಾಗ ಚಂಪಕ।
ದಾಗರ ಮನೆ ಪುರವ ನೆಲ್ಲವಂ ಕೈಗೆಯ್ವ್ವರ್ ॥೧೭೭॥

ದ್ವಾದಶ ದಿವಸದೊಳಂ ಚೆ ।
ಲ್ವಾದುದು ತಾರಾದಿ ಲಗ್ನ ಚಂದ್ರ ಬಲಂಗಳ್॥
ಮಾದೇವನ ಪೂಜಿಸಿ ಬಳಿ ॥
ಕಾದರದಿಂ ನಾಮಕರ್ಮ್ಮನುಂ ವಿರಚಿಸಿವರ್ ॥೧೭೮॥

ಭದ್ರಗ್ರೀವ ಗ್ರೀವಂ ।
ಭದ್ರಂಗಳ ನೆಸಗಿ ಭದ್ರಮಂ ಪರ್ಬಿಸುತಂ॥
ಭದ್ರಹಸ್ತಿಯೊಳೆ ಪ್ರೀತಂ ।
ಭದ್ರವ್ಯಾಖ್ಯಾನ ಸಹಜಮನೆ ಪೆಸರಿಟ್ಟರ್ ॥೧೭೯॥

ಉತ್ಸವ ಭೇರೀಧ್ವನಿಯೆ ಮ ।
ರುತ್ಸಭೆಯುಂ ಪೋ (ಪೋ ?) ತು ಕರೆಯೆ ಬಂದವರೆಲ್ಲರ್॥
ತತ್ಸಭೆಯತಿಶಯಮಪ್ಪ ಚೆ ।
ತ್ತ್ರೋತ್ಸವಕರಮಾಗೆ ವಿಬುಧಮಯ ಮಾಯ್ತುದರಿಂ ॥೧೮೦॥

ಎತ್ತಂ ನೋಡಲ್ ನೃತ್ಯಂ ।
ಚಿತ್ತಕ್ಕತಿಶಯಮನೀಯೆ ವಂದಿಜನಂಗಳ್ ॥
ಚಿತ್ತರದೆ ಬಿರುದುಗಳ ಕ್ಕೆ ।
ಯೆತ್ತುತ್ತಂ ಪೊಗಳ್ದರಂದು ಸಭೆಯೊಳಗೆಲ್ಲಂ ॥೧೮೧॥

ಮಂಗಳ ದರ್ಪಣ ಕಲಶಂ ।
ಮಂಗಳ ಧವಳಾರ ಶೋಭನಂಗಳ ಗಾನಂ ॥
ಮಂಗಳ ಗಾಯಕ ಗಾನಂ।
ಮಂಗಳ ನಿನದಾಭಿರಾಮಮಾಯ್ತಾ ಪುರದೊಳ್ ॥೧೮೨॥

ನಡೆಚಪ್ಪರ ನಡೆದೋರಣ।
ನಡೆ ವಸ್ತ್ರದೊಳಿಡುತ ಪಜ್ಜೆಯುಂ ನಡೆವುತ್ತಂ ॥
ಪೊಡವಿಪರ ಮುಡದಿಯರ್ ಕಡು।
ಬೆಡಗಿಂ ದೈತಂದರುತ್ಸವಕ್ಕತಿ ಮುದದಿಂ ॥೧೮೩॥

ಉತ್ತಮವೆನಿಸಿದ ಮೊತ್ತದ।
ರತ್ನಂಗಳ ಕೆತ್ತಿ ಬಿಗಿದ ವೈಡೂರ್ಯಗಳಿಂ॥
ಚಿತ್ರಕ್ಕುತ್ಸವ ವಿೂವುದು।
ಮುತ್ತಿನ ಲಂಬಣಗಳಿಂದೆ ತೊಟ್ಟಿಲ್ ಸತತಂ ॥೧೮೪॥

ಪಜ್ಜೆಯ ರತ್ನದ ತೊಲೆಯಿಂ।
ನಿಚ್ಚಳದಿಂ ಕೆಲದಿ ಬಜ್ಜರದ ಬಿಂಬಗಳಿಂ॥
ದಚ್ಚರಿಯ ನೀವ ಕುಂದಣ।
ದಕ್ಷತೆಯಿಂ ಮೆರೆವ ನೇಣ್ಗಳಿಂ ರಂಜಿಸುಗುಂ॥೧೮೫॥

ಇಂತೆಸೆವ ತೊಟ್ಟಿಲೊಳ್ಶು।
ಕಾಂತ ಶಿರೋಮಣಿಯು ಸುತನ ಪುಟ್ಟಿರಿಸುತ್ತಂ॥
ಕಾಂತೆಯರ್ಬಿಡದೆ ಜೋಗುಳ।
ಮಂ ತಡೆಯದೆ ಪಾಡಿ ಪೊಗಳಿದರ್ ಸಂಭ್ರಮದಿಂ ॥೧೮೬॥

ಜೋ ಜೋ ಮುದ್ದು ಕುಮಾರಾ।
ಜೋ ಜೋ ಮೋಹನ ವಿಹಾರ ಮದನಾಕಾರಾ ॥
ಜೋ ಜೋ ರಿಪು ಸಂಹಾರಾ।
ಜೋ ಜೋ ಪೃಥ್ವೀಶ ರತ್ನಕವಿಮಂದಾರಾ ॥೧೮೭॥

ಬಿದಿಗೆಯೊಳಿವೆರೆಯು ದಿನ ದಿನ।
ಕೊದವೆ ಕಲಾ ಪ್ರೌಢಿ ಕಳೆಯು ಬೆಳೆವಂತೆ ಗ (ಗು?) ಣಾ॥
ಸ್ಪದನು ಬಳೆದೊಪ್ಪಿ ಶೈಶವ।
ದೊದವಿಂ ಚೆಲ್ವೆತ್ತು ರಾಜಿಪಂ ನೃಪತನಯಂ ।೧೮೮॥

ಪಳುಕಿನ ನೆಲದೊಳ್ಪರಿಯು।
ತ್ತಿಳೆಯೊಳ್ಬಹಳೊಪ್ಪವೆತ್ತ ನಿಜ ಪ್ರತಿಬಿಂಬಂ ॥

ಪೊಳೆಯಲ್ ಪಿಡಿಯಿಲ್ಲ ( ಯಲ್ಕೆ? )ಂದದ ।
ಘಳಲನೆ ತಾನುಚ್ಚಿ ಬಾಲಕೇಳಿಯುಮೆರೆದಂ ॥೧೮೯॥
ಅಂಬೆಗಾಲಿಕ್ಕಿ ಕುವರಂ ।
ತಾಂ ಬಿಡದೆ ನೃಪರ ವಕ್ಷದೊಳ್ ಜಾನುಗಳಂ ॥
ಬೆಂಬಿಡದೆ ಮುಂಡಿಯೂರುವೆ ।
ನೆಂಬುದನೆ ಸೂಚಿಸಂತಿರೊಪ್ಪಿದ ನಾಗಳ್ ॥೧೯೦॥
ಮಣಿಕುಟ್ಟಿಮ ನೆಲದೊಳ್ಗಣ ।
ಗಣನಿಲಯಂ ಪಜ್ಜೆಯಿಡುತೆ ಪರ ನೃಪರುರಮಂ॥
ಅಣೆದೊತ್ತಿ ಮೆಟ್ಟುವಂತಿರೆ ॥
ಘೃಣೆ ಪಸರಿಸೆ ಪಜ್ಜೆಯಿಂದೆ ದಟ್ಟಡಿಯಿಟ್ಟಂ ॥೧೯೧॥
ನಳನಳಿಪ ಪದಕ ಕಂಕಣ ।
ಪೊಳೆವಂದುಗೆ [ ಗೆ ] ಜ್ಜೆ ಕರ್ಣಕುಂಡಲ ಹಾರಂ ॥
ಗಳನರಳೆಲೆ ಮಾಗಾಯಂ ।
ತಳೆದೊಪ್ಪಂ ವೆತ್ತ ಬಾಲ ತೊಡಿಗೆಗಳಂ [ದಂ] ॥೧೯೨॥
ಪೊಳೆದೊಪ್ಪವಿಟ್ಟ ಕುಲಿಶದ ।
ಮೊಳೆಗಳ ನನುಕರಿಸಿ ರದನ ಮೊಳೆದೋರುತ್ತಂ ॥
ನಳಿದೋಳ ಬೀಸಿ ಮಾತೆಯ ।
ಬಳಿಗೈದಿದ ತೊದಲ ನುಡಿಯ ನುಡಿವುತ್ತಾಗಳ್ ॥೧೯೩॥
ನಡೆಗಲ್ತಂ ಶಿವಮಾರ್ಗದ ।
ನುಡಿ ಗಲ್ತಂ ಶಿವ ಪುರಾಣ ಶಾಸ್ತ್ರೋಕ್ತಿಗಳಂ ॥
ನಡೆನುಡಿ ಗಲಿಯದ ಮುನ್ನಂ ।
ಕೊಡೆ ಗಲ್ತಂ ತರುಣ ಕಲ್ಪಭೂಜದ ತೆರದಿಂ ॥೧೯೪॥
ಚಿಣ್ಣಂಚೆಗೆ ಗತಿಯಿರವಂ ।
ಬಣ್ಣಿಸಿ ಶಿಕ್ಷಿಸುವ ಕಳಭ[ ? ] ನಂತಿರೆ ಕುವರಂ॥
ಕಣ್ಣಂ ಸೆರೆವಿಡಿವುತ್ತಂ ।
ಚಿಣ್ಣರ ನೆರವಿಯೊಳು ಪಜ್ಜೆಯೊಂದೊಂದಿಟ್ಟಂ ॥೧೯೫॥
ಅಪ್ಪಯ! ಕಂದಾ! ಬಾರೆಂ ।
ದೊಪ್ಪುವ ಸವಿಮಾತಿನಿಂದೆ ಕರೆಯಲ್ಕಾಗಳ್ ॥

ಕುಪ್ಪಳಿಸಿ ವಂಚಿಸುತ್ತಂ ।
ಸುಪ್ಪಾಣಿಯ ಮುತ್ತಿನಂತೆ ಅಪ್ಪಿದ ಕೊರಳಂ ॥೧೯೬॥

**ಚಂಪಕ**॥

ವನಿತೆಯು ಮೊರ್ವಳೆತ್ತಿ ಪಿಡಿಯಲ್ಕುವರಂ ಪಿಣಿಲೊತ್ತಿದೊಂದು ಪಾ।
ವನತರಕೇಶವುಂ ಪಿಡಿದು ಕುಂಭ ಕುಚಂಗಳ ಮೆಟ್ಟಿ ನಿಂದು ತಾಂ ।
ಘನತರ ದಬ್ಜ ಕುಟ್ಮಲಯುಗಂಗಳ ಸೋಂಕಿ ಕರಂ ರಮಾಧಿಪಂ ।
ಕನಲಿ ಕಡಂಗಿ ನಿಂತು ವರ ಕಾಳಭುಜಂಗನ ಮರ್ದಿಪಂದದಿಂ॥ ೧೯೭॥

**ಕಂದ**॥

ಓರಗೆಯ ಕುವರರೊಡ ನಾ ।
ಭೂರಮಣ ತನೂಜ ನಾಡುತೊಪ್ಪಿದ ನೊಲವಿಂ ॥
ತಾರೆಗಳ ನೆರವಿಯೊಳಗಾ ।
ಕೈರವ ಮಿತ್ರಂ ಪ್ರಕಾಶಿಪಂತಿರೆ ಮುದದಿಂ ॥೧೯೮॥

ಪುಣ್ಯದ ಪುಣ್ಯಮಗಣ್ಯಂ ।
ಗುಣ್ಯಂ ಗುಣಗಣಿತ ವಿಮಲ ಗುಣ [ಗಣ] ಗಣ್ಯಂ ॥
ಪುಣ್ಯಜನಪತ್ರನುತ ತಾ ।
ರುಣ್ಯಂ ಮಾಹಾತ್ಮ್ಯ ಭದ್ರ ನೃಪನೆ ಶರಣ್ಯಂ ॥೧೯೯॥

**ಚಂಪಕ**॥

ಕುವರನ ಜಾಣ್ಮೆಯೊಂದು ನುಡಿಗಂ ಕುಡಿನೋಟದ ಗಾಡಿಯೇಳ್ಗೆಗಂ।
ಶಿವಪದ ಭಕ್ತಿಗಂ ಸ್ಮರನ ನೇಳಿಪ ರೂಪಿನ ಭಾವದೇಳ್ಗೆಗಂ ॥
ತವೆ ಧೃತರಾಜ ಚಿಹ್ನ ಪರಿಸೂಚಿತ ರೇಖೆಯ ಸರ್ವಲಕ್ಷಣಂ ।
ಭುವನ ವಿನುತ್ಯ ದಂಪತಿಗಳೀರ್ವರು ಸಂತಸದಂತ ವೈದಿದರ್ ॥೨೦೦

**ಕಂದ** ॥

ಅಂತಿರ್ಪ ಸಮಯದೊಳ್ ಭೂ ॥
ಕಾಂತನ ಸತಿ ನೀಲಮಾಂಬೆ ಋತುಮತಿಯಾದಳ್ ॥
ಕಾಂತೆಯುರು ಶೋಣಭೂಷಣ ।
ಮಂ ತಡೆಯದೆ ವಸನ ಪಲ್ಲವಂಗಳನಿತ್ತರ್ ॥ ೨೦೧॥

ಕಂದ ||

ಪಾವನ ಗಂಧೋದಕದಿಂ ।
ದಾ ವನಜಾಕ್ಷಿಯರು ಮಜ್ಜನಂ ಬುಗಿಸಲೊಡಂ ॥
ಭಾವಜನ ಸತಿ ಯೆಲಿದಾ ।
ದೇವಿಯು ಚೆಪ್ಪಸದನಂಗಳಂ ಕೈಗೈದರ್ ॥೨೦೨॥

ಮುತ್ತಿನ ಪುತ್ಥಳಿಯಂತಿರೆ ।
ಚಿತ್ತವ ನೆಪ್ಪೆ ಸೂರೆ ಗೊಳ್ಪ ಸತಿಯೆಡೆಗಾಗಳ್ ॥
ಮತ್ತಗಜ ಗಮನದಿಂ ನಡೆ ।
ದೆತ್ತಂದಂ ಸೋಮಶೇಖರೇಂದ್ರ ನೃಪಾಲಂ ॥೨೦೩॥

ಮದನ ನೃಪಾಲನ ಮಂತ್ರದ ।
ಸದನವಿದೆಂದೆನಿಸಿ ಮೆರೆವ ಸೆಜ್ಜೆಯ ಸದನ ॥
ಕ್ಕದಿರದೆ ನಡೆತಂದಾಗಳ್ ।
ಸುದತಿಯು ಸಹ ಮಂಚವೇರಿ ತಾಂ ಕುಳ್ತಿರ್ದರ್ ॥೨೦೪॥

ಮತ್ತೇಭ ||

ಪಿರಿದಂ ಚುಂಬಿಸಿ ಲಲ್ಲೆ ನೋಹವೆರಕಂ ಕೈಗಣ್ಮಿ ತೋಳ್ತೆ ಕ್ಕೆಯುಂ।
ಸರಸಾಲಾಪಗಳಿಂದೆ ಮುದ್ದಿಸಿ ಕುಚಪ್ರೋದ್ಭಾಸಿ ತತ್ಕಂಚುಕಾಂ ॥
ಬರಮಂ ತಾಂ ಜಗುಳ್ದೆತ್ತಿ ಹಾರದೊಲೆಪಂ ಸೈತಿಕ್ಕುತಂ ಸೋಮಶೇ ।
ಖರ ಭೂಪಂ ಸ್ಮರಕೇಳಿಯೊಳ್ನೆರೆದನಾ ಶೃಂಗಾರ ಸಾರೋದಯಂ ॥೨೦೫॥

ಕಂದ ||

ಅರೆ ಮು[ಗು]ಳ್ದಕ್ಷಿಗಳೆರಕಂ ।
ನೆರೆ ಕೆಂಪಡರ್ದಿರ್ದ ಕೇಕರಂ ಸೊಗಯಿಸುತಂ ॥
ಪಿರಿದು ಬೆಳ್ಪೇರಿದಧರಂ ।
ಪರಿಶೋಭಿಸೆ ನಿದ್ರೆಯೊಂದಿದರ್ ದಂಪತಿಗಳ್ ॥೨೦೬॥

ಮದಗಜಮನುದಯ ಗಿರಿಶಿಖ ।
ರದೊಳೊಪ್ಪುವ ಬಾಲಸೂರ್ಯನಂ ವೃಷ ವರನಂ ॥
ಚದುರೆ ನೀಲಾಂಗಿ ಕಂಡಳ್ ।

ಪೆದಪಿಂದಂ ತುರ್‍ಯಯಾಮದೊಳ್ ಸ್ವಪ್ನಗಳಂ ॥೨೦೭॥

ಕೀಡುವ ತಂಬೆಲರಿಂ ಮಾ।
ಡಾಡುವ ಶುಕ ಕೋಕಿಲಾದಿ ಶಂಖಧ್ವನಿಯಿಂ।
ಪಾಡುವ ಗಾಯಕರುಲಿಯಿಂ।
ಕೂಡಿರದುಪ್ಪವಡಿಸಿದರು ನೃಪದಂಪತಿಗಳ್ ॥೨೦೮॥

ಎಚ್ಚತ್ತು ಶಿವನ ನಾಮವ।
ನುಚ್ಚರಿಸುತ ದರ್ಪಣಂಗಳಂ ನೋಡುತ್ತಂ ॥
ಸಚ್ಚರಿತ ರೊರ್ವರೊರ್ವರ್ ।
ಸ್ವಚ್ಛೋದಕದಿಂದೆ ಸ್ನಾನವಂ ನೆರೆ ಗೈದರ್ ॥೨೦೯॥

ಶುಚಿ ವಸ್ತ್ರಾಲಂಕಾರ।
ಪ್ರಚಯಂಗಳ ತಂದು ನೃಪತಿಗಂ ತತ್ಸತಿಗಂ ॥
ಪ್ರಚುರ ಮನೆ ಸಿಂಗರಿಸಿ ಘಟಿ।
ಕುಚೆಯರ್ ಶಿವಪೂಜೆ ಗೈದರತ್ಯುತ್ಸವದಿಂ ॥೨೧೦॥

ತದನಂತರದೊಳ್ಸತಿಯೊಳ್ ।
ಮುದದಿಂದಂ ಕಂಡಕನಸಿ ನಿರವಂ ಪೇಳಲ್॥
ಮದನ ಸಮ ಸೋಮಶೇಖರ ।
ನದರ ಫಲಂಗಳನೆ ಪೇಳ್ದ ನಿಂತೆಂದಾಗಳ್ ॥೨೧೧॥

**ಚಂಪಕ ||**

ಮದಗಜದಿಂದೆ ದಾನಗುಣ ಶೀಲ ನಿಜೋನ್ನತಕಲ್ಪಪಾದಪಂ।
ಉದಯಗಿರೀಂದ್ರ ಮಸ್ತಕ ವಿರಾಜಿತ ಭಾಸ್ಕರನಿಂ ಪ್ರತಾಪಿಯುಂ॥
ಉದಿತ ವೃಷೇಂದ್ರನಿಂ ಧರೆಯೊಳತ್ಯಧಿಕೋನ್ನತ ಪುಣ್ಯಭೋಗಿಯುಂ ॥
ಹೃದಯ ಕಲಂಪನೀವ ಕುವರಂ ನಿನಗಪ್ಪನು ನಂಬು ನಿಶ್ಚಯಂ ॥೨೧೨॥

**ಕಂದ॥**

ಆನುಡಿಯಂ ಕೇಳ್ದಾಗಳ್ ।
ಭೂನುತ ಸತ್ಪುತ್ರನಾದ ಪೊಲ್ಸಂತಸದಿಂ॥
ಮೀನಾಕ್ಷಿ ಸುಖದೊಳಿರುತಂ ।
ಮಾನಿತ ಸದ್ಗರ್ಭ ಚಿಹ್ನವುಂ ಕೈಕೊಂಡಳ್ ॥೨೧೩॥

ಚಂಪಕ॥

ವದನ[ದ]ಬೆಳ್ಪು ಕಪ್ಪೊಡೆದ ಚೂಚುಕ ಭಾಸುರ ದೇಳ್ಗ ಕೇಶದೊಳ್ ।
ಪುದಿದ ಕವಲ್ವಲಿ ತ್ರಯದ ಗೂಢತೆ ಮಧ್ಯದ ವೃದ್ಧಿ ಮಾಂದ್ಯದಿಂ ।
ಪೊದವಿದ ಯಾನ ಬಂಧುರತೆಯೊಂದಿದ ಗರ್ಭ[ದ]ಚಿಹ್ನವೆಲ್ಲಮುಂ ॥
ಸುದತಿಯೊಳೊಂದೆರಂಜಿಸಿವಿರಾಜಿಸಿದಳ್ ಪೊಸತೊಂದುದೇಶೆಯಿಂ॥೨೧೪॥

ಮತ್ತೇಭ॥

ನವಮಾಸಂ ಪರಿಪೂರ್ಣ[ಮಾಗೆ] ಶುಭತಾರಾಲಗ್ನಲಗ್ನಾಧಿಪಂ ।
ಭುವನಸ್ತುತ್ಯಮೆನಿಪ್ಪ ಕೇಂದ್ರ ತಟದೊಳ್ ಸ್ವಕ್ಷೇತ್ರ ಭಾಗ್ಯೋಚ್ಚದೊಳ್ ।
ರವಿಯುಂ ವಿಕ್ರಮದೊಳ್ ಗಿರಾಂಪತಿಯು ತಾನೇಕಾದಶಸ್ಥಾನದೊಳ್ ।
ಧವರಾಜ್ಯಾಭಿವಶಕ್ಕೆ ಯೋಗ್ಯಮೆನಿಪೊಂದೀ ದಿವ್ಯತತ್ಕಾಲದೊಳ್ ॥೨೧೫॥

ಕಂದ॥

ವನಜ ನಿವಾಸಿನಿಗಂ ಸುರ ।
ಮುನಿಸುತ ಪದ್ಮನಾಭಗಂ ಮನಸಿಜ ನೆಂ ॥
ತನಿತೊಂದು ಚಲ್ವಿಕೆಯು ನೊಂ ॥
ದನುಕರಿಸಿದ ಕುವರ ನೊರ್ವನುದಿಸಿದನಾಗಳ್ ॥೨೧೬॥

ಪುತ್ರೋದಯ ಮಾಯ್ತೆನುತಂ ।
ಧಾತ್ರಿಕೆಯುಗ್ಬಂದು ಪೇಳೆ ನೃಪಕುಲತಿಲಕಂ ॥
ನೇತ್ರ ಪ್ರಿಯಕರ ಭೂಷಣ ।
ವಸ್ತ್ರಂಗಳನೊಸೆದು ಕೊಟ್ಟಸಂತಾಕ್ಷಣದೊಳ್ ॥೨೧೭॥

ಖ್ಯಾತಿಗೆ ನೆಲೆಯಪ್ಪಂತಿರೆ ।
ಭೂತಳ ಪತಿ ಸೋಮಶೇಖರಂ ವಿರಚಿಸಿದಂ ॥
ಜಾತೋತ್ಸವ ವಿಧಿಯಂ ಗಣ ।
ನಾತೀತ ಮೆನಿಪ್ಪ ದಾನವಿಧಿಪೂರ್ವಕದಿಂ ॥೨೧೮॥

ಈಜಗಮಂ ತೆರಪಿಲ್ಲದೆ ।
ವಾಜಿಗಳನೆ ಕೂಡಿಕೊಂಡು ಬಾಜೀರಾಯಂ ॥
ಮಾಜದೆ ಬಂದ ನೆನುತ್ತಂ ।
ಸೋಜಿಗದಾ ವಾರ್ತೆ ಪುಟ್ಟಿತೀ ಸಂತಸದೊಳ್ ॥೨೧೯॥

ಸೀಸಕ ||
ಕಲ್ಯಾಣಮಠ ಮಹಂತಯ್ಯದೇವರ ಕೂಡೆ ।
ಕೊಲ್ಲ್ಯಮೆನಿಸಿದ ದಳಪತಿಯೊಡನೆ ಬಲಗೂಡಿ ।
ಶಾಲ್ಯವಿಲ್ಲದ ಜೆಡಕಣಿವಿಯೊಡ್ಡಿನಲಿ ನಿಂತು ।
ಭಲ್ಲಿಗಳ ಪಿಡಿದು ಬಂದರಿಗಳುಪಹತಿಸಲತಿ ।
ತಾಲ್ಯಗಳ ನುಳಿದು ದುಮ್ಮಿಡುತಂಜಿ ಪೋಗೆ ಸಂ ।
ಶಲ್ಯ ಸೋಮಶೇಖರ ಪುಣ್ಯದೇಳ್ಗೆ ||೨೨೦||
ಕಂದ||
ಪುಣ್ಯನಿಧಿ ಪುತ್ರನುದಿಸಲ ।
ಗಣ್ಯಮೆನಿಪ್ಪನಿತು ಶತ್ರುಗಳ್ಪೋಗಲೊಡಂ ||
ಗಣ್ಯವೆ ಸಂಗರವೆಂಬುದು ।
ಪುಣ್ಯಂ ಪುಣ್ಯಾನು ಬಂಧಿಯಪ್ಪುದರಿಂದಂ ||೨೨೧||
ಪುರಮುಮ ನರಮನೆಯುಂ ಸುರ ।
ಪುರಮಂ ನಗುವಂತೆ ಗಂಧಕಸ್ತುರಿ ರವ್ಯೋ ||
ತ಼್ರ ದಿವ್ಯವಸನ ರಚನೆಯು ।
ಮೆರೆವಂತಿರೆ ಸಿಂಗರಿಸಿದರಂತಾ ಕ್ಷಣದೊಳ್ ||೨೨೨||
ರವಿ ಸಂಖ್ಯೆಯ ದಿನದೊಳಗು ।
ತ್ಸವ ತರಶುಭ ಲಗ್ನತಾರೆ ಯೋಗಗಳೆಲ್ಲಂ ||
ಸವನಿಸಿದಾ ಲಗ್ನದೊಳಂ ।
ಸುವಿಧಾನದ ನಾಮಕರ್ಮವಂ ವಿರಚಿಸಿದರ್ ||೨೨೩||
ವಚನ||

ಇಂತೊಪ್ಪುವ ಸುಕುಮಾರನ ಜನನವಂ ನಿರೀಕ್ಷಿಸಿ, ಗುಣ ಗಂಭೀರತ್ವಮುಂ ಪರಿಕಿಸಿ, ಬಸವೇಂದ್ರ ನೆಂದಭಿಧಾನವಂ ಗೈದು ಕನಕ ನಿರ್ಮಿತವಾದ ತೊಟ್ಟಿಲೊಳ್ಸುವರನಂ ಪಟ್ಟರಿಸಿ ಮಂದಸ್ಮಿತೆಯರ್ ಶೋಭನವಂ ಪಾಡಿದರದೆಂತೆನೆ:—
ಕಂದ||
ಜೋ ಜೋ ಸತ್ಕುಲ ಸಂಭವ ।
ಜೋ ಜೋ ನೀಲಾಂಬ ಗರ್ಭವಾರಿಧಿಚಂದ್ರಾ ||

ಜೋ ಜೋ ನೃಪ ಚೂಡಾಮಣಿ ।
ಜೋಜೋ ಬಸವೇಂದ್ರ! ಎಂದು ತೂಗಿದರಾಗಳ್ ॥೨೨೪॥

ಸಿತಪಕ್ಷದ ಚಂದ್ರಮನಂ ।
ತತಿಶಯದಿಂ ಬಳೆದು ನೀಲರತ್ನದ ನೆಲದೊಳ್ ॥
ಪ್ರತಿಬಿಂಬವಿರಲುಪಾಯದ ।
ಕೃತಕೃತ್ಯಂ ಪೊರಸಿ ಪೋಗದಿರೆ ಕೋಪಿಸುವಂ ॥೨೨೫॥

ಅರಳಿಲೆ ಮಾಗಾಯ್ದ ಚವುಕುಳಿ ।
ಸರಪಣಿ ಪುಲಿಯುಗುರು ದಿಟ್ಟಿದಂಡೆಗಳಂ ತಾ ॥
ಪರಿಪರಿಯ ಬಾಲದುಡಿಗೆಗ ।
ಳಿರವಂ ಚೆಲ್ವೆತ್ತು ರಾಜಿಪಂ ನೃಪತನಯಂ ॥೨೨೬॥

ಒಂದೊಂದು ಪಜ್ಜೆಯಂ ಸಡೆ ।
ದೊಂದೊಂದುಂ ತೊದಲ್ವ ನುಡಿಯ ನುಡಿಯುತ್ತಾಗಳ್ ॥
ಮುಂದ ಮುಂಪವನೆ ಮಾಡುತ ।
ಬಂದಪ್ಪಿದ ತಾಯನಾಗಳಂ ತಾಕುವರಂ ॥೨೨೭॥

ಹಿಂಗಿತು ಶೈಶವ ದೊದವುಂ ।
ಸಂಗಳಿಸಿತು ಸೌಕುಮಾರ್ಯಮುಂ ನೆರೆ ನೆರ ವಾ ॥
ಯ್ತಂಗಜ ನಂತಿರೆ ಕುವರಂ ।
ಸಂಗಡಿಗರ ಕೂಡಿಕೊಂಡು ಮೆರೆಯುತ್ತಿರ್ದಂ ॥೨೨೮॥

**ವಚನ॥**

ಇಂತಿರುತಿರೆ—

**ಕಂದ॥**

ಶಾರದೆಯಂ ಮಿಗೆ ಸೂಚಿಸಿ ।
ಭೂ ರಮಣಂ ಸೋಮಶೇಖರಂ ನಿಜ ತನಯ ॥
ರ್ಗಾರಂಭಿಸೆ ವಿದ್ಯೆಗಳಂ ।
ಮಾರಸಮರ್ ಕಲಿತರೆಲ್ಲರುಂ ತತ್ಕ್ಷಣ ದೊಳ್ ॥೨೨೯॥

**ಚಂಪಕ॥**

ತುರಗ ಗಜಾದಿ ವಾಹನ ಚಯಂಗಳ ನೇರುವ ಕೌಶಲಂಗಳಂ ।
ಗರಡಿಯ ಸಾಧನಂ ಲಿಪಿಯ ಭೇದಗಳಂ ವರಗಾನ ವಿದ್ಯೆಯಂ॥

ಸುರುಚಿರ ಚಾಪ ನೃತ್ಯ ಪರಿಭೇದ ಸಮಾಶ್ರಿತ ವೀಣೆ ಕಿನ್ನರೋ।
ತ್ಕರಗಳ ಸತ್ಕಲಾಕ್ರಮವ ಸಾಧಿಸಿದರ್ ಸಕಲಾರ್ಥ ಶಾಸ್ತ್ರಮಂ॥೨೨॥

ವಚನ॥

ಇಂತಿಪ್ಪ ವಿಳಾಸಂಬಡೆದು ಸೋಮಶೇಖರ ರಾಜೇಂದ್ರ ರಾಜಿ (ರೋಜೆ?)ಯಿಂ ಸುಖಸಂಕಥಾ ವಿನೋದದಿಂ ಈರ್ವರು ಕುಮಾರರತಾರುಣ್ಯ ರೂಪು ಲಾವಣ್ಯ ಸಾಹಸ ಬುದ್ಧಿ ಸಕಲ ಕಲಾ ಪ್ರೌಢಿಮೆಯಂ ಕಂಡತಿ ಸ್ನೇಹಂಮನಂಬುಗೆ ಸಂಶಸಂಡಳೆದು ನಿಶ್ಚಿಂತ ಮಾನಸರಾಗಿ ರಾಜ್ಯಮಂ ಪರಿಪಾಲನಂ ಗೈದರದೆಂತೆನೆ ॥೨೩॥

ಲಯಗ್ರಾಹಿ॥

ಧೀರಜನರಿಂ ಸ್ತುತಿ ಪಿಚಾರಪರರಿಂ ಲಸದುದಾರ ಯುತರಿಂ ಶಿವಾಚಾರ ರತರಿಂದಂ।
ವೀರ ಭಟರಿಂ ವಿತತ ಸಾರಗುಣದಿಂ ಸಮರ ವೈರಿಜಿತರಿಂ ವರ ಕುಮಾರ ತತಿಯಿಂದಂ॥
ಭೂರಿ ಬುಧರಿಂ ಕೆಲವು ಧಾರುಣಿಪರಿಂ ವಿಜಯಶೂರಕರರಿಂ ದರಸ್ಮೇರ ಮುಖರಿಂದಂ।
ಮಾರಹರ ಭಕ್ತಿ ವಿಸ್ತಾರ ಸಿತಪುರದಧಿಪ ಭೂರಮಣ ನೊಪ್ಪಿದನ ಪಾರ ಸಭೆಯಿಂದಂ ॥೨೪॥

ಮತ್ತೇಭ॥

ಗುರುಪೂಜಾ ರತಿಯಿಂದ ಲೊಮ್ಮೆ ಶಿವಲಿಂಗ ಧ್ಯಾನದಿಂದೊರ್ಮೆ ಭಾ
ಸ.ರ ಪಂಚಾಕ್ಷರ ದಿವ್ಯಮಂತ್ರದ ಜಪಾನುಷ್ಠಾನದಿಂದೊರ್ಮೆ ಶಂ॥
ಕರಲೀಲಾ ಕಥನ ಪ್ರಸಂಗ ಶ್ರವಣಾನಂದಂಗಳಿಂದೊರ್ಮೆ ಸ।
ಚ್ಚರಿತಂ ಸಂತತ ಸೋಮಶೇಖರ ನೃಪಂ ತಾನಿರ್ದ ಸದ್ವೃತ್ತಿಯಿಂ॥೨೫॥

ಶಾರ್ದೂಲ॥

ಪಾರಾವಾರ ಪಟೀರ ಹೀರ ಘನಸಾರ ಕ್ಷೀರ ನೀಹಾರದಿಂ।
ಧೀರ ಪ್ರಜ್ವಲಿತೇಂದು ಗೌರವ ಯಶಸ್ಸಂಪೂರಿತಾಶಾಂತ ವಿ॥
ಸ್ತಾರೋದಾರ ವಿಹಾರ ಸಾರ ಸುಗುಣಾಲಂಕಾರ ಗಂಭೀರ ವಿ॥
ಸ್ಫಾರ ಶ್ರೀಕರ ಸೋಮಶೇಖರ ಮಹನ್ಮಾಂಗಲ್ಯ ರತ್ನಾಕರಂ ॥೨೬॥

**ಉತ್ಪಲ॥**

ಪಾಡುವ ಗಾಯಕರ್ಕ್ಳೊಡಿವ ಸತ್ಕವಿಗಳ್ ಸರಸೋಕ್ತಿಯಿಂದೆ ವಾ।
ತಾಡುವ ಮಂತ್ರಿಗಳ್ಮತವ ಖಂಡಿಪ ತಾರ್ಕಿಕರುಂ ಸು ಕಾಣ್ಕೆಯಂ॥
ನೀಡುವ ಮಾನ್ನೆಯರ್ ಜಯ ಸುಖೀ ಭವ ವಾಚಕ ಸಾಧು ವಾದಿಗಳ್।
ಕೂಡಿರಲಾವಗಂ ಬಿಡದೆ ರಕ್ಷಿಸುಗುಂ ನೃಪ ಸೋಮಶೇಖರಂ॥೨೩೪॥

**ವಾರ್ಧಿಕ॥**

ಇಂತತಿ ವಿನೋದದಿಂ ಸೋಮಶೇಖರ ಭೂಪ।
ಸಂತೋಷದಿಂದಿರಲು ಕೆಲವು ಕಾಲಾಂತರಕೆ।
ಕಂತುಹರ ಪದ ಭಕ್ತ ಕೈಲಾಸದೊಳ್ ವಾಸವಾಗಲಾ ತದನಂತರಂ॥
ಮಂತ್ರಿಗಳ್ಮನ್ನೆಯರ್ ದಂಡಾಧಿನಾಥ ಸಾ।
ಮಂತ ಸಾಮಾಜಿಕರ್ ಕೋವಿದರ್ ನೆರೆವುತ।
ತ್ಯಂತ ವಾತ್ಸಲ್ಯದಿಂ ಗಣಿತಜ್ಞರಂ ಕರೆಸಿ ಲಗ್ನಮಂ ಪರಿಕಿಸಿದರು॥೨೩೫॥

**ಕಂದ॥**

ವರ ಶೋಣಿತ ನಯನಾಬ್ದದ।
ಪರಿಕಿಸಲೆಂಟನೆಯ ತಾರೆ ನಾಮದ ಮಾಸಂ॥
ದೊರೆಕೊಂಡ ಪಾಂಡುಪಕ್ಷದೊ।
ಳೆರಡನೆ ತಿಥಿಯಲ್ಲಿ ಪಟ್ಟಮಂ ವಿರಚಿಸಿದರ್॥೨೩೬॥

ಮಂಗಳ ವಸ್ತುಗಳಿಂದಂ।
ಮಂಗಳಮಯ ವಾದ್ಯ ಘೋಷದಿಂದಂ ವಿಪ್ರರ್॥
ಮಂಗಳ ವಚನಗಳಿಂದಂ।
ಮಂಗಳ ಮೂರುತಿಗೆ ಪಟ್ಟಮಂ ವಿರಚಿಸಿದರ್॥೨೩೭॥

**ಮಹಾಸ್ರಗ್ಧರೆ॥**

ಶಿವಪಾದಾಂಭೋಜ ಭೃಂಗಂ ಸಕಲ ಗುಣಗಣಾಲಂಕೃತ ಶ್ರೀಕರಾಂಗಂ।
ಭುವನಸ್ತುತ್ಯಾಂಘ್ರಿಪದ್ಮಂ ಭರಿತ ಮೃದುವಚಸ್ತೋಷ ವಿಶ್ರಾಂತಿಸದ್ಮಂ॥
ನವಸಾಹಿತ್ಯ ಪ್ರವೀಣಂ ನಿರುಪಮ ಮಹಿಮಂ ಚಾಪವಿದ್ಯಾಧುರೀಣಂ।
ರವಿತೇಜಂ ಪಟ್ಟಬದ್ಧಂ ರಚನೆಯೊಳೆಸೆದಂ ಭದ್ರ ಭೂಪಂ ಪ್ರಸಿದ್ಧಂ॥೨೩೮॥

**ಮತ್ತೇಭ॥**

ಗುರುಗಳ್ಶ್ರೀ[ದ] ಪದರ್ಥ ಶಾಸ್ತ್ರ ನಿಪುಣರ್ ಸರ್ವಜ್ಞರುಂ ಸಾಕ್ಷಿ
ಕರ್ ।
ಪಿರಿಯರ್ ಪಾವನ ಶೀಲರುಂ ಪರಹಿತಾರ್ಥಾಲಾಪರುಂ ಧಾರ್ಮಿಕರ್
ಶರಣರ್ ಶ್ರೀಕರ ಮೂರ್ತಿಗಳ್ ಸುಮನಸರ್ ಸತ್ಯಾಭಿಲಾಷಾನ್ವಿತರ್ ।
ಧರಣೀಶಾಗ್ರಣಿ ಭದ್ರ ಭೂಭುಜನ ಪಾರ್ಶ್ವದ್ವಂದ್ವದೊಳ್ ರಾಜಿಪರ್ ॥೩೯॥

**ಕಂದ॥**

ಕವಿ ಗಮಕಿ ವಾದಿ ವಾಗ್ಮಿ ।
ಪ್ರವರರ್ ಷಟ್ಶಾಸ್ತ್ರ ನಿಪುಣರುಂ ಕುಶಲಜ್ಞರ್ ॥
ತವೆ ದೈವಜ್ಞರ್ ವಿಬುಧರ್ ।
ಭುವನಸ್ತುತ ಭದ್ರ ಭೂಪತಿಯ ಸನ್ನಿಧಿಯೊಳ್ ॥೪೦॥

**ಮತ್ತೇಭ॥**

ಕಡೆಸಾರ್ ಮಂತ್ರಿಪ ಕುಳ್ಳಿರಿಲ್ಲಿ ಪರಸಂಸ್ಥಾ[ನೇಶ]ನೀಂ ಕಾಣ್ಕೆಯಂ।
ಕೊಡು ದಂಡಾಧಿಪ ವೀರರಲ್ಲಿ ನಿಲಿ ಹೇ! ಹಾ! ಸಾಕು ಗುಲ್ಲಾಡದಿರ್॥
ನಡೆ ಸೇನಾಧಿಪ ಬೇಗ ಬಂದೆರಗೆನುತ್ತಂ ಗರ್ಜಿಸುತ್ತೊಪ್ಪಿದರ್ ।
ಪೊಡವೀಶಾಗ್ರಣಿ ಭದ್ರ ಭೂಪ ನಿದಿರೊಳ್ಪ್ರಗ್ವೇ(?) ತ್ರಸತ್ಪಾಣಿಗಳ್॥೪೧॥

**ಮಹಾಸ್ರಗ್ಧರೆ॥**

ಹರಿಯಂ ಸೌಭಾಗ್ಯದಿಂದಂ, ಹರನ ಕುವರನಂ ಶತ್ರು ಸಂಹಾರ
ದಿಂದಂ।

× × × × ×

ಹರಿಯಂ ಸಾಮರ್ಥ್ಯದಿಂದಂ ಹರನ ಕುವರನತ್ಯಂತ ಸದ್ಭಕ್ತಿಯಿಂದೀ।
ಪರಿಯಿಂದಂ ಗೆಲ್ದು ರಾರಾಜಿಸಿದ ನಮಮ! ಭದ್ರೇಂದ್ರ ಭೂಪಾಲಚಂದ್ರಂ
॥೪೨॥

**ಕಂದ॥**

ನುತಿಸುತ್ತಿರೆ ಕಾಮದುಘಂ ।
ವಿತತಂ ಪಶುರೂಪನುಳಿದು ನೃಪನಾಕೃತಿಯಿಂ ॥
ಕ್ಷಿತಿಯೊಳಗೆ ಜನಿಸಿದನೆನೆ ವಿ ।
ಶ್ರುತನಾದಂ ಭದ್ರ ಭೂಪ ವಿತರಣದಿಂದಂ ॥೪೩॥

**ಚಂಪಕ**॥

ಧನಕನಕಾದಿ ರತ್ನಚಯ ವಾಹನ ವಸ್ತು ವಿಭೂಷಣಂಗಳಂ ।
ಮನಕಿನಿದಾದ ಚಿತ್ರತರ ನೂತನ ವಸ್ತ್ರಗಳಂ ವಿಳಾಸದಿಂ ॥
ಘನಕವಿ ಸದ್ಬುಧ ಪ್ರಕರ ಗಾಯಕ ಸಂತತಿಗಿತ್ತು ಸಂತತಂ ।
ತನಗೆಣೆಯಿಲ್ಲವೆಂದೆನಿಸಿ ರಂಜಿಸಿದಂ ಮಿಗೆ ಭದ್ರ ಭೂಭುಜಂ ॥೨೪೪॥

**ಕಂದ**॥

ಭೂದಾನ ವನ್ನದಾನಂ ।
ಗೋದಾನ ಸುವರ್ಣದಾನ ಕನ್ಯಾದಾನಂ ॥
ಮಾದಾನಂಗಳ ಮಾಡುತೆ ।
ಮೇದಿನಿಯೊಳ್ ಭದ್ರ ಭೂಪ ರಂಜಿಸುತಿರ್ದಂ ॥೨೪೫॥

ಐಸೂರ ವಾಸ ಶ್ರೀ ವಿ।
ರೇಶನ ದೇವಾಲ್ಯವಂ ಸುಜೀರ್ಣೋದ್ಧಾರಂ ॥
ಲೇಸಾಗಿ ಮಾಡಿಸಿದ ಭೂ ।
ವಿಾಶಂ ವರ ಸಿತಪುರೀಶ ಭದ್ರ ನರೇಶಂ ॥೨೪೬॥

**ಮತ್ತೇಭ**॥

ಭುವನ ಸ್ತುತ್ಯಮೆನಿಪ್ಪ ದಿವ್ಯಭುವನ ಕ್ಷೋಣೀಧ್ರದೊಳ್ರಂಜಿ ಪಾ।
ಭುವನೇಶ್ವರಿಯಾದ ಮಾಂಬಿಕೆಯ ಸದ್ಗೇಹಂ ಸಮಂತೊಪ್ಪಿರಲ್।
ವಿವಿಧಾನಂತ ವಿಚಿತ್ರ ಸಚ್ಛಿಲೆಗಳಿಂ ವಿಸ್ತಾರಮಂ ಮಾಡಿಸು ।
ತ್ತವನೀಶಾಗ್ರಣಿ ಭದ್ರ ಭೂಪ ನೊಲವಿಂ ವತ್ಯಂತ ಸದ್ಭಕ್ತಿಯಿಂ ।೨೪೭॥

**ಕಂದ**॥

ಶ್ರೀಭುವನೇಶ್ವರಿ ದೇವಿಯ ।
ಶೋಭಿತ ಪೂಜಾ ವಿಧಾನ ವಿನಿಯೋಗಕ್ಕಂ ॥
ಈ ಭುವನಗಿರಿಯ ವಿಪ್ರರಿ ।
ಗೀಭದ್ರ ನೃಪಾಲ ನೀವಿುಸಿದನತಿ ಮುದದಿಂ ॥೨೪೮॥

ಧರ್ಮಸಂಗ್ರಹದ ಕಾರ್ಯವ ।
ನಿರ್ಮಿಸಿ ಸುಖದಿಂದೆ ರಾಜ್ಯವಂ ಪಾಲಿಸುತಂ ॥
ಕೂರ್ಮೆಯಿಂದಿರಲು ಶಿವ ಪದ ।
ಪೇರ್ಮೆಯ ನೋಡುವಡೆ ಭದ್ರ ನೃಪ ಮನದಂದಂ ॥೨೪೯॥

ನಿಜನಾಮದ ಮಾಹಾತ್ಮ್ಯೆಯ।
ನಿಜಾನುಜಂಗಿತ್ತು ಸಕಲ ಭೂಮಂಡಲಮಂ॥
ನಿಜದಿಂ ರಕ್ಷಿಸೆನುತ್ತಂ।
ನಿಜದೊಳು ತಾನಿಂದು ನಿಜಕೆ ಸೇಚಿವೆ[?]ಯಾಮಂ.।೨೫೦॥

**ವಾರ್ಧಿಕ॥**

ಆ ಸಮಯದೊಳ್ಮಂತ್ರಿ ಮನ್ನೆಯರ್ಸ್ವಜನರ ಸ।
ಭಾಸದರ್ಸ್ವಭಟರ್ವಿವೇಕಿಗಳ್ ಬಂಧುಗಳ್।
ಭೂಸುರರ ಮತದಿಂದ ಶುಭಮುಹೂರ್ತವ ನೋಡಿ ವಿನಿಯೋಗದವರ ಕರೆಸಿ॥
ಈ ಸರ್ವ ಭಾರಮಂ ಧರಿಸುವರೆ ಬಸವ ಭೂ।
ಮೀಶನೆಂದತಿ ಚಮತ್ಕಾರದಿಂ ದಿವ್ಯ ಸಿಂ।
ಹಾಸನವ ನವರಚನೆಯಿಂದಲಂಕರಿಸಿದರ್ ಪಟ್ಟಗಟ್ಟುವ ಭರದೊಳು ॥೨೫೧॥

**ಮಹಾಸ್ರಗ್ಧರೆ॥**

ವರಮುಕ್ತಾಹಾರದಿಂದಂ ಮಣಿಗಣ ವಿಲಸದ್ಭೂಷಣ ವ್ರಾತದಿಂದಂ।
ಹರಿದಶ್ವಾಂಶು ಸ್ಫುರನ್ಮಂಜುಲತರ ನವ ದಿ ವ್ಯಾಂಬರೋತ್ಕರ್ಷದಿಂದಂ॥
ಚರಣಾಲಂಕಾರ ಭಾರೀ ನಿಗಡ ಮುಖಗಳಿಂ ಸರ್ವ ಸನ್ನಾಹದಿಂದಂ।
ಪರಿಯಿಂ ರಾರಾಜಿಸಿರ್ದಂ ಬಸವ ಧರಣಿ ಪೋತ್ತುಂಗ ಶೃಂಗಾರದಿಂದಂ ॥೨೫೨॥

**ಕಂದ॥**

ಆಂಗೀರಸ ವತ್ಸರದೊಳ್।
ಸಂಗೊಳಿಸುತ್ತಿರ್ದ ವಿಮಲ ಶ್ರಾವಣ ಮಾಸಂ॥
ಕಂಗೊಳಿಪ ಶುದ್ಧ ಸಪ್ತಮಿ।
ಮಂಗಳ ತಿಥಿಯಲ್ಲಿ ಪಟ್ಟಮಂ ವಿರಚಿಸಿದರ್ ॥೨೫೩॥

**ಚಂಪಕ॥**

ಜಯಜಯ ಶಬ್ದಮುಣ್ಮೆ ಜಗತೀಸುರ ಮಂಗಳವಾಕ್ಯಘೋಷ ನಿ।
ರ್ಣಯಮೆಸೆಯಲ್ಕನಂಗೊಳಿಸೆ ದುಂದುಭಿ ರಾವ ದಿಗಂತವಾಗಿ ವಿ॥

ಸ್ಮಯು ತರುಣೀಜನ ಸ್ತವನ ಶೋಭನ ಗಾನ ವಿಚಿತ್ರನಿಸ್ವನಂ ।
ನಿಯುತದೊಳೊಂದೆ ಪಟ್ಟದೊಳು ರಂಜಿಸಿದಂ ಬಸವೇಂದ್ರ ಭೂಭುಜಂ
॥೨೫೪॥

ಮತ್ತೇಭ॥

ಚರಣಾಂಭೋಜ ನಮಸ್ಕೃತ ಪ್ರಬಲ ವೀರಸ್ತೋಮ ಸನ್ಮಸ್ತಕೋ।
ಪರಿ ವಿಭ್ರಾಜಿತ ಹಸ್ತನತ್ಯಧಿಕ ವಿದ್ವಾಂಸಪ್ರದತ್ತಾರ್ಥ ಭಾ॥
ಸುರಹಸ್ತಂ ರಿಪುರಾಜ ಶಾಸನ ಶ್ರುತ ಶ್ರೀ ಖಡ್ಗಸಂಧೃತ್ಯ ಭೀ।
ಕರವೀರತ್ರಯ ಯುಕ್ತಹಸ್ತ ಮೆಸೆಗುಂ ಶ್ರೀ ಶ್ವೇತಪೌರೇಂದ್ರನಾ ॥೨೫೫॥

ನಲಿದಂ ಶಂಕರ ನೀಶ್ವರಾರ್ಚಕ ಚಯಂ ಸಂತೋಷದಿಂದಿರ್ದರು।
ಜ್ವಲವಾದರ್ನಿಜ ಸೇವಕರ್ ಬುಧಜನಂ ಸಂತುಷ್ಟರಾದತ್ತು ಭೂ।
ವಲಯನಾಥೀಶ್ವರ ರುತ್ಸವಂ ಬಡೆದರೀ ಭೂದೇವಿ ತಾನೊಪ್ಪಿದಳ್ ।
ಬಲಿದಾಂಕಂ ಬಸವೇಂದ್ರ ಭೂಪ ಮೃಗರಾಜಾ ಸೀನದೊಳ್ಕಂಡಿಸಲ್
॥೨೫೬॥

ಕಂದ॥

ಸಪ್ತ ತುರಂಗಮನೊಲ್ ಯುಗ ।
ಸಪ್ತಕ ಲೋಕಕ್ಕೆ ವಿಸ್ಮಯಂ ದೋರಿ ಸಭಾ ॥
ಸಪ್ತಾಂಗದರಿಗೆ ತ್ಯಾಗ [ದೆ] ।
ಸಪ್ತಾಂಗವನಿತ್ತು ಮನ್ನಿಸಿದ ಬಸವೇಂದ್ರಂ ॥೨೫೭॥

ಶ್ರೀವಧುವಿನಂತೆ ರಂಜಿಸ ।
ದೇವಮ್ಮಾಜಿಗಳು ವಿಜಯ ಲಕ್ಷ್ಮಿಯ ತೆರದಿಂ ॥
ಭಾವಿಸೆ ವೀರಮ್ಮಾಜಿಗ ।
ಳೀ ವೇಳ್ವಿಂ ಬಸವ ಭೂಪತಿಯ ಮಾನಿನಿಯರ್ ॥೨೫೮॥

ಈ ಸುಂದರ ಮಾ ಕೌಶಲ ।
ವೀಸದ್ಗುಣವೀ ಪತಿವ್ರತಾ ಸದ್ಭಕ್ತಿಗ ॥
ಳೀಸೊಬಗು ಮಾ ವಿಳಾಸತೆ ।
ಈ ಸತಿಯರೊಳಲ್ಲದಿಲ್ಲವೆನೆ ಸೊಗಯಿಸಿದರ್ ॥೨೫೯॥

ಈ ವಿತರಣ ಮಾನಯನುಡಿ ।
ಈ ವೀರತ್ವಂ ವಿಚಿತ್ರ ವಿದ್ಯಾಲಾಪಂ॥

ಈ ವಿಧ ಶುಭಲಕ್ಷಣಗಳ್ ।
ಭೂವರ ಬಸವೇಂದ್ರಗಲ್ಲದುಳಿದರ್ಗ್ಗಂಟೇ? ॥೨೬೦॥

**ಚಂಪಕ॥**

ವಿರಚಿಸೆ ಭದ್ರಭೂಪ ಭುವನೇಶ್ವರಿ ದೇವಿಯ ಸದ್ಮವನ್ನು ತಾ ।
ನಿರದದರಗ್ರದೊಳ್ ಶಿಖರವಿಟ್ಟು ರಥೋತ್ಸವ ಸಂಪದಂಗಳಂ ॥
ಹರುಷದಿ ಮಾಡಿಸುತ್ತ ದ್ವಿಜರಿಂಗೆ ಧರಿತ್ರಿಯ ಶಾಸನಂಗಳಂ ।
ಪರಿಕಿಸಿ ಧಾರೆಯನ್ನೆರೆದು ಪಾಲಿಸಿದಂ ಬಸವೇಂದ್ರ ಚಂದ್ರ[ಮ]ಂ ॥೨೬೧

**ಕಂದ॥**

ಹಸಿದವರಿಗನ್ನಮಂ ಮೇಣ್ ।
ಪಸುಳೆಗೆ ಪಾಲ್ಬೆಣ್ಣೆಯನ್ನು ಪಶುವಿಗೆ ತೃಣಮಂ ॥
ವಸುಧೇಶ ಭದ್ರ ಭೂಪನ ।
ಪೆಸರಿಂದಂ ನಡೆಸುತಿರ್ದ್ದ ಬಸವ ನೃಪಾಲಂ ॥೨೬೨॥

**ಮಾಧ್ವೀಕ॥**

ಪಾಡುತಿಹ ಗಾಯಕರ್ ಪೊಗಳುತಿಹ ನಾಯಕರ್ ।
ಬೇಡುತಿಹ ಯಾಚಕರ್ ಬಹಳ ಮೃದು ವಾಚಕರ್ ।
ನೋಡುತಿಹ ಬಂಧುಗಳ್ ನೆರೆ ದಯಾ ಸಿಂಧುಗಳ್ ಬಗೆಬಗೆಯ ಕಾಣ್ಕೆ
ಗಳನು ॥
ನೀಡುತಿಹ ವರ್ತಕರ್ ನಟಿಸುತಿಹ ನರ್ತಕರ್ ।
ಕೂಡಿರುವ ಮಂದಿಗಳ್ ಕೂಗುತಿಹ ವಂದಿಗಳ್ ।
ಕಾ( ಗಾ?)ಡಿ ಮಿಗೆ ರಂಜಿಸಿತು ಗರ್ವಿಗಳ ನಂಜಿಸಿತು ಬಸವೇಂದ್ರನೊಡ್ಡೋ
ಲಗಂ ॥೨೬೩॥

**ವಚನ॥**

ಇಂತತಿ ವಿನೋದದಿಂ ರಂಜಿಸುವ ಸಭಾಮಧ್ಯದೊಳ್ ಸಚಿವ ನಿಚಯ ಸಾಮಂತ ದಂಡಾಧ್ಯಕ್ಷ ಮಂಡಲೇಶ್ವರ ಪ್ರಮುಖ ಬಾಹತ್ತರ ವಿನಿಯೋಗ ಸಮೇತಂ ಚೌಷಷ್ಟಿವಿದ್ಯಾಲಕ್ಷಣಂ ಲಕ್ಷ್ಯ ಪರೀಕ್ಷಾ ಲಕ್ಷಿತೇಕ್ಷಣ ವಿಚಕ್ಷಣನುಂ ತುಂಗ ತುರಂಗ ಸಂಘ ಬಂಧುರಸ್ಯಂದನ ಬೃಂದಮಂದೋನ್ಮಂದ ಮದೋನ್ಮತ್ತ ಮಾತಂಗ ಸಮಾಜ ಬತ್ತೀಸಾಯುಧ ಸಾಧನ

ಸಮರ್ಥಸುಭಟ ವ್ರಾತಾದಿ ವಿತತ ಚತುರಂಗ ಸೇನಾಸಮನ್ವಿತ್ವನುಂ, ವೀರ ತ್ರಯ ಶಕ್ತಿತ್ರಯ ಚತುರುಪಾಯ ಪಂಚತಂತ್ರ ಕುಶಲನುಂ, ದುಷ್ಟ ನಿಗ್ರಹ ಶಿಷ್ಟ ಪ್ರಜಾಪರಿಪಾಲನಾಪೇಕ್ಷನುಂ, ಶ್ರೀ ಮದ್ವೀರಭದ್ರ ಚರಣಾ ರವಿಂದ ಮಕರಂದ ದ್ವಿರೋಫಾಯಮಾಣ ರಾಜಾಧಿರಾಜ ರಾಜಪರ ಮೇಶ್ವರ ಪರರಾಜ ಮನೋ ಭಯಂಕರ ಸಿತಪುರೇಂದ್ರ ನರೇಂದ್ರ ಸುರೇಂದ್ರವೈಭವ ಬಸವೇಂದ್ರಂ ಸಕಲ ಸಾಮ್ರಾಜ್ಯದಿಂ ರಾಜ್ಯಮಂ ರಕ್ಷಿಸುತ್ತಿರ್ದನದೆಂತೆನೆ ॥೨೬೪॥

**ವಾರ್ಧಿಕ॥**

ಸಿರಿಯಲ್ಲಿ ಚಕ್ರಿಯಂ ಚಕ್ರಿಯಂ ವಾಕ್ಯದೋಳ್ ।
ಧುರದಲ್ಲಿ ಜಿಷ್ಣುವಂ ಜಿಷ್ಣುವಂ ಭೋಗದೊಳ್ ।
ಪರಮ ಪ್ರತಾಪದೊಳ್ ಹಂಸನಂ ಹಂಸನಂ ಸದ್ವಿವೇಕದ ಗುಣದೊಳು॥
ವರ ಬುದ್ಧಿಯಲಿ ಶೂರ್ಪಕರ್ಣನಂ ಕರ್ಣನಂ ।
ನಿರುತ ದಾತೃತ್ವದೊಳ್ ಕಾಮನಂ ಭೀಮನಂ ।
ಪರಿಭವಿಸಿ ಚೆಲುವಿಂದ ಛಲದಿಂದ ರಂಜಿಸುವ ಬಸವೇಂದ್ರ ಸಿತಪುರೇಂದ್ರ ॥೨೬೫॥

**ಕಂದ॥**

ಚೆನ್ನವೀರನ ಬಧವಣಂ [ ? ] ।
ಮುನ್ನೀರಣುಗನ ಬೆಡಂಗು ಪೊಂಬೊಡೆಯನ ಜಾಣ್ ॥
ಸೊನ್ನೆವೆಟ್ಟುರ್ಕು ಕಂಡೆನು ।
ನಿನ್ನೊಳು ಬಸವೇಂದ್ರ ಭೂಪ ಕೀರ್ತಿಕಲಾಪಾ ॥೨೬೬॥

**ಮತ್ತೇಭ॥**

ಧನವಂ ವಿಪ್ರರಿಗಿತ್ತು ತನ್ಮುಖದಿ ದೇವವ್ರಾತಮಂ ತೃಪ್ತಿಗೈ ।
ದನಿತಾಂತಂ ಖಲಭೂಪರಂ ಜಯಿಸುತಂ ಭೂಭಾರಮಂತೀರ್ಚಿ ಮೇ
ದಿನಿಯಂ ತಾಳ್ದು ಭುಜಂಗಳೊಳ್ ಫಣಿಪನಂ ವಿಶ್ರಾಂತ [ನಂ]ಮಾಡಿದಾ।
ತನು ತಾನೀಬಸವೇಂದ್ರ ಚಂದ್ರನನಿಶಂ ಲೋಕತ್ರಯಾಪ್ತಂ ದಿಟಂ ॥೨೬೭॥

**ವಾರ್ಧಿಕ॥**

ತ್ರೈಲೋಕ್ಯ ಚಿಂತಾಮಣಿ ಸ್ವರೂಪಂ ಮದನ।
ಲೀಲಾವಿಲಾಸ ರಸಯುಕ್ತ ಪ್ರಭಾಕರ ವಿ ।

ಶಾಲ ತೇಜೋನ್ವಿತಂ ಪೂರ್ಣ ಚಂದ್ರೋದಯಕಲಾಂಚಿತಂ ಭೂಪತಿ
ನುತಂ ||
ಪಾಲಿತ ವಸಂತ ಕುಸುಮಾಕರಂ ಬಸವ ಭೂ!
ಪಾಲಧನ್ವಂತ್ರಿ ರಂಜಿಸಿದ ಬುಧದಾರಿದ್ರ್ಯ।
ಮೂಲವಿಚ್ಛೇದನ ಸುವರ್ಣಭೂತಿಪ್ರದಂ ತಾನೆನಿಸಿ ಭೂತಲದೊಳು||೨೬೮||

ಉತ್ಪಲ||

ಬೇಡರ ಗಂಡ ಭಾಪು! ರಿಪುದಲ್ಲಣ ಭಾಪು! ತುರುಷ್ಕ ಸೈನ್ಯವೈ।
ಭಾಡಕ ಭಾಪು! ಭಾಪು ನಿಗಳಾಂಕನೆ ಭಾಪು! ವಜೀರ ಭಾಪುರೇ।
ಬಾಡದ ಧೀರ ಭಾಪು! ಕಲಿಭೀಮ ಪರಾಕ್ರಮ ಭಾಪು! ಭಾಪುರೇ।
ನಾಡೊಳು ನಿನ್ನ ಪೋಲ್ವ ನೃಪರುಂಟೆ ವಲಂ ಬಸವೇಂದ್ರ ಚಂದ್ರಮಾ
||೨೬೯||

ಮತ್ತೇಭ||

ಸಮರಾಪೇಕ್ಷೆ ವಿಪಕ್ಷಕ ಕ್ಷಿತಿಪ ಶಿಕ್ಷಾದಕ್ಷ ನಕ್ಷೀಣವಿ।
ಕ್ರಮನುದ್ದಾಮ ಗುಣಾಭಿರಾಮನತಿ ಸಾಧು ಪ್ರೇಮನತ್ಯಂತ ಸೂ।
ರಿಮನಃ ಪಂಕಜಸೂರ್ಯ ಶಸ್ತವಿಜಯ ಪ್ರಧ್ವಂಸ ಕೋಲಾಹಲಾ।
ವಿಮಲಸ್ವಾಂತ ವಿನೋದ ಮೂರ್ತಿ ಬಸವೇಂದ್ರಾ! ರಾಜ ಕಂಠೀರವಾ
||೨೭೦||

ಕಹಳಾ ಭೇರಿ ನಗಾರಿ ತಮ್ಮಟೆ ತುತೂರೀ ಮೌರಿನೌಪೂರಿಗಳ್।
ಬಹುವಾದ್ಯಾದುರು ತಾಂಧಳಂಧಳ ರವಂ ಪುರ್ಬುತ್ತಿರಲ್ಕೆತ್ತಲುಂ।
ಮಹಿಧಿ[ಗ್ಧಿ]ಗ್ಧಿಗಿಲೆಂದು ಬರ್ಪ ಚತುರಂಗಾನೀಕ ಸನ್ನಾಹದೊಳ್।
ವಿಹಿತಂ ಶ್ರೀಬಸವೇಂದ್ರ ಚಂದ್ರ ವಿಜಯಪ್ರಸ್ತಾವದೋಳ್ ರಂಜಿಪಂ
||೨೭೧||

ಪಂಚಚಾಮರ||

ದೃಢಾಂಗನಾಗಿ ಹಸ್ತದೊಳ್ ಬೆಡಂಗಿನಿಂದೆ ಖಡ್ಗಮಂ।
ತುಡುಂಕಿ ರೋಷದಿಂದ [ತಾಂ] ಕಡಂಗಿ ಚಿಮ್ಮಲಾಕ್ಷಣಂ।
ಮಡಂಗಿ ನಿನ್ನ ಭೀತಿಯಂ ತೊಡಂಕು ಬೇಡೆನುತ್ತ ಮೇಣ್।
ಬುಡುಂಗಿ ದತ್ತು ತಮ್ಮ ರೂಪಡಂಗಿಸುತ್ತ ಶತ್ರುಗಳ್ ||೨೭೨||

**ಉತ್ಪಲ** ॥

ಶ್ರೀಗುಣ ರಂಜಿತಂ ನವರಸಾಂಚಿತ ಮಿತ್ರರುಚಿಪ್ರಮೋದ ।
ಸದ್ರಾಗವಿರಾಜಮಾನ ಚತುರಾನನ ಯುಕ್ತಸಹಸ್ರಪತ್ರ ಸಂ ।
ಯೋಗ ಧರಾಧಿನಾಥ ಪರರಾಜ ಹರಂ, ಪರರಾಜಭೀತನಾ ।
ನೇಗುವೆನೆಂದು ಪದ್ಮ ಜಲಪೊಕ್ಕುದು ಕೇಳ್ ಬಸವೇಂದ್ರ ಭೂಭುಜಾ ॥೨೭॥

ಕಂದನ ಮುದ್ದಿನಂತೆ ಕಡುಪೂಶಿಹ ಚಂಪಕ ವೃಕ್ಷದಂತೆ ಮಾ ।
ಕಂದದ ಪಣ್ಗಳಂತೆ ಮಧುಮಿಶ್ರಿತ ಶರ್ಕರದೂಟದಂತೆ ಪೂ ।
ರ್ಣೇಂದು ಗಭಸ್ತಿಯಂತೆ ಎಳೆದೆಂಗಿನ ಪಾಲ್ಗಡಿದಂತೆ ರಂಜಿಕುಂ ।
ಮಂದರ ಸುಸ್ವರೋಕ್ತ ಬಸವೇಂದ್ರ ಸುಧಾಮಯವಾಕ್ಯದೇಳ್ಗೆ ತಾಂ ॥೨೮॥

**ವಾರ್ಧಿಕ** ॥

ಮಾನವ ಪರೀಂದ್ರ! ಪರಮಾನಜ ಸಮರ್ಥ! ಪರ ।
ಮಾನಂದಯುಕ್ತ! ಬುಧಮಾನಿತ ಪದಾಬ್ಜ! ಸು ।
ಧ್ಯಾನಸುಸ್ವಾಂತ! ದುಧ್ಯಾನಹರ! ಭಾಸ್ಕಂಸಮಾನ ವಿಲಸತ್ಪ್ರತಾಪ ।
ಮಾನನಿಧಿ! ಚಂದ್ರೋಪಮಾನ ಶಾಂತ ಪ್ರಚುರ ।
ಮಾನವಾಭರಣ! ಜಯಮಾನಿನೀಕಾಂತ! ಶತ ।
ಮಾನ ಕಾಂಚನದಿ ಸನ್ಮಾನಿಸುತ ಪೊರೆಯೆನ್ನ ಭೂನಮಿತ ಬಸವ ಭೂಪಾ ॥೨೯॥

**ಲಲಿತಪದ** ॥

ಮದನಾವತಾರ ಗುಣಸದನ ಮೊನೆಗಾರ ಶಶಿವದನ ಶೃಂಗಾರ ಲಸಮುದಧಿ ಗಂಭೀರಾ ।
ಸದಮಲ ಶರೀರ ಕವಿವಿದಿತ ಮಂದಾರ ವರ ಬುಧಜನಾಧಾರ ಸದ್ಧೃದಯ ವಿಸ್ತಾರಾ ।
ಕದನಕಲಿ ಧೀರ ಜಯವಧುರಮಣ ಶೂರರಿಪುಮದಶಿಮಿರ ಸೂರ ಶಿವ ಪದಭಕ್ತಿಸಾರಾ ।
ಚದುರ ದೆಸೆಗಾರ ಭೋಗದ ಸುನಾಶೀರ ಸಮರದಲಿ ಹಮ್ಮೀರ ಕೋವಿದ ಬಸವವೀರಾ ॥೩೦॥

**ಮತ್ತೇಭ** ॥

ವರಸಂಗೀತವ ಕೇಳು! ಸತ್ಯವಿದರೊಳ್ಸಾಹಿತ್ಯಮಂ ಹೇಳು! ಶಂ ।
ಕರಸದ್ಭಕ್ತಿಯು ತೂ (ತಾ?) ಳು! ಸರ್ವಬಾಧದಾರಿದ್ರ್ಯಂಗಳಂ ಕೀಳು

× × × × × × ×

ಸ್ಥಿರ ಸಾಮ್ರಾಜ್ಯವನಾಳು! ಬಾಳು ಬಸವ ಕ್ಷ್ಮಾಪಾಲ ಚೂಡಾಮಣೀ॥೨೭೭॥

ಮಹಾಸ್ರಗ್ಧರೆ ॥

ಧರಣೀಶೋತ್ತುಂಗ ಧೀಮದ್ಬಸವನೃಪ ಯಶಶ್ರೀಲತಾಚಿತ್ರಮಾಯ್ತಂ
ತಿರೆ ಬೇರೂರುತ್ತೆ ಪಾತಾಳದೊಳೆ ಧರಣಿಯೋಳ್ಪಲ್ಲವಂತೋರ್ದು ನಾಕ।
ಕ್ಕಿರದಾಗಳ್ ಪರ್ಬಿ ತಾರಾಗಣ ಕುಸುಮಗಳಿಂ ಸತ್ಫಲಂ ಚಂದ್ರನಾಗಲ್।
ಸುರಸಂ ತಜ್ಜ್ಯೋತ್ಸ್ನವಂ ಸದ್ಬುಧ ಕವಿಚಕೋರಾಳಿಗೀವುತ್ತಜಸ್ರಂ॥೨೭೮॥

ಸುತರಿಂ ಸೌಭಾಗ್ಯದಿಂದಂ ಸಕಲ ವಿಭವದಿಂ ದಾನದಿಂ ಮಾನದಿಂ ವಿ।
ವಿಶ್ರುತ ವಿದ್ಯಾಲಾಪದಿಂ ಸದ್ಗುರು ವರಚರಣಾರಾಧನಾಸಕ್ತಿಯಿಂದಂ।
ಮತಿಯಿಂ ಮಾಂಗಲ್ಯದಿಂದಂ ಪರಶಿವ ವಿಲಸದ್ಭಕ್ತಿಯಿಂ ಶಕ್ತಿಯಿಂ ಶಾ।
ಶ್ವತ ಪೂರ್ಣಾಯುಷ್ಯದಿಂದಂ ಸುಖಿಸುಗೆ ಬಸವಕ್ಷ್ಮಾಪ ಶ್ರೀಮತ್ಕಲಾಪಂ
॥೨೭೯॥

ಚಂಪಕ॥

ತವಬಲವತ್ಪ್ರತಾಪತಪನಾತಪ ವೈರಿಹೃದಂಬುಜಾತಮಂ।
ತವಕದಿ ಕಂದಿಸುತ್ತಿಹುದು ಕೀರ್ತಿ ಸುಧಾಕರ ಕಾಂತಿ ಸದ್ಬುಧ।
ಪ್ರವರ ಮನಸ್ಸರೋಜಕೆ ಮುದಂ ಕೊಡುತಿರ್ಪುದಕಂಡು ನಿರ್ಜರರ್।
ಯುಮೆಯನು ಸೋಕದೀಕ್ಷಿಪರಿದಚ್ಚರಿಯೈ ಬಸವೇಂದ್ರ ಚಂದ್ರಮಾ
॥೨೮೦॥

ಮಹಾಸ್ರಗ್ಧರಾ ॥

ಭವದೀಯ ಸ್ಫಾರಕೀರ್ತಿ ಪ್ರವಿಲಸಿತ ರುಚಿ ಸ್ವರ್ಗಲೋಕಂಗಳಂ ಭೂ
ಭ್ರವ ಮಾಡಲ್ಕಂಜಿ ರತ್ನವ್ರಜ ಶರನಿಧಿಯೊಳ್ ಪೊಕ್ಕಿರಲ್ತಂದಲಂಕಾ।
ರವ ಮಾಡುತ್ತಂಗದೊಳ್ ತಾಳಿದೊಡತಿ ಮುದದಿಂದಿರ್ಕು ಮಾರತ್ನ
ದೊಳ್'(ನೀ)।
ನ್ನ(ಲ?)ವೆ ಪುಲ್ಲಂ ಕಚ್ಚುಗುಂ ತತ್ಪ್ರಭಯುದೊಳೆ ಬಸವಕ್ಷ್ಮಾಪ ಸೂರ್ಯ
ಪ್ರತಾಪಾ ॥೨೮೧॥

ವಾರ್ಧಿಕ॥

ಗುರು ವಿಬುಧ ಕವಿಭಾರ ತೀಶವಿದ್ಯಾಧರೋ।
ತ್ಕರುಷರಿಂ ಬಸವೇಂದ್ರ ಸಭೆಯೊಳಿರೆ ಖೇಚರಂ।
ನೆರೆ ನೋಳ್ಪೆವೆಂದು ಬಹ ಮಾರ್ಗ(ದೊ)ಳ್ ಕಾಲೂರಿನಿಂದ
ವಾರ್ತೆಯನು ಕೇಳಿ ॥

ಅರಮನೆಯ ಮುಂದೆ ಬಡಿವರು ನಗಾರಿಯು ನೆನಲು ।
ಭರದಿಂದ ನಡುನಡುಗಿ ಪಿಂತಿರುಗಿ ನಾಕಿಗಳಿ ।
ಗರುಪಲಂತಃಪುರವ ಪೊಕ್ಕಿಂದ್ರನಂ ಕಂಡು ಪೇಳೆ ವಿಸ್ಮಿತನಾದನು ॥೨೮೨॥

**ಮತ್ತೇಭ ॥**

ಧುರದೊಳ್ನಿನ್ನ ಕರಾಗ್ರದೊಳ್ಮಿಸುಪ ನಿಸ್ತ್ರಿಂಶಕ್ಕೆ ವೈಗೊಟ್ಟು ಬಿ ।
ದ್ದರಿ ಭೂಪಾಲಕರಂ ನಿರೀಕ್ಷಿಸಿ ಜಯಂತಂ ತಾಂ ಪಿತಾನ್ವೇಷಣಃ ।
ತುರನಾದಂ ಪತಿ ದೇಹಮಂ ಪರಿಕಿಸಳ್ ಪೌಲೋಮಿ ಮಿಕ್ಕಾದ ನಿ ।
ರ್ಜರರುಂ ಗರ್ಜಿಪರೇನು- ಚೋದ್ಯ ಬಸವಕ್ಷ್ಮಾಪಾಲ ಚೂಡಾಮಣೀ ॥೨೮೩॥
ಘನವಿದ್ವಾಂಸ ಜನಕ್ಕೆ ಸೇವಕ ಜನಕ್ಕತ್ಯಂತ ಸೌಭಾಗ್ಯವಿ ।
ತ್ತನುವಿಂ ರಕ್ಷಿಸಲೆಲ್ಲರುಂ ಧನಪರಾಗಲ್ ಶಂಭುವೀ ವಾರ್ತೆಗೇ ।
ಳ್ದಿನಗೆಲ್ಲರ್ ಸಖರಾದರಿನ್ನುಭಲರೇ! ಭಿಕ್ಷಾಟನಂ ಪೋಯಿತೆಂ ।
ದೆನುತಂ ಸಂತಸ ಚಿತ್ತನಾದ ಬಸವ ಕ್ಷ್ಮಾಪಾಲ ಚೂಡಾಮಣೀ ॥೨೮೪॥

**ಕಂದ॥**

ವರ ಚತುರಾನನ ರಮ್ಯಂ ।
ಪರಿಪಾಲಿತ ವಾಗ್ವಧೂ ವಿಲಾಸಂ ಲೋಕೇ ॥
ಶ್ವರ ರಾಜಹಂಸ ಶೋಭಾ ।
ಕರನೆನೆ ಬ್ರಹ್ಮಂ ಬೊಲೆಸೆದ ಬಸವ ನರೇಂದ್ರಂ ॥೨೮೫॥
ನರಪಾಲಂ ಚಕ್ರಧರಂ ।
ನರಕಹರಂ ನೋಡೆ ಸತ್ಯಭಾಮಾರಮಣಂ ॥
ವರವಂಶೋದ್ಭವ ಸರಸಂ ।
ಪುರುಷೋತ್ತಮನೆನೆ ವಿರಾಜಿಸಿದ ಬಸವೇಂದ್ರಂ ॥೨೮೬॥
ನಿಜಗುಣ ಭೂಷಣ ನರಿವ ।
ರ್ಗಜಿತಂ ಧೃತ ಕುವಲಯಾಪ್ತನತಿ ಶಕ್ತಿಧರಂ ॥
ವಿಜಯ ಫಲಪ್ರದನೆನೆ ಭೂ ।
ಭುಜ ಬಸವೇಂದ್ರಂ ಪುರಾರಿಯಂತೆಸೆದಿರ್ದಂ ॥೨೮೭॥
ಪರಮ ಬಲವಂತ ಧರಣೀ ।
ಶ್ವರ ಚೂಡಾರತ್ನ ಬಸವ ಭೂಪನ ಕೊರಳೊಳ್ ॥
ಮಿರು ಗಲ್ಮುಕ್ತಾಹಾರಂ
ಪರನೃಪರಿಂಗಾಯ್ತು ನಿತ್ಯ ಮುಕ್ತಾಹಾರಂ ॥೨೮೮॥

—※ಸಂಪೂರ್ಣಂ※—

# ದೇವರ ದಾಸಿಮಯ್ಯನ

## ವಚನಗಳು.

---

ಕೆಳಗೆ ಕಾಣಿಸಿದ ವಚನಗಳಲ್ಲಿ ದೇವರ ದಾಸಿಮಯ್ಯನು ವಚನಗಳ ಮಹತ್ವವನ್ನು ವರ್ಣಿಸಿದ್ದಾನೆ.

### ವಚನಗಳ ಮಹತ್ವ.

**೧. ಕರಿಯನಿತ್ತಡೆ ಒಲ್ಲೆ. ಸಿರಿಯನಿತ್ತಡೆ ಒಲ್ಲೆ. ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ. ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥಾ.**

ಸೂಳ್ನುಡಿ= ಪರಸ್ಪರ ಭಾಷಣ, ಸಂಭಾಷಣೆ.

ಇದರಲ್ಲಿ ವಚನಕಾರನು ತನಗೆ ಜಗತ್ತಿನಲ್ಲಿಯ ಯಾವ ಶ್ರೀಮಂತಿಕೆ ಅಥವಾ ಶ್ರೇಷ್ಠ ಪದವಿಯು ಬೇಡ. ಇವೆಲ್ಲವುಗಳ ಬೆಲೆಯು ವಚನಗಳಿಗೆ ಸರಿಗಟ್ಟಲಾರದು, ಇಷ್ಟೇ ಅಲ್ಲ, ಯಾವ ಶ್ರೇಷ್ಠ ವಸ್ತುವಾದ ಪರಮಾತ್ಮನೋ ಅಂಥವನು ತನ್ನ ಹತ್ತರಿದ್ದರೂ ಕೂಡ ಆತನನ್ನು ಸಹ ಇವುಗಳಿಗೆ ಪ್ರತಿಯಾಗಿ ಕೊಡುವೆನೆಂದು ಇವನು ಅನ್ನುತ್ತಾನೆ. ಅಂದರೆ ವಚನಗಳು ಪರಮಾತ್ಮನಕಿಂತಲೂ ಶ್ರೇಷ್ಠವಾದವುಗಳೆಂದು ಇವನ ಅಭಿಪ್ರಾಯವು.

**೨ ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೆ? ಕಡೆಗೀಲು ಬಂಡಿಗಾಧಾರ. ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಡಶರಣರ ನುಡಿ ಗಡಣವೇ ಕಡೆಗೀಲು ಕಾಣಾ ರಾಮನಾಥಾ.**

ಹೊಡೆಗೆಡು =ನೆಲಕ್ಕೆಬೀಳು; ಮಾಬುದೇ= ಬಿಡುವದೇ; ದರ್ಪ= ಸೊಕ್ಕು ಒಡಲು = ದೇಹ; ಗಡಣ= ಸಮೂಹ;

ಬಂಡಿಯು ಎಷ್ಟು ದೃಢವಾಗಿ ತೋರಿದರೂ, ಅದಕ್ಕೆ ಕೀಲು ಒಂದು ಇಲ್ಲದಿದ್ದರೆ, ಅದು ಹೊರಳಿಕೊಂಡು ಬೀಳುತ್ತದೆ. ಹೀಗೆ ಕೀಲು ಬಂಡಿಗೆ ಆಧಾರವಾಗಿದೆ. ಅದರಂತೆಯೇ ಶಿವಶರಣರ ಸುಗುಣಗಳು ಶರೀರವೆಂಬ ಬಂಡಿಗೆ ಕೀಲಿನಂತೆ ಇರುತ್ತವೆ. ಅಂದರೆ ಅವುಗಳು ಮನುಷ್ಯನಲ್ಲಿಯ ದುರ್ಗುಣಗಳನ್ನು ಹೋಗಲಾಡಿಸಿ ಅವನನ್ನು ಸರಿಯಾದ ರೀತಿಯಿಂದ ನಡಿಸಿಕೊಂಡು ಹೋಗುತ್ತವೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

---

ಮುಂದೆ ವಚನಕಾರನು ಪರಮಾತ್ಮನ ಸ್ವರೂಪವನ್ನು ಹೇಳುತ್ತಾನೆ.

## ಪರಮಾತ್ಮನ ಸ್ವರೂಪ-

**೩. ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆ**
**ಯಯ್ಯಾ. ಎಣಿಸುವಡೆ ತನು ಭಿನ್ನ. ಆತ್ಮನೊಬ್ಬನೇ.**
**ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿ**
**ವುತಿಪ್ಪೆನಯ್ಯಾ ರಾಮನಾಥಾ.**

ಸೂತ್ರ = ದಾರ; ತ್ರಿನಯನ = ಮೂರು ಕಣ್ಣುಳ್ಳವ, ಈಶ್ವರ; ಅಣು = ಅತ್ಯಂತ ಸೂಕ್ಷ್ಮ ಪದಾರ್ಥ; ರೇಣು = ಧೂಳು;

ಪರಮಾತ್ಮನು ಮಣಿಗಳ ಹಾರದಲ್ಲಿರುವ ದಾರದಂತೆ ಇದ್ದಾನೆ. ಆ ಹಾರದಲ್ಲಿಯ ಮಣಿಗಳು ಭಿನ್ನಭಿನ್ನವಾಗಿ ತೋರಿದರೂ ಅವುಗಳೊಳಗಿಂದ ಹಾಯ್ದು ದಾರವು ಅವೆಲ್ಲವುಗಳನ್ನು ಒಂದುಗೂಡಿಸಿದೆ. ಅದೇಮೇರೆಗೆ ಜಗತ್ತಿನಲ್ಲಿ ಅಸಂಖ್ಯ ಪದಾರ್ಥಗಳು ಭಿನ್ನಭಿನ್ನವಾಗಿ ತೋರಿದರೂ ಕೂಡ ಅವುಗಳಲ್ಲೆಲ್ಲ ಪರಮಾತ್ಮನು ಹರಡಿಕೊಂಡು ಅವುಗಳನ್ನು ಏಕೀಕರಿಸಿಕೊಂಡಿದ್ದಾನೆ. ವಿಚಾರಮಾಡಿ ನೋಡಿದರೆ ತನುಗಳು ಭಿನ್ನವಾಗಿ ತೋರುತ್ತವೆ. ಆದರೆ ಅವುಗಳಲ್ಲೆಲ್ಲ ಪಸರಿಸಿದ ಆತ್ಮನು ಸರ್ವವ್ಯಾಪಿಯಾಗಿ ಒಬ್ಬನೇ ಇದ್ದಾನೆ. ಈ ಪ್ರಕಾರ ಪರಮಾತ್ಮನು ಅಣುರೇಣು ತೃಣಕಾಷ್ಠಗಳಲ್ಲಿ ಸಂಬಂಧಪಟ್ಟವನಾಗಿದ್ದಾನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**೪. ಶರಧಿಯ ಮೇಲೆ ಧರೆಯ ಕರಗದಂತಿರಿಸಿದೆ. ಅಂಬರಕ್ಕೆ ಗದ್ದುಗೆ ಬೋದುಗೆ ಇಲ್ಲದಂತಿರಿಸಿದೆ. ಎಲೆ ಮೃಡನೇ ನೀನಲ್ಲದೆ ಉಳಿದ ದೈವಂಗಳಿಗಹುದೇ ರಾಮನಾಥಾ?**

ಶರಧಿ= ಸಮುದ್ರ; ಅಂಬರ = ಆಕಾಶ;

ಪರಮಾತ್ಮನ ಕಳೆಯು ಜಗತ್ತಿನಲ್ಲೆಲ್ಲ ಆವರಿಸಿಕೊಂಡಿರುವದರಿಂದ ಜಗತ್ತಿನಲ್ಲಿ ನಾನಾ ವಿಧ ಆಶ್ಚರ್ಯಗಳು ಕಂಗೊಳಿಸುತ್ತವೆ. ಈ ಬಗ್ಗೆ ವಚನಕಾರನು ಕೆಲವು ಸುಂದರವಾದ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಭೂಮಿಯು ಒಕು ವಿಸ್ತಾರವಾದ ಸಮುದ್ರದಲ್ಲಿ ಕರಗದೆ ನಿಂತುಕೊಂಡಿದ್ದನ್ನೂ ಮಹತ್ತಾದ ಆಕಾಶವು ಏನೂ ಆಧಾರವಿಲ್ಲದೆ ಅಂತರಿಕ್ಷದಲ್ಲಿ ಪಸರಿಸಿದ್ದನ್ನೂ ನೋಡುತ್ತೇವೆ. ಇಂಥ ಅದ್ಭುತಗಳು ಪರಮಾತ್ಮನ ಸಾಮರ್ಥ್ಯವನ್ನು ಸೂಚಿಸುತ್ತವೇ ಹೊರತು ಬೇರೊಂದಲ್ಲ. ಇಂಥ ಸಾಮರ್ಥ್ಯವು ಎರಡನೇ ಕಿರುಕುಳ ದೇವತೆಗಳಲ್ಲಿ ತೋರದು. ಪರಮಾತ್ಮನು ಸರ್ವಸಮರ್ಥನಿರುವನೆಂದು ವಚನಕಾರನ ಅಭಿಪ್ರಾಯವು.

**೫. ಸರ್ಪನೂ ಕೂರ್ಮನೂ ದಿಕ್ಕರಿಗಳೆಂಟೂ ಭೂಮಿಯ ಹೊತ್ತಿಹರೆಂದು ಅಹರ್ನಿಶ ಹೊತ್ತಿಪ್ಪವರಿಗೆ ಅತ್ತಲಾಧಾರ, ಇತ್ತಲಾಧಾರ. ಉತ್ತರಗುಡುವವರಿಗೆ ಇಕ್ಕುವೆ ಮುಂಡಿಗೆಯ. ಎತ್ತುವರುಳ್ಳರೆ ತೋರಿರೈ ರಾಮನಾಥಾ.**

ಕೂರ್ಮ =ಆಮೆ; ದಿಕ್ಕರಿಗಳು =ದಿಗ್ಗಜಗಳು; ಅಹರ್ನಿಶ= ಹಗಲು ರಾತ್ರಿ ಮುಂಡಿಗೆ= ಒಂದು ಆಹ್ವಾನ ಚಿನ್ಹ;

ಜನರು ಪೃಥ್ವಿಗೆ ಆಧಾರವಾಗಿ ಶೇಷನೂ, ಆಮೆಯೂ, ಅಷ್ಟ ದಿಗ್ಗಜಗಳೂ ಉಂಟೆಂದು ಹೇಳುತ್ತಾರೆ. ಇದು ತಪ್ಪೆಂದು ವಚನಕಾರನು ಇಲ್ಲಿ ಅನ್ನುತ್ತಾನೆ. ಈ ವಸ್ತುಗಳಿಗೆಲ್ಲ ಆಧಾರವಾಗಿರುವಂಥ ಬೇರೊಂದು ವಸ್ತುವು ಅಂದರೆ ಪರಮಾತ್ಮನು ಇದ್ದಾನೆಂದು ಅವನ ಅಭಿಪ್ರಾಯವು. ಈ ಸಂಗತಿಯು ಸುಳ್ಳೆಂದು ಬೇಕಾದವರು ತೋರಿಸಿ ಕೊಡಲಿ ಎಂದು ವಚನಕಾರನು ವಿರೋಧಿಗಳಿಗೆ ಆಹ್ವಾನ ಮಾಡುತ್ತಾನೆ.

೬ ಧರಣಿಯು ಪಸರಿಸಿ ಉರಗನನಡಿಯಿಟ್ಟು ಶರಧಿ ಏಳಕ್ಕೆ ಎರೆದನು ಒಕ್ಕುಡಿತ ಉದಕವ. ಹರಿಯುಜ ಸುರರಿಗೆ ಪರಿಪರಿಯ ಲೋಕವ ಕೊಟ್ಟು ಅರಿಯದಂತಿರ್ದ ಕಾಣಾ ರಾಮನಾಥಾ.

ಉರಗ ಹಾವು; ಒಕ್ಕುಡಿತೆ= ಒಂದೇ ಬೊಗಸೆ; ಅಜ= ಬ್ರಹ್ಮ;

ಪರಮಾತ್ಮನು ಧರಣಿಯಲ್ಲೆಲ್ಲ ಪಸರಿಸಿದ್ದಾನೆ. ಆತನು ಎಲ್ಲ ಪದಾರ್ಥಗಳಲ್ಲಿಯೂ ಚೈತನ್ಯವನ್ನುಂಟು ಮಾಡಿದ್ದಾನೆ. ಅವನು ಜಗತ್ತಿನಲ್ಲಿ ಓಡಾಡುವ ಸರ್ಪನ ಗತಿಯಲ್ಲಿಯೂ ಕೂಡ ತೋರುತ್ತಾನೆ. ಅವನ ಪ್ರಭಾವವು ಇಂಥ ಕ್ಷುದ್ರ ಕೀಟಕದಲ್ಲಿಷ್ಟೇ ಅಲ್ಲ, ಏಳು ಸಮುದ್ರಗಳಲ್ಲಿಯೂ ಕೂಡ ವ್ಯಾಪಿಸಿದೆ. ಈ ಸಮುದ್ರಗಳೆಂದರೆ ಅವನಿಗೆ ಒಂದು ಬೊಗಸೆ ನೀರು ಅವನು ಹೀಗೆ ಮಹತ್ಸ್ವರೂಪನಾಗಿದ್ದಾನೆ. ಇಷ್ಟೇ ಅಲ್ಲ, ಅವನು ಜಗತ್ತಿನಲ್ಲೆಲ್ಲ ಅನಂತಪ್ರಾಣಿಗಳಿಗೆ ಅವುಗಳಿಗೆ ತಕ್ಕ ತೆರಗತಿಗಳನ್ನು ಕೊಟ್ಟು ಒಂದು ವ್ಯವಸ್ಥೆಯನ್ನುಂಟು ಮಾಡಿದ್ದಾನೆ. ಅವನು ಹರಿಹರ ಬ್ರಹ್ಮಾದಿಗಳಿಗೂ ಕೂಡ ಅವರವರು ಮಾಡತಕ್ಕ ಕಾರ್ಯಗಳನ್ನು ನಿಯಮಿಸಿದ್ದಾನೆ. ಈ ಪ್ರಕಾರ ಪರಮಾತ್ಮನು ಜಗತ್ತಿನಲ್ಲೆಲ್ಲ ವ್ಯವಹರಿಸುತ್ತಾನೆ. ಹೀಗಿದ್ದರೂ ಕೂಡ ಅವನು ಯಾರಿಗೂ ಕಾಣದಂತೆ ಅದೃಶ್ಯರೂಪನಾಗಿ ಎಲ್ಲೆಲ್ಲಿಯೂ ವಾಸಿಸಿದ್ದಾನೆಂದು ವಚನಕಾರನು ಇಲ್ಲಿ ಹೇಳುತ್ತಾನೆ.



ಇನ್ನು ಮುಂದೆ ವಚನಕಾರನು ಪರಮಾತ್ಮನು ಸೃಷ್ಟಿಯಲ್ಲೆಲ್ಲ ಯಾವ ರೀತಿಯಿಂದ ವ್ಯವಹರಿಸುತ್ತಾನೆಂಬದನ್ನು ವಿವರಿಸುತ್ತಾನೆ.

## ಪರಮಾತ್ಮ ಮತ್ತು ಜಗತ್ತು.

೭. ಪುರದೊಳಗೆ ಮುಂದಾಗ್ನಿಯು ಉರಿಯದಂತಿರಿಸಿದೆ. ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ. ಶರೀರದೊಳಗಾತ್ಮನನಾರು ಕಾಣದಂತಿರಿಸಿದೆ. ನೀನು ಬೆರಸಿದ ಭೇದಕ್ಕೆ ಬೆರಗಾದೆನಯ್ಯಾ ರಾಮನಾಥಾ.

# ಶಿವಾನುಭವ

( ತ್ರೈಮಾಸಿಕವು. )

ವರ್ಷ ೩ ] ಜೂನ ೧೯೨೮ [ ಸಂಚಿಕೆ ೧೦



ಸಂಪಾದಕಃ--ಫ. ಗು. ಹಳಕಟ್ಟಿ ವಿಜಾಪುರ.

# ವಿಷಯಾನುಕ್ರಮಣಿಕೆ.



---

ಇದನ್ನು ವಿಜಾಪುರದಲ್ಲಿ ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ [ಅ] ನೇ ಮನೆಯಲ್ಲಿ ಪ್ರಕಟಿಸಿದರು.

ವರ್ಷ ೩ ಜೂನ ಸಂಚಿಕೆ ೧೦

# ವೀರಶೈವರೂ ಕನ್ನಡ ಸಾಹಿತ್ಯವೂ.

ಲೇಖಕ:—'ಕೀರ್ತನಕೇಸರಿ' 'ಕವಿರತ್ನ' ಬಿ. ಶಿವಮೂರ್ತಿಶಾಸ್ತ್ರಿ
ಹುಲುಕುಂಟೆಮಠ ತುಮಕೂರು

ಯಾವದೊಂದು ಸಮಾಜದ ಜೀವಾಳವನ್ನು ತಿಳಿಯಬೇಕಾದರೂ ಅವರ ಸಾಹಿತ್ಯವನ್ನು ವಿಮರ್ಶಿಸಿದರಾಯಿತು ಎಂದು ಒಬ್ಬ ಮಹಾಪುರುಷನು ಹೇಳಿರುವನು. ಈ ಮಾತು ಬಹು ಬೆಲೆಯುಳ್ಳದ್ದು.

ವೀರಶೈವಮತಸ್ವರೂಪವನ್ನು ತಿಳಿಯಬೇಕೆಂದು ಕುತೂಹಲವುಳ್ಳ ಜಿಜ್ಞಾಸುಗಳು ಮೊದಲು ವೀರಶೈವ ಸಾಹಿತ್ಯ ಮತ್ತು ಧರ್ಮಗ್ರಂಥಗಳನ್ನು ಪರಿಚಯಮಾಡಿಕೊಳ್ಳಬೇಕಾಗುವದು. ಏಕೆಂದರೆ ಸಾಹಿತ್ಯವು ಜನಜೀವನದ ಪ್ರಾಣನಾಡಿ ಸ್ವರೂಪವು.

ಪ್ರಕೃತದಲ್ಲಿ ನಾವು ವೀರಶೈವಸಾಹಿತ್ಯವನ್ನು ಕುರಿತು ವಿಚಾರ ಮಾಡಬಯಸಿರುವೆವು. ಆದರೆ ವೀರಶೈವ ಕವಿಗಳು ತಮಿಳು, ತೆಲುಗು, ಸಂಸ್ಕೃತ ಮೊದಲಾದ ಹಲವು ಭಾಷಾ ಸಾಹಿತ್ಯಕ್ಕೆ ಸೇವೆಮಾಡಿರುವರು. ಈಗ ನಾವು ವಿಚಾರಿಸಹೊರಟಿರುವುದು ಇತರ ಭಾಷೆಗಳ ಸಂಗತಿಯನ್ನಲ್ಲ. ಕನ್ನಡ ಸಾಹಿತ್ಯವಿಚಾರವೊಂದನ್ನು ಮಾತ್ರ.

ಕರ್ನಾಟಕದ ಸಾಹಿತ್ಯವನ್ನು ವೃದ್ಧಿಪಡಿಸಿದ ಕವಿಗಳನ್ನು ಕವಿಚರಿತೆಗಾರರು ಮೂರು ವರ್ಗವಾಗಿ ವಿಂಗಡಿಸಿದ್ದಾರೆ. ಜೈನರು, ವೀರಶೈವರು, ಬ್ರಾಹ್ಮಣ ಅಥವಾ ವೈಷ್ಣವರು ಎಂದು.

ಸಾಮಾನ್ಯವಾಗಿ ಕ್ರಿ. ಶ. ೧೨ನೇ ಶತಮಾನದ ವರೆಗೆ ಕನ್ನಡ ಭಾಷೆಯಲ್ಲಿ ... ಚಿಗೆ ಹಲ ಕೆಲವರಿದ್ದರು ... ಸ್ಥಾನ ವನ್ನು ವೀರ ... ವೀರಶೈ ವರು ಆಕ್ರಮಿಸಿದರು.

೧೨ನೇ ಶತಮಾನದಿಂದ ... ಶತಮಾನದ ವರೆಗೆ ವೀರಶೈವ ಕವಿಗಳು ವಿಪುಲವಾಗಿ ಸಾಹಿತ್ಯವನ್ನು ನಾನಾಮುಖವಾಗಿ ಬೆಳೆಯಿಸಿರುವರು. ೧೬ನೇ ಶತಮಾನದಿಂದೀಚೆಗೆ ವೀರಶೈವ ಕವಿಗಳೂ ಬಲಗುಂದಿದಂತೆ ಕಂಡುಬರುವುದು. ಆದರೂ ವೀರಶೈವರಲ್ಲಿ ಮಧ್ಯ ಮಧ್ಯಪ್ರಬಲ ಕವಿಗಳು ಹುಟ್ಟಿಯೂ ಹುಟ್ಟುತ್ತಲೂ ಬಂದಿರುವರು.

೧೬ನೇ ಶತಮಾನದಿಂದ ಬ್ರಾಹ್ಮಣ ಕವಿಗಳು ವೃದ್ಧಿಗೊಂಡಂತೆ ಕಾಣುವುದು. ಸ್ಥೂಲವಾಗಿ ಹೀಗೆ ಕಾಲವಿಭಾಗಮಾಡಿದರೂ ಒಂದು ವರ್ಗದವರ ಅಭಿವೃದ್ಧಿಕಾಲದಲ್ಲಿ ಇನ್ನೊಂದು ವರ್ಗದ ಕವಿಗಳಿರಲಿಲ್ಲವೆಂದಲ್ಲ ಇದ್ದರೂ ಅವರ ಸಂಖ್ಯೆಯು ಬಹು ಕಡಿಮೆ.

ಕರ್ನಾಟಕ ವೀರಶೈವಕವಿಗಳಲ್ಲಿ ಹರಿಹರದೇವನು ಬಹುಮುಖ್ಯನು ಮತ್ತು ಪ್ರಥಮನು. ಕರ್ನಾಟಕ ಸಾಹಿತ್ಯದಲ್ಲಿ ಇವನ ಹೆಸರು ಹಲವು ವಿಧಗಳಲ್ಲಿ ಗಣನೀಯವಾಗಿರುವುದು. ಇವನು ಶಿವಶರಣರರಗಳೆ, ಗಿರಿಜಾ ಕಲ್ಯಾಣ, ಪಂಪಾಶತಕ, ರಕ್ಷಾಶತಕ, ಮುಡಿಗೆಯಅಷ್ಟಕ, ಶಿವಾಕ್ಷರ ಮಾಲೆ, ವಿರೂಪಾಕ್ಷಶತಕಗಳನ್ನು ಬರೆದಿರುವನು. ಈತನಿಗೆ 'ಉಭಯಕವಿ ಶರಭಬೇರುಂಡ' ನೆಂಬ ಬಿರುದೂ ಇರುವುದರಿಂದ ಸಂಸ್ಕೃತದಲ್ಲಿಯೂ ಗ್ರಂಥ ರಚನೆಮಾಡಿರಬಹುದು.

ಹರಿಹರದೇವನು ಅರುವತ್ತುಮೂವರ ಚರಿತೆಯನ್ನೂ ಇನ್ನೂ ಹಲವುಮಂದಿ ಶಿವಭಕ್ತರ ಚರಿತೆಯನ್ನೂ ರಘಟಾರೂಪವಾಗಿಯೇ ನಿರ್ಮಿಸಿರುವುದನ್ನೂ ನೋಡಿದರೆ ಈತನ ಪಾಂಡಿತ್ಯವು ಎಂತಹದುರ್ದಮನೀಯವಾದುದೆಂಬುದು ವ್ಯಕ್ತವಾಗುವುದು. ಕರ್ನಾಟಕ ಸಾಹಿತ್ಯದಲ್ಲಿ ರಘಟಾರೂಪವಾಗಿ ಉದ್ದಾಮಗ್ರಂಥವನ್ನು ರಚಿಸಿದ ಮಹನೀಯನೆಂದರೆ ಹರಿಹರದೇವನೇ. ಇವನ ಪಾಂಡಿತ್ಯವನ್ನು ನೋಡಿ ಸಹಿಸದವರಾರೋ ಕ್ಷುಲ್ಲಕರು ಇವನನ್ನು 'ರಗಳೆಯಕವಿ' ಯೆಂದು ಕರೆದರೆಂದೂ ಇದನ್ನು ಕೇಳಿ

ಬಹಿಷ್ಕೃತನಾದ ಹರಿಹರದೇವನು ಕುಪಿತನಾಗಿ ಗಿರಿಜಾಕಲ್ಯಾಣ ಮಹಾ ಕಾವ್ಯವನ್ನು ಬರೆದನೆಂದೂ ಐತಿಹ್ಯವಿದೆ. ಹರಿಹರಾರ್ಯನ ಗ್ರಂಥಗಳಲ್ಲಿ ಗಿರಿ ಜಾಕಲ್ಯಾಣವು ಅತ್ಯಂತ ಮನೋಹರವೂ ಪೂಜ್ಯವೂ ಆಗುದು. ಈ ಕಾವ್ಯದ ಕಥಾವಸ್ತುವು ಗಿರಿಜಾಪರಿಣಯವೆಂದಮೇಲೆ ಇದರ ಉತ್ಕೃಷ್ಟತೆಗೆ ನಾವು ಹಿಂದುಮುಂದು ನೋಡಬೇಕಾಗಿಲ್ಲ. ಮೇಲಾಗಿ ಶೈಲಿ ಪ್ರತಿಭೆ ರಸ ಭಾವ ಪ್ರತಿಪಾದನ ಮೊದಲಾದ ವಿಷಯಗಳಲ್ಲಿ ಹರಿಹರನು ಯಾರಿಗೇನು ಕಡಿಮೆ?

ಗಿರಿಜಾಕಲ್ಯಾಣದಷ್ಟು ಸುಲಲಿತವಾದ ಚಂಪೂಗ್ರಂಥವನ್ನು ನಾವು ಕನ್ನಡಸಾಹಿತ್ಯದಲ್ಲಿ ಕಾಣಲಾರೆವು. ಈ ಗ್ರಂಥವನ್ನು ಓದಿದ ಹೊರತು ಹರಿಹರನ ಕಾವ್ಯಮಾರ್ಗದ ಸಾರಳ್ಯವು ತಿಳಿದುಬರುವದಿಲ್ಲ.

ಕರ್ಣಾಟಕ ಸಾಹಿತ್ಯದಲ್ಲಿ ಕವಿತಾವಿಚಕ್ಷಣರಾದ ಪಂಪ ರನ್ನ ನೇಮಿ ಷಡಕ್ಷರಿಗಳನ್ನು ನೋಡಬಹುದು. ಆದರೆ ಹರಿಹರನಂತಹ ಕವಿ ತಾವೇಗವುಳ್ಳ ಕವಿಯನ್ನು ಮತ್ತಾರನ್ನೂ ಕಾಣಲಾರೆವು.

ಕವಿರನ್ನನು ವೀರರಸ ಪ್ರತಿಪಾದನೆಯಲ್ಲಿ ಬಲ್ಲಿದನಷ್ಟೆ. ಆದರೆ ವೀರ ರಸ ಪ್ರತಿಪಾದಕ ಶಬ್ದ ಪ್ರಯೋಗದಲ್ಲಿ ಹರಿಹರನನ್ನು ಮೀರಲಾರನು. ವಾಚಕರು ಗದಾಯುದ್ಧದ ಕೌರವ ಭೀಮರಯುದ್ಧ ಪ್ರಕರಣವನ್ನೂ ಗಿರಿಜಾಕಲ್ಯಾಣದ ತಾರಕ ಪ್ರತಾಪವರ್ಣನೆಯನ್ನೂ ಓದಿದರೆ ಈ ವಿಷ ಯವನ್ನು ಮನಗಾಣಬಹುದು.

ಕ್ರಿ. ಶ. (೧೦೭೦) ರಲ್ಲಿದ್ದ ನಾಗವರ್ಮಾಚಾರ್ಯನು ಚಂದ್ರಚೂ ಡಾಮಣೀಶತಕವೊಂದನ್ನು ಬರೆದಿರುವನು. ಇದೊಂದನ್ನು ಬಿಟ್ಟರೆ ಕರ್ಣಾ ಟಕ ಶತಕಪ್ರಪಂಚಕ್ಕೆ ಹರಿಹರನೇ ಗುರುವಾಗುವನು. ಪಂಪಾಶತಕ, ರಕ್ಷಾಶತಕ, ವಿರೂಪಾಕ್ಷಶತಕಗಳಂತಹ ಭಕ್ತಿ ಜ್ಞಾನ ವೈರಾಗ್ಯ ಬೋಧ ಕಗಳಾದ ಶತಕಗಳು ನಮ್ಮ ದೃಷ್ಟಿಗೆ ಬೀಳುವುದು ಅಪೂರ್ವ.

ಹರಿಹರನು ಕವಿತಾಪ್ರಪಂಚದಲ್ಲಿ ಮಾತ್ರ ಬಲ್ಲಿದನಾಗಿರಲಿಲ್ಲ. ಈತನು ಗುರುವಾಗಿಯೂ ಪವಾಡಪುರುಷನಾಗಿಯೂ ಮತೋದ್ಧಾರಕನಾ ಗಿಯೂ ಇದ್ದನು. ಸ್ವಲ್ಪಕಾಲ ಹಳೇಬೀಡಿನಲ್ಲಿ ನರಸಿಂಹ ಬಲ್ಲಾಳ ರಾಜನ ಆಸ್ಥಾನದಲ್ಲಿ 'ಕರಣಿಕರಕುಲ ತಿಲಕ' ನಾಗಿಯೂ ಇದ್ದಂತೆ ತಿಳಿ ದುಬರುವುದು.

ರಳ, ಕುಳ, ಕ್ಷಳ ಳಕಾರವನ್ನು ಪ್ರಾಸ ಸ್ಥಾನಕ್ಕೆ ಇಡುವ ವಿಷಯದಲ್ಲಿ ಹರಿಹರನು ಕನ್ನಡ ಕಾವ್ಯ ಮಾರ್ಗವನ್ನೇ ಬದಲಾಯಿಸಿದನು. ಹರಿಹರನಿಗಿಂತಲೂ ಹಿಂದೆ ಇದ್ದ ಜೈನ ಕವಿಗಳು ಮೇಲ್ಕಂಡ ಳಕಾರಗಳನ್ನು ಪ್ರಾಸ ಸ್ಥಾನದಲ್ಲಿ ನಿಯಮದಿಂದ ಇಡುತ್ತಿದ್ದರು. ಈ ನಿಯಮವು ಹೆಚ್ಚು ಕಷ್ಟಕರವೂ ಅಲ್ಪಫಲಪ್ರದವೂ ಆಗಿದ್ದುದರಿಂದ ಹರಿಹರನು ತನ್ನ ಕಾವ್ಯದಲ್ಲಿ ಇವುಗಳ ನಿರ್ಬಂಧವನ್ನೇ ಕಿತ್ತೊಗೆದನು. ಹರಿಹರನ ನಂತರ ಹುಟ್ಟಿದ ಕೇಶಿರಾಜನು ಈ ನಿಯಮವನ್ನು ಎಷ್ಟು ಒತ್ತಿ ಹೇಳಿದರೂ ಮುಂದಿನ ಕವಿಲೋಕವು ಪ್ರಾಯೇನಾ ಹರಿಹರನ ಮತವನ್ನೇ ಅನುಸರಿಸಿತು.

ಹರಿಹರನು ಸಂಪೂರ್ಣ ಭಾಗ್ಯಶಾಲಿಯೆಂಬುದಕ್ಕೆ ಹಲವು ನಿದರ್ಶನಗಳಿವೆ. ಇವುಗಳಲ್ಲಿ ತನ್ನಂತೆಯೇ ಪ್ರಬಲನೂ ಮಹಾಕವಿಯೂ ಪವಾಡ ಪುರುಷನೂ ಆದ ರಾಘವಾಂಕನನ್ನು ತನ್ನ ಶಿಷ್ಯನನ್ನಾಗಿ ಪಡಕೊಂಡುದು ಒಂದಾಗಿದೆ. ವಿದ್ವಾಂಸನೂ ಮಹಾಕವಿಯೂ ಆದ ಗುರುವಿಗೆ ಇಂತಹವನೇ ಆದ ಶಿಷ್ಯನು ಲಭಿಸುವುದೆಂದರೆ ಸಾಮಾನ್ಯನಾದ ಮಾತಲ್ಲ.

ರಾಘವಾಂಕನು ಹರಿಹರನಿಗೆ ಶಿಷ್ಯನು ಹಾಗೂ ಸಮಕಾಲೀನನು. ಸುಮಾರು ಕ್ರಿ. ಶ. (೧೧೬೫) ರಲ್ಲಿ ಇದ್ದನೆಂದು ಕವಿಚರಿತಕಾರರು ಊಹಿಸಿರುವುದು ಸಯುಕ್ತಿಕವಾಗಿದೆ. ಇವನು ಹರಿಶ್ಚಂದ್ರ ಪುರಾಣ, ಸೋಮನಾಥ ಚರಿತೆ, ಸಿದ್ಧರಾಮ ಪುರಾಣ, ವೀರೇಶ್ವರ ಚರಿತೆ, ಶರಭಚಾರಿತ್ರ, ಹರಿಹರ ಮಹತ್ವ ಮೊದಲಾದ ಗ್ರಂಥಗಳನ್ನು ಬರೆದಿರುವನು. ಇವನ ಕಾವ್ಯಗಳು ಪ್ರೌಢವಾಗಿಯೂ ರಸವತ್ತಾಗಿಯೂ ನೀತಿಯುಕ್ತವಾಗಿಯೂ ಇರುವುವು.

೧೨ನೇ ಶತಮಾನದ ವರೆಗೆ ಜೈನ ಕವಿಗಳು ಚಂಪೂಶೈಲಿಯೊಂದರಲ್ಲಿಯೇ ಗ್ರಂಥಗಳನ್ನು ಬರೆದರು. ಪಂಪ ರನ್ನಾದಿಗಳು ಪ್ರಬಲ ಕವಿಗಳಹುದು. ಭಾಷಾವರ್ಧಕರಹುದು. ಆದರೆ ಭಾಷಾ ಸುಧಾರಕರಲ್ಲ. ನಿಜವಾಗಿಯೂ ಕನ್ನಡ ಭಾಷೆಯಲ್ಲಿ ಗ್ರಂಥ ನಿರ್ಮಾಣದ ಶೈಲಿಯನ್ನು ಬದಲಾಯಿಸಿ ಹೆಸರಿಗೆ ಪಾತ್ರರಾದವರು ಹರಿಹರ ಮತ್ತು ರಾಘವರೇ. ಹರಿಹರನು ಸುಲಭಶೈಲಿಯ ಚಂಪುವನ್ನೂ ರಗಳೆಯ ಕಾವ್ಯವನ್ನೂ ಮನೋಹರವಾದ ಶತಕಗಳನ್ನೂ ಬರೆದು ತನ್ನ ಸಮಯಸ್ಫೂರ್ತಿಯನ್ನು ವ್ಯಕ್ತಗೊಳಿಸಿದರೆ ರಾಘವಾಂಕನು ಇನ್ನೂ ಚಮತ್ಕಾರ ಮಾಡಿದನು.

ಚಂಪೂಶೈಲಿಯಿಂದ ಷಟ್ಪದೀ ರೂಪಕ್ಕೆ ತಿರುಗಿದವನು ರಾಘ ವಾಂಕನೇ. ರಾಘವಾಂಕನಿಗಿಂತಲೂ ಮೊದಲು ಷಟ್ಪದಿಗಳಿದ್ದುವೆಂದು ಕೆಲವರು ಹೇಳುವರಾದರೂ ಆ ಮಾತಿಗೆ ಆಧಾರ ಗ್ರಂಥಗಳಿಲ್ಲ. ರಾಘ ವಾಂಕನ ಹರಿಶ್ಚಂದ್ರ ಪುರಾಣವೇ ಕರ್ಣಾಟಕ ಷಟ್ಪದೀ ಕಾವ್ಯಗಳಲ್ಲಿ ಮೊದಲನೆಯದು. ಇವನು ಪ್ರಾಯಃ ತನ್ನ ಕಾವ್ಯಗಳನ್ನೆಲ್ಲಾ ಷಟ್ಪದಿ ಯಲ್ಲಿಯೇ ಬರೆದನು. ಅಲ್ಲದೆ ಕಥಾಪ್ರಸಂಗಕ್ಕಿಂತ ವರ್ಣನಾ ಭಾಗ ವನ್ನೇ ವಿಪುಲವಾಗಿ ಕಾವ್ಯದಲ್ಲಿ ತುಂಬುತ್ತಿದ್ದ ಹಿಂದಿನ ಕವಿಗಳ ಮಾರ್ಗವನ್ನು ಬಿಟ್ಟು ವರ್ಣನೆಯನ್ನು ಮಿತಮಾಡಿ ಕಥಾಪ್ರಸಂಗವನ್ನೂ ನೀತಿಬೋಧೆಯನ್ನೂ ಹೆಚ್ಚು ಮಾಡಿ ತನ್ನ ಕಾವ್ಯಗಳಿಗೆ ನವಚೈತನ್ಯವ ನ್ನುಂಟು ಮಾಡಿದನು. ಇವನ ಈ ಪರಿಸ್ಥಿತಿಯ ಜ್ಞಾನವನ್ನು ಕಂಡ ವಿದ್ವಾಂಸರು ಈ ಹೊಸಮಾರ್ಗದ ಕವಿಯನ್ನು ಬಹುವಾಗಿ ಮಾನ್ಯ ಮಾಡಿದರು. ಈ ವಿಷಯದಲ್ಲಿ ಆಧುನಿಕ ಪಂಡಿತರೂ ಇವನನ್ನು ಹೊಗ ಳುವರು.

ಹರಿಹರನ ಮಿತ್ರನೂ ಸಮಕಾಲೀನನೂ ನರಸಿಂಹ ಬಲ್ಲಾಳನ ಮುಖ್ಯಮಂತ್ರಿಯೂ ತ್ರಿಭುವನತಾತನೆಂಬ ವೈಷ್ಣವನನ್ನು ವಾದದಲ್ಲಿ ಗೆದ್ದು ವೀರಶೈವ ಮತಕ್ಕೆ ಸೇರಿಸಿದವನೂ ಪವಾಡ ಪುರುಷನೂ ಆದ ಕೆರೆಯ ಪದ್ಮರಸನು ರಘಟಾರೂಪವಾಗಿ ದೀಕ್ಷಾಬೋಧೆಯೆಂಬ ಗ್ರಂಥ ವೊಂದನ್ನು ಬರೆದಿರುವನು. ಅಂದಮೇಲೆ ಇವನಾದರೂ ಗ್ರಂಥ ರಚನೆ ಯಲ್ಲಿ ನವೀನ ಮಾರ್ಗದ ಹರಿಹರ ರಾಘವರನ್ನೇ ಹಿಂಬಾಲಿಸಿರುವನು.

ವೀರಶೈವ ಮತಾಭಿವೃದ್ಧಿ ಹಾಗೂ ಸಾಹಿತ್ಯಾಭಿವೃದ್ಧಿಗೆ **ಹಂಪೆ** ಮತ್ತು **ಕಲ್ಯಾಣ** ಇವೆರಡೂ ಬಹು ಮುಖ್ಯವಾದ ಸ್ಥಾನಗಳು. ಕಲ್ಯಾ ಣದಲ್ಲಿ ಪ್ರಭುದೇವ ಬಸವೇಶ ಚೆನ್ನಬಸವೇಶ ಮೊದಲಾದವರು ಪ್ರಮು ಖರಾದರೆ ಹಂಪೆಯಲ್ಲಿ ಹರಿಹರದೇವ ರಾಘವಾಂಕ ಕೆರೆಯ ಪದ್ಮರಸ ಇವರು ಮುಖ್ಯರು. ಬಸವೇಶನೂ ಹರಿಹರದೇವನೂ ಸಮಕಾಲೀನರು. ಇಬ್ಬರೂ ಮಹಾತ್ಮರು ವೀರಶೈವ ಮತಾಭಿವರ್ಧಕರು. ರಾಜಾಶ್ರಯ ವುಳ್ಳವರು. ಬಸವೇಶನು ವಚನಗ್ರಂಥ ಪ್ರಚಾರಕನು. ಹರಿಹರನು ಕಾವ್ಯ ಕಲಾಭಿವರ್ಧಕನು. ವೀರಶೈವ ಮತಾಭಿವೃದ್ಧಿಗೆ ಹೀಗೆ ಉಭಯ ಸ್ಥಾನ ಗಳಲ್ಲಿಯೂ ಅವಕಾಶವಾದುದರಿಂದ ಕರ್ಣಾಟಕದಲ್ಲಿ ಆಗ ವೀರಶೈವರ ತೇಜಸ್ಸು ಹಬ್ಬಲು ಕಾರಣವಾಯ್ತು.

ರಾಘವಾಂಕನಾದ ಮೇಲೆ ವೀರಶೈವ ಸಾಹಿತ್ಯದಲ್ಲಿ ಕುಮಾರ ಪದ್ಮರಸ, ಪಾಲ್ಕುರಿಕೆ ಸೋಮಾರಾಧ್ಯ, ಸೋಮರಾಜ, ಭೀಮ ಕವಿ, ಪದ್ಮಣಾಂಕ ಇವರು ನಮ್ಮ ಕಣ್ಣಿಗೆ ಬೀಳುವರು.

ಕುಮಾರ ಪದ್ಮರಸನು ಕೆರೆಯ ಪದ್ಮರಸನ ಮಗನು. ಷಟ್ಪದೀ ರೂಪದಿಂದ ಸಾನಂದ ಚರಿತೆಯನ್ನೂ ಬರೆದಿರುವನು. ಬಗೆಬಗೆಯ ಷಟ್ಪದಿಗಳಿದ್ದರೂ ಇವನ ಗ್ರಂಥದಲ್ಲಿ ಕುಸುಮಷಟ್ಪದಿಗಳೇ ಹೆಚ್ಚಾಗಿವೆ.

ವೀರಶೈವ ಮಹರ್ಷಿಗಳಾದ ಪೂರ್ಣಾನಂದ, ಭೃಗು, ಉಪಮನ್ಯು, ದೂರ್ವಾಸ, ಅಗಸ್ತ್ಯ, ಕಣಾದ, ದಧೀಚಿ ಮೊದಲಾದವರಲ್ಲಿ ಸಾನಂದನು ಅತ್ಯಂತ ಹೆಸರಾದವನು. ಪಂಚಾಕ್ಷರೀಮಂತ್ರದ ಸಾಮರ್ಥ್ಯದಿಂದ ಸಮಸ್ತ ನರಕಿಗಳನ್ನೂ ಶಿವಪುರಕ್ಕೆ ಕರೆದೊಯ್ದ ಇವನ ಶಕ್ತಿಯು ಸಾಮಾನ್ಯ ವಾದುದಲ್ಲ. ಇಂತಹ ಮಹರ್ಷಿಯ ಚರಿತೆಯನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟ (ಪುರಾಣ ರೂಪದಲ್ಲಿ) ಪುಣ್ಯಕ್ಕೆ ಕುಮಾರ ಪದ್ಮರಸನೇ ಅರ್ಹನು.

ಮದರಾಸಾಧಿಪತ್ಯದ ಗೋದಾವರೀ ಜಿಲ್ಲೆಗೆ ಸೇರಿದ ಪಾಲ್ಕುರಿಕೆಯಲ್ಲಿ ಮಹಾಪುರುಷನಾದ ಸೋಮನಾಥನು ಹುಟ್ಟಿದನು. ಈತನು ಬಸವೇಶನಿಗಿಂತಲೂ ಮೂವತ್ತು ವರ್ಷ ಹಿರಿಯವನೆಂದು ಕಾಣುವುದು. ಈತನು ವೀರಶೈವರಲ್ಲಿ ಬಹು ಬಲ್ಲಿದನು. ಮತ್ತು ಮಹಾತ್ಮನು. ಸಂಸ್ಕೃತ, ಆಂಧ್ರ, ಕನ್ನಡ ಭಾಷೆಗಳಲ್ಲಿ ಘನಪಂಡಿತನು. ಸಂಸ್ಕೃತದಲ್ಲಿ ಸೋಮನಾಥ ಭಾಷ್ಯವೆಂಬ ಹೆಸರಿನಿಂದ ವೀರಶೈವ ಸಿದ್ಧಾಂತ ಗ್ರಂಥವನ್ನು ಬರೆದಿರುವನು. ತೆಲುಗಿನಲ್ಲಿ ಮೊದಲು ಬಸವ ಪುರಾಣವನ್ನು ಬರೆದವನು ಈತನೇ. ಇದಲ್ಲದೆ ತೆಲುಗಿನಲ್ಲಿ ಆರಾಧ್ಯಚಾರಿತ್ರ್ಯವನ್ನೂ ಬರೆದಿರುವನು. ಸಂಸ್ಕೃತದಲ್ಲಿ ಭಾಷ್ಯವಲ್ಲದೆ ಅನ್ಯವಾದಿ ಕೋಲಾಹಲ, ಬಸವೇಶ ಪಂಚಗದ್ಯ ಎಂಬುವುಗಳನ್ನು ಬರೆದಿರುವನು. ಕನ್ನಡದಲ್ಲಿ ಶೀಲಸಂಪಾದನೆ, ಸದ್ಗುರು ರಗಳೆ, ಚೆನ್ನಬಸವ ರಗಳೆ, ಶರಣಬಸವ ರಗಳೆ ಎಂಬುವುಗಳನ್ನು ಬರೆದಿರುವನು. ಈ ಮಹಾತ್ಮನು ಕನ್ನಡ ಸಾಹಿತ್ಯದಲ್ಲೇ ಅಲ್ಲದೆ ಸಂಸ್ಕೃತ ಆಂಧ್ರ ಸಾಹಿತ್ಯಗಳಲ್ಲಿಯೂ ಬಲ್ಲಿದನಾಗಿ ವೀರಶೈವ ಮತದ ಕೀರ್ತಿಯನ್ನು ಹೆಚ್ಚಿಸಿರುವನು.

ಕರ್ಣಾಟಕ ಚಂಪೂಗ್ರಂಥ ಕರ್ತೃಗಳಲ್ಲಿ ಸೋಮರಾಜನೊಬ್ಬನು. ಈತನು ಪಶ್ಚಿಮ ಸಮುದ್ರತೀರದ ಪ್ರಾಂತದಲ್ಲಿ ರಾಜನಾಗಿದ್ದಂತೆ ತಿಳಿದು

ಬರುವುದು. ಈತನು ಮಹಾ ಕವಿಯಾಗಿರುವನು. ವೀರಶೈವ ಕವಿಗಳಲ್ಲಿ ಶೃಂಗಾರ ರಸಕ್ಕೆ ಪ್ರಾಧಾನ್ಯವನ್ನು ಕೊಟ್ಟ ಕವಿಗಳಲ್ಲಿ ಸೋಮರಾಜನೇ ಮೊದಲಿಗನು. ಈತನು ತನ್ನ ಉದ್ಭಟದೇವ ಚರಿತೆಯಾದ 'ಉದ್ಭಟ ಕಾವ್ಯ'ಕ್ಕೆ ಶೃಂಗಾರಸಾರವೆಂದು ಹೆಸರಿಟ್ಟಿರುವನು. ಕವನಕಲಾ ವೈಭವ ನೆಸಸಿದ ಷಡಕ್ಷರದೇವನೂ ಎಷ್ಟೋ ಸಂದರ್ಭದಲ್ಲಿ ಸೋಮರಾಜನ ಕವಿತೆಯನ್ನು ಮಾದರಿಯಾಗಿಟ್ಟುಕೊಂಡಂತೆ ಈ ಉಭಯರ ಕಾವ್ಯಗಳನ್ನು ಓದಿದವರಿಗೆ ತೋರಿಬರುತ್ತದೆ. ಅಂತಹ ಸಂದರ್ಭಗಳನ್ನು ಇಲ್ಲಿ ಉದಾಹರಿಸುವುದು ಈ ಲೇಖನದ ಉದ್ದೇಶವಲ್ಲವಾದ್ದರಿಂದ ಅದನ್ನು ಮಾನಸಿಕ ಮಾಡಲಾಗಿದೆ. ಸೋಮರಾಜನ ಕಾವ್ಯವು ಲಲಿತವಾಗಿಯೂ ರಸವತ್ತಾಗಿಯೂ ಇದೆ.

ಸೋಮರಾಜನಾದ ಮೇಲೆ ಭೀಮ ಕವಿಯು ನಮ್ಮ ಸ್ಮೃತಿಪಥಕ್ಕೆ ಬರುವನು. ಷಟ್ಪದೀ ಕಾವ್ಯವನ್ನು ಅತ್ಯಂತ ಸುಲಭ ಮಾರ್ಗಕ್ಕೆ ತಿರುಗಿಸಿದವನು ಈತನೇ. ವೀರಶೈವ ಮತೋದ್ಧಾರಕನೂ ಕರ್ಣಾಟಕ ದೇಶಭಾಷಾಭಿವರ್ಧಕನೂ ಆದ ಬಸವೇಶನ ಚರಿತೆಯನ್ನು ತೆಲುಗಿನಲ್ಲಿ ಸೋಮನಾಥನು ಬರೆದಿದ್ದನಷ್ಟೇ. ಅದನ್ನು ಕನ್ನಡಿಗರ ಉಪಯೋಗಕ್ಕೆ ಒದಗಿಸಿದವನೆಂದರೆ ಈ ಭೀಮಕವಿಯೇ. ಷಡಕ್ಷರದೇವನ ವೃಷಭೇಂದ್ರ ವಿಜಯವೆಂಬ ಚಂಪೂಗ್ರಂಥಕ್ಕೆ ಬಹುಮಟ್ಟಿಗೆ ಭೀಮಕವಿಯ ಬಸವ ಪುರಾಣವೇ ಮೂಲಗ್ರಂಥವು.

ಮುಂದೆ ಮುಂದೆ ಷಟ್ಪದೀ ಕಾವ್ಯ ನಿರ್ಮಾಪಕರಲ್ಲಿ ಹೆಸರಾದ ಚಾಮರಸ ವಿರೂಪಾಕ್ಷಪಂಡಿತ ಬೊಮ್ಮರಸ ಲಕ್ಷ್ಮೀಶಕುಮಾರ ವ್ಯಾಸಾದಿಗಳೆಲ್ಲರಿಗೂ ಭೀಮಕವಿಯು ಬಹುಮಟ್ಟಿಗೆ ಸುಲಲಿತ ಮಾರ್ಗವನ್ನು ಬೋಧಿಸಿರುವನೆಂದರೆ ಅತಿಶಯೋಕ್ತಿಯಾಗಲಾರದು.

ಭೀಮಕವಿಯಾದ ಮೇಲೆ ಪದ್ಮಣಾಂಕನು ನಮಗೆ ವಿಚಾರಣೀಯನು. ಇವನು ತನ್ನ ಪೌರ್ವಿಕನಾದ ಕೆರೆಯ ಪದ್ಮರಸನ ಚರಿತೆಯನ್ನು ಪದ್ಮರಾಜ ಪುರಾಣವೆಂಬ ಹೆಸರಿನಿಂದ ಬರೆದಿರುವನು. ಇವನು ಘನ ಪಂಡಿತನು. ಸಂಸ್ಕೃತ-ಕರ್ಣಾಟಕ ಭಾಷೆಗಳಲ್ಲಿ ಅದ್ವಿತೀಯನು. ವೀರಶೈವ ಧರ್ಮ ರಹಸ್ಯವನ್ನು ಚೆನ್ನಾಗಿ ಅರಿತವನು. ಒಳ್ಳೆಯ ವೈಯ್ಯಾಕರಣೆಯು. ಇವನ ಕಾವ್ಯವು ಅತ್ಯಂತ ಪ್ರೌಢವಾಗಿಯೂ ಲಕ್ಷಣಬದ್ಧ

ವಾಗಿಯೂ ಇವೆ. ಕವಿತೆಯಲ್ಲಿ ದುರ್ದಮನೀಯನಾದ ಶಕ್ತಿಯುಳ್ಳವನು ಇವನು ಬರೆದಿರುವ 'ಕವಿಮುಖಕಪಾಟ'ವೆಂಬ ಒಂದು ಪದ್ಯದಂತಹ ಪದ್ಯವನ್ನು ಕರ್ಣಾಟಕ ಸಾಹಿತ್ಯದಲ್ಲಿ ಯಾರೂ ಬರೆಯಲಾರರು. ಹಾಗೂ ಕಾಣಲಾರರು. ಇವನ ಕಾವ್ಯವನ್ನು ಓದಿದರೆ ವರ್ಣಕ ಕಾವ್ಯವನ್ನೇ ಇಷ್ಟು ಪ್ರೌಢವಾಗಿ ಬರೆದ ಇವನು ವಸ್ತುಕವನ್ನಾಗಿದ್ದರೆ ಇನ್ನೆಷ್ಟು ಪ್ರೌಢವಾಗಿ ಬರೆಯುತ್ತಿದ್ದನೋ ಎನ್ನಿಸುತ್ತದೆ.

ರಾಘವಾಂಕನ ಅನಂತರ ಹುಟ್ಟಿದ ಕವಿಗಳಲ್ಲಿ ಬಹು ಮಂದಿ ಕಾವ್ಯಮಾರ್ಗದಲ್ಲಿ ರಾಘವ ಕವಿಯನ್ನೇ ಅನುಸರಿಸಿದಂತೆ ಕಂಡುಬರುತ್ತದೆ. ಕ್ಲಿಷ್ಟತಮದಿಂದ ಚಂಪೂ ಮಾರ್ಗವು ಸಾಕಾಗಿ ಹೊಸ ಹೊಸ ಮಾರ್ಗದ ಕಾವ್ಯಗಳು ಸಾಹಿತ್ಯವಿದರಿಗೆ ಅವಶ್ಯಕವಾದಂತೆಲ್ಲಾ ವೀರಶೈವ ಕವಿಗಳು ಹೊಸ ಮಾರ್ಗದಲ್ಲಿಯೇ ಕಾವ್ಯ ರಚನೆ ಮಾಡಿದರು. ಈ ಹೊಸ ಮಾರ್ಗವೇ ಷಟ್ಪದೀ ಶೈಲಿಯು. ಓದುವವರಿಗೂ ಕೇಳುವವರಿಗೂ ಸುಲಭಶೈಲಿಯ ಷಟ್ಪದೀ ಕಾವ್ಯಗಳು ಬಹು ರಮ್ಯವಾಗಿರುವುವು. ಇವು ಪಂಡಿತ ಪಾಮರರಿಗೆಲ್ಲರಿಗೂ ಪ್ರೇಮಪಾತ್ರವಾಗಿರುವುವು.

ಈಗಲಾದರೂ ಕರ್ಣಾಟಕ ಭಾಷೆಯಲ್ಲಿ ಕನ್ನಡ ಜೈಮಿನಿ, ಮಹಾಭಾರತ ಮೊದಲಾದುವುಗಳು ಪ್ರಚಾರದಲ್ಲಿರುವಂತೆ ಮತ್ತಾವ ಪ್ರೌಢ ಗ್ರಂಥಗಳೂ ಪ್ರಚಾರದಲ್ಲಿಲ್ಲದಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

ವೀರಶೈವ ಕನ್ನಡ ಸಾಹಿತ್ಯವು ಬಹುಮಟ್ಟಿಗೆ ಷಟ್ಪದೀ ಕಾವ್ಯ ರೂಪದಲ್ಲಿಯೇ ಇರುವುದು. ಷಟ್ಪದೀಕಾವ್ಯ ಪ್ರಣೇತೃಗಳಲ್ಲಿ ಚಾಮರಸ, ಲಕ್ಕಣಾಮಾತ್ಯ, ವಿರೂಪಾಕ್ಷ ಪಂಡಿತ, ಗುಬ್ಬಿಮಲ್ಲಣಾರ್ಯ, ಬೊಮ್ಮರಸ, ಚತುರ್ಮುಖ ಬೊಮ್ಮರಸ, ಸಿಂಗಿರಾಜ, ಚೇರಮ, ಚೆನ್ನಬಸವಾಂಕ, ಗುರುಲಿಂಗವಿಭು, ಅದೃಶ್ಯಕವಿ, ಚಂದ್ರಕವಿ, ಗುರುಬಸವಕವಿ, ಚಿಕ್ಕನಂಜೇಶ, ನೀಲಕಂಠಾಚಾರ್ಯ, ವಿರಕ್ತ ತೋಂಟದಾರ್ಯ ಮೊದಲಾದವರು ಮುಖ್ಯರು.

ಚಾಮರಾಜನು ಪ್ರಭುಲಿಂಗ ಲೀಲೆಯನ್ನು ಬರೆದಿರುವನು. ಇವನ ಕಾವ್ಯ ನಿರ್ಮಾಣ ಚಾತುರ್ಯವು ಶ್ಲಾಘನೀಯವಾದುದು. ಪವಿತ್ರತಮವಾದ ಕಥಾವಸ್ತು. ಮೇರೆಪೂರದ ವರ್ಣನಾ ವೈಖರಿ. ಹೃದಯಾಗಮವಾದ ಶೈಲಿ. ಸಮಯಾನುಸಾರವಾದ ನೀತಿ ಇವುಗಳಲ್ಲಿ ಚಾಮರಸನು ಅತ್ಯಂತ ಹೆಸರಾದವನು. ಕರ್ಣಾಟಕ ಭಾಮಿನೀ ಷಟ್ಪದೀ ಕಾವ್ಯಗ

ಕಲ್ಲಿ ಪ್ರಭುಲಿಂಗ ಲೀಲೆಯು ಉತ್ಕೃಷ್ಟೋತ್ತಮವೆಂದೂ ಎಷ್ಟೋ ಸಮಯದಲ್ಲಿ ಕುಮಾರವ್ಯಾಸನ ಶೈಲಿಗಿಂತಲೂ ರಮಣೀಯವಾದುದೆಂದೂ ಏತದ್ಭಾಷಾವಿದರು ಅಭಿಪ್ರಾಯ ಪಡುವರು. ಈ ಗ್ರಂಥವು ತೆಲುಗು ತಮಿಳಿಗೂ ಭಾಷಾಂತರವಾಗಿದೆ.

ಲಕ್ಕಣಾಮಾತ್ಯನು ವೀರಶೈವ ಕವಿಗಳಲ್ಲಿ ಬಹು ಸಮರ್ಥನು. ಈತನು ವಿಜಯನಗರದ ಪ್ರೌಢದೇವರಾಯನ ದಂಡನಾಯಕನಾಗಿಯೂ ಮಹಾಕವಿಯಾಗಿಯೂ ಇದ್ದನು. ಚಾಮರಸನೂ ಇವನೂ ಸಮಕಾಲೀನರು ಲಕ್ಕಣಾಮಾತ್ಯನ ಶಿವತತ್ವ ಚಿಂತಾಮಣಿಯು ಕರ್ಣಾಟಕ ಉದಾತ್ತ ಗ್ರಂಥಗಳಲ್ಲೊಂದಾಗಿದ್ದು ಅನೇಕ ಐತಿಹಾಸಿಕ ವಿಷಯಗಳನ್ನೂ ಒಳಗೊಂಡಿದೆ. ಅಲ್ಲದೆ ವೀರಶೈವ ಮತತತ್ವವನ್ನೂ ಕವಿಯು ಬಹು ಗಂಭೀರವಾಗಿ ವಿವರಿಸಿದ್ದಾನೆ.

ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ವೀರಶೈವ ಕವಿಗಳಿಗೂ ದೊಡ್ಡ ದೊಡ್ಡ ಅಧಿಕಾರಿಗಳಿಗೂ ಬಹಳವಾಗಿ ಪ್ರೋತ್ಸಾಹ ದೊರೆತಿದೆ. ಜಕ್ಕಣಾರ್ಯನು ಲಕ್ಕಣನಂತೆಯೇ ದೊಡ್ಡ ಅಧಿಕಾರಿಯಾಗಿ ರಾಜಾಸ್ಥಾನದಲ್ಲಿ ಹೆಸರ್ಪಡೆದಿದ್ದನು.

ಈ ಕಾಲದಲ್ಲಿ ಅದೃಶ್ಯಕವಿ, ಕುಮಾರಬಂಕನಾಥ, ಮಹಾಲಿಂಗದೇವ, ಕಲ್ಲುಮಠದಪ್ರಭುದೇವ, ಜಕ್ಕಣಾರ್ಯ, ಚಾಮರಸ ಇವರೆಲ್ಲರೂ ಲಕ್ಕಣಾಮಾತ್ಯನ ಸಮಕಾಲದ ಕವಿಗಳಾಗಿ ಅಭಿವೃದ್ಧಿಗೆ ಬಂದಿದ್ದಾರೆ.

ವಿರೂಪಾಕ್ಷಪಂಡಿತನು ಚನ್ನಬಸವಪುರಾಣವನ್ನು ಬರೆದಿರುವನು. ಇವನೂ ಪ್ರಬಲಕವಿ. ಇವನ ಕವಿತಾಶೈಲಿಯು ಹೆಸರಾದುದು. ಅಲ್ಲದೆ ಚನ್ನಬಸವಪುರಾಣವು ಇತಿಹಾಸಕ್ಕೂ ಹೆಸರಾದ ಗ್ರಂಥ. ಸಾಹಿತ್ಯದ ಜೊತೆಗೆ ಇತಿಹಾಸಕ್ಕೂ ಗಮನಕೊಟ್ಟ ಕವಿಪುಂಗವರಲ್ಲಿ ವಿರೂಪಾಕ್ಷ ಪಂಡಿತ ನೊಬ್ಬನು ಕರ್ಣಾಟಕ ದೇಶದಲ್ಲಿ ಜೈಮಿನಿಭಾರತದಂತೆಯೇ ಚನ್ನಬಸವಪುರಾಣವಾದರೂ ಹೆಚ್ಚು ಬಳಕೆಯಲ್ಲಿದೆ. ಕನ್ನಡಿಗರಲ್ಲಿ ಕೆಲವರು ಜೈಮಿನಿಭಾರತಕ್ಕೂ ಇದಕ್ಕೂ ಹೋಲಿಕೆಮಾಡಿ ಲಕ್ಷ್ಮೀಶನಪ್ರಾಶಸ್ತ್ಯವನ್ನು ಹೆಚ್ಚಿಸಹೋಗುವರು. ಇದು ನಿರಾಧಾರವಾದುದು. ನಾವು ಲಕ್ಷ್ಮೀಶನನ್ನು ಘಟ್ಟಿಗ ಕವಿಯೆಂದು ಒಪ್ಪಿಕೊಂಡಿರುವೆವು. ಆದರೆ ವಿರೂಪಾಕ್ಷಪಂಡಿತನು ಯಾವುದರಲ್ಲಿಯೂ ಲಕ್ಷ್ಮೀಶನಿಗೆ ಕಡಿಮೆಯಾದವ

ನಲ್ಲ. ಕವಿತಾಲಾಲಿತ್ಯದಲ್ಲಿ ಇಬ್ಬರೂ ಸಮಾನರು. ವಿಷಯಸಂಗ್ರಹದಲ್ಲಿ ಚನ್ನಬಸವಪುರಾಣಕರ್ತೃವು ಲಕ್ಷ್ಮೀಶನಿಗಿಂತ ಎಷ್ಟೋಪಾಲು ಮೇಲಾಗಿರುವನು.

ಗುಬ್ಬಿಯಮಲ್ಲಣಾರ್ಯನು ಬಲ್ಲಿದನಾದ ಕಬ್ಬಿಗನೂ ಬಹು ಶೃತನೂ ಒಳ್ಳೆಯ ಪೌರಾಣಿಕನೂ ಆಗಿದ್ದನು. ರಾಜಶೇಖರವಿಳಾಸ ಮಹಾಕಾವ್ಯಕ್ಕೆ ಮಲ್ಲಣಾರ್ಯನ ಭಾವಚಿಂತಾರತ್ನವೇ ಮೂಲಗ್ರಂಥವಾಗಿದೆ ವೀರಶೈವ ಮಹಾಪುರಾಣವಾದರೂ ಕರ್ಣಾಟಕ ವಿಪುಲಗ್ರಂಥಗಳಲ್ಲಿ ಒಂದಾಗಿದೆ. ಇವನ ಗ್ರಂಥಗಳು ಪ್ರೌಢಶೈಲಿಯಿಂದಲೂ ವಿಷಯಬಾಹುಳ್ಯದಿಂದಲೂ ತುಂಬಿವೆ.

ಸಿಂಗಿರಾಜನು ಮಲಬಸವಪುರಾಣವನ್ನು ಬರೆದಿರುವನು. ಇತಿಹಾಸಜ್ಞರಿಗೆ ಇವನ ಗ್ರಂಥವು ಬಹು ಸಹಕಾರಿಯಾಗಿದೆ.

ಬೊಮ್ಮರಸಕವಿ ಈ ಹೆಸರಿನ ಮೂರುಮಂದಿ ಕವಿಗಳಿದ್ದಾರೆ. ಇವರೆಲ್ಲರೂ ವೀರಶೈವರು ಇವರಾದರೂ ಸಾಹಿತ್ಯದಲ್ಲಿ ಬಲ್ಲಿದರಾಗಿರುವರು. ಬೊಮ್ಮರಸನ ಸೌಂದರಪುರಾಣವು ಅತ್ಯಂತ ಸುಂದರಕಾವ್ಯವಾಗಿದೆ. ಇವನ ಶೈಲಿಯು ಬಹು ಮನೋಹರ. ರೇವಣಸಿದ್ಧ ಪುರಾಣವನ್ನು ಬರೆದವನು ಚತುರ್ಮುಖ ಬೊಮ್ಮರಸನು. ಇವನು ವೀರಶೈವ ಮತಾಚಾರ್ಯನಾದ ರೇಣುಕನ ವಿಷಯವನ್ನು ಪುರಾಣದೃಷ್ಟಿಯಿಂದ ಬರೆದಿರುವನು. ಕಥಾವಸ್ತುವು ಸಂಸ್ಕೃತದಲ್ಲಿರುವ ರೇಣುಕವಿಜಯ ಚಂಪುವಿನಲ್ಲಿರುವುದಕ್ಕಿಂತಲೂ ಭಿನ್ನವಾಗಿದೆ. ಸುಮಾರು ಸಾವಿರ ವರ್ಷಗಳಹಿಂದೆ ಸಿದ್ಧನಾಥಶಿವಾಚಾರ್ಯನು ಬರೆದ ರೇಣುಕ ವಿಜಯವು ರೇಣುಕರನಿಜವಾದ ವಿಷಯವನ್ನು ತಿಳಿಸುತ್ತದೆ. ಬೊಮ್ಮರಸನಿಗೆ ಈ ಗ್ರಂಥದ ಪರಿಚಯವಿದ್ದಂತೆ ಕಾಣುವದಿಲ್ಲ. ಚತುರ್ಮುಖಬೊಮ್ಮರಸನು ಸಮರ್ಥಕವಿ. ಇವನ ಶೈಲಿಯೂ ಭಾಷೆಯೂ ಉತ್ತಮವಾದುವು. ಆದರೆ ರೇವಣಸಿದ್ಧೇಶನ ವಿಷಯದಲ್ಲಿ ಇವನು ಹೇಳಿರುವ ಕಥಾವಸ್ತುವು ಅಸಮಂಜಸವೂ ಸದೋಷಯುಕ್ತವೂ ಇತಿಹಾಸವಿರೋಧವೂ ಆಗಿದೆ.

ಚತುರಾಸ್ಯನಿಘಂಟುಕಾರನೊಬ್ಬನಿರುವನು. ಇವನನ್ನು ಚತುರಾಸ್ಯ ಬೊಮ್ಮರಸನೆಂದು ಕರೆವರು.

ವಿರಕ್ತತೋಂಟದಾರ್ಯನು ಘನವಿದ್ವಾಂಸನೂ ಮಹಾಕವಿಯೂ ವಿರಕ್ತಶಿಖಾಮಣಿಯೂ ಆಗಿರುವನು. ತೋಂಟದ ಸಿದ್ಧೇಶ್ವರಪುರಾಣ, ಪಾಲ್ಕುರಿಕೆ ಸೋಮೇಶ್ವರಪುರಾಣ, ಕರ್ಣಾಟಕ ಶಬ್ದಮಂಜರಿಗಳನ್ನು ಬರೆದಿದ್ದಾನೆ. ತೋಂಟದಸಿದ್ಧಲಿಂಗೇಶ, ಪಾಲ್ಕುರಿಕೆ ಸೋಮನಾಥ ಇವರುಗಳ ವಿಷಯದಲ್ಲಿ ಪುರಾಣಗಳನ್ನು ಬರೆದು ಈ ಕವಿಯು ಸಾಹಿತ್ಯಕ್ಕೆ ಮಹೋಪಕಾರಮಾಡಿದ್ದಾನೆ. ಕರ್ಣಾಟಕ ಶಬ್ದಮಂಜರಿಯೆಂಬ ನಿಘಂಟನ್ನು ಬರೆದವನೂ ಈತನೇ. ಇವಲ್ಲದೆ ಗುರುಬಸವಕವಿಯ ಮನೋವಿಜಯ, ಮಗ್ಗೆಯಮಾಯಿದೇವನಶತಕತ್ರಯ, ಇವುಗಳಿಗೆ ವ್ಯಾಖ್ಯಾನವನ್ನೂ ಬರೆದು ತನ್ನ ಅಪಾರವಾದಶಕ್ತಿಯನ್ನೂ ಲೋಕೋಪಕಾರಕ್ಕೆ ಉಪಯೋಗಿಸಿರುವನು.

ಸಿದ್ಧನಂಜೇಶಃ—ಈತನು ರಾಘವಾಂಕಚರಿತ್ರೆ, ಗುರುರಾಜಚಾರಿತ್ರ, ಭಾವರತ್ನಾಭರಣ, ಬಸವಶತಕಇವುಗಳನ್ನು ಬರೆದಿದ್ದಾನೆ. ಇವನರಾಘವಾಂಕಚರಿತೆ, ಗುರುರಾಜಚರಿತೆಗಳು ಅತ್ಯಂತ ಮಹತ್ವದ ಕಾವ್ಯಗಳಾಗಿವೆ. ಇವನ ಗ್ರಂಥಗಳಲ್ಲಿ ವೀರಶೈವಮತವಿಷಯವೂ ಅನೇಕ ಐತಿಹಾಸಿಕ ವಿಷಯವೂ ಲಭಿಸುವುವು. ಕವಿಚರಿತೆಗೆ ಇವನ ಗ್ರಂಥಗಳೂ ಬಹಳ ಸಹಾಯಕವಾಗಿವೆಯೆಂಬುದನ್ನೂ ಅವರೇ ಒಪ್ಪಿಕೊಂಡಿದ್ದಾರೆ. ಇವನು ಐತಿಹಾಸಜ್ಞನೂ ಸಾಹಿತ್ಯಕೋವಿದನೂ ವೀರಶೈವಮತಶಾಸ್ತ್ರನಿಷ್ಣಾತನೂ ಮಹಾಕವಿಯೂ ಆಗಿರುವನು.

ಗುರುಬಸವಕವಿಃ—ವೀರಶೈವವೇದಾಂತಪ್ರತಿಪಾದಕವಾದ ಗ್ರಂಥಗಳನ್ನು ಕನ್ನಡಿಗರಿಗೆ ಅರುಹಲು ಈತನು ಶಿವಯೋಗಾಂಗಭೂಷಣ, ಮನೋವಿಜಯ, ಸದ್ಗುರುರಹಸ್ಯ, ಕಲ್ಯಾಣೇಶ್ವರ, ಸ್ವಸ್ವರೂಪಾಮೃತ, ಅವಧೂತಗೀತೆ, ವೃಷಭಗೀತೆ, ಎಂಬ ಏಳುಗ್ರಂಥಗಳನ್ನು ಬರೆದು ಕನ್ನಡ ಸಾಹಿತ್ಯಕ್ಕೆ ಮಹೋಪಕಾರಮಾಡಿರುವನು.

ಗುರುಲಿಂಗವಿಭುವಿನ ಭಿಕ್ಷಾಟನಚರಿತೆಯೂ, ನೀಲಕಂಠಾಚಾರ್ಯನ ಆರಾಧ್ಯಚರಿತೆಯೂ, ಚೇರಮಾಂಕನು ಬರೆದ ಚೇರಮಕಾವ್ಯವೂ, ಚನ್ನಬಸವಾಂಕನು ಬರೆದ ಮಹದೇವಿಯಕ್ಕನಪುರಾಣವೂ, ಕರ್ಣಾಟಕ ಷಟ್ಪದೀಕಾವ್ಯಗಳಲ್ಲಿ ಗಣನೀಯವಾಗಿವೆ.

ಶತಕಗಳುಃ—ವೀರಶೈವಕವಿಗಳು ಷಟ್ಪದೀಕಾವ್ಯಗಳಲ್ಲಿ ಹೆಸರಾಗಿರುವಂತೆಯೇ ಶತಕಗಳಲ್ಲಿಯೂ ಹೆಸರಾಗಿರುವರು. ಮಹಾಕವಿ ಹರಿಹರ

ದೇವರು ಹೆಸರಾದ ಶತಕಕಾರನಾಗಿರುವರು. ಮಗ್ಗೆಯಮಾಯಿದೇವನು ವೀರಶೈವಮತಸ್ವರೂಪವನ್ನು ಬೋಧಿಸುವಮೂರುಶತಕಗಳನ್ನು ಬರೆದಿರುವನು. ಶಂಕರದೇವನು ಗುರುಶಂಕರೇಶ್ವರಶತಕವನ್ನು ಬರೆದಿರುವನು. ಇದು ಅತ್ಯಂತ ವೈರಾಗ್ಯಬೋಧಕ ಶತಕವೆನಿಸಿವೆ.

ವೀರಶೈವಕವಿಗಳಲ್ಲಿ ಸುಪ್ರಸಿದ್ಧನಾದ ವೀರಭದ್ರರಾಜನು ಪಾರ್ಶ್ವಶೀವಲ್ಲಭಶತಕ, ಉಮಾಮಹೇಶ್ವರಶತಕ, ಪ್ರಾಣನಾಥಶತಕ, ಶ್ರೀಕಂಠಸೋಮೇಶ್ವರಶತಕ, ಕಂದಶತಕವೆಂಬ ವಿಖ್ಯಾತವಾದ ಐದುಶತಕಗಳನ್ನು ಬರೆದಿದ್ದಾನೆ. ಚನ್ನಮಲ್ಲನು ಶಿವಮಹಿಮಾಶತಕವನ್ನೂ ನಿಜಲಿಂಗಕವಿಯು ನಿಜಲಿಂಗಶತಕವನ್ನೂ ಬರೆದಿದ್ದಾರೆ. ಕವಿಕೋಂಟದಾರ್ಯನ ನಿರಂಜನಶತಕ ಸಿದ್ಧಲಿಂಗಶತಕಗಳೂ ಕನ್ನಡನಾಡಿನಲ್ಲಿ ಮಹೋಪಕಾರಮಾಡುತ್ತಿವೆ. ಪುಲಿಗೆರೆಯ ಸೋಮಕವಿಯ ಸೋಮೇಶ್ವರಶತಕವಂತೂ ಪ್ರತಿಯೊಬ್ಬ ಕನ್ನಡಿಗನಪ್ರೇಮಕ್ಕೂ ಪಾತ್ರವಾದುದಾಗಿದೆ. ಇದಕ್ಕಿಂತ ಸ್ವಾರಸ್ಯವಾದಶತಕವನ್ನು ಕನ್ನಡಿಗರು ಇನ್ನೆಲ್ಲಿಯೂ ಕಾಣಲಾರರು. ಮೊನ್ನೆಮೊನ್ನೆ ಆಗಿ ಹೋದ ಅಭಿನವ ಕಾಲಿದಾಸ ಬಸವಪ್ಪಶಾಸ್ತ್ರಿಗಳು ಸಂಸ್ಕೃತ ಭರ್ತೃಹರಿಶತಕತ್ರಯವನ್ನು ಕನ್ನಡಕ್ಕೆ ಪರಿವರ್ತಿಸಿದ್ದಾರೆ. ಮಾಗಡಿಯ ಕೈ. ವೀರಪ್ಪಶಾಸ್ತ್ರಿಗಳು ಸಿದ್ಧಲಿಂಗೇಶ್ವರ ಶತಕವನ್ನು ಬರೆದಿದ್ದಾರೆ. ಆಸ್ಥಾನ ಮಹಾವಿದ್ವಾನ ಕರ್ಣಾಟಕ ಭಾಷಾರತ್ನ ಪಿ. ಆರ್. ಕರಿಬಸವಶಾಸ್ತ್ರಿಗಳು ನಯಶತಕವನ್ನು ಬರೆದಿದ್ದಾರೆ.

ಹರಿಹರನಕಾಲದಿಂದ ಇಂದಿನವರೆಗೆ ವೀರಶೈವಕವಿಗಳು ನೂರಾರು ಶತಕಗಳನ್ನು ಬರೆದು ಕನ್ನಡ ಸಾಹಿತ್ಯಸೇವೆ ಮಾಡಿದ್ದಾರೆ.

ಜನಜೀವನದಲ್ಲಿ ಭಕ್ತಿಜ್ಞಾನ ವೈರಾಗ್ಯಗಳನ್ನೂ ಲೋಕನೀತಿಗಳನ್ನೂ ಸುಲಭವಾಗಿ ಪ್ರಚಾರಮಾಡಲು ಶತಕಗಳು ಬಹು ಸಹಕಾರಿಯಾಗಿವೆ. ಸ್ತ್ರೀಬಾಲರಾದಿಯಾಗಿ ಪಂಡಿತಪಾಮರರಾದಿಯಾಗಿ ಶತಕಗಳನ್ನು ಸುಲಭವಾಗಿ ಕಂಠಗತಮಾಡಿಕೊಳ್ಳುವರು. ಮಹಾಕಾವ್ಯಗಳನ್ನೋದಿ ನೀತಿಸಂಗ್ರಹಮಾಡುವುದಕ್ಕಿಂತ ನೀತಿಗಳಸಂತೆಯಂತಿರುವ ಶತಕಗಳ ಪರಿಚಯವು ಜನರಿಗೆ ಸುಲಭಸಾಧ್ಯವಾಗಿರುವುದು. ಇವುಗಳ ಶೈಲಿಯೂ ವಿಷಯಪ್ರತಿಪಾದನವೂ ರಸಿಕಜನಾಲ್ಹಾದಕವಾಗಿರುವುವು. ಸೋಮೇಶ್ವರಶತಕದಷ್ಟು ಪ್ರಚಾರವಾದ ಮಹಾಕಾವ್ಯವಾವುದನ್ನೂ ಕರ್ಣಾಟಕ ಸಾಹಿತ್ಯದಲ್ಲಿ ನಾವು ಕಂಡರಿಯೆವು.

ವೀರಶೈವ ಕವಿಗಳು ಸಾಹಿತ್ಯಸೇವೆಯಲ್ಲಿ ಹೊಸ ಹೊಸಮಾರ್ಗಗಳನ್ನು ಇತರ ವರ್ಗದ ಕವಿಗಳಿಗಿಂತಲೂ ಮೊದ ಮೊದಲೇ ಅರಿತು ಅದರಲ್ಲಿ ತಮ್ಮ ನೈಪುಣ್ಯವನ್ನು ತೋರಿಸಿ ಸಾಹಿತ್ಯವನ್ನು ವಿಸ್ತರಿಸಿದರೆಂಬುವದಕ್ಕೆ ಷಟ್ಪದೀ ಗ್ರಂಥ ಪ್ರಚಾರದಂತೆಯೇ ಶತಕ ಗ್ರಂಥಪ್ರಚಾರವೂ ಒಂದಾಗಿದೆಯೆಂದು ಹಿಂದೆ ಮುಂದೆ ನೋಡದೆ ಹೇಳಬಹುದು.

ಚಂಪೂಕಾವ್ಯಗಳು:—ವೀರಶೈವಕವಿಗಳ ಕಾವ್ಯಮಾರ್ಗದ ಮರ್ಮವನ್ನರಿಯದ ಅಥವಾ ಇವರ ಉತ್ಕರ್ಷೆಯನ್ನು ಸಹಿಸದ ಕೆಲವರು ಚಂಪೂ ಗ್ರಂಥಗಳ ನಿರ್ಮಾಣವು ಕಷ್ಟಸಾಧ್ಯವಾದುದರಿಂದ ವೀರಶೈವರು ಹೊಸ ಮಾರ್ಗದ ಷಟ್ಪದೀ ಶೈಲಿಯನ್ನು ಹಿಡಿದರು ಎಂದು ಹೇಳುವದುಂಟು. ಸ್ವಲ್ಪ ಯೋಚನೆ ಮಾಡಿದವರಿಗೆ ಇದರ ನಿಜಾಂಶವು ವ್ಯಕ್ತವಾಗುವುದು.

ಷಟ್ಪದೀಗ್ರಂಥಗಳಲ್ಲಿ ಹೆಸರಾದ ರಾಘವಾಂಕ, ಪದ್ಮಣಾಂಕ, ವಿರೂಪಾಕ್ಷಪಂಡಿತ, ಚಾಮರಸ, ಚಿಕ್ಕನಂಜಾರ್ಯ ವಿರಕ್ತತೋಂಟದಾರ್ಯ, ಗುಬ್ಬಿಮಲ್ಲಣಾರ್ಯ ಮೊದಲಾದವರು ಯಾವ ಚಂಪೂಗ್ರಂಥಕರ್ತೃವಿಗೆ ತಾನೆ ಕಡಿಮೆಯಾಗಿರುವರು. ಬಹುದಿವಸದಿಂದಬಂದ ಶೈಲಿಯನ್ನು ಬದಲಾಯಿಸಿ ಸರ್ವಸಮ್ಮಂಜಿಸವಾಗುವಂತೆ ಹೊಸ ಶೈಲಿಯನ್ನು ಕಲ್ಪಿಸುವ ಕವಿಗೆ ಎಂತಹ ಬುದ್ಧಿ ಶಕ್ತಿಯೂ ಸಮಯಸ್ಫೂರ್ತಿಯೂ ಅವಶ್ಯಕ. ಇಂತಹ ಗಾಳಿಮಾತುಗಳನ್ನು ಹೋಗಲಾಡಿಸುವುದಕ್ಕಾಗಿಯೇ ವೀರಶೈವಕವಿಗಳಲ್ಲಿ ಕೆಲವರು ಉದ್ದಾಮ ಚಂಪೂಗ್ರಂಥಗಳನ್ನು ಬರೆದಿರುವರು.

ಹರಿಹರದೇವನು ಇಚ್ಛಾಪೂರ್ವಕ ಗಿರಿಜಾಕಲ್ಯಾಣವನ್ನು ಸುಲಭವಾಗಿ ಬರೆದನು. ಸೋಮರಾಜನು ಮತ್ತೆ ಕ್ಲಿಷ್ಟತಮವಾದ ಜೈನ ಶೈಲಿಗೇ ತಿರುಗಿದನು. ಸುರಂಗನೂ ಸೋಮರಾಜನಂತೆಯೇ ಅನುವರ್ತಿಸಿದನು.

ವೀರಶೈವ ಚಂಪೂಗ್ರಂಥಕಾರರಲ್ಲಿ ಹೆಸರಾದ ಹರಿಹರ, ಸೋಮರಾಜರ ವಿಷಯವನ್ನು ಹಿಂದೆಯೇ ಹೇಳಿದೆ. ಸುರಂಗ ಕವಿಯು ತ್ರಿಷಷ್ಟಿ ಪುರಾತನ ಚರಿತೆಯನ್ನು ಬರೆದಿರುವನು. ಇವನಾದರೂ ಸಾಹಿತ್ಯದಲ್ಲಿ ಬಲ್ಲಿದನು. ದ್ರಾವಿಡ ಭಾಷೆಯಲ್ಲಿದ್ದ ಈ ಗ್ರಂಥವನ್ನು ಕರ್ಣಾಟಕ ಭಾಷೆಗೆ ಪರಿವರ್ತಿಸಿ ಮಹೋಪಕಾರ ಮಾಡಿರುವನು.

ವೀರಭದ್ರರಾಜ ಇವನಾದರೂ ಉದ್ದಾಮ ಕವಿಯಾಗಿರುವನು. ವೀರಭದ್ರ ವಿಜಯವನ್ನು ಬರೆದಿದ್ದಾನೆ. ಶೈಲಿ ಪ್ರೌಢ. ವರ್ಣನೆಯಲ್ಲಿ

ನಿಪುಣ. ಇವನ ಬಂಧವು ಲಲಿತವಾಗಿಯೂ ಹೃದಯಂಗಮವಾಗಿಯೂ ಇದೆಯೆಂದು ರಸಿಕರು ಹೊಗಳುವರು.

ಮುರಿಗೆಯ ದೇಶಿಕೇಂದ್ರ ಈತನು ಸುಪ್ರಸಿದ್ಧ ಚಂಪೂ ಗ್ರಂಥಕಾರನು. ರಾಜೇಂದ್ರ ವಿಜಯವನ್ನು ಬರೆದಿದ್ದಾನೆ. ಸಿದ್ಧಲಿಂಗ ಶಿವಯೋಗಿಯು ಭೈರವೇಶ್ವರ ಪುರಾಣವನ್ನು ಚಂಪೂಶೈಲಿಯಲ್ಲಿ ಬರೆದಿರುವನು. ಚಂದ್ರ ಕವಿಯು ವಿರೂಪಾಕ್ಷ ಸ್ಥಾನವೆಂಬ ಚಂಪೂಪ್ರಬಂಧವೊಂದನ್ನೂ ಗುರುಮೂರ್ತಿ ಶಂಕರ ಶತಕವನ್ನೂ ಬರೆದಿರುವನು. ಇವನ ಕಾವ್ಯವು ಪಂಪ ರನ್ನರ ಕಾವ್ಯಗಳಿಗಿಂತಲೂ ಯಾವ ವಿಧದಲ್ಲಿಯೂ ಕಡಿಮೆ ಇಲ್ಲವೆಂಬುದನ್ನು ಸಾಹಿತ್ಯ ಪ್ರೇಮಿಗಳು ಮನಗಾಣಬಹುದು.

ವೀರಶೈವ ಕವಿಗಳಲ್ಲೇ ಅಲ್ಲ. ಅಖಿಲ ಕರ್ಣಾಟಕ ಕವಿಗಳಲ್ಲಿಯೇ ಷಡಕ್ಷರದೇವನು ಅತ್ಯಂತ ಉನ್ನತನು. ಇವನು ಸಂಸ್ಕೃತದಲ್ಲಿಯೂ ಅದ್ವಿತೀಯ ಕವಿಯಾಗಿರುವನು. ಇವನು ಬರೆದ ರಾಜಶೇಖರ ವಿಳಾಸ, ಬಸವರಾಜ ವಿಜಯ, ಶಬರಶಂಕರ ವಿಳಾಸವೆಂಬ ಗ್ರಂಥ ತ್ರಯಗಳು ಮೂರು ಲೋಕಕ್ಕೆ ಸಾಟಿಯಾಗುವುವು. ಈತನ ವರ್ಣನಾವೈಖರಿಯೂ, ರಸಭಾವ ಪ್ರತಿಪಾದನೆಯೂ, ಮಂಜುಲಶಬ್ದ ಪ್ರಯೋಗವೂ, ನಿರರ್ಗಳವಾದ ಕವಿತಾ ಲಹರಿಯೂ ಎಂದೂ ಎಲ್ಲೂ ಕೇಳದ ಯುಕ್ತಿರಾಶಿಗಳೂ ಇವನ ಸಾಮರ್ಥ್ಯಕ್ಕೆ ನಿದರ್ಶನವಾಗಿವೆ.

ಷಡಕ್ಷರ ದೇವನಕಾವ್ಯಗಳನ್ನು ಓದದೆ ಯಾವಗ್ರಂಥಗಳನ್ನು ಓದಿದರೂ ಕನ್ನಡ ಸಾಹಿತ್ಯವು ಪೂರ್ಣವಾಗಲಾರದು. ಮೊನ್ನೆ ತಾನೇಆಗಿ ಹೋದ ಅಭಿನವಕಾಲಿದಾಸ ಬಸವಪ್ಪಶಾಸ್ತ್ರಿಗಳು ಬರೆದಿರುವ ದಮಯಂತಿ ಪರಿಣಯವೆಂಬ ಚಂಪೂಗ್ರಂಥವೂ ಕನ್ನಡ ಸಾಹಿತ್ಯದಲ್ಲಿ ಉತ್ತಮ ಸ್ಥಾನವನ್ನಲಂಕರಿಸಿದೆ. ರಾಜಶೇಖರವಿಳಾಸವು ಕರ್ಣಾಟಕ ಚಂಪುಗ್ರಂಥರಾಶಿಯಲ್ಲಿ ಶಿರೋಮಣಿಪ್ರಾಯವೆಂದು ಎಲ್ಲ ಕನ್ನಡಿಗರೂ ಏಕಕಂಠದಿಂದ ಒಪ್ಪುತ್ತಿದ್ದಾರೆ. ಹೀಗೆವೀರಶೈವಕವಿಗಳು ಚಂಪೂಕಾವ್ಯನಿರ್ಮಾಣದಲ್ಲಿಯೂ ತಮ್ಮ ಗೌರವವನ್ನು ಉಳಿಸಿಕೊಂಡಿರುವರು.

ವಚನಕಾರರು:— ಕರ್ಣಾಟಕ ಸಾಹಿತ್ಯಕ್ಕೆ ವಚನಗಳು ಭೂಷಣಾಸ್ಪದವಾಗಿವೆ. ವೀರಶೈವರ ಕನ್ನಡ ಸಾಹಿತ್ಯದ ವೈಶಿಷ್ಟ್ಯವೆಂದರೆ ವಚನ ಶಾಸ್ತ್ರವೇ. ಕನ್ನಡ ನುಡಿಯಲ್ಲಿ ವಚನಗಳನ್ನು ಪ್ರಚಾರಕ್ಕೆ ತಂದ

ವನು ಬಸವೇಶನು. ಬಸವೇಶನಿಗಿಂತಲೂ ಪೂರ್ವದಲ್ಲಿ ಒಬ್ಬಿಬ್ಬ ವಚನಕಾರರಿದ್ದರೂ ವಚನಗಳು ನಿಜವಾದ ಜೀವಕಳೆಯಿಂದ ಹೊರಸೂಸಿದುದು ಬಸವನ ಕಾಲದಲ್ಲಿಯೇ. ವಚನ ಪ್ರಸರಣೆಯು ವೀರಶೈವ ಮತ ಪ್ರಚಾರಕ್ಕೇ ಅಲ್ಲದೆ ಕನ್ನಡ ನುಡಿಯ ಪ್ರಸರಣೆಗೂ ಸಹಕಾರಿಯಾಯಿತು. ಬಸವ, ಚನ್ನಬಸವ, ಅಲ್ಲಮ, ಸಿದ್ಧರಾಮ, ಘನಲಿಂಗಿ, ಅಂಬಿಗರ ಚೌಡಯ್ಯ, ಮಾಚಿದೇವ, ಅಕ್ಕಮಹಾದೇವಿ ಮೊದಲಾದ ಶರಣರ ವಚನಗಳು ಕನ್ನಡ ನಾಡಿನ ಉಪನಿಷತ್ತುಗಳಾಗಿವೆ. ಉಪನಿಷತ್ತಿನಲ್ಲಿರುವ ಮಹದ್ವಿಷಯಗಳನ್ನೆಲ್ಲಾ ಶರಣರ ಪ್ರಾಸಾದಿಕವಾಣಿಯಲ್ಲಿ ಹೊರಹೊಮ್ಮಿದ ವಚನಗಳು ಸುಲಭವಾಗಿ ತಿಳಿಸುವುವು.

ಶಿವಶರಣರ ವಚನಗಳಲ್ಲಿ ವ್ಯಾಕರಣ ನಿಯಮಗಳೂ ಪ್ರಾಯೇಣ ದೂರವಾಗಿವೆ. ಇದು ಸ್ವಚ್ಛಂದವಾಗಿ ಬೆಳೆದ ಅರಣ್ಯದ ಗಿಡಗಳಂತಿವೆ. ವಚನ ಶಾಸ್ತ್ರಗಳಲ್ಲಿ ವ್ಯಾಕರಣ ನಿಯಮವನ್ನು ಕೇಳಹೋಗುವುದು ಚಿನ್ನದಲ್ಲಿ ಸೌರಭವನ್ನು ಇಚ್ಛಿಸಿದಂತೆಯೇ ಸರಿ. ಶರಣರ ನಿರಪೇಕ್ಷ ಪ್ರತಿಭೆಯಿಂದ ಹಾಡಿದ ವಚನಗಳು ಗುಣಕ್ಕೂ ಸದಾಚಾರಕ್ಕೂ ಪ್ರಾಶಸ್ತ್ಯಕೊಡುತ್ತವೆ. ಇವು ಮುಖಸ್ತುತಿಯ ಮಾತಿನ ಮಾಲೆಯಲ್ಲ. ಆತ್ಮಪೂರ್ವಕ ಹೊರಹೊರಟ ಸತ್ಯಪ್ರಿಯ ಖಂಡಿತೋಕ್ತಿಗಳು.

ಭರತಖಂಡದ ಇನ್ನಾವಸಾಹಿತ್ಯದಲ್ಲಿಯೂ ಇಲ್ಲದ ವಚನರಚನೆಯನ್ನು ಕನ್ನಡದಲ್ಲಿ ವೀರಶೈವಕವಿಗಳು ಮಾಡಿರುವರು. ಕನ್ನಡ ನಾಡಿನಲ್ಲಿ ಸಾವಿರಾರು ಮಂದಿ ಹೆಸರಾದ ವಚನಕಾರರಾಗಿರುವರು. ನಶಿಸಿ ಹೋಗುತ್ತಿದ್ದ ವಚನಶಾಸ್ತ್ರವನ್ನು ಉದ್ಧರಿಸಲು ಮನದಂದು ಅಹರ್ನಿಶಿ ಕಷ್ಟಪಡುತ್ತಿರುವ ವಿಜಾಪುರದ ರಾ. ರಾ. ರಾವಸಾಹೇಬ ಫ. ಗು. ಹಳಕಟ್ಟಿ ವಕೀಲರು ಶರಣರ ಕೃಪೆಗೂ ಕನ್ನಡಿಗರ ಕೃತಜ್ಞತೆಗೂ ಪಾತ್ರರಾಗಿರುವರು.

ವಚನಪ್ರಚಾರದಲ್ಲಿ ವೀರಶೈವಶರಣೆಯರೆನಿಸಿದ ಯೋಷಾಮಣಿಯರೂ ಶ್ರಮವಹಿಸಿರುವರು. ಅಕ್ಕಮಹದೇವಿ, ಬಿಜ್ಜಮಹದೇವಿ, ನೀಲಲೋಚನೆ, ಮುಕ್ತಾಯಕ್ಕ ಮೊದಲಾದ ವೀರಶೈವ ಸ್ತ್ರೀಯರು ವಚನ ಶಾಸ್ತ್ರವನ್ನು ಬರೆದು ಸಾಹಿತ್ಯಸೇವೆ ಮಾಡಿರುವರು.

**ಲೋಕನೀತಿಗ್ರಂಥಗಳು**:— ವೀರಶೈವಕವಿಗಳಲ್ಲಿ ಕೆಲವರು ಲೋಕಕ್ಕೆ ನೀತಿಬೋಧೆಯಾಗುವಂತಹ ಮಹತ್ತರ ಗ್ರಂಥಗಳನ್ನು ಬರೆದಿರುವರು.

ಇವುಗಳೂ ವಚನಗಳಂತೆ ವೈಲಕ್ಷಣ್ಯವಾಗಿಯೂ ಶತಕಗಳಂತೆ ಕಂಠ ಪಾಠಮಾಡಲು ಯೋಗ್ಯವಾಗಿಯೂ ಇವೆ. ಇಂತಹ ಗ್ರಂಥಕಾರರಲ್ಲಿ ಸರ್ವಜ್ಞ, ಸಿದ್ಧಕವಿ, ಇವರು ಮುಖ್ಯರು. ಸರ್ವಜ್ಞನಂತಹವಿಲಕ್ಷಣ ಹಾಗೂ ಉದಾತ್ತಭಾವನೆಯುಳ್ಳ ಕವಿಯೊಬ್ಬನನ್ನು ಕನ್ನಡಿಗರು ಇನ್ನೆಂದಿಗೂ ಕಾಣಲಾರರು. ಸರ್ವಜ್ಞವಚನಗಳು ಓದುಗಬ್ಬವೆಂದು ಹೇಳುವುದಕ್ಕಿಂತ ಹಾಡುಗಬ್ಬವೆಂದು ಹೇಳುವುದೇ ಸಮಂಜಸವಾಗಿದೆ. ಸರ್ವಜ್ಞನೀತಿಗಳು ಎಲ್ಲ ಕನ್ನಡಿಗರಿಗೂ ಆಪ್ಯಾಯಮಾನವಾಗಿವೆ. ಕಲಿಸಿದ್ದನ ನೀತಿಗಳಾದರೂ ಅತ್ಯಂತ ಲೋಕೋಪಕಾರಕಗಳಾಗಿವೆ. ಹೀಗೆ ವೀರಶೈವ ಕವಿಗಳು ನಾನಾಮುಖವಾಗಿ ತಮ್ಮ ಪ್ರತಿಭೆಯನ್ನು ಪ್ರಸರಿಸಿರುವುದನ್ನು ಸಾಹಿತ್ಯದಲ್ಲಿ ಕಾಣಬಹುದು.

ಹಾಡುಗಬ್ಬಗಳು:—ಕನ್ನಡ ಹಾಡುಗಬ್ಬನಿರ್ಮಾಣಕರಲ್ಲಿ ಪುರಂದರದಾಸ, ಕನಕದಾಸರು ಹೆಸರಾದವರಷ್ಟೆ. ಸ್ವಲ್ಪವಿಚಾರಮಾಡಿನೋಡಿದರೆ ಇವರಿಗೂ ವೀರಶೈವಕವಿಗಳೇ ಮಾರ್ಗದರ್ಶಕವೆಂದು ತೋರುತ್ತದೆ. ನಿಜಗುಣಶಿವಯೋಗಿಯು ಪುರಂದರದಾಸನಿಗಿಂತಲೂ ಪೂರ್ವಿಕನೆಂದು ನಿಷ್ಪಕ್ಷಪಾತಿಗಳಾದ ಕವಿಚರಿತೆಗಾರರೇ ನಿರ್ಣಯಿಸಿದ್ದಾರೆ. ನಿಜಗುಣಯೋಗಿಯ ಕವಿತಾಶೈಲಿಯು ಬಹು ಪ್ರಾಚೀನವಾಗಿಯೂ ತೋರುತ್ತದೆ.

ಕನ್ನಡ ಸಾಹಿತ್ಯದಲ್ಲಿ ಷಟ್ಪದಿ, ವಚನ ಇವುಗಳಿಗೆ ಹೇಗೆ ವೀರಶೈವರು ಮೊದಲಿಗರೋ ಹಾಡುಗಬ್ಬಕ್ಕೂ ಹಾಗೆಯೇ. ನಿಜಗುಣ ಶಿವಯೋಗಿಗಳು ಕನ್ನಡ ಭಾಷೆಯಲ್ಲಿ ಎಲ್ಲರಿಗಿಂತಲೂ ಮೊದಲಿನವರು. ಇವರು ಕೈವಲ್ಯ ಪದ್ಧತಿ ಎಂಬ ಹಾಡುಗಬ್ಬವನ್ನು ಬರೆದಿದ್ದಾರೆ. ನಿಜಗುಣಯೋಗಿಯಂತಹ ಬಹು ಶೃತನು ಕನ್ನಡ ಸಾಹಿತ್ಯದಲ್ಲಿ ಮತ್ತೊಬ್ಬನಿಲ್ಲ. ಈತನು ಮೊದಲು ರಾಜನಾಗಿದ್ದವನು ಸಂಸಾರದಲ್ಲಿ ಜಿಹಾಸೆ ಹುಟ್ಟಿ ವಿರಕ್ತನಾದಂತೆ ಇವನ ಚರಿತ್ರೆಯಿಂದ ತಿಳಿದು ಬರುವುದು. ಈತನು ಘನವಿದ್ವಾಂಸನೂ, ಯೋಗಿಶೇಖರನೂ, ಮಹಾಕವಿಯೂ ಆಗಿರುವನು. ಕನ್ನಡ ಭಾಷೆಯಲ್ಲಿ ಈತನು ಕೈವಲ್ಯಪದ್ಧತಿ, ಅನುಭವಸಾರ, ಅನುಭವಬೋಧೆ, ಪರಮಾರ್ಥ ಗೀತೆ, ವಿವೇಕ ಚಿಂತಾಮಣಿ, ಪರಮಾನುಭವ ಪ್ರಕಾಶಿಕೆ, ಪುರಾತನರ ತ್ರಿವಿಧಿ ಇವುಗಳನ್ನೂ ಬರೆದಿರುವನು. ಸಂಸ್ಕೃತದಲ್ಲಿ ಆತ್ಮತರ್ಕಚಿಂತಾಮಣಿಯನ್ನೂ ಬರೆದಂತೆ ಐತಿಹ್ಯವಿದೆ. ಈ ಸಂಸ್ಕೃತ ಗ್ರಂಥವಿನ್ನೂ ಸಿಕ್ಕಿಲ್ಲ.

ನಿಜಗುಣನ ವಿವೇಕ ಚಿಂತಾಮಣಿಯು ಕನ್ನಡ ಭಾಷೆಗೆ ವಸ್ತು ಕೋಶವೆನ್ನಬಹುದು. ಮಿಕ್ಕ ಗ್ರಂಥಗಳು ವೇದಾಂತಬೋಧಕಗಳಾಗಿವೆ. ಹೀಗೆ ನಿಜಗುಣ ಶಿವಯೋಗಿಯು ನಾನಾ ಮುಖವಾಗಿ ಸಾಹಿತ್ಯಕ್ಕೆ ಉಪಕಾರ ಮಾಡಿರುವುದಲ್ಲದೆ ಕನ್ನಡದಲ್ಲಿ ಮೊಟ್ಟಮೊದಲು ಹಾಡು ಗಬ್ಬವನ್ನು ಬರೆದು ಕರ್ಣಾಟಕ ಪ್ರಪಂಚಕ್ಕೆ ಮಹದುಪಕಾರ ಮಾಡಿ ರುವನು.

ನಿಜಗುಣಯೋಗಿಯಾದಮೇಲೆ ಮುಪ್ಪಿನ ಷಡಕ್ಷರಸ್ವಾಮಿಯು ನಮ್ಮ ದೃಷ್ಟಿಗೆ ಬೀಳುವನು. ಈತನು ಕೈವಲ್ಯಪದ್ಧತಿ, ತಿರುಕನಸ್ವಪ್ನ ಷಡಕ್ಷರವಚನ ಇವುಗಳನ್ನು ಬರೆದಿರುವನು. ಈತನ ವಚನಗಳೂ ನಿಜ ಗುಣಯೋಗಿಯ ವಚನಗಳಂತೆ ಭಕ್ತಿಜ್ಞಾನ ವೈರಾಗ್ಯಬೋಧಕಗಳಾಗಿವೆ.

ಸರ್ಪಭೂಷಣ ಶಿವಯೋಗಿ ಈತನೂ ನಿಜಗುಣಯೋಗಿಯಂತೆಯೇ ಕೈವಲ್ಯ ಕಲ್ಪವಲ್ಲರಿ ಎಂಬ ಹಾಡುಗಬ್ಬವನ್ನು ಬರೆದು ಹೆಸರಾಗಿರು ವನು. ಈತನನ್ನು ರೂಢಿಯಲ್ಲಿ ಸಪ್ಪಣ್ಣಪ್ಪನೆಂದು ಜನರು ಕರೆವರು. ಈತನವಚನಗಳು ಭಾವಗರ್ಭಿತವಾಗಿಯೂ, ಮಾರ್ಮಿಕವಾಗಿಯೂ, ಚಿತ್ತಾ ಕರ್ಷಕವಾಗಿಯೂ ಇವೆ.

ಮತುಕೂರುನಂಜುಂಡ ಶಿವಯೋಗಿ ಈತನು ಮಾರಕಂಡೇಯ ವಿಳಾಸ, ಸುರಾಭಾಂಡೇಶ್ವರ ಆಖ್ಯಾನ, ಅಟ ವೀರ್ಶ್ವರ ಗುರುಭಕ್ತಿಸಾರ, ಅಟ ವೀಶ್ವರಗೀತಾಮಂಜರಿ ಇವುಗಳನ್ನು ಬರೆದಿದ್ದಾನೆ. ಅಟವೀಶ್ವರ ಗೀತಾ ಮಂಜರಿಯು ಹಾಡುಗಬ್ಬವಾಗಿದೆ.

ಹೀಗೆ ವೀರಶೈವಕವಿಗಳು ಜನಸಾಮಾನ್ಯಕ್ಕೆಲ್ಲ ಧರ್ಮಬೋಧೆಮಾ ಡಲು ಸಹಾಯಕವಾದ ಹಾಡುಗಳನ್ನು ನಿರ್ಮಿಸಿ ಸಾಹಿತ್ಯದಲ್ಲಿ ವಿಖ್ಯಾ ತರಾಗಿರುವರು.

ವಿಶೇಷಗ್ರಂಥಗಳು:— ಸಾಹಿತ್ಯಕ್ಕೆ ಜೀವಾಳಪ್ರಾಯವಾದ ವ್ಯಾಕರಣ ಛಂದಸ್ಸುಗಳನ್ನು ನಿರ್ಮಿಸಿದ ಕೀರ್ತಿಗೆ ಜೈನರೇ ಬಹುಮಟ್ಟಿಗೆ ಬಾಧ್ಯರು. ಆದರೆ ವೀರಶೈವಕವಿಗಳಲ್ಲಿ ಕೆಲವರು ನಿಘಂಟುಮೊದಲಾದವುಗಳನ್ನೂ ನಿರ್ಮಿಸಿರುವರು. ವಿರಕ್ತತೋಂಟದಾರ್ಯನು ಕರ್ಣಾಟಕ ಶಬ್ದಮಂಜರಿ ಯನ್ನೂ, ಲಿಂಗಮಂತ್ರಿಯು ಕಬ್ಬಿಗರಕೈಪಿಡಿಯನ್ನೂ, ಚತುರಾಸ್ಯ ಬೊಮ್ಮ

ರಸನು ಚತುರಾಸ್ಯನಿಘಂಟನ್ನೂ, ನಿರ್ಮಿಸಿರುವರು. ಇವರೆಲ್ಲರೂ ಲಿಂಗವಂತಕವಿಗಳೇ.

ನಂದಿಯ ಛಂದಸ್ಸು:—ಇದನ್ನು ಬರೆದವನು ನಂದಿಯೆಂಬವೀರಶೈವಕವಿಯು. ಇವರಲ್ಲದೆ ಇತರ ಒಬ್ಬಿಬ್ಬರು ಕಾಮಶಾಸ್ತ್ರಮೊದಲಾದವುಗಳಲ್ಲಿಯೂ ಗ್ರಂಥರಚನೆಮಾಡಿದುದಾಗಿ ತಿಳಿದುಬರುವುದು.

ಸಾಂಗತ್ಯ ತ್ರಿವಿದಿ:—ಸಾಂಗತ್ಯದಲ್ಲಿ ವೀರಶೈವಕವಿಗಳು ವಿಪುಲವಾಗಿ ಗ್ರಂಥನಿರ್ಮಾಣಮಾಡಿದ್ದಾರೆ. ಕಿಕ್ಕೇರಿಯಾರಾಧ್ಯನಂಜುಂಡನು ಭೈರವೇಶ್ವರಕಾವ್ಯವನ್ನೂ, ಕವಿಬಸವನು ರೇವಣಸಾಂಗತ್ಯವನ್ನೂ, ಸಿದ್ಧಕವಿಯು ಸಿರುಮನಸಾಂಗತ್ಯವನ್ನೂ ಬರೆದು ಹೆಸರಾಗಿದ್ದಾರೆ. ಇನ್ನೂ ಹಲವು ಸಾಂಗತ್ಯಗ್ರಂಥಗಳಿವೆ.

ತ್ರಿವಿದಿ:—ಸರ್ವಜ್ಞ, ನಿಜಗುಣಮೊದಲಾದವರು ತ್ರಿವಿದಿಗಳನ್ನು ಬರೆದಿದ್ದಾರೆ. ಇವು ಸಾಂಗತ್ಯದಂತೆಯೇ ಓದಲಿಕ್ಕೆ ಇಂಪಾಗಿರುತ್ತವೆ.

ರಗಳೆ:—ಹರಿಹರ, ಪದ್ಮರಸರು ರಘಟಾರೂಪನಾಗಿ ಗ್ರಂಥನಿರ್ಮಾಣಮಾಡಿದ ವಿಷಯವು ಹಿಂದೆಯೇ ಬಂದಿದೆ. ನಿಜಗುಣರೂಪರಮಾರ್ಥಗೀತೆಯನ್ನು ರಗಳೆಯಲ್ಲಿಯೇ ಬರೆದಿರುವರು. ರಗಳೆಯಲ್ಲಿ ಗ್ರಂಥರಚನೆಮಾಡಲು ಧೈರ್ಯವಾಗಿ ಮುಂದೆ ಬಂದವನು ಹರಿಹರದೇವನು. ಇದನ್ನು ಪುಷ್ಟೀಕರಿಸಿದವನು ಪದ್ಮರಸನು. ಇದನ್ನು ಪ್ರಚಾರಕ್ಕೆ ತಂದವರು ವೀರಶೈವಕವಿಗಳು.

ರಗಳೆಯನ್ನು ಪಂಪ, ರನ್ನ, ಮೊದಲಾದ ಪುರಾತನಕವಿಗಳು ತಮ್ಮ ಕಾವ್ಯಮಧ್ಯಸೇರಿಸಿರುವುದು ದಿಟ. ಆದರೆ ಯಾವಜೈನಕವಿಯೂ ರಗಳೆಯಲ್ಲಿಯೇ ಕಾವ್ಯನಿರ್ಮಾಣಮಾಡಲು ಸಾಹಸಪಟ್ಟಂತೆ ಇದುವರೆಗಿನ ಶೋಧನದಲ್ಲಿ ಕಂಡುಬಂದಿಲ್ಲ.

ರಗಳೆಗಳು ಓದುವುದಕ್ಕೂ ಕೇಳುವುದಕ್ಕೂ ಬಹು ಮನೋಹರವಾಗಿರುತ್ತವೆಯೆಂದು ಅನುಭವದಿಂದ ಹೇಳಬಹುದು.

ಯಕ್ಷಗಾನ:—ಯಕ್ಷಗಾನ ಕಾವ್ಯಗಳನ್ನು ಸುಧಾರಿಸಿದ ಜನರು ಅಷ್ಟಾಗಿ ಪ್ರೀತಿಸುವುದಿಲ್ಲವಾದರೂ ಹಳ್ಳಿಗಾಡಿನ ಜನರಲ್ಲಿ ಇವು ಬಹು ಫಲಕಾರಿಯಾಗಿವೆ. ಚಂಪುಷಟ್ಪದೀಕಾವ್ಯಗಳಿಗಿಂತಲೂ ಇವು ಸುಲಭವಾ

ಗಿಯೂ ಸುಲಭವಾದ ರಾಗತಾಳದ ಪದಗಳಿಂದಕೂಡಿಯೂ ಇರುವುವು. ಇವು ಬಹುಮಟ್ಟಿಗೆ ಪಾಮರರಂಜಕಗಳಾದ ಗ್ರಂಥಗಳು. ಜನಸಾಮಾನ್ಯದಲ್ಲಿ ತಿಳುವಳಿಕೆಯನ್ನು ಹರಡಲು ಬಹು ಸಹಕಾರಿಯಾಗಿವೆ. ಈ ತತ್ತ್ವವನ್ನರಿತು ವೀರಶೈವಕವಿಗಳಲ್ಲಿ ಕೆಲವರು ಯಕ್ಷಗಾನಕಾವ್ಯಗಳನ್ನೂ ಬರೆದು ಜನಸೇವೆಮಾಡಿದ್ದಾರೆ. ಹೊಸಕೋಟೆ ನಂದಪ್ಪದೇವನೆಂಬುವನು ಯಕ್ಷಗಾನ ಪ್ರಭುಚರಿತ್ರೆಯನ್ನೂ, ಬೆಂಗಳೂರು ತಿಪ್ಪಶೆಟ್ಟರ ಮಠದಮಹಂತದೇಶಿಕೇಂದ್ರಸ್ವಾಮಿಗಳು ನಳಚರಿತ್ರೆ, ಹರಿಶ್ಚಂದ್ರಚರಿತ್ರೆ, ಶಿವಶರಣಾಮೃತ ಇವುಗಳನ್ನೂ ಯಕ್ಷಗಾನದಲ್ಲಿ ಬರೆದಿರುವರು. ಚನ್ನಪ್ಪದೇವನೆಂಬುವನು ಬರೆದಿರುವ ಶರಣಲೀಲಾಮೃತವು ವೀರಶೈವರಲ್ಲಿ ಬಹಳ ಪ್ರಚಾರದಲ್ಲಿದೆ. ಮತುಕೂರು ನಂಜುಂಡ ಶಿವಯೋಗಿಗಳೂ ಸುರಾಭಾಂಡೇಶ್ವರಕಥೆ, ಮಾರಿಕಂಡೇಯವಿಳಾಸ ಇವುಗಳನ್ನು ಯಕ್ಷಗಾನದಲ್ಲಿಯೇ ಬರೆದಿದ್ದಾರೆ. ನಮಗೆ ಪರಿಚಯವಿಲ್ಲದ ಎಷ್ಟೋಮಂದಿ ಕವಿಗಳು ಯಕ್ಷಗಾನ ಕಾವ್ಯನಿರ್ಮ್ಮಾಣದಲ್ಲಿ ಹೆಸರ್ಪಡೆದಿದ್ದಾರೆ.

ನಾಟಕಗಳು:— ಪ್ರತಿಯೊಂದು ಭಾಷೆಯಲ್ಲಿಯೂ ನಾಟಕಗಳು ಸಾಹಿತ್ಯದ ಶಿರಃಪ್ರಾಯವಾಗಿರುವುವು. ಸಂಸ್ಕೃತ ಸಾಹಿತ್ಯದಲ್ಲಿ ನಾಟಕಗಳು ಬಹು ಹೆಸರಾಗಿರುವುವು. ಕಾಲಿದಾಸ, ಭವಭೂತಿ, ಹರ್ಷ, ದಂಡಿ ಮೊದಲಾದವರೆಲ್ಲ ನಾಟಕಗಳನ್ನು ಬರೆವುದರಲ್ಲಿ ನಿಪುಣರು. ಕರ್ಣಾಟಕ ಭಾಷೆಯಲ್ಲಿ ನಾಟಕಗಳು ಬಹು ಅಪರೂಪ. ಹಿಂದಿನ ಸಾಹಿತ್ಯದಲ್ಲಿ ಸಿಂಗಳಾರ್ಯನ ಮಿತ್ರವಿಂದ ಗೋವಿಂದ ವೆಂಬುದೊಂದನ್ನು ಬಿಟ್ಟರೆ ಮತ್ತಾವುದೂ ದೃಷ್ಟಿಗೋಚರವಾಗುವುದಿಲ್ಲ. ಕೈ. ಚಾಮರಾಜೇಂದ್ರ ಒಡೆಯರವರ ಕಾಲದ ವರೆಗೆ ಕನ್ನಡದಲ್ಲಿ ನಾಟಕಗಳನ್ನು ಬರೆಯಲಿಕ್ಕೆ ಹಾಗೂ ಬರೆಸಲಿಕ್ಕೆ ಯಾರೂ ಪ್ರಯತ್ನಪಟ್ಟಂತೆ ಕಂಡು ಬರುವುದಿಲ್ಲ. ಕನ್ನಡ ಭಾಷೆಯಲ್ಲಿ ಸುಧಾರಿಸಿದ ರೀತಿಯಿಂದ ನಾಟಕಗಳನ್ನು ಬರೆದವರಲ್ಲಿ ಅಭಿನವ ಕಾಲಿದಾಸ ಬಸವಪ್ಪ ಶಾಸ್ತ್ರಿಗಳೇ ಮೊದಲಿಗರು. ಇವರು ಶಾಕುಂತಲ, ವಿಕ್ರಮೋರ್ವಶೀಯ, ಚಂಡಕೌಶಿಕ ರತ್ನಾವಳಿ, ಶೂರಸೇನಚರಿತೆ (ಇದು ಷೇಕ್ಸಪಿಯರ್ ಕವಿಯ ಒಥೆಲೋ ನಾಟಕದ ಭಾಷಾಂತರ) ಉತ್ತರ ರಾಮ ಚರಿತ್ರೆ, ಮಾಲತೀ ಮಾಧವ ಎಂಬ ಏಳು ನಾಟಕಗಳನ್ನು ಸಂಸ್ಕೃತ ಮತ್ತು ಇಂಗ್ಲಿಷ ಭಾಷೆಗಳಿಂದ

ಭಾಷಾಂತರಿಸಿವರು. ಶೂರ ಸೇನ ಚರಿತೆಯೊಂದು ಹೊರತು ಉಳಿದು ವೆಲ್ಲಾ ಸಂಸ್ಕೃತ ಭಾಷಾಂತರಗಳು.

ಬಸವಪ್ಪ ಶಾಸ್ತ್ರಿಗಳು ದಮಯಂತೀ ಸ್ವಯಂವರ, ಸಾವಿತ್ರೀ ಚರಿತ್ರೆ, ಕನ್ನಡ ಭರ್ತೃಹರಿಸುಭಾಷಿತ, ನೀತಿಸಾರ ಸಂಗ್ರಹ, ದಕ್ಷಿಣಾ ಮೂರ್ತ್ಯಷ್ಟಕ, ಶಂಕರ ಶತಕ, ತ್ರಿಷಷ್ಠಿಗಣನುತಿ (ಸಂಸ್ಕೃತ) ಪಾರ್ವತೀ ನಕ್ಷತ್ರಮಾಲೆ (ಸಂಸ್ಕೃತ) ಆರ್ಯಾಶತಕ, ಅಷ್ಟಮೂರ್ತಿತನಯಾಷ್ಟಕ, ಅಂಬಾಷೋಡಶಮಂಜರಿ, (ಸಂಸ್ಕೃತ) ಬಸವೇಶಾಷ್ಟಕ, ಸದಾಶಿವಾಷ್ಟಕ, ಇಷ್ಟು ಗ್ರಂಥಗಳನ್ನು ಬರೆದಿರುವರು. ರೇಣುಕ ವಿಜಯುವನ್ನು ಒಂದೆ ರಡು ಆಶ್ವಾಸವನ್ನು ಬರೆವುದರಲ್ಲಿಯೇ ಇವರುಶಿವಲೋಕವನ್ನೈದಿದರು.

ವೀರಶೈವ ಮಹಾಕವಿಗಳಾದ ಇವರು ಕನ್ನಡ ವಾಙ್ಮಯದಲ್ಲಿ ನಾಟ ಕಗಳನ್ನು ಬರೆದಿರುವರು. ಇವರ ಶಾಕುಂತಲಿಕ್ಕಿರುವಷ್ಟು ಮರ್ಯಾದೆ ಮತ್ತಾರ ನಾಟಕಕ್ಕೂ ಇಲ್ಲದಿರುವುದೇ ಇದಕ್ಕೆ ಸಾಕ್ಷಿಯಾಗಿದೆ. ಮಿ॥ ರೈಸ್ ಸಾಹೇಬರೂ ಇವರನ್ನು ಬಹುವಾಗಿ ಹೊಗಳಿದ್ದಾರೆ. ಉತ್ತರ ಕರ್ನಾ ಟಕ ಪ್ರಾಂತದಲ್ಲಿ ಕರ್ನಾಟಕ ಕವಿಚಂದ್ರ ಶ್ರೀಕಂಠ ಶಾಸ್ತ್ರಿಗಳು ಪ್ರಭು ವಿಜಯ ನಾಟಕ, ರೇಣುಕವಿಜಯ ನಾಟಕ ಇವುಗಳನ್ನು ಬರೆದಿದ್ದಾರೆ. ಹೀಗೆ ವೀರಶೈವ ಕವಿಗಳು ನಾಟಕಗಳನ್ನು ಬರೆವುದರಲ್ಲಿಯೂ ತಮ್ಮ ಜಾಣ್ಮೆಯನ್ನು ತೋರಿಸಿರುವರು.

ಸಾಂಕೇತಿಕ ಶಬ್ದಗಳುಃ—ವೀರಶೈವ ಕವಿಗಳು ಜೈನ, ಬ್ರಾಹ್ಮಣ ಗ್ರಂಥಗಳಲ್ಲಿಲ್ಲದಿರುವ ಕೆಲವು ವಿಲಕ್ಷಣ ಶಬ್ದಗಳನ್ನೂ ಜಾಣ್ನುಡಿಗಳನ್ನೂ ಪ್ರಯೋಗ ಮಾಡಿದ್ದಾರೆ.

ಪವಾಡ, ಶರಣಾರ್ಥಿ, ವಿರಕ್ತ, ಶಿವಾನುಭವ, ಅಷ್ಟಾವರಣ, ಷಟ್ಸ್ಥಲ, ಪಂಚಾಚಾರ, ಕಾಯಕ, ಶಿವದಾನ, ಭಿಕ್ಷೆ, ಜಂಗಮ, ದಾಸೋಹ, ಪ್ರಮಥರು ಮೊದಲಾದುವು ವೀರಶೈವ ಶಬ್ದಗಳು.

ಸದ್ಯದ ಸ್ಥಿತಿಃ—ಪೂರ್ವದಲ್ಲಿದ್ದಂತೆ ವೀರಶೈವರಲ್ಲಿ ಈಗ ಕವಿಗಳೂ ಪಂಡಿತರೂ, ವ್ಯಾಖ್ಯಾನಕಾರರೂ, ಪೌರಾಣಿಕರೂ ಕಂಡು ಬರುವುದಿಲ್ಲ. ಮೋಡಗಳ ಮಧ್ಯಕಾಣುವ ನಕ್ಷತ್ರಗಳಂತೆ ಅಲ್ಲೊಬ್ಬರು ಇಲ್ಲೊಬ್ಬರು ಕಾಣುವರು. ಆಧುನಿಕ ವೀರಶೈವ ಕವಿಗಳಲ್ಲಿ ಕೈ. ಬಸವಪ್ಪ ಶಾಸ್ತ್ರಿಗಳು,

ಕೈ. ಚಂದ್ರಶೇಖರ ಶಾಸ್ತ್ರಿಗಳು ಕೈ. ವೀರಪ್ಪ ಶಾಸ್ತ್ರಿಗಳು, ಮೊದಲಾದವರು ಮುಖ್ಯರು.

ಆಧುನಿಕ ಸಾಹಿತ್ಯಸೇವಕರಲ್ಲಿ ಆಸ್ಥಾನ ಮಹಾವಿದ್ವಾನ ಕರ್ಣಾಟಕ ಭಾಷಾರತ್ನ ಪಿ. ಆರ್. ಕರಿಬಸವ ಶಾಸ್ತ್ರಿಗಳು, ಕೈ. ಆಸ್ಥಾನ ವಿದ್ವಾನ ಎನ್. ಆರ್. ಕರಿಬಸವ ಶಾಸ್ತ್ರಿಗಳು, ಕೈ. ಶ್ರೀ ಮಲ್ಲಾರಾಧ್ಯರು, ಕೈ. ಬಸವಲಿಂಗ ಶಾಸ್ತ್ರಿಗಳು, ಶ್ರೀ ಚರಮೂರ್ತಿ ಹೊಸಮಠದ ಬಸವಲಿಂಗ ಸ್ವಾಮಿಗಳು, ಕೈ. ಶ್ರೀ ನಂ. ಶಿವಪ್ಪ ಶಾಸ್ತ್ರಿಗಳು, ಶ್ರೀ ಬಿ. ಬಸವಾರಾಧ್ಯರು, ಶ್ರೀ ಹರ್ಡೇಕರ ಮಂಜಪ್ಪನವರು, ಶ್ರೀ ರಾವಸಾಹೇಬ ಪಿ. ಜಿ. ಹಳಕಟ್ಟಿ ವಕೀಲರು ಮೊದಲಾದ ವೀರಶೈವ ಮಹನೀಯರು ವಿಖ್ಯಾತರಾಗಿದ್ದಾರೆ.

೧೨ನೇ ಶತಮಾನದಿಂದ ಇಂದಿನ ವರೆಗೂ ವೀರಶೈವರು ಕನ್ನಡ ಸಾಹಿತ್ಯದಲ್ಲಿ ಮಾಡಿದ ಸೇವೆಯ ವಿಷಯವನ್ನು ಕುರಿತು ಯಥಾಮತಿ ಬರೆದಿರುವೆನು.

ಸಾವಿರಾರು ಮಂದಿ ಕವಿಗಳ ವಿಷಯವನ್ನು ಲೇಖನವೊಂದರಲ್ಲಿ ಬರೆಯಲು ಪ್ರಯತ್ನ ಮಾಡುವುದು ಸಾಹಸವಾದ ಮಾತಾಗಿರುವುದು. ಹರಿಹರ, ನಿಜಗುಣ, ಷಡಕ್ಷರಿ, ಬಸವಪ್ಪ ಶಾಸ್ತ್ರಿ ಮೊದಲಾದ ಕವಿಗಳೊಬ್ಬರ ವಿಷಯವಾಗಿಯೇ ಒಂದೊಂದು ಕೈಪಿಡಿಯನ್ನು ಬರೆಯುವಷ್ಟು ವಿಷಯವಿದೆಯೆಂಬುದನ್ನು ಸಾಹಿತ್ಯವಿದರೆಲ್ಲರೂ ಬಲ್ಲರು. ಅಂದ ಮೇಲೆ ಲೇಖನವೊಂದರಲ್ಲಿ ಎಷ್ಟು ತಾನೆ ಸಂಗ್ರಹಿಸಲಾದೀತು?

ಸಾರಾಂಶಃ—ವೀರಶೈವ ಕವಿಗಳು ಮೊದಲಿಂದಲೂ ಸಾಹಿತ್ಯದಲ್ಲಿ ಅಪಾರ ಕಾರ್ಯ ಮಾಡಿದ್ದಾರೆ. ಪ್ರಕೃತದಲ್ಲಿ ವೀರಶೈವರು ಸಾಹಿತ್ಯದಲ್ಲಿ ಬಹು ಮಟ್ಟಿಗೆ ಪರಾಙ್ಮುಖಿಗಳಾಗಿದ್ದಾರೆ. ಶ್ರೀ ರಾ॥ ಸಾ॥ ಹಳಕಟ್ಟಿಯವರಂತಹ ಸಾಹಿತ್ಯ ಧುರೀಣರು ನೂರಾರು ಮಂದಿಯಾದರೆ ವೀರಶೈವ ಸಾಹಿತ್ಯವು ಉತ್ತಮ ಸ್ಥಿತಿಗೆ ಬರಬಹುದು. ಇರುವ ಒಬ್ಬರಿಗೇ ಪ್ರೋತ್ಸಾಹವಿಲ್ಲವೆಂದಮೇಲೆ ಹೊಸದಾಗಿ ಹುಟ್ಟುವುದೆಲ್ಲಿ?

ನಿಷ್ಪಕ್ಷಪಾತಿಗಳಾದ ಕೆಲವು ಬ್ರಾಹ್ಮಣವಿದ್ವಾಂಸರು ವೀರಶೈವಸಾಹಿತ್ಯಕ್ಕೆ ಮಹೋಪಕಾರಮಾಡಿರುವುದನ್ನು ಯಾರೂ ಮರೆಯರು. ಇಂತಹವರಲ್ಲಿ ಶ್ರೀ. ರಾವ ಬಹಾದ್ದೂರ ಪ್ರಾಕ್ತನವಿಮರ್ಶನ ವಿಚಕ್ಷಣ ಆರ್.

ನರಸಿಂಹಾಚಾರ್ಯರು ಎಂ. ಎ. ಶ್ರೈ. ಎಸ್. ಜಿ. ನರಸಿಂಹಾಚಾರ್ಯರು. ಮ. ರಾಮಾನುಜಯ್ಯಂಗಾರರು. ಶ್ರೀ ವಿದ್ಯಾಭೂಷಣ ನಾರಾಯಣಶಾಸ್ತ್ರಿ ಎಂ. ಎ. ಯವರು ಶ್ರೀ. ಎಂ. ಆರ್. ಶ್ರೀನಿವಾಸಮೂರ್ತಿ ಬಿ. ಎ. ಯವರು ಇತ್ಯಾದಿ ಮಹನೀಯರು ವೀರಶೈವಸಾಹಿತ್ಯಕ್ಕೆ ನಾನಾಮುಖ ದಿಂದ ಸಹಾಯಮಾಡಿ ಪುಣ್ಯಭಾಗಿಗಳಾಗಿರುವರು.

ವೀರಶೈವಜನಾಂಗವು ಇನ್ನಾದರೂ ತಮ್ಮ ಸಾಹಿತ್ಯದ ಕಡೆಗೆ ಒಲು ಮೆದೋರಿ ಮನದಣಿಯ ಸೇವೆಮಾಡಿ ಕೃತಾರ್ಥರಾಗಲಿ. ಸಾಹಿತ್ಯವು ಜನಾಂಗದ ಪ್ರಾಣಬಿಂಬಸ್ವರೂಪವೆಂಬ ಜಾಣ್ಣುಡಿಯನ್ನು ಮರೆಯದಿ ರಲಿ. ಅಸ್ತು. ತಥಾಸ್ತು.

**ಓಂ. ಶಾಂತಿ ಶ್ಶಾಂತಿ ಶ್ಶಾಂತಿಃ**



# ವೇದವಾಙ್ಮಯ.

ಲೇಖಕರು — ಶ್ರೀ ಶಂಭುಲಿಂಗ ಶಿವಾಚಾರ್ಯ ಹಿರಿಯಮಠ ವಿಜಾಪುರ.

---

## ಋಗ್ವೇದ

[× ಸಕಲದೇವತಾನಾಂ ಧರ್ಮಸ್ಯ ಪರಬ್ರಹ್ಮತತ್ವಸ್ಯಚ ಪ್ರತಿಪಾದಕಂ ವೇದಮನುಚ್ಚಾರ್ಯ ಪರನಿಂದಾನೃತ ಕಲಹಾದಿ ಹೇತುಂ ಲೌಕಿಕೀಂ ವಾರ್ತಾಂ ಸರ್ವತ್ರೋಚ್ಚಾರಯತಃ ಸ್ಪಷ್ಟಏವವಾಚ ಭಾಗ್ಯಾಭಾವಃ। —'ಸರ್ವ ದೇವತೆಗಳನ್ನೂ ಧರ್ಮವನ್ನೂ ಪರಬ್ರಹ್ಮ ತತ್ವವನ್ನೂ ಪ್ರತಿಪಾದಿಸುವದಾದ ವೇದವನ್ನು ಉಚ್ಚರಿಸದೆ ಹೆರವರನ್ನು ಹೀಯಾಳಿಸುವಿಕೆ, ಸುಳ್ಳು ಹೇಳುವಿಕೆ, ತುಂಟತನ ಮುಂತಾದ ಕೆಟ್ಟ ನಡತೆಗೆ ಕಾರಣವಾದ ವ್ಯವಹಾರದ ಸುದ್ದಿಯನ್ನು ಯಾವಾಗಲೂ ನುಡಿಯುತ್ತಿರುವಾತನ ನಾಲಗೆಯಲ್ಲಿ ಐಸಿರಿ ಇಲ್ಲದಿರುವಿಕೆಯು ಒಡೆದು ಕಾಣಬರುವುದು.']

ಋಕ್, ಎಂಬ ಶಬ್ದದಿಂದ 'ಕಾಂತಿಯು' ಮೊದಲಾದ ಅರ್ಥಗಳು ಅರಿಯಲ್ಪಡುವುವು. ಯಾಸ್ಕ ಮುಂತಾದವರು—'ಅರ್ಚನ್ತಿ ಅನಯಾ ಇತಿ ಋಕ್, ಎಂದು ಹೇಳುವ ಮೇರೆಗೆ ಪ್ರಕೃತದಲ್ಲಿ, ದೇವತೆಗಳ ಸ್ತೋತ್ರ ರೂಪವಾದ ಮಂತ್ರಕ್ಕೆ 'ಋಕ್', ಎಂಬ ಸಂಜ್ಞೆ. ಅದು ಕಾರಣವೇ, ಋಚೆಗಳು ಎಂದರೆ ಸ್ತುತಿಗಳು ಎಂಬುದಾಗಿ ಹೇಳುವುದು ಬಳಕೆಯಲ್ಲಿದೆ. ಸರ್ವಾನುಕ್ರಮಣಿ ವೃ*ತ್ತಿಯಲ್ಲಿ—' ಋಗಂಶ ಬಾಹುಲ್ಯಾ

---

× ವೇದಾರ್ಥ ಪ್ರಕಾಶದ ಋಗ್ಭಾಷ್ಯ ಭೂಮಿಕೆಯಲ್ಲಿ.

× ಋಗ್ವೇದಕ್ಕೆ ಕಾತ್ಯಾಯನ ಪ್ರಣೀತ ಸರ್ವಾನುಕ್ರಮಣಿಯೂ ಶೌನಕ ಪ್ರಣೀತ ಅನುವಾಕಾನುಕ್ರಮಣಿಯೂ ಇರುವುವು. ಅವುಗಳಿಗೆ ವೃತ್ತಿರೂಪ ಟೀಕೆಗಳೂ ಇವೆ. ಆ ಟೀಕೆಗಳ ಕೊನೆಯಲ್ಲಿ ಟೀಕಾಕಾರನು ತನ್ನ ಹೆಸರನ್ನು ಷಡ್ಗುರು ಶಿಷ್ಯನೆಂದು ತಿಳಿಸುವನು. ಆತನ ಆರುಮಂದಿ ಗುರುಗಳು, ೧. ವಿನಾಯಕ ೨. ತ್ರಿಶೂಲಾಂಕ ೩. ಗೋವಿಂದ ೪. ಸೂರ್ಯ ೫. ವ್ಯಾಸ ೬. ಶಿವಯೋಗಿ ಎಂಬುದಾಗಿ ಹೇಳಲ್ಪಡುವರು.

ದೃಗ್ವೇದಃ’ ಎಂದು ಹೇಳಲ್ಪಡುವಂತೆ, ಬೊಧನೆಯ ಸಂಹಿತೆಯ ಮಂತ್ರಗಳಲ್ಲಿ ದೇವತೆಗಳ ಸ್ತೋತ್ರ ರೂಪವಾದವುಗಳೇ ವಿಶೇಷವಾಗಿರುವದರಿಂದ ‘ಋಗಂಶವೇ ಅಧಿಕವಾಗುಳ್ಳದ್ದು ಋಗ್ವೇದ’ ವೆನಿಸುವದು. ಈ ವೇದದಲ್ಲಿ ಒಟ್ಟಿಗೆ ೧೦೫೮೦ ಮಂತ್ರಗಳಿವೆ. ಈ ಮಂತ್ರಗಳ ವಿಭಾಗವು ಎರಡು ತೆರನಾಗಿ ಮಾಡಲ್ಪಟ್ಟಿದೆ. ಅದು ಈ ಕೆಳಗೆ ಉದಾಹರಿಸಿದೆ.

ಒಬ್ಬ ಋಷಿಯೇ ಒಂದು ದೇವತೆಯನ್ನಾಗಲಿ ಒಂದಕ್ಕಿಂತ ಹೆಚ್ಚು ದೇವತೆಗಳನ್ನಾಗಲಿ ಯಾವ ಮಂತ್ರದಲ್ಲಿ ಸ್ತುತಿಸಿರುವನೊ ಆ ಮಂತ್ರದ ಸಮುದಾಯಕ್ಕೆ ‘ಸೂಕ್ತ’ ಎಂಬ ಸಂಜ್ಞೆ. ಈಗ ಸಿಗುವ ಶಾಕಲಶಾಖಾನುಸಾರವಾಗಿ ಋಗ್ವೇದ ಸೂಕ್ತಗಳ ಸಂಖ್ಯೆಯು ೧೦೧೭ ಉಂಟು. ಎಂಟನೆಯ ಮಂಡಲದಲ್ಲಿ ಖಿಲಾಂಶಗಳೆಂದು ತಿಳಿಯಬರುವ ೧೧ ವಾಲಖಿಲ್ಯ ಸೂಕ್ತಗಳನ್ನೂ ಕೂಡಿಸಿದರೆ ೧೦೨೮ ಸೂಕ್ತಗಳಾಗುವುವು. ಸೂಕ್ತದಲ್ಲಿ ಸಾಧಾರಣವಾಗಿ ಮಂತ್ರಗಳ ಸಂಖ್ಯೆಯು ೯-೧೦ ಉಂಟು. ಆದರೆ ಕೆಲವು ಸೂಕ್ತಗಳಲ್ಲಿ ಮೂರು ಮಂತ್ರಗಳೂ ಬೇರೆ ಕೆಲವು ಸೂಕ್ತಗಳಲ್ಲಿ ೪-೫ ಮಂತ್ರಗಳೂ ಕಾಣಬರುವುವು. ಕೆಲವು ಸೂಕ್ತಗಳ ಒಂದು ಗುಂಪಿಗೆ ಅನುವಾಕವೆಂಬ ಸಂಜ್ಞೆ. ಇಂತಹ ಅನುವಾಕಗಳು ಒಟ್ಟಿಗೆ ೮೫ ಇವೆ. ಕೆಲವು ಅನುವಾಕಗಳು ಕೂಡಿದ್ದುದಕ್ಕೆ ಮಂಡಲವೆನ್ನುವರು. ಇಂತಹ ಮಂಡಲಗಳು ೧೦ ಇರುವುವು. ಋಙ್ಮಂತ್ರಗಳ–ಮಂಡಲ, ಅನುವಾಕ, ಸೂಕ್ತ ಎಂಬ ಈ ತೆರದ ವರ್ಗೀಕರಣವು ಬಹಳ ಪ್ರಾಚೀನವಾದುದೆಂದು ತಿಳಿಯಲ್ಪಡುವುದು. ಋಕ್ ಸಂಹಿತೆಯನ್ನು ಮತ್ತೊಂದು ವಿಧವಾಗಿ ವಿಂಗಡಿಸಿರುವುದು. ಹೇಗೆಂದರೆ—ಮಂತ್ರ ಸಂಖ್ಯೆಯು ೧೦೫೮೦ ಎಂದು ಮೇಲೆ ಹೇಳಿದೆ. ಕೆಲವು ಮಂತ್ರಗಳು ಕೂಡಿದ ಒಂದು ಗುಂಪಿಗೆ ‘ವರ್ಗ’ವೆನ್ನುವರು. ಇಂತಹ ವರ್ಗಗಳು ಒಟ್ಟಿಗೆ ೨೦೦೬ ಇರುವುವು. ಕೆಲವು ವರ್ಗಗಳು (ಪ್ರಾಯಶಃ ೩೩) ಕೂಡಿದ ಗುಂಪಿಗೆ ‘ಅಧ್ಯಾಯ’ ಎಂಬ ಸಂಜ್ಞೆ. ಇಂತಹ ಅಧ್ಯಾಯಗಳು ಒಟ್ಟಿಗೆ ೬೪ ಇವೆ. ಅವುಗಳ ಪ್ರತಿಯೊಂದು ಎಂಟು ಅಧ್ಯಾಯ ಸಮುದಾಯವು ‘ಅಷ್ಟಕ’ ವೆನಿಸುವುದು. ಇಂತಹ ಅಷ್ಟಕಗಳು ೮ ಇವೆ. ಹೀಗೆ ವಿಂಗಡಿಸುವ ಬಗೆಯು ಹಿಂದೆ ಹೇಳಿದುದರಂತೆ ಹಳೆಯದಲ್ಲ. ವಾಚಕರ ಸೌಲಭ್ಯಕ್ಕಾಗಿ ಆ ವರ್ಗೀಕರಣಗಳನ್ನು ಮತ್ತೆ ಇಲ್ಲಿ ಬರೆದು ತೋರಿಸುವೆವು.

ಸಂಹಿತೆ:—ಮಂಡಲಗಳು ೧೦; ಅನುವಾಕಗಳು ೮೫; ಸೂಕ್ತಗಳು ೧೦೨೮; ಮಂತ್ರ ೧೦೫೮೦;

ಅಷ್ಟಕಗಳು ೮; ಅಧ್ಯಾಯ ೬೪; ವರ್ಗ ೨೦೦೬; ಮಂತ್ರ ೧೦೫೮೦.

| | | | | | |
|---|---|---|---|---|---|
| ಮೊದಲನೆಯ ಮಂಡಲದಲ್ಲಿ | | ೨೪ | ಅನುವಾಕಗಳು, | ೧೯೧ | ಸೂಕ್ತಗಳು. |
| ಎರಡನೆಯ | ,, | ೪ | ,, | ೪೩ | ,, |
| ಮೂರನೆಯ | ,, | ೫ | ,, | ೬೨ | ,, |
| ನಾಲ್ಕನೆಯ | ,, | ೫ | ,, | ೫೮ | ,, |
| ಐದನೆಯ | ,, | ೬ | ,, | ೮೭ | ,, |
| ಆರನೆಯ | ,, | ೬ | ,, | ೭೫ | ,, |
| ಏಳನೆಯ | ,, | ೬ | ,, | ೧೦೪ | ,, |
| ಎಂಟನೆಯ | ,, | ೧೦ | ,, | ೯೨ ಮತ್ತು ವಾಲಖಿಲ್ಯ ಸೂಕ್ತಗಳು. | |
| ಒಂಭತ್ತನೆಯ | ,, | ೭ | ,, | ೧೧೪ | ,, |
| ಹತ್ತನೆಯ | ,, | ೧೨ | ,, | ೧೯೧ | ,, |

ಋಗ್ವೇದದಲ್ಲಿ ಒಟ್ಟಿಗೆ ೧೫೩೮೨೬ ಪದಗಳೂ ೪೩೨೦೦೦ ಅಕ್ಷರಗಳೂ ಇವೆ. ಮಂತ್ರ ಸಂಖ್ಯೆಯು ೧೦೫೮೦ ಎಂದು ಈ ಮೇಲೆ ಹೇಳಿದೆ. ಆದರೆ ಕೆಲವರು ಅವು ೧೦೪೦೨ ಎಂದೂ ಮತ್ತೆ ಕೆಲವರು ೧೦೬೨೨ ಎಂದೂ ಅಭಿಪ್ರಾಯ ಪಡುತ್ತಾರೆ.

ಋಕ್ಸಂಹಿತೆಯ ಎಲ್ಲಾ ಮಂಡಲಗಳು ಒಂದು ವಿಧವಾಗಿಯೇ ಇಲ್ಲ. ಆದರೂ ಒಂದರ ಮುಂದಿನ ಏಳರತನಕ ( ೨-೩-೪-೫-೬-೭ ಎಂಬ ) ಆರುಮಂಡಲಗಳು ಸ್ವಲ್ಪಸಮಾನತೆಯನ್ನು ಪಡೆಯುತ್ತಿವೆ. ಹೇಗೆಂದರೆ:—ಇವುಗಳಲ್ಲಿ ಪ್ರತಿಯೊಂದು ಮಂಡಲವು ಒಬ್ಬೊಬ್ಬ ಗೋತ್ರೀಯ ಋಷಿಯ ಬಾಯಿಂದ ಹೊರಬಿದ್ದದ್ದೆಂದು ಹಳೆಯವಾದ ನುಡಿಗಳಿಂದಲೂ ಒಳಗಣ ಹೇತುಗಳಿಂದಲೂ ಕಂಡು ಬರುತ್ತದೆ. ಈ ಆರುಮಂಡಲಗಳು ಆಯಾಗೋತ್ರೀಯ ( ವಂಶೀಯ ) ರಾದ ಮಹಾನುಭಾವರಿಂದಲೇ ಪರಂಪರೆಯಿಂದ ಬೇರೆ ಬೇರೆಯಾಗಿ ಬಹುಕಾಲದಿಂದಲೂ ಚನ್ನಾಗಿ ಕಾಪಾಡಲ್ಪಟ್ಟು ಮುಂದೆ ಒಟ್ಟುಗೂಡಿಸಿದವಾಗಿರುವುವು. ಹೀಗೆ ಒಂದೊಂದು ಗೋತ್ರಸಂಬಂಧದಿಂದ ಗೋತ್ರಮಂಡಲಗಳೆನಿಸುವ ಇವುಗಳಲ್ಲಿ ಸೂಕ್ತಗಳ ಸೇರುವೆಯು ಮಿಕ್ಕಮಂಡಲಗಳಿಗಿಂತಲೂ ಬೇರೆ ಬಗೆಯಾಗಿದೆ.

ಮೊದಲನೆಯ, ಎಂಟನೆಯ, ಹತ್ತನೆಯವುಗಳಲ್ಲಿ ಒಂದೊಂದು ಮಂಡಲದ ಪ್ರವರ್ತಕರು ಒಬ್ಬೊಬ್ಬನೇ ಅಲ್ಲ; ಬಹುಜನ ದ್ರಷ್ಟಾರರು. ಈ ಮೂರು ಮಂಡಲಗಳಲ್ಲಿಯೂ ಆಯಾ ಋಷಿಯ ಸಂಬಂಧದೊಡನೆ ವಿಂಗಡಿಸಿದ ಶಾತರ್ಚನ ಮುಂತಾದ ಅನೇಕ ಸೂಕ್ತಸಮುಚ್ಚಯಗಳು ಕಾಣಬರುವವು. ಒಂಬತ್ತನೆಯ ಮಂಡಲದ ಸಂವಿಧಾನವಾದರೊ, ಋಷಿಸಂಬಂಧದ ಕಟ್ಟಳೆಗೊಳಪಟ್ಟದ್ದಲ್ಲ; ಅದರೊಳಗಣ ಎಲ್ಲಾ ಸೂಕ್ತಗಳಿಗೂ ಸೋಮದೇವತೆಯೇ ಗುರಿಯಾಗಿರುವದರಿಂದ ದೇವತಾ ಸಂಬಂಧವುಳ್ಳದ್ದಾಗಿದೆ. ಇದರಲ್ಲಿ ಸೂಕ್ತಗಳ ಸಮುಚ್ಚಯ (ಜೊತೆಗೊಳಿಸುವಿಕೆ) ಗಳು ಆಯಾ ಛಂದೊ ಜಾತಿಗಳಿಗನುಸಾರವಾಗಿ ಪ್ರಕಟವಾಗಿವೆ. ಯಾವ ಯಾವ ಜಾತಿಯ ಛಂದೊಬದ್ಧಗಳಾದ ಸೂಕ್ತಗಳು ಎಷ್ಟಿರುವವೊ ಅವು ಎಲ್ಲಾ ಆಯಾಛಂದೋಜಾತಿಗಳ ಪರಿವಿಡಿದು ಬೇರೆ ಬೇರೆಜೋಡಣೆಗೊಳಿಸಿದವುಗಳಾಗಿವೆ. ಗೋತ್ರಮಂಡಲಗಳ ಸೂಕ್ತಸಮುಚ್ಚಯಗಳಾದರೊ ದೇವತೆಗಳ ಸಂಬಂಧಕ್ಕೊಳಪಟ್ಟವೆ. ಎಂಟನೆಯ ಮಂಡಲದ ಸೂಕ್ತಗಳಲ್ಲಿ ಗೋತ್ರಮಂಡಲಗಳ ಸೂಕ್ತಗಳಂತೆ ಅನ್ಯೋನ್ಯಸಂಬಂಧವಿರುವುದು ತೋರುತ್ತದೆ. ಆದರೂ ಇದು (ಎಂಟನೆಯ ಮಂಡಲವು) ಗೋತ್ರಮಂಡಲವೆನಿಸದು. ಯಾಕೆಂದರೆ:— ಇದರ ದೃಷ್ಟಾರರು ಏಕಗೋತ್ರೀಯರಲ್ಲ.

ಇದರ ದೃಷ್ಟಾರರಲ್ಲಿ ಕಣ್ವಗೋತ್ರೀಯರಿಗೇ ಪ್ರಾಧಾನ್ಯವಿರುವುದರಿಂದ ಹೆಚ್ಚುಗಣಿಕೆಯುಳ್ಳದ್ದೇ ಲೆಕ್ಕಿಸಲ್ಪಡುವುದೆಂಬ ನ್ಯಾಯಾನುಸಾರವಾಗಿ ಇದನ್ನು ಒಂದು ಗೋತ್ರದವರೇ ಕಂಡು ಹಿಡಿದರೆಂಬುದು ಸಮಸಿಸುವದಿಲ್ಲವೇ? ಎಂದರೆ ಇದರಲ್ಲಿರುವ ಸೂಕ್ತಗಳ ಜೋಡಣೆಯು ಬಗೆಯು. ಇದು ಗೋತ್ರಮಂಡಲಗಳಿಗಿಂತಲೂ ಬೇರೆಯಾದದ್ದೆಂಬುದನ್ನು ತಿಳಿಸುವುದು. ಆದ್ದರಿಂದ ಇದು ಗೋತ್ರಮಂಡಲದಲ್ಲಿ ಪರಿಗಣಿಸಲ್ಪಡದು.

ಮೊದಲನೆಯ ಮಂಡಲದ ಪೂರ್ವಾರ್ಧವು (೫೦ ಸೂಕ್ತಗಳು) ಎಂಟನೆಯ ಮಂಡಲವನ್ನು ಹೋಲುತ್ತದೆ. ಹೇಗೆಂದರೆ—ಆ ೫೦ ಸೂಕ್ತಗಳಲ್ಲಿ ಅರ್ಧಕ್ಕಿಂತ ಹೆಚ್ಚು ಪಾಲು ಕಣ್ವಗೋತ್ರೀಯರಿಂದ ಕಂಡದ್ದಾಗಿದೆ. ಎಂಟನೆಯ ಮಂಡಲದಲ್ಲಿ ಕಣ್ವಗೋತ್ರೀಯರಿಂದ ತಿಳಿಯಲ್ಪಟ್ಟ ಗಾನಾನುಕೂಲಗಳಾದ ಕೆಲವು ಛಂದೊವಿಶೇಷಗಳು ಇದರ ಪೂರ್ವಾರ್ಧದಲ್ಲಿ ಪ್ರಯೋಗಿಸಲ್ಪಟ್ಟವೆ. ಮತ್ತು ಇವೆರಡರಲ್ಲಿಯೂ ಸಮಾನವಾದ

ಅರ್ಥಗಳೂ ಸಮಾನವಾದ ರೂಪಗಳೂ ಉಳ್ಳ ಅನೇಕ ವಾಕ್ಯಗಳು ದೊರೆಯುತ್ತಿವೆ. ಹೀಗಿದ್ದರೂ, ಇವೆರಡರಲ್ಲಿ ಪ್ರಾಚೀನತರವಾದ ಭಾಗವು ಯಾವುದು? ಇಷ್ಟು ನಿಕಟ ಸಂಬಂಧವುಳ್ಳ ಇವುಗಳನ್ನು ಬೇರೆ ಬೇರೆ ಭಾಗದಲ್ಲಿ ಸೇರಿಸಿರಲು ಕಾರಣವೇನಿರಬಹುದು ? ಎಂಬ ಬಗ್ಗೆ ನಿಜವಾದ ಸಂಗತಿಯನ್ನು ತೋರಿಸುವುದು ಹಗುರಲ್ಲ; ಆದರೂ ಮೊದಲನೆಯ ಎಂಟನೆಯ ಮಂಡಲಗಳ ಉಗಮಕಾಲವು ಬೇರೆ ಬೇರೆಯಾದ್ದರಿಂದಾಗಲಿ ಕಣ್ವಗೋತ್ರೀಯ ಶಾಖೆಗಳು ಎರಡು ಹುಟ್ಟಿದ್ದರಿಂದಾಗಲಿ ಆತೆರದ ಸೇರುವೆಯು ಉಂಟಾಗಿರುವುದೆಂದು ಹೇಳಬಹುದು.

ಒಂಬತ್ತನೆಯ ಮಂಡಲವು ಎಂಟು ಮಂಡಲಗಳ ತರುವಾಯ ಸಂಘಟಿತವಾದದ್ದೆಂಬುದರಲ್ಲಿ ಸಂದೇಹವೇ ಇಲ್ಲ. ಆದರಲ್ಲಿ ಅಡಕವಾಗಿರುವ ಸೂಕ್ತಸಮುದಾಯವು ಗೋತ್ರಮಂಡಲಗಳನ್ನು ಕಂಡವರ ಮಧ್ಯದಲ್ಲಿಯೇ ಹೊರಹೊಮ್ಮಿರಬಹುದು. ಆದರೆ, ಅದುಯಾವುದೋ ಕಾರಣದಿಂದ ಗೋತ್ರಮಂಡಲಗಳಲ್ಲಿ ಸೇರಿಸಲ್ಪಡದೆ ವಿಕ್ಷಿಪ್ತತನದಿಂದಿದ್ದು ಪಶ್ಚಾತ್ಕಾಲದಲ್ಲಿ ಜೋಡಣೆಗೊಳಿಸಿದ್ದಾಗಿ ಒಂದು ಮಂಡಲ ಸ್ವರೂಪವನ್ನೇ ಪಡೆದಿರುವುದೆಂದು ತಿಳಿದು ಬರುತ್ತದೆ. ಆದರಲ್ಲಿ ಕೆಲವು ಸೂಕ್ತಗಳು ಹಳೆಯವಲ್ಲವೆಂದು ಕಾಣಬರುವುವಾದರೂ ಬಹು ಭಾಗವು ವೈದಿಕ ಸಾಹಿತ್ಯದ ಆರಂಭ ಕಾಲದಲ್ಲಿಯೇ ವ್ಯೆದೋರಿರುವುದು. ಒಂಬತ್ತನೆಯ ಮಂಡಲದ ಸೂಕ್ತಗಳ ಉತ್ಪತ್ತಿಯ ಕಾಲಭೇದಗಳು ಸಮನಿಸುವುವಾದರೂ ವಿಮರ್ಶಿಸುವದಕ್ಕೆ ಸಾಕಷ್ಟು ಉಪಕರಣಗಳು ದೊರೆಯದ್ದರಿಂದ ಈಗ ಅವು ದುರ್ಬೋಧಗಳಾಗಿವೆ.

ಇನ್ನು ಹತ್ತನೆಯ ಮಂಡಲದ ಬಗ್ಗೆ ಸ್ವಲ್ಪ ವಿಚಾರ ಮಾಡುತ್ತೇವೆ. ಈ ಮಂಡಲವು ಹಿಂದಿನಿಂದ ಸಂಘಟಿತವಾದದ್ದು; ಇಷ್ಟೇ ಅಲ್ಲ ಇದರಲ್ಲಿಯ ಸೂಕ್ತಗಳಾದರೂ ಮುಂಚಿನ ಒಂಬತ್ತು ಮಂಡಲಗಳು ಚನ್ನಾಗಿ ಬಳಕೆಯಲ್ಲಿ ಬಂದತರುವಾಯವೇ ಆವಿರ್ಭೂತಗಳಾಗಿರುವುವು. ಹೇಗೆಂದರೆ– ಇದರ ಸೂಕ್ತಗಳನ್ನು ಕಂಡವರು ಮುಂಚಿನ ಒಂಬತ್ತು ಮಂಡಲಗಳ ಪರಿಚಯವು ತಮಗಿದ್ದಿತೆಂಬುದನ್ನು ಅಡಿಗಡಿಗೆ ಹೊರಗೆಡಹುತ್ತಿರುವರು. ಇದರಲ್ಲಿ ಇಪ್ಪತ್ತರಿಂದ ಇಪ್ಪತ್ತಾರರ ವರೆಗಿರುವ ಷಟ್‌ಸೂಕ್ತಾತ್ಮಕ ಭಾಗವು 'ಅಗ್ನಿಮಿಳೆ' ಎಂಬ ಋಗ್ವೇದದ ಮೊದಲನೆಯ ಮಂತ್ರದ ತುಣುಕಿನಿಂದ ಆರಂಭಿಸಲ್ಪಟ್ಟದ್ದಾಗಿದೆ. ಆದುಕಾರಣವೇ ಹತ್ತನೆಯ

ಮಂಡಲದ ಉತ್ಪತ್ತಿಯ ಕಾಲದಲ್ಲಿ ಮುಂಚಿನ ಒಂಬತ್ತು ಮಂಡಲಗಳು ಇದ್ದವೆಂದು ಊಹಿಸಲು ಶಕ್ಯವಿದೆ.

ಮತ್ತು ಇದು ಸೋಮಮಂಡಲದ (ಒಂಬತ್ತನೆಯ ಮಂಡಲದ) ಮುಂದೆ ಜೋಡಿಸಲ್ಪಟ್ಟಿರುವದರಿಂದಲೂ ಮೊದಲನೆಯ ಮಂಡಲದಷ್ಟೇ ಸೂಕ್ತಗಳಿಂದ ಕೂಡಿರುವುದರಿಂದಲೂ ಈ ಮಂಡಲವು ಪರಿಶಿಷ್ಟ ಸೂಕ್ತ ಸಮುದಾಯರೂಪವಾದುದೆನಿಸುವುದು. ಈ ಮಂಡಲವು ಇತ್ತೀಚಿನದಾದರೂ ಇದರಲ್ಲಿಯ ಪರಿಶಿಷ್ಟಾತ್ಮಕ ಸೂಕ್ತಗಳು ಮಾತ್ರ ಪೂರ್ವಮಂಡಲಗಳಲ್ಲಿ ಕಾಣಬರುವ ಮಿಲಾಂಶಗಳಿಗಿಂತಲೂ ಬುನಾದಿಯಾದವುಗಳೇ. ಒಟ್ಟಿನ ಮೇಲೆ, ಈ ಹತ್ತನೆಯ ಮಂಡಲದ ವಿಷಯದಲ್ಲಿಯೂ ಭಾಷಾಸ್ವರೂಪದಲ್ಲಿಯೂ ಇದು ಅರ್ವಾಚೀನ ಕಾಲದಲ್ಲಿ ಸಂಯೋಜಿಸಲ್ಪಟ್ಟದ್ದಾಗಿರುವುದೆಂಬ ಸಂಗತಿಯು ನಿರ್ವಿವಾದವಾದದ್ದು.

ಋಗ್ವೇದದ ಎಲ್ಲಾ ಸೂಕ್ತಗಳೂ ಒಂದೇ ಕಾಲದಲ್ಲಿಯೇ ಆವಿರ್ಭವಿಸಿರುವುದಿಲ್ಲ. ಭಾಷೆಯ ರೀತಿಯು ಹತ್ತನೆಯ ಮಂಡಲವೊಂದನ್ನು ಉಳಿದು ಮಿಕ್ಕಮಂಡಲಗಳ ಸರ್ವಸೂಕ್ತಗಳಲ್ಲಿಯೂ ಬಹುಮಟ್ಟಿಗೆ ಒಂದೇ ವಿಧವಾಗಿರುವುದು. ಅವುಗಳ ಶೈಲಿಯಲ್ಲಿಯೂ ಕಲ್ಪನಾ ಸರಣಿಯಲ್ಲಿಯೂ ಭೇದವು ಕಂಡುಬರುವುದಾದರೂ ಭಾಷೆಯ ರೀತಿಯಲ್ಲಿ ಯಾವ ಭೇದವೂ ತೋರುವುದಿಲ್ಲ. ಸೂಕ್ತಘಟನೆಯೂ ಛಂದೋಬಂಧನೆಯೂ ವಿಷಯ ವರ್ಣನೆಯೂ ಮುಂತಾದುವನ್ನು ಸೂಕ್ಷ್ಮದೃಷ್ಟಿಯಿಂದ ವಿಚಾರಿಸಿದರೆ ಋಗ್ವೇದದ ಹತ್ತೂ ಮಂಡಲಗಳ ಉಗಮಕಾಲವು ಬೇರೆ ಬೇರೆಯಾಗಿರುವುದೆಂದು ಗೊತ್ತಾಗುವುದು.

ಇತರ ವೇದಗಳಲ್ಲಿ ಪಾಠಭೇದವು ಅಲ್ಲಲ್ಲಿ ಕಾಣಬರುವುದು. ಆದರೆ ಋಗ್ವೇದವು ಮಿಕ್ಕ ಮೂರು ವೇದಗಳ ಉಗಮ ಕಾಲಗಳಲ್ಲಿಯೂ ಹೀಗೆಯೇ ಇದ್ದಿತಾದ್ದರಿಂದ ಇದರ ಪಾಠಾಂತರಗಳು ಎಂದೂ ಸಂಭವಿಸಿರುವುದಿಲ್ಲ. ವೈದಿಕ ಗ್ರಂಥ ಶೇಖರಾಯಮಾಣವಾದ ಈ ಋಗ್ವೇದವು ಮೊದಲಿನಿಂದಲೂ ಯಾವ ವಿಕಾರಕ್ಕೂ ಒಳಪಡದಂತೆ ಬಲು ಎಚ್ಚರಿಕೆಯಿಂದ ಕಾಪಾಡಲ್ಪಟ್ಟಿರುವುದರಿಂದಲೇ ಎಲ್ಲಾ ಕಾಲದಲ್ಲಿಯೂ ಒಂದೇ ವಿಧವಾಗಿ ಉಳಿದಿರುವುದು. ಮಿಕ್ಕ ವೇದಗಳೂ ಕರ್ಮಕಲಾಪಗಳೂ ವೃದ್ಧಿಯಾಗುವುದಕ್ಕಿಂತ ಮೊದಲೇ ಅನೂಚಾನ ಪರಂಪರೆಯಿಂದ ಈ ಪುಣ್ಯ

ಗ್ರಂಥವು ವೈದಿಕ ಸಾಹಿತ್ಯ ಭವನಾರಂಭ ಮೂಲಸ್ತಂಭಾಯಮಾನವಾಗಿದೆ.

ಹಿಂದಿನಿಂದ ತಲೆದೋರಿದ ಯಜುಃ ಸಾಮಾಥರ್ವಣ ವೇದಗಳಲ್ಲಿ ಜನರಿಗೆ ಋಗ್ವೇದದಲ್ಲಿ ಹೇಗೋ ಹಾಗೆ ಮನದೊಲ್ಮೆಯು ಇದ್ದದ್ದು ಕಾಣಬರುವುದಿಲ್ಲ. ಏಕೆಂದರೆ ಅವುಗಳು ಹೊಸದಾಗಿ ವ್ಯೆದೋರಿದ ಯಜ್ಞಕ್ರಿಯೆಗಳನ್ನು ನೆರವೇರಿಸುವುದಕ್ಕೆ ಅನುಕೂಲವಾಗುವಂತೆ ಇಷ್ಟಾನುಸಾರವಾಗಿ ಋಗ್ವೇದದಿಂದ ಎತ್ತಿ ತೆಗೆದುಕೊಳ್ಳಲ್ಪಟ್ಟವುಗಳೂ ಹೊಸದಾಗಿ ಜೋಡಿಸಲ್ಪಟ್ಟವುಗಳೂ ಆದ ಸೂಕ್ತಗಳ ಗುಂಪಿನಿಂದ ಕೂಡಿವೆ. ಅದು ಕಾರಣವೇ, ಇತರ ವೇದಗಳನ್ನು ಕಂಡವರಾದ ಪರಮರ್ಷಿಗಳು ತಾವು ಕಂಡುಕೊಂಡ ವೇದಗಳಿಗಿಂತ ಪ್ರಾಚೀನವೂ ಪರಂಪರೆಯಿಂದ ಬಂದದ್ದೂ ಆದ ಋಗ್ವೇದವನ್ನು ಆದರಾತಿಶಯದಿಂದ ಸಂರಕ್ಷಿಸಿದರು.

ವಸ್ತು ತತ್ವವನ್ನು ಪರಿಭಾವಿಸಿದರೆ ಈ ಋಗ್ವೇದವು ಎರಡು ಕಾಲಗಳಲ್ಲಿ ಎರಡು ಬಗೆಯ ಅವಸ್ಥೆಯನ್ನು ಅನುಭವಿಸಿರುವುದೆಂದು ತಿಳಿದು ಬರುತ್ತದೆ. ಹೇಗೆಂದರೆ:- ಇದು ಇತರ ವೇದಗಳ ಉಗಮಕ್ಕಿಂತ ಮೊದಲು ಬಹುಕಾಲದ ವರೆಗೆ ಸಂಹಿತೆಯ ರೂಪವನ್ನು ಪಡೆಯದೆ ಹಾಗೇ ಇದ್ದಿತು. ಕೆಲವು ಕಾಲಾನಂತರದಲ್ಲಿ ಶಬ್ದವಿದ್ಯೆಯ ನಿಯಮಗಳಿಂದ ಸಂಹಿತೆಯ ರೂಪವಾದ ಪರಿಣಾಮವನ್ನು ಪಡೆಯಿತು. ಆವಿರ್ಭವಿಸಿದ ಕಾಲದ ಮೊದಲ್ಗೊಂಡು ಕೇವಲ ಅನೂಚಾನ (ಗುರುವಿನಬಳಿಯಲ್ಲಿದ್ದು ಸಾಂಗವಾಗಿ ಅಧ್ಯಯನ ಮಾಡುವಣ) ಪದ್ಧತಿಯಿಂದ ಬಂದ ಈ ವೇದವು ಸಂಹಿತೆಯ ಕಾಲದಲ್ಲಿ ಪದಗಳ ಕೊನೆಯ ವರ್ಣವಿಕಾರಗಳಿಂದ ಸ್ವರೂಪ ಭೇದವನ್ನು ತಳೆಯಿತು. ಸಂಹಿತೆಯ ಪಾಠವು ಬುನಾದಿಯ ಪಾಠಕ್ಕಿಂತಲೂ ಎಷ್ಟೋ ಭೇದಗಳನ್ನು ಹೊಂದಿರುವುದು. ಆದರೆ ಈ ಭೇದಗಳಾದರೊ ಅನ್ಯಶಬ್ದಗಳ ಮೂಲಕವಾದವುಗಳಲ್ಲ. ಇದರಲ್ಲಿ ಒಳ್ಳೆಯ ಶಬ್ದವಾವುದು, ಸುಮ್ನವೊ ದುಮ್ನವೊ? ಎಂಬೀ ತೆರದ ಶಬ್ದ ಸಂದೇಹವು ಸಂಭವಿಸುವುದಿಲ್ಲ. ಹಾಗಾದರೆ ಈ ವಿಧವಾದ ಭೇದಗಳಿರುವುದೇತಕ್ಕೆ? ಎಂದರೆಃ- ಈ ಭೇದಗಳು ಪ್ರಾಧಾನ್ಯವಾಗಿ ಲೌಕಿಕ ಸಂಸ್ಕೃತದಲ್ಲಿರುವ ಸಂಧಿ ನಿಯಮಗಳ ಎಡೆಯಾಟದಿಂದ ಹುಟ್ಟಿವೆ. ಹೇಗೆಂದರೆಃ- ಮೊದಲು 'ತುವಂಹಿ ಅಗ್ನೆ' ಎಂಬೀ ರೂಪದಿಂದ ಇದ್ದದ್ದು ಹಿಂದಿನಿಂದ 'ತ್ವಂಹ್ಯಗ್ನೆ' ಎಂಬೀ ರೂಪವನ್ನು ಪಡೆಯಿತು. 'ತುವಮ್'' ಎಂಬಲ್ಲಿ 'ತ್ವಮ್' ಎಂದೂ

'ಹಿ ಅಗ್ನೆ' ಎಂಬಲ್ಲಿ 'ಹ್ಯಗ್ನೆ' ಎಂದೂ ಮಾಡಲ್ಪಟ್ಟ ಈ ವಿಕಾರವು ಸಂಧಿ ನಿಮಿತ್ತಕವಾಗಿದೆ. ಪಠಿಸುವಾಗ ಕಿವಿಗೆ ಇಂಪಾಗಿ ಕೇಳಿಬರುವಂತೆ ಮಾಡುವ ಬಯಕೆಯಿಂದ ಪ್ರವರ್ತಿಸಲ್ಪಟ್ಟ ಈ ಸಂಧಿ ನಿಯಮವು ಛಂದೋಲಕ್ಷಣಕ್ಕೂ ಅನುಕೂಲವಾಗಿದೆ. ಹೀಗೆ ಸಂಹಿತೆಯ ಪಾಠವು ಸಿದ್ಧವಾದರೂ ಈ ವೇದದ ಪೂರ್ವರೂಪವನ್ನು ತಿಳಿಯಲು ಶಕ್ಯವಿದೆ. ಈ ಸಂಹಿತಾ ಪಾಠದಲ್ಲಿ ಬುನಾದಿಯ ಶಬ್ದ ದೋಷಗಳೂ ಸ್ವರಭೇದಗಳೂ ವೈಕಲ್ಪಿಕ ರೂಪಭೇದಗಳೂ ಕಾಯ್ದಿಡಲ್ಪಟ್ಟಿವೆ. ಅವುಗಳನ್ನು ಅನಾಯಾಸವಾಗಿ ತೆಗೆಯಲು ಬರುವಂತಿದ್ದರೂ ಹಾಗೆ ಮಾಡಿರುವುದಿಲ್ಲ. ಈ ಮುಂತಾದ ವಿಶೇಷ ಸಂಗತಿಗಳು, ಈ ಋಗ್ವೇದವು ಮೊದಲನೆಯ ಅವಸ್ಥೆಯಲ್ಲಿದ್ದ ಕೆಲವು ಶಬ್ದ ದೋಷಗಳನ್ನೂ ಎರಡನೆಯ ಅವಸ್ಥೆಯಲ್ಲಿ ಸೇರಿಸಿದ ಸಂಧಿನಿಮಿತ್ತಕಗಳಾದ ವಿಕಾರಗಳನ್ನೂ ಬಿಟ್ಟು ಮಿಕ್ಕ ಸರ್ವ ವಿಷಯಗಳಲ್ಲಿಯೂ ಬುನಾದಿಯಿಂದ ಪರಂಪರೆವಿಡಿದು ತನ್ನ ಪರಿಶುದ್ಧತೆಯನ್ನು ಕಳೆದುಕೊಳ್ಳದೆ ಉಳಿದಿರುವುದೆಂದು ಸೂಚಿಸುತ್ತಿವೆ. ಬ್ರಾಹ್ಮಣ ಭಾಗಗಳಲ್ಲಿ ಕಾಣಬರುವ ಋಗ್ವೇದ ವಿಷಯಕವಾದ ವಿಚಾರವನ್ನು ಪರಿಶೀಲನೆ ಮಾಡಿದರೆ ಈಗಿನ ಋಗ್ವೇದ ಪಾಠವು ಬ್ರಾಹ್ಮಣ ಭಾಗಗಳ ಉತ್ಪತ್ತಿ ಕಾಲದಲ್ಲಿ ಯಜುರ್ವೇದದ ಗದ್ಯ ಭಾಗಕ್ಕಿಂತಲೂ ವಿಶೇಷವಾದ ಪ್ರತಿಷ್ಠೆಯನ್ನು ಪಡೆದಿದ್ದಿತೆಂದು ತಿಳಿಯಲ್ಪಡುವುದು.



# ಹಿತೋಕ್ತಿಗಳು.

ಲೇಖಕ:— ಲ. ಅ. ಶಿರಹಟ್ಟಿ ಶಾಲಾಮಾಸ್ತರ ವಿಜಾಪುರ.

[ಪೂ|| ಶ್ರೀ ಬಸವರಾಜ ಶಾಸ್ತ್ರಿಗಳು ಕೋಡಿಕೊಪ್ಪ ಮಠ ಇವರ ಪ್ರವಚನದೊಳಗಿನ ಕೆಲವು ಉಕ್ತಿಗಳ ಅವಲಂಬನ.]



## ವಾರ್ಧಿಕ ಷಟ್ಪದಿಗಳು.

### ಧರ್ಮ.

ಪುರುಷಾರ್ಥಗಳು ಮೂರನುಂ ಪಡೆದು ಸಾಧಿಸದ ।
ನರನ ಜನ್ಮವು ವ್ಯರ್ಥ ಪಶುಜನ್ಮದಂತೆಂದು ।
ಹಿರಿಯ ನುಡಿಯಿರ್ಪುದಾ ಮೂರರೊಳಗುಂ ಧರ್ಮವೇ ಶ್ರೇಷ್ಠ ಮದರಿಂದಲೇ ॥
ದೊರೆಯುವವು ಸುಲಭದಿಂದರ್ಥಕಾಮಂಗಳುಂ ।
ಮರುಳ, ದುಃಖದಬಂಧದಿಂ ಧರ್ಮ–ಮಣಿಯ ಭವ- ।
ಶರಧಿಯೊಳು ಬಿಸುಡುವಂ, ವ್ಯರ್ಥವಲ್ಲವೆ? ಹಾಳುಹಾಳಜ್ಞರಾ ಬಾಳುವೆ! ॥೧॥

ಸುಲಭಮಿರದಿರ್ದೊಡಂ ಪೂರ್ವಜನ್ಮದ ಪುಣ್ಯ- ।
ಬಲದಿಂದ ಮನುಜಜನ್ಮವ ಪೊಂದಿ, ಧರ್ಮವಂ ।
ತೊಲಗಿ ವಿಷಯಂಗಳಂ ನಚ್ಚಿ ಕೆಡುವಂ ಪಾಮರಂ ಭವಾಬ್ಧಿಯಲಿ ಮುಳುಗಿ ॥
ಜಲಧಿಯೊಳು ಬೀಳ್ದವಂ ದೈವನಿಂ ಸಾರ್ದ ಕುಂ- ।
ಬಳಕಾಯನುಳಿದು ಮುಳುಗಿಸುವ ಗುಣಮುಳ್ಳ ಘನ- ।
ಶಿಲೆಯನಪ್ಪುವ ಮಂದಮತಿಯಂಜಗಜ್ಜನವು ಜರಿದು ಹಾಸ್ಯವ ಮಾಡದೆ ॥೨॥

ಮನೆಯೊಳಿಹ ಕಲ್ಪವೃಕ್ಷವನು ಕಡಿದೊಗೆದು ಮದ- ।
ಗುಣಿಕೆಯಂ ನೆಟ್ಟವೊಲು, ಮೇಣ್ ವಿಕ್ರಯಿಸಿ ಗಿರಿಯ- ।
ನನುಕರಿಸುವಾನೆಯುಂ ಕತ್ತೆಯುಂ ಕೊಂಡವೊಲು, ಬಿಸುಡಿ ಚಿಂತಾಮಣಿಯನು ॥

ವನಧಿಯೊಳು ಕಾಜನಾರಿಸಿಕೊಳ್ವವೊಲು, ಧರ್ಮ- ।
ವನು ತ್ಯಜಿಸಿ ವಿಷಯಂಗಳಂ ತಬ್ಬಿಕೊಂಡು ಕಿಡು- ।
ವನವನಂ ಕಡೆಗಣಿಸರೇ ಧರ್ಮವನದಿ ವಿಹರಿಸುವಾ ಮಹಾ
ತ್ಮರರಿದು ॥೩॥

ವರಗುರುವಿನಲ್ಲಿ ಶಿವನಲ್ಲಿ ಶಿವಮತದಲ್ಲಿ ।
ಚಿರಭಕ್ತಿಯಂ, ಕಳವು ಪುಸಿವಾತುಗಳೊಳು, ಮೇಣ್ ।
ಪರಹಿಂಸೆಯೊಳು ಪರಸ್ತ್ರೀ ಪರಧನಗಳಾಶೆಯೊಳು ತ್ಯಾಗ
ಮಂಗೈಯುತ ॥

ಅರಿಗಳಾರನು ಗೆಲಿದು ಪಂಚೇಂದ್ರಿಯಗಳ ತಡೆ- ।
ದಿರದೆ ಹರಿಯುವ ಮನವನೊಳಪಡಿಸಿ ತನ್ನ ತಾ- ।
ನರಿದು ಮಾಯಾಚ್ಛಾದನವ ಭೇದಿಸುವದದುವೆ ನರನಿಗುರುತರ
ಧರ್ಮವು ॥೪॥

## ಶೀಲ.

ಶೀಲವೇ ಕುಲಕಲಂಕವ ಕಳೆಯುವದು, ನರನ ।
ಶೀಲವೇ ಕೀರ್ತಿಗೌರವಗಳಂ ಬೆಳಿಸುವದು, ।
ಶೀಲವೇ ಪಾಪಪಕ್ಷವನೊಣಗಿಸುವದು, ಪುಣ್ಯಾಂಕುರವ ಬೆಳೆ
ಯಿಸುವದು, ॥

ಶೀಲವೇ ಕಷ್ಟಗಳ ಕಳೆಯುವದು, ಪರಿಕಿಸಲು ।
ಶೀಲವೇ ಮೋಕ್ಷಮಾರ್ಗಕೆ ಮೂಲಮಹುದು, ಸ- ।
ಚ್ಛೀಲನಾಗಿರ್ದು ಕೆಟ್ಟವನುಂಟೆ ಜಗದಿ? ಘನವಲ್ತೆ ಶೀಲದ
ಮಹಿಮೆಯು ॥೫॥

## ಸತ್ಯ.

ಪರಿಶುದ್ಧ ಭಾವದೊಳಗುದಯಿಸಿದ ಸತ್ಯಮಂ ।
ಸುರರು ನುತಿಸಿದರು; ವಿಶ್ವಾಸದಾಲಯವು, ಭಯ- ।
ಪರಿಹಾರಕವು, ವಿಪನ್ನಾಶಕವು, ಮತ್ತೆ ಮೋಕ್ಷದ ಮಾರ್ಗ
ದರ್ಶಕವದು ॥

ನರರ ಸೌಜನ್ಯ ಸಂಜೀವನವು, ಸತ್ಪದಾ- ।
ಗರವಮಲ ಕೀರ್ತಿಕೇಳೀವನವು, ಪ್ರೇಮುವುಂ- ।
ದಿರವೆಂದೆನಲ್ ಬಗೆಯೆ ಸತ್ಯವಾದಿನಿವಾತು ಪರಮಪಾವನ
ವಲ್ಲವೆ? ॥೬॥

## ಅಸತ್ಯ.

ಸುಡುವಂತೆ ಕಾಡುಬೇಗೆಯು ಕಾಡನಂ, ಜಸವ ।
ಸುಡುತಿರುವ, ದುಃಖವೃಕ್ಷಕ್ಕೆ ನೀರಾಗಿರುವ, ।
ಗಡ! ದುರುದ್ದೇಶಗಳ ನೆಲೆಯಾದ, ಸಮುಭಿವೃದ್ಧಿಯ ನಿವಾರಣ
ವಾಗಿಹ ॥

ಕಡುವಿಪತ್ತಿಗೆ ಸಂಜನಕವಾದ, ದುಷ್ಕೀರ್ತಿ ।
ಗೆಡೆಯಾದ, ಪಗೆಗೆಕಾರಣವಾದ, ಪುಸಿನುಡಿಯ ।
ಬಿಡುವುದುಚಿತವು ಬುದ್ಧಿವಂತರದನಾಶ್ರಯಿಸಿದವರಧೋಗತಿ
ಗಿಳಿಯರೆ ? ॥೭॥

## ಕ್ರೋಧ

ಮನದೊಳುದ್ವಿಗ್ನತೆಯ ಬೆರಿಸಲು ಸುರಾಮಿತ್ರ- ॥
ನನಿಲಾಗ್ರಜನು ಶರೀರವ ಸುಡಲು, ಚೈತನ್ಯ- ।
ವನು ನಾಶಗೈಯ್ಯುವದಕೆ ವಿಷಸಮವು, ಕ್ರೋಧವೀ ಕೀರ್ತಿನಾಶಕ
ವಾಗಿಹ ॥

ವಿನಯವಂ ಬಿಸುಡಿಸುವ, ಸ್ನೇಹವಂ ಭೇದಿಸುವ, ।
ಘನಪುಣ್ಯಾವಂಕುರವ ನೊಣಗಿಸುವ, ಸಲೆಕಲಹ- ।
ವನು ಪೆರ್ಚಿಸುವ ದುಷ್ಟಕೋಪವಂ ಜಯಿಸುವದೆ ಸತ್ಪುರುಷ
ರಿಗೆ ಯೋಗ್ಯವು ॥೮॥

## ಲೋಭ.

ಘನತರವ ದುಷ್ಕೀರ್ತಿಯೆಂಬ ಹೊಗೆಯುಳ್ಳಂಥ, ।
ಧನಕಾಷ್ಠಸಂಯೋಗದಿಂ ಪ್ರಜ್ವಲಿಸುವಂಥ, ।
ಮನದೊಳುದ್ಭವಿಸುವತಿ ದುಃಖವೆಂಬಾ ಭಸ್ಮವುಳ್ಳಂಥ, ಧರ್ಮನೆಂಬ ॥

ವನವ ಸುಡುವುದರೊಳುತ್ಸಾಹ ಮುಳ್ಳಂಥ, ಮನು- ।
ಜನ ಗೌರವಕೆ ಕಪ್ಪನಿಡುವಂಥ, ಲೋಭನೆಂ- ।
ಬನಿಲನಿಂ ಮಾನವನ ಸಕಲ ಸದ್ಗುಣಗಣವು ವಿಧ್ವಂಸವಾಗ
ದಿಹದೆ? ॥೯॥

## ಮಾಯೆ.

ಕ್ಷೀರವಂ ಕುಡಿವಾಶೆಯಿಂ ಬೆಕ್ಕು ನಿಜಮುಖವ ।
ಕ್ಷೀರಕುಂಭದೊಳಿಕ್ಕಿ ತನ್ನ ಮೇಲ್ಬೈತಪ್ಪ ।
ಘೋರತರಕಾಷ್ಠದಿರಿತವನರಿಯದೆ ವಿನಾಶಮುಪ್ಪಂತೆ ಮೂಢಾತ್ಮನು ॥
ಸೇರಿ ಮಾಯಾಗೃಹವ ವಿಷಯ ಸುಖದಾಶೆಯಿಂ ॥
ಸಾರಿಬರುವಾಪತ್ಪರಂಪರೆಗಳನರಿಯದೆ ।
ಘೋರದುಃಖಾಬ್ಧಿಯುಲಿ ಮುಳುಗುವಂ; ಮಾಯೆಗೊಳಗಾಗದವನೇ
ಜಾಣನು ॥೧೦॥



# ತಮಿಳು ಮತ್ತು ಮಲಬಾರ ಪ್ರಾಂತಗಳಲ್ಲಿಯ ವೀರಶೈವರ ಸ್ಥಿತಿಯು.

(ಶ್ರೀಯುತ ವ್ಹಿ. ನಟೇಶನ್ ಸಾಲಿವನ್ ಇವರು ಬೆಂಗಳೂರ ವೀರಶೈವ ಮಹಾಸಭೆಗೆ ಸಮರ್ಪಿಸಿದ ಲೇಖವು.)

---

ತಮಿಳು ಮತ್ತು ಮಲಬಾರ ಪ್ರಾಂತಗಳಲ್ಲಿ ವೀರಶೈವರ ವಸ್ತಿಯು ಇದ್ದದ್ದು ಕಂಡುಬರುತ್ತದೆ. ಇದು ನಮ್ಮ ಉತ್ತರಕಡೆಯ ವೀರಶೈವರಲ್ಲಿ ಬಹಳ ಜನರಿಗೆ ಗೊತ್ತಿರಲಿಕ್ಕಿಲ್ಲ. ಆದರೆ ಇವರ ಸ್ಥಿತಿಯು ಮಾತ್ರ ಬಹಳ ಕನಿಕರವಾಗಿರುತ್ತದೆ. ಅವರಸಂಖ್ಯೆಯಾದರೂ ದಿನೇ ದಿನೇ ಕಡಿಮೆಯಾಗುತ್ತ ನಡೆದಿದೆ. ಹೀಗಿರುವದು ನಿಮಗೆ ಆಶ್ಚರ್ಯವನ್ನುಂಟುಮಾಡದೆ ಇರಲಾರದು. ಈ ಪ್ರಕಾರ ಈ ಪ್ರಾಂತಗಳ ವೀರಶೈವರು ಹೀನತೆಯನ್ನು ಹೊಂದಲಿಕ್ಕೆ ಅವರಲ್ಲಿದ್ದ ಧರ್ಮಮೂಢತೆಯೇ ಕಾರಣವೆಂದು ನಾವು ನಿರ್ವಿವಾದವಾಗಿ ಹೇಳಬಹುದು. ವೀರಶೈವರೂ ಜಂಗಮರೂ ಹಿಂದುಸ್ತಾನದ ಎಲ್ಲ ಪ್ರದೇಶಗಳಲ್ಲಿ ಪಸರಿಸಿದ್ದಾರೆ. ಆವರೂ ಕೂಡ ತಮಿಳು ಮತ್ತು ಮಲಬಾರಪ್ರಾಂತಗಳ ವೀರಶೈವರು ಇವರ ನಡೆನುಡಿಗಳನ್ನು ಅನುಸರಿಸದಿರುವದು ಬಹಳ ಖೇದಕರವಾಗಿರುತ್ತದೆ. ಮತ್ತು ಇವರ ಸಾಂಪತ್ತಿಕಸ್ಥಿತಿಯಾದರೂ ಬಹಳ ಕಡಿಮೇ ತರಧ್ದಿರುತ್ತದೆ. ಇದಾದರೂ ಅವರ ಅವನತಿಗೆ ಕಾರಣವಾಗಿರುತ್ತದೆ.

ದಕ್ಷಿಣ ಹಿಂದುಸ್ತಾನದಲ್ಲಿಯ ವೀರಶೈವರಲ್ಲಿ ಅವರವರ ಭಾಷೆಗಳ ಪ್ರಕಾರ ಕನ್ನಡಿಗರು, ತೆಲುಗರು, ತಮಿಳರು ಎಂದು ಮೂರು ಮುಖ್ಯ ಭಾಗಗಳನ್ನು ಮಾಡಬಹುದು. ಅವರ ಒಟ್ಟು ಜನಸಂಖ್ಯೆಯು ೨ ಲಕ್ಷವಿರುತ್ತದೆ. ಇವರಲ್ಲಿ ಕನ್ನಡಿಗರ ಸಂಖ್ಯೆಯು ಬಹಳ ಕಡಿಮೆ ಇರುತ್ತದೆ. ಇವರ ರೀತಿ ನಡತೆ ಮತ್ತು ಪದ್ಧತಿಗಳು ಕರ್ನಾಟಕದ ವೀರಶೈವರಂತೆಯೇ ಇವೆ. ತಮಿಳು ಮತ್ತು ತೆಲುಗು ಮಾತನಾಡುವ ವೀರಶೈವರ ಸಂಖ್ಯೆಯು ಇವರಕಿಂತಲೂ ಇತ್ತಕಡೆಗೆ ಹೆಚ್ಚಿಗಿದೆ. ಇವರಲ್ಲಿ ತೆಲುಗು ಮಾತನಾಡುವ ವೀರಶೈವರು ತಮಿಳು ಮಾತನಾಡುವ ವೀರಶೈವರಿಗಿಂತಲೂ ಹೆಚ್ಚಿಗಿದ್ದಾರೆ. ತೆಲುಗು ಮಾತನಾಡುವ ವೀರಶೈವ

ರಿಗೆ ಜಂಗಮರೆಂಬ ಹೆಸರು ಇಲ್ಲಿ ವಾಡಿಕೆಯಾಗಿ ಇದೆ. ಈ ಪ್ರಕಾರ ನಾವು ವೀರಶೈವರಲ್ಲಿ ಮೂರು ಭಾಗಗಳನ್ನು ಮಾಡಿದರೂ ಪ್ರತಿಯೊಂದು ಭಾಗದಲ್ಲಿ ಅನೇಕ ಉಪಪಂಗಡಗಳಿರುವದರಿಂದ ಅವರಲ್ಲಿ ಅನೇಕ ಭಾಗಗಳು ಆಗಿರುತ್ತವೆ. ಇವರೆಲ್ಲರಿಗೆ ಒಂದೇ ಧರ್ಮವಿದ್ದರೂ ಎಲ್ಲರೂ ಲಿಂಗಧಾರಿಗಳಾಗಿ ಒಂದೇ ಬಗೆಯ ಧಾರ್ಮಿಕ ಆಚಾರಗಳನ್ನು ಅನುಸರಿಸುತ್ತಿದ್ದರೂ ಅವರಲ್ಲಿ ಪರಸ್ಪರ ಶರೀರಸಂಬಂಧವಾಗುವದಿಲ್ಲ. ಇದು ಬಹಳ ಖೇದಕರವಾಗಿರುತ್ತದೆ. ಒಂದು ಜಿಲ್ಹೆಯಲ್ಲಿರುವ ವೀರಶೈವರು ತಮ್ಮ ಜಿಲ್ಹೆಯಲ್ಲಿಯ ವೀರಶೈವರೊಡನೆ ಮಾತ್ರ ಶರೀರ ಸಂಬಂಧ ಬೆಳೆಸುತ್ತಾರೇ ಹೊರ್ತು ನೆರೆಜಿಲ್ಹೆಗಳಲ್ಲಿರುವವರೊಡನೆ ಅವರು ಸಂಪತ್ತಿನಲ್ಲಿ ಮತ್ತು ಸ್ಥಿತಿಯಲ್ಲಿ ಎಷ್ಟು ಮುಂದಾಗಿದ್ದರೂ ಕೂಡ ಸಂಬಂಧ ವಿಡಲು ಬಯಸುವದಿಲ್ಲ!

ತಮಿಳು ದೇಶದ ಅನೇಕ ಗ್ರಾಮುಗಳಲ್ಲಿ ದೇವಾಲಯುಗಳ ಪೂಜಾರಿಗಳು ವೀರಶೈವರೇ ಇದ್ದುದಾಗಿ ಕಂಡು ಬರುತ್ತದೆ. ಇದರ ಮೇಲಿಂದ ಇತ್ತಿನ ವೀರಶೈವರು ಒಂದು ಕಾಲಕ್ಕೆ ಸುಧಾರಣೆಯಲ್ಲಿ ಬಹಳ ಮೇಲ್ತರದ ಸ್ಥಿತಿಯನ್ನು ಹೊಂದಿದ್ದರೆಂಬದು ಸ್ಪಷ್ಟವಾಗುತ್ತದೆ. ಇವರು ಈಗ ಬಹಳ ಕೀಳಸ್ಥಿತಿಯಲ್ಲಿ ಇದ್ದರೂ ಅವರ ರೀತಿ, ನಡತೆ, ಆಚಾರಗಳು ಮತ್ತು ಅವರ ಪೂರ್ವದ ಧಾರ್ಮಿಕ ಚಿನ್ಹಗಳು ಇನ್ನೂ ಅವರಲ್ಲಿ ಅಚ್ಚಳಿಯದೆ ಇವೆ. ಈ ದೇಶದಲ್ಲಿ ಅನೇಕ ಕಡೆಗೆ ವೀರಶೈವರ ಮಹತ್ವದ ಮಠಗಳು ಇವೆ. ಮತ್ತು ಪ್ರಸಿದ್ಧರಾದ ಗುರುಗಳೂ ಇದ್ದಾರೆ. ಇದರಿಂದ ಇತ್ತಕಡೆಗಿರುವ ವೀರಶೈವರ ಪ್ರಾಚೀನಕಾಲದ ವೈಭವವನ್ನು ಊಹಿಸಬಹುದಾಗಿದೆ.

ಆದರೆ ಮಲಬಾರ ಪ್ರಾಂತದಲ್ಲಿಯ ವೀರಶೈವರ ಸ್ಥಿತಿಯನ್ನು ನೋಡಿದರೆ ಮಾತ್ರ ಇಡೀ ವೀರಶೈವ ಜನಾಂಗಕ್ಕೆಲ್ಲ ಖೇದವನ್ನುಂಟು ಮಾಡದೆ ಇರಲಾರದು. ಮಲಬಾರ ಪ್ರಾಂತವೆಂದರೆ ಬ್ರಾಹ್ಮಣ ಸಮಾಜದ ಭದ್ರವಾದ ಸ್ಥಾನವೆಂದು ಹೇಳಬಹುದು. ಇವರ ಮಧ್ಯದಲ್ಲಿ ಇಲ್ಲಿಯ ವೀರಶೈವರು ಸಿಲ್ಕಿಕೊಂಡು ತಮ್ಮ ಜೀವಿತವನ್ನು ಅತ್ಯಂತ ಕಷ್ಟತರವಾಗಿ ಸಾಗಿಸುತ್ತಲಿದ್ದಾರೆ. ಅವರ ಸ್ಥಿತಿಯು ಅತ್ಯಂತ ಬಡತನದ್ದಾಗಿರುತ್ತದೆ. ಕೆಲವು ದಿವಸಗಳ ಹಿಂದೆ ತ್ರಾವಣಕೋರಿನಲ್ಲಿ ಇವರ ಒಂದು ಪರಿಷತ್ತು ನೆರೆದಿತ್ತು. ಆಗ ಮಲಬಾರ ವೀರಶೈವರು ಕುಂಭ

ಕೋಣಂದಲ್ಲಿಯ ಪ್ರಸಿದ್ಧ ವೀರಶೈವ ಮಠದ ಶಿಷ್ಯರಿರುತ್ತಾರೆಂದು ತಿಳಿದು ಬಂದಿತು. ಮಲಬಾರ ಮತ್ತು ತಮಿಳ ದೇಶಗಳ ವೀರಶೈವರು ಪರಸ್ಪರ ಸಂಬಂಧಿಕರೆಂದು ಹೇಳಲು ಅನೇಕ ಆಧಾರಗಳಿವೆ.

ತ್ರಾವಣಕೋರ ಮತ್ತು ತಮಿಳ ದೇಶಗಳಲ್ಲಿ ಹೋದ ಮೂರು ವರ್ಷಗಳಲ್ಲಿ ವೀರಶೈವ ಸಭೆಗಳು ಆಗುತ್ತ ಬಂದಿವೆ. ಆದರೆ ಇವರು ತಮ್ಮ ಸ್ಥಿತಿಯನ್ನು ಸುಧಾರಿಸಲಿಕ್ಕೆ ಮತ್ತು ಮತತತ್ವಗಳನ್ನು ಪ್ರಸಾರ ಪಡಿಸಲಿಕ್ಕೆ ಮಹತ್ವದ ಪ್ರಯತ್ನಗಳನ್ನೇನೂ ಮಾಡಿರುವದಿಲ್ಲ. ದಕ್ಷಿಣ ಹಿಂದುಸ್ತಾನದಲ್ಲಿಯ ಈ ಎಲ್ಲ ವೀರಶೈವರಿಗೆ "ಪಂಡಾರಂ" ಎಂಬ ಹೆಸರು ಇದೆ. ಅವರಲ್ಲಿ ತೆಲುಗು ಮಾತಾಡುವವರಿಗೆ 'ಅಯ್ಯರ್' ಅಥವಾ 'ಆರಾಧ್ರಿ' ಎಂಬ ಹೆಸರು ವಾಡಿಕೆಯಾಗಿ ಇದೆ. "ಪಂಡಾರಂ" ಎಂಬ ಶಬ್ದಕ್ಕೆ ೨ ಅರ್ಥಗಳನ್ನು ಮಾಡಬಹುದು. ಒಂದು ಪುರಾತನ ಮತ್ತು ಪವಿತ್ರವಾದ ಧರ್ಮವನ್ನು ಪ್ರತಿಪಾಲಿಸುವವರು ಮತ್ತೊಂದು ಅತ್ಯಂತ ಪೂಜ್ಯವಾದ ಮತ್ತು ಪವಿತ್ರವಾದ ರುದ್ರಾಕ್ಷಿಯನ್ನು ಧಾರಣ ಮಾಡು ವವರು. ತೆಲುಗು ವೀರಶೈವರನ್ನು 'ಪಂಡಾರಂ" ಎಂತಲೂ ಒಮ್ಮೊಮ್ಮೆ ಕರೆಯುವದುಂಟು.

ಯಾವ ಅತ್ಯಂತ ಪೂಜ್ಯವಾದ ವೀರಶೈವ ಮತವನ್ನು ಈ ಮಲ ಬಾರ ಪ್ರಾಂತದ ವೀರಶೈವರು ಅನುಸರಿಸುತ್ತ ಬಂದಿರುತ್ತಾರೋ ಅಂಥ ಇವರು ಅಲ್ಲಿ ಅಸ್ಪೃಶ್ಯರೆಂದು ತಿಳಿಯಲ್ಪಟ್ಟಿದ್ದಾರೆ! ವೀರಶೈವ ಧರ್ಮದ ಬಗ್ಗೆ ನಿಜವಾದ ಪ್ರೀತಿಯುಳ್ಳಂಥವರು ಯಾರಾದರೂ ಮಲಬಾರಕ್ಕೆ ಹೋಗಿ ಅಲ್ಲಿಯ ತಮ್ಮ ಸಮಾಜ ಬಾಂಧವರ ಸ್ಥಿತಿಯನ್ನು ನೋಡಿ ದ್ದಾದರೆ, ಅವರ ಕಣ್ಣೀರುಗಳು ಉದರದೆ ಇರಲಾರವೆಂದು ನಾನು ನಿಶ್ಚಯವಾಗಿ ಹೇಳಬಲ್ಲೆನು. ಮಲಬಾರಕ್ಕೆ ಸಮೀಪವಾಗಿರುವ ತಮಿಳು ವೀರಶೈವರು ಅವರ ಬಾಂಧವರು. ಆದರೆ ಮೇಲ್ಕಂಡ ಪರಿಸ್ಥಿತಿಯ ಮೂಲಕ ತಮಿಳು ವೀರಶೈವರ ನಡೆನುಡಿಗಳು ಆಚಾರವಿಚಾರಗಳು ಪದ್ಧತಿಗಳು ಮಲಬಾರದವರಿಗಿಂತ ಶ್ರೇಷ್ಠತರವಾಗಿರುವದರಿಂದ ಅವರು ಇವರನ್ನು ಧರ್ಮಬಾಹ್ಯರೆಂದು ತಿಳಿಯುತ್ತಲಿದ್ದಾರೆ! ಮತ್ತು ಅವರ ಕೂಡ ಯಾವ ಸಂಬಧವನ್ನು ಇಡುವದಿಲ್ಲ. ಒಂದು ವೇಳೆ ಇಟ್ಟರೆ, ಅವ ರಂತೆಯೇ ತಾವೂ ಅಗ್ರಾಹ್ಯರೆಂಬ ತಿಳುವಳಿಕೆಯು ಜನರಲ್ಲಿ ಎಲ್ಲಿ ರೂಢ

ವಾಗುತ್ತದೋ ಏನೋ ಎಂಬ ಅಂಜಿಕೆಯೇ ಇದಕ್ಕೆ ಕಾರಣವಾಗಿರಬಹುದು. ಈ ಪ್ರಕಾರ ಮಲಬಾರ ವೀರಶೈವರು ಅಸ್ಪೃಶ್ಯರೆಂದು ಅಲ್ಲಿ ಭಾವಿಸಲ್ಪಟ್ಟರೂ, ಅವರ ರೀತಿ ನಡತೆಗಳು ಮತ್ತು ಆಚಾರ ವಿಚಾರಗಳು ವೀರಶೈವರಂತೆಯೇ ಇವೆ. ಅವರು ಲಿಂಗಧಾರಿಗಳಾಗಿದ್ದಾರೆ. ಆದ್ದರಿಂದ ಅವರು ಇತರ ಪ್ರಾಂತಗಳಲ್ಲಿಯ ವೀರಶೈವರಂತೆಯೇ ಉಚ್ಚವರ್ಗದವರೆಂದು ಹೇಳಲು ಏನೂ ಪ್ರತ್ಯವಾಯುವಿರುವದಿಲ್ಲ.

ಉತ್ತರದೇಶದಲ್ಲಿ ವಾಸವಾಗಿರುವ ವೀರಶೈವರೇ, ನೀವು ನಿಮ್ಮ ದೃಷ್ಟಿಯನ್ನು ಅತ್ಯಂತ ಹೀನದಿಶೆಯಲ್ಲಿ ಕಷ್ಟಬಡುತ್ತಲಿರುವ ಈ ದಕ್ಷಿಣದೇಶದಲ್ಲಿರುವ ನಿಮ್ಮ ವೀರಶೈವ ಬಾಂಧವರ ಕಡೆಗೆ ಹಾಕಿರಿ. ಅವರಲ್ಲಿ ವಿಶೇಷವಾಗಿ ಈ ಮಲಬಾರ ಪ್ರಾಂತದಲ್ಲಿರುವ ವೀರಶೈವರನ್ನು ಉದ್ಧರಿಸಿರಿ. ಅವರಿಗೆ ನಿಮ್ಮ ಸಹಾಯವು ಅತ್ಯಂತವಾಗಿ ಬೇಕಾಗಿದೆ. ವೀರಶೈವ ಸಮಾಜದ ತೊಂದರೆಗಳನ್ನು ಪರಿಹಾರ ಮಾಡಲು ನಮ್ಮ ಉತ್ತರಕಡೆಗಿರುವ ವೀರಶೈವರೇ ಸಮರ್ಥರು. ಈ ತಮಿಳು ಮತ್ತು ಮಲಬಾರ ಪ್ರಾಂತಗಳ ವೀರಶೈವರು ನಮ್ಮವರಲ್ಲವೆಂದು ನಿಮಗೆ ಎಂದೂ ಹೇಳಲಿಕ್ಕೆ ಬರಲಾರದು. ಒಂದುವೇಳೆ ನೀವು ಹೀಗೆಂದರೆ, ಅದು ಅತ್ಯಂತ ದೋಷಾಸ್ಪದವೂ ಪಾಪವುಳ್ಳದೂ ಇರುತ್ತದೆ. ಯಾವ ಪೂಜ್ಯವಾದ ಪರಮಾತ್ಮನ ಚಿನ್ಹವನ್ನು ನೀವು ಧರಿಸುತ್ತೀರೋ ಅದನ್ನೇ ಈ ದಕ್ಷಿಣಕಡೆಗಿರುವ ವೀರಶೈವರೂ ಧರಿಸುತ್ತಲಿದ್ದಾರೆ. ನೀವು ಇವರನ್ನು ಪರಿತ್ಯಜಿಸಿದರೆ, ಹಿಂದುಸ್ತಾನದ ಇತರ ಸಮಾಜದವರ ದೃಷ್ಟಿಯಲ್ಲಿ ನಿಮ್ಮ ಸಮಾಜವೂ ಹೀನವಾದುದೆಂಬ ತಿಳುವಳಿಕೆಯು ಉತ್ಪನ್ನವಾಗದೆ ಇರಲಾರದು. ತಮಿಳ ನಾಡಿನ ವೀರಶೈವರು ಧರ್ಮವನ್ನು ಉನ್ನತ ದಿಶೆಗೆ ತರಲಿಕ್ಕೆ ಮತ್ತು ಸ್ವ ಬಾಂಧವರನ್ನು ಉದ್ಧರಿಸಲಿಕ್ಕೆ ಪುರಾತನ ಕಾಲದಿಂದಲೂ ಬಹಳ ಶ್ರಮಪಟ್ಟಿದ್ದಾರೆ. ಅವರ ಪ್ರಯತ್ನಗಳಿಗೋಸ್ಕರ ಇಡೀ ವೀರಶೈವ ಸಮಾಜವು ಋಣಿಯಾಗಿದೆ. ಸಿದ್ಧಾಂತ ಸಿಖಾಮಣಿಯ ಗ್ರಂಥಕಾರರಾದ ಶ್ರೀ ಶಿವಪ್ರಕಾಶ ಸ್ವಾಮಿಗಳು ಇದೇನಾಡಿನಲ್ಲಿ ಉದ್ಭವಿಸಿರುವರು. ಈ ಗ್ರಂಥವು ಎಲ್ಲ ತಮಿಳರಿಗೂ ವೀರಶೈವರಿಗೂ ಮಾನ್ಯವಾಗಿರುತ್ತದೆ. ಇದೇಪ್ರಕಾರ ತಮಿಳು ನಾಡಿನ ಅನೇಕ ಗ್ರಂಥಕಾರರ ಹೆಸರುಗಳನ್ನು ನಾವು ಹೇಳಬಹುದು. ಇಂಥ ಸಮಾಜವನ್ನು ಉದ್ಧರಿಸಲು ಮುಂದಾಗಬೇಕೆಂದು ನಾನು ಬೇರೆ ಪ್ರಾಂತದ ವೀರಶೈವರನ್ನು

ಪ್ರಾರ್ಥಿಸುತ್ತೇನೆ. ಇತ್ತಿತ್ತ ತಮಿಳು ಮತ್ತು ಮಲಬಾರ ಪ್ರಾಂತಗಳಲ್ಲಿ ವೀರಶೈವ ಸಭೆಗಳು ಆಗುತ್ತ ಬಂದಿರುವದರಿಂದ ಅವರಲ್ಲಿ ಈಗ ಸುಧಾರಣೆಯ ಅಂಕುರಗಳು ಮೆಲ್ಲಗೆ ತಲೆದೋರಹತ್ತಿವೆ. ಇಂಥ ಸಮಯದಲ್ಲಿ ನಿಮ್ಮ ಸಹಾಯವು ಅವರಿಗೆ ಅವಶ್ಯವಾಗಿ ಬೇಕಾಗಿರುತ್ತದೆ.

ವೀರಶೈವ ಸಮಾಜದಲ್ಲಿ ಮಹತ್ವದ ಪೀಠಾಧಿಕಾರಿಗಳು ಇದ್ದಾರೆ. ಇವರು ಈ ಕಾರ್ಯದಲ್ಲಿ ಮುಂದಾಗತಕ್ಕದ್ದು. ಇವರು ಈ ದಕ್ಷಿಣ ಪ್ರಾಂತಗಳಿಗೆ ದಯಮಾಡಿಸಿದರೆ, ಅವರಿಗೆ ಸಾಕಷ್ಟು ಕಾಣಿಕೆಯು ಸಿಗಲಿಕ್ಕಿಲ್ಲಾದ್ದರಿಂದ ಅವರು ಇತ್ತ ಬರುವ ಸಂಭವವಿಲ್ಲೆಂದು ನಾನು ಕೇಳುತ್ತೇನೆ. ಈ ಭಾವವು ಒಂದು ವೇಳೆ ಅವರಲ್ಲಿದ್ದರೆ, ಅದು ಅಯೋಗ್ಯವೆಂದು ನಾನು ಹೇಳದೆ ಇರಲಾರೆನು. ಪೀಠಾಧಿಪತಿಗಳು ಈ ಪ್ರದೇಶಗಳಿಗೆ ಬಂದದ್ದಾದರೆ ಅವರಿಗೆ ಸಮೃದ್ಧವಾದ ಹಣವು ದೊರೆಯದಿದ್ದರೂ ಇತ್ತಕಡೆಯ ವೀರಶೈವರು ತಮ್ಮ ಸ್ಥಿತಿಗನುಸಾರವಾಗಿ ಅವರಿಗೆ ತಮ್ಮ ಕಾಣಿಕೆಯನ್ನು ಆನಂದದಿಂದ ಕೊಡುವರೆಂದು ನನ್ನ ಭರವಸೆ ಇದೆ. ಆದರೆ ಪೀಠಾಧಿಪತಿಗಳ ಕರ್ತವ್ಯವು ಈ ಪ್ರಕಾರ ಕೇವಲ ಕಾಣಿಕೆಗೋಸ್ಕರ ಸಂಚಾರ ಮಾಡುವದು ಇರದೆ, ಅನೇಕ ಶತಮಾನಗಳಿಂದ ಕೆಳಗೆ ಬಿದ್ದಂಥವರನ್ನು ಉದ್ಧರಿಸುವದು ಇರುವದಿಲ್ಲವೇ? ಆದ್ದರಿಂದ ಅವರು ತಮಿಳನಾಡು ಮತ್ತು ಮಲಬಾರ ಈ ಪ್ರಾಂತಗಳಲ್ಲಿ ಸಂಚರಿಸಬೇಕೆಂದು ನನ್ನ ಸೂಚನೆ ಇದೆ. ಇದರಿಂದ ಅವರಿಗೆ ಇಲ್ಲಿಯ ವೀರಶೈವರ ಸ್ಥಿತಿಯು ಚನ್ನಾಗಿ ತಿಳಿದು ಬರುವದಲ್ಲದೆ ಅವರಲ್ಲಿ ಧರ್ಮಜಾಗ್ರತೆಯೂ ಉಂಟಾಗಲಿಕ್ಕೆ ಕಾರಣವಾಗುತ್ತದೆ.

ಶ್ರೀಮಜ್ಜಗದ್ಗುರು ರಂಭಾಪುರೀ ವೀರಸಿಂಹಾಸನಾಧೀಶ ಅಭಿನವರೇಣುಕ

# ನವರತ್ನಮಾಲಿಕಾ ಸ್ತೋತ್ರಂ

(ಲೇಖಕ:—ಶ್ರೀ. ಪಟ್ಟಾಧ್ಯಕ್ಷಃ ಬೃಹನ್ಮಠ ಪಾಲೀಕೋಪ್ಪ
ವಾರದ ಪಾಠಶಾಲಾ ಸೋಲಾಪುರ.)



ಶ್ರೀಶಂಭೋರಮಿತಾಶಿಷಾ ಲಘು ಸಮುದ್ಧರ್ತುಂ ಜಗತ್ಸ್ವಾಮಯಂ।
ಶ್ರೀರಂಭಾಪುರ ವೀರಕೇಸರಿ ಮಹಾಪೀಠಂ ಪರಂ ಪಾವಯನ್॥
ಭಕ್ತಾಘೌಘಮಲಂ ವಿನಾಶಯತಿ ಯಃ ಶಕ್ತ್ಯಾ ಶಿವಾಧಾರಯಾ।
ತಂ ವಂದೇಽಭಿನವಂ ಜಗದ್ಗುರುಮಹಂ ಶ್ರೀರೇಣುಕಾರ್ಯಂ ಮುದಾ॥೧॥

ಯಂ ದೃಷ್ಟ್ವಾ ಭುವಿ ಮಾನವಾಃ ಸುಗುಣಗಂಭೀರಂ ಮುದಾಮಾಕರಂ,
ಗೌರೀಶೋ ಗಿರಿಶೋಽಥವಾ ರವಿರಸೌ ಕಿಂ ಯಾಮಿನೀ ನಾಯಕಃ॥
ಇತ್ಯಾತ್ಸಕ್ಯ ಭರಾದರಂ ಚಕಿತಕೃತ್ಯಂಜಾಃ ಸ್ತುವಂತ್ಯಾದರಾತ್।
ತಂ ವಂದೇಽಭಿನವಂ ಜಗದ್ಗುರುಮಹಂ ಶ್ರೀರೇಣುಕಾರ್ಯಂ ಮುದಾ॥೨॥

ಲಬ್ಧ್ವಾ ಗಂಧಸುಬಂಧುರಾಃ ಸುಮನಸೋ ಗಂಧಂ ಭರಾ ಬಂಭರಾ।
ಲುಬ್ಧ್ವಾ ನೋಜ್ಝಿತು ಮುತ್ಸಹಂತಿ ಸಹಸಾ ತೃಪ್ತಿಂ ವಿನಾ ತಾ ಯಥಾ॥
ತದ್ವಜ್ಜ್ಞಾನ ಸುಗಂಧಮಾ ಜಹತಿ ನೋ ವಿದ್ವಜ್ಜನಾ ಯಂ ಮುದಃ।
ತಂ ವಂದೇಽಭಿನವಂ ಜಗದ್ಗುರುಮಹಂ ಶ್ರೀರೇಣುಕಾರ್ಯಂ ಮುದಾ॥೩॥

ಅಂಚತ್ಕಾಂಚನ ಚಿತ್ರಚಾರು ಮುಕುಟೋದ್ಭಾಸಂ ಸುಹಾಸಂ ಸದಾ।
ವಾಸಂ ಕೇಶವ ವಾಸವಾದಿಪಿನುತಂ ಕೋಶಂ ಮಹಾ ಕರ್ಮಣಾಂ॥
ಚಂಚತ್ಕಾಮ ಮದೇಭ ಪಂಚವದನಂ ಚಾಂಚಲ್ಯಮೋಘಾನಿಲಂ।
ತಂ ವಂದೇಽಭಿನವಂ ಜಗದ್ಗುರುಮಹಂ ಶ್ರೀರೇಣುಕಾರ್ಯಂ ಮುದಾ॥೪॥

ಹೃದ್ಯಂ ಪದ್ಯಗ ಮರ್ಚಯಂತಿ ಯತಯೋ ಯಸ್ಯಾದರಾದನ್ವಹಂ।
ಸದ್ಯೋಯೋ ವರಮುಕ್ತಿ ದಾನಕುಶಲಃ ಸದ್ಯೋಗಿ ಹೃದ್ದೀಪಕಃ॥
ಸದ್ಯೋಜಾತ ಮುಖೋದ್ಭವಂ ಸುರುಚಿರಂ ವಿದ್ಯಾಸರಿತ್ಸಾಗರಂ।
ತಂ ವಂದೇಽಭಿನವಂ ಜಗದ್ಗುರುಮಹಂ ಶ್ರೀರೇಣುಕಾರ್ಯಂ ಮುದಾ॥೫॥

ನಾನಾರತ್ನ ವಿಭೂಷಣೈರ್ಗಲಗತೈ ಸ್ಸ್ಮಾರಾ ಸಮಾರಾಜಿತೈಃ ।
ಯಸ್ಯಾಭಾತಿ ನವೇಂದು ಮಂಡಲವಿಭಾ ಜಸ್ರೋದಯಂ ಶ್ರೀಮುಖಂ ॥
ವಿಶ್ವತ್ರಾಣ ಧುರೀಣ ಮಾದಿಮಗುರುಂ ಗೀತಪ್ರಿಯಂ ಗೀತಿಭಿಃ ।
ತಂ ವಂದೇಽಭಿನವಂ ಜಗದ್ಗುರುಮಹಂ ಶ್ರೀರೇಣುಕಾರ್ಯಂ ಮುದಾ ॥೬॥

ಗರ್ವೋರ್ವೀಧರಸಾರ ಭೇದನ ಪವಿಂದುರ್ವಾರ ಮುರ್ವೀತಲೇ ।
ಗುರ್ವಾದ್ಯಷ್ಟಕ ಶಿಷ್ಟನೀಲಕಮಲ ವ್ಯೂಹಕ್ಷಪಾ ಪಾಲಕಃ ॥
ಸರ್ವಾನ್ಪಸ್ಯತಿ ಯಃ ಸಮೇನ ನಯನೇ ನೋರ್ವೀಭವಾನ್ಮಾನವಾಂ ।
ಸ್ತಂ ವಂದೇಽಭಿನವಂ ಜಗದ್ಗುರುಮಹಂ ಶ್ರೀರೇಣುಕಾರ್ಯಂ ಮುದಾ ॥೭॥

ಯತ್ಪಾಲಾಮರ ವರ್ತ್ಮನಿ ತ್ರಿಪಥಗೇ ವಾಲಂ ಶುಭಾ ಭಸ್ಮನೋ ।
ಲೇಖಾದುರ್ವಿಧಿ ನಾಶಕಾಃ ಪ್ರವಿಲಸಂತೀಶಾನ ಕಾಶಾತ್ಮನಃ ॥
ಯದ್ರೋಮಾಂಕುರ ಕೋಟಿಕೋಟಿಷು ಸದೈವಾಭಾತಿ ಶೈವೀಕಲಾ ।
ತಂ ವಂದೇಽಭಿನವಂ ಜಗದ್ಗುರುಮಹಂ ಶ್ರೀರೇಣುಕಾರ್ಯಂ ಮುದಾ ॥೮॥

ಯಂ ತ್ವಾಮಾಗಮವೇದ್ಯ ಮರ್ಥಿನಿಕರಾ ಮರ್ತ್ಯಾವನೀ ಸಂಭವಂ ।
ಸಂಗಾಯಂತಿ ಕವೀಶ್ವರಾಃ ಪ್ರವಿಲಸ ದ್ವಾಗ್ವೈಖರೀ ಲಾಲಿತಾಃ ॥
ರಾಜತ್ಪಾರ್ಥಿವ ಮೌಲಿಕೀಲಿತ ಸುಮ ಸ್ರಗ್ವಾಸಿತಾಂಘ್ರಿಪ್ರಭೋ ।
ಸತ್ವಂ ರೇಣುಕ ಮಂಗಲಂ ವಿತರಭೋ ಮತ್ವಾಶು ದೀನಂ ಜನಂ ॥೯॥

ಅಭಿನವಗುರು ರಾಜಂ ಮುಕ್ತಿ ವೀರುನ್ಮಹೀಜಂ ।
ಸುಚರಿತ ಮಣಿಶಾಣಂ ಕಾರಣಂ ಸಂಸ್ಕೃತೀನಾಂ ॥
ಪರಹಿತರತಚಿತ್ತಂ ಸರ್ವ ಸಂಪನ್ನಿಮಿತ್ತಂ ।
ನಮತನಮತ ಲೋಕಾಲೋಕ ವಿಸ್ತೀರ್ಣ ಕೀರ್ತಿಂ ॥೧೦॥

# ಶಿವಾನುಭವ.

ಲೇಖಕಃ—ಗಂಗಾಧರಪ್ಪಾ ಸಂಗಪ್ಪಾ ಸಾಬೋಜಿ ಠಳಕವಾಡಿ.



ಶಿವಾನುಭವವು, ವಿಷ್ಣು, ಬ್ರಹ್ಮ, ರುದ್ರ ಮುಂತಾದ ದೇವರಿಂದಲೂ, ಸೂರ್ಯ, ಚಂದ್ರ, ಇಂದ್ರ ಮುಂತಾದ ದೇವತೆಗಳಿಂದಲೂ, ವೇದಾಗಮೋಪನಿಷದಗಳಿಂದಲೂ, ಶುಕ್ರ ಬೃಹಸ್ಪತ್ಯಾದಿ ಆಚಾರ್ಯರಿಂದಲೂ, ಸಾನಂದ ಸನಕ ಸನತ್ಕುಮಾರ ಭೃಗು ದೂರ್ವಾಸ ಮುಂತಾದಋಷಿಗಳಿಂದಲೂ, ಮನು, ಪರಾಶರ, ಗೌತುಮ ಮುಂತಾದ ಮುನಿಗಳಿಂದಲೂ ಪ್ರಚಾರದಲ್ಲಿ ಬಂದಿರುತ್ತದೆಂಬದು ಅನೇಕ ಗ್ರಂಥಗಳಿಂದ ವ್ಯಕ್ತವಾಗುತ್ತದೆ. ಆದರೆ ಗಣಪತಿ, ಷಣ್ಮುಖ, ವೀರಭದ್ರ, ನಂದಿ, ಭೃಂಗಿಗಳಿಂದ ಪ್ರಚಾರದಲ್ಲಿಬಂದ ಶಿವಾನುಭವಕ್ಕೂ ಮೇಲಿನ ಶಿವಾನುಭವಕ್ಕೂ ಅಂತರವಿದ್ದಂತೆ ತೋರುತ್ತದೆ. ಒಂದರಲ್ಲಿ ಪ್ರಕೃತಿಯ ಸಂಬಂಧವು ಇರುವದರಿಂದ ಅದು ಪ್ರಾಕೃತಿಕವೆಂತಲೂ, ಮತ್ತೊಂದರಲ್ಲಿ ಅದು ಇಲ್ಲದಿರುವದರಿಂದ ಅಪ್ರಾಕೃತವೆಂತಲೂ ಎರಡು ಬಗೆಯಾಗಿರುವದೆಂದು ಹೇಳಬಹುದು. ಶಿವಲಿಂಗ ಸಂಬಂಧವು ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿಗೂ ಉಂಟಾಗಿ, ಮಲತ್ರಯಗಳೂ, ತಾಪತ್ರಯಗಳೂ, ಭವ ಪಾಶ ಬಂಧನಗಳೂ, ಇಲ್ಲದಿರಮಾತನೇ ಅಪ್ರಾಕೃತನೆಂತಲೂ, ಕೇವಲ ವಚನದಲ್ಲಷ್ಟೇ ಶಿವಸಂಬಂಧಿಕರಾದ ಶೈವರು ಪ್ರಕೃತಿ ಎಂದರೆ ಮಾಯೆಯ ಸಂಬಂಧವನ್ನು ಪರಿಹರಿಸಿಕೊಳ್ಳದಿರುವದರಿಂದ ಅವರು ಪ್ರಾಕೃತರೆಂತಲೂ, ಹೇಳಿಸಿಕೊಳ್ಳುತ್ತಾರೆ. ಪ್ರಾಕೃತರು ಫಲ, ಪದವಿಗಳನ್ನು ಹೊಂದತಕ್ಕವರು. ಅಪ್ರಾಕೃತರು ಕೇವಲ ಜೀವನ್ಮುಕ್ತಿ ಸುಖವನ್ನು ಹೊಂದತಕ್ಕವರು. ಈ ಜೀವನ್ಮುಕ್ತಿಯನ್ನುಂಟುಮಾಡುವದೇ ಶಿವಾನುಭವವೆಂದು ಹೇಳಬಹುದು. ಈ ಶಿವಾನುಭವ ಸಾಧ್ಯವಾಗತಕ್ಕ ಮಾರ್ಗದರ್ಶಕರಾದ ಪಂಚಾಚಾರ್ಯರು, ಪರಮೇಶ್ವರನ ಪಂಚಮುಖಗಳಿಂದ ಉದ್ಭವಿಸಿದರೆಂದು ಕೆಲವುಕಡೆಗೂ ಕಾಶಿ, ಕೇದಾರ, ಉಜ್ಜನಿ, ಕೊಲ್ಲಿಪಾಕೀ, ಶ್ರೀ ಶೈಲ ಮುಂತಾದ ಸ್ಥಳಗಳಲ್ಲಿ ಇರತಕ್ಕ ಸ್ಥಾವರಲಿಂಗಗಳಿಂದ ಉತ್ಪನ್ನರಾದರೆಂದು ಮತ್ತೊಂದು ಕಡೆಗೂ ಬರೆದಿರುತ್ತಾರೆ.

ಇವರಲ್ಲಿ ರೇಣುಕಾಚಾರ್ಯರೆಂಬವರೇ ಪ್ರಥಮಾಚಾರ್ಯರೆಂತಲೂ ಅಗಸ್ತ್ಯಋಷಿಗೆ ವೀರಶೈವ ಧರ್ಮತತ್ವಗಳನ್ನು ಉಪದೇಶಿಸಿದರೆಂತಲೂ ಸಿದ್ಧಾಂತಶಿಖಾಮಣಿ ಎಂಬ ಗ್ರಂಥದಲ್ಲಿ ಶಿವಯೋಗಿಗಳೆಂಬ ಸಿದ್ಧರಾಮೇಶ್ವರನ ವಂಶದ ಸ್ವಾಮಿಗಳು ಬರೆದಿರುತ್ತಾರೆ. ಪಂಚಾಚಾರ್ಯರು ಬರೆದ ಗ್ರಂಥಗಳು ದೊರೆಯದ್ದರಿಂದ ಅವರ ಮತಗಳಾಗಲೀ ಆಚಾರವಿಚಾರಗಳಾಗಲೀ ನಿಚ್ಚಳವಾಗಿ ತಿಳಿಯಲಿಕ್ಕೆ ಮಾರ್ಗವಿಲ್ಲಾಗಿದೆ. ಆದರೂ ಆಗಮಗಳಲ್ಲಿ ವೀರಶೈವರ (ಶಿವಾನುಭಾವಿಗಳ) ಲಕ್ಷಣಗಳನ್ನು ಹೇಳಿರುತ್ತದೆ. ಅದರಲ್ಲಿ ಅಷ್ಟಾವರಣ ಯುಕ್ತನೂ, ಪಂಚಾಚಾರ ಪರಾಯಣನೂ, ಷಟ್‌ಸ್ಥಲದ ಜ್ಞಾನಿಯೂ ಆದವನು ವೀರಶೈವನೆಂದು ಹೇಳಿರುತ್ತದೆ. ಅಷ್ಟಾವರಣಗಳು ಆವು ಎಂದರೆ, ಗುರು, ಲಿಂಗ, ಜಂಗಮ, ಪಾದೋದಕ. ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರವೆಂಬವುಗಳು. ಎಂಟು ಆವರಣಗಳನ್ನು ಸಾಧ್ಯಮಾಡಿಕೊಂಡವನು ವೀರಶೈವನೆನಿಸುತ್ತಾನೆ. ಧರ್ಮ ಸ್ಥಾಪನಾಚಾರ್ಯನಾಗಲೀ ಇಲ್ಲವೇ ಭಕ್ತಿಮಾರ್ಗ ಸ್ವೀಕರಿಸಿದ ಭಕ್ತನೇಆಗಲೀ ಅಷ್ಟಾವರಣ ಹೊಂದದ ಹೊರ್ತು ವೀರಶೈವನೆನಿಸಲಾರನು. ಆದುದರಿಂದ ವೀರಶೈವ ನೆನಿಸುವವನು ಅಷ್ಟಾವರಣಗಳ ಸಂಪಾದನಮಾಡಿಕೊಳ್ಳಲಿಕ್ಕೆ ಬೇಕಾಗಿದೆ.

## ಅಷ್ಟಾವರಣಗಳು.

**೧ ನೇ ಆವರಣವು** ಗುರು, ವೆಂಬುವದು, ವಿದ್ಯಾ, ಜ್ಞಾನ, ವೆಂದು ಹೇಳಿಸಿಕೊಳ್ಳುತ್ತದೆ. ಆದುದರಿಂದ ವೀರಶೈವರಾಗಲಿಚ್ಛಿಸುವವರು, ಮೊಟ್ಟಮೊದಲು ವಿದ್ಯಾಕಲಿತು ಜ್ಞಾನಿಗಳಾಗಿ ಗುರುತ್ವಸಂಪಾದಿಸಬೇಕೆಂಬ ನಿಯಮವನ್ನು ನಮ್ಮ ಧರ್ಮವು ಹೇಳಿರುತ್ತದೆ. ಐಹಿಕ ಸುಖಸಾಧನಗಳನ್ನು ಸಾಧ್ಯಮಾಡಿಕೊಡತಕ್ಕದ್ದು ಅವಿದ್ಯಎಂತಲೂ, ಪಾರಮಾರ್ಥಿಕವೆಂದರೆ ಶಿವಜೀವರ ಐಕ್ಯಜ್ಞಾನವನ್ನು ಮಾಡಿಕೊಡುವದೇ ವಿದ್ಯಯೆಂತಲೂ ಹೇಳಿರುತ್ತಾರೆ. ಆದುದರಿಂದಲೇ "ವಿದ್ಯಾಗುರೂಣಾಂಗುರುಃ" ಎಂದು ನಮ್ಮ ಧರ್ಮವು ಹೇಳಿದೆ. ವಿದ್ಯಯು ಗುರುವಿಗೆ ಗುರುತ್ವವನ್ನುತಂದು ಕೊಡತಕ್ಕದ್ದಾಗಿರುವದರಿಂದ ಎಲ್ಲರೂ ಲೌಕಿಕ ಪಾರತ್ರಿಕ ವಿದ್ಯಾವಿದ್ಯಗಳನ್ನು ಸಂಪಾದಿಸುವದೇಗುರು ಆವರಣಸಾಧ್ಯಮಾಡಿಕೊಳ್ಳತಕ್ಕದೆಂದು ತಿಳಿಯಬಹುದು. ಜ್ಞಾನವೇ ಎಲ್ಲಕ್ಕೂ ಶ್ರೇಷ್ಠ

ವಾದ್ದರಿಂದ ಅದಕ್ಕೆ ಗುರುವೆಂಕಲೂ ಹೇಳಿರುತ್ತಾರೆ. ಈ ಗುರುತ್ವವನ್ನು ಭುವನದಮಾನವರೆಲ್ಲರೂ ಸಂಪಾದಿಸಿಕೊಳ್ಳಬಹುದು. ಆದುದರಿಂದ ನಗುರೋರಧಿಕಂವೆಂಬ ವೇದವಾಕ್ಯವೂ ಇರುತ್ತದೆ. ಇಂಥಗುರುತ್ವವನ್ನು ಸಾಧಿಸುವದರಲ್ಲಿ ಶಿಕ್ಷಾಗುರು, ದೀಕ್ಷಾಗುರು, ಮೋಕ್ಷಾಗುರುವೆಂದು ಮೂರು ಬಗೆಯಾಗಿರುತ್ತದೆ. ಮಕ್ಕಳಿಗೆ ತಾಯಿತಂದೆಗಳೇ ಯಾವಾಗಲೂ ಶಿಕ್ಷಣಕೊಡುವವರಾದುದರಿಂದ ಅವರೇ ಶಿಕ್ಷಾಗುರುವೆಂದು ಹೇಳಿಕೊಳ್ಳುತ್ತಾರೆ. ಆದುದರಿಂದ ಮಾತಾಪ್ರಥಮಗುರುನೆಂದು ವೇದವು ಹೇಳುತ್ತದೆ. ಮತ್ತು ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ ಎಂಬ ವಾಕ್ಯಗಳ ಅನುಕ್ರಮದಮೇಲಿಂದಲೂ, ಮಾತೆಯ ಮಹತ್ವವು ಕಂಡುಬರುತ್ತದೆ. ಈ ಕಾರಣದಿಂದಲೇ ನಮ್ಮ ಧರ್ಮಸ್ಥಾಪಕರು ನಮ್ಮ ಸಮಾಜದ ಹೆಣ್ಣು ಗಂಡು ಎಲ್ಲರಿಗೂ ಅಷ್ಟಾವರಣವನ್ನು ಸಂಪಾದಿಸಲಿಕ್ಕೆ ಹೇಳಿರುವದು ಎಷ್ಟು ಮಹತ್ವದಮಾತಾಗಿದೆ. ಉಳಿದ ಸಮಾಜದವರಲ್ಲಿ ಸ್ತ್ರೀಯರಿಗೆ ಧರ್ಮಾಧಿಕಾರವಿರುವದಿಲ್ಲ; ಆದುದರಿಂದ ಜನ್ಮನಾ ಜಾಯತೆಶೂದ್ರಃ ಎಂಬವಾಕ್ಯದಂತೆ ಆವರು ಕಡೆತನಕ ಅದೇ ಅವಸ್ಥೆಯಲ್ಲಿ ಉಳಿಯಬೇಕಾಯಿತು. ಅದರಿಂದ ಅವರಲ್ಲಿ ವರ್ಣಸಂಕರವಾಗಲಿಕ್ಕೆ ಆಸ್ಪದವಾಗುತ್ತದೆ. ವೀರಶೈವರಲ್ಲಿ ಮಾತ್ರ ಹುಟ್ಟಿದ ಕೂಡಲೆ, ಹೆಣ್ಣು ಗಂಡು ಕೂಸುಗಳಿಗೆ ಲಿಂಗಧಾರಣ ಸಂಸ್ಕಾರವಾಗುತ್ತಿರುವದರಿಂದ ಪೂರ್ವದ ಯಾವಬಗೆಯ ಉಪಾಧಿಯೂ ಉಳಿಯದೆ, ಆವರು ಶುದ್ಧತ್ವವನ್ನು ಹೊಂದುತ್ತಾರೆ. ಆಮೇಲೆ ಎಂಟನೇ ವರ್ಷಕ್ಕೆ ದೀಕ್ಷಾ ಸಂಸ್ಕಾರದಮರ್ಮವೆಲ್ಲವನ್ನೂ ಬಲ್ಲಗುರುವಿನಿಂದ ದೀಕ್ಷೆಯನ್ನು ಹೊಂದಿ ಗುರುಮುಟ್ಟಿ ಗುರುವಾಗಿ, ನಮ್ಮ ಧರ್ಮಕಟ್ಟಳೆಗಳನ್ನು ಅರಿತವರಾಗತಕ್ಕದ್ದು. ಇಂಥ ಸಂಸ್ಕಾರಗಳ ಕ್ರಿಯಾದಿಗಳನ್ನು ಜ್ಞಾನಸಂಬಂಧದಿಂದ ಮಾಡುವವರೇ ದೀಕ್ಷಾಗುರುಗಳು. ಮೋಕ್ಷಾಗುರುವಂತೂ ತನ್ನೊಳಗೇ ಇರುತ್ತಾನೆ. ಅವನ ಕೃಪೆಯಾಗದೆ ಮೋಕ್ಷವಾಗುವದಿಲ್ಲ. ಆತನಿಗೆ ಅನನ್ಯಭಾವದಿಂದ ಶರಣು ಹೋದಲ್ಲಿ ಅತನ ಕೃಪೆಯಾಗಿ ನಿಃಸಂಶಯನಾಗಿ ನಿಜಾನಂದವೆಂಬ ಜೀವನ್ಮುಕ್ತಿ ಸುಖವನ್ನು ಪಡೆಯಬೇಕಾಗಿರುತ್ತದೆ. ಆವಾಗ್ಗೆ ಶಿವಾನುಭವವು ಗೋಚರವಾಗುತ್ತದೆ.

೨ ನೇ **ಆವರಣವಾದ** ಲಿಂಗವು, ಸದಾಚಾರಸಂಬಂಧ ಉಳ್ಳದ್ದಾಗಿ, ಕಾಯಕ, ವಾಚಕ, ಮಾನಸಿಕವಾದದ್ದಾಗಿದೆ. ಕಾಯಕ

ವೆಂಬುದೇ ಸ್ಥೂಲತನುವಿಗೆ ಸಂಬಂಧವಾದ ಇಷ್ಟಲಿಂಗವು. ಇದು ಸ್ಥೂಲ ಶರೀರವನ್ನು ಶುದ್ಧೀಗೊಳಿಸಿ ಶುದ್ಧಾಚರಣೆಯನ್ನಾಗಿ ಮಾಡುತ್ತದೆ. ವಾಚಕ ಸಂಬಂಧವೆಂಬುದು ಸೂಕ್ಷ್ಮ ಶರೀರ ಸಂಬಂಧವುಳ್ಳದ್ದಾಗಿ ವಾಚೆಯನ್ನು ಶುದ್ಧಿಗೊಳಿಸಿ ಪ್ರಾಣಲಿಂಗವೆನಿಸುತ್ತದೆ. ಇದು ಮನಸ್ಸಿಗೆ ಗೋಚರವಾಗುತ್ತದೆ. ಇನ್ನು ಕಾರಣ ತನುವಿಗೆ ಸಂಬಂಧವಾದ ಭಾವ ಲಿಂಗವು ಜ್ಞಾನರೂಪವು ಇದು ಆಚಾರ ವಿಚಾರಗಳನ್ನು ಸಿದ್ಧೀಗೊಳಿಸುತ್ತದೆ. ಮೂರೂ ತನುಗಳಿಗೆ ಸಂಬಂಧವಾದ ಇಂದ್ರಿಯಂಗಳಲ್ಲಿ ತಮ್ಮ ತಮ್ಮ ಶಕ್ತಿಗಳ ಸಮೇತವಾಗಿ ಕೆಲಸ ಮಾಡುತ್ತಿರುವ ಲಿಂಗಗಳಿಗೆ, ಶಬ್ದ, ಸ್ಪರ್ಶ, ರಸ, ರೂಪ, ಗಂಧಗಳೆಂಬ ವಿಷಯಂಗಳೆಂಬ ಪದಾರ್ಥಗಳನ್ನು ಅರ್ಪಿಸಿ ಆಯಾಯ ಲಿಂಗಗಳ ಪ್ರಸಾದವನ್ನು ಸ್ವೀಕರಿಸುವವಾದುದರಿಂದ ಲಿಂಗಧಾರಿಗಳು ಲಿಂಗಭೋಗೋಪ ಭೋಗಿಗಳಾಗುತ್ತಾರೆ- ಅದರಿಂದ ಅವರ ಭವಪಾಶವು ಪರಿಹರಿಸಲ್ಪಡುತ್ತದೆ. ಪಂಚಸೂತಕಗಳು ತೊಲಗುತ್ತವೆ.

**೩ನೇ ಆವರಣವಾದ** ಜಂಗಮತತ್ವವು, ಮೇಲೆ ವಿವರಿಸಿದ ಗುರು, ಲಿಂಗವೆಂಬ ಎರಡೂ ಆವರಣಗಳನ್ನು ಅಂದರೆ, ಜ್ಞಾನ ಮತ್ತು ಸದಾಚಾರಗಳನ್ನು ಸಂಪಾದಿಸಿದವನೇ ಸ್ವಾರ್ಥತ್ಯಾಗಿಯಾಗಿ, ಸಮದೃಷ್ಟಿಯುಳ್ಳವನಾಗಿ ಸ್ವಸುಖದುಃಖಗಳನ್ನು ಪರಿತ್ಯಜಿಸಿ, ಪರಹಿತ ಪರೋಪಕಾರಕಾರ್ಯದಲ್ಲಿಯೇ ರತನಾಗಿರುವಾತನೇ ಜಂಗಮನು. ಇವರಲ್ಲಿ ಜ್ಞಾನ ಸದಾಚಾರಗಳನ್ನು ತಾನು ಇರುವಲ್ಲಿಯೇ ಮಾಡುವವನು ಸ್ಥಿರ ಜಂಗಮನೆಂತಲೂ, ಪ್ರಾಂತ ಪ್ರಾಂತಗಳಿಗೆ ಸಂಚರಿಸಿ ಮಾಡುವಾತನೇ ಚರ ಜಂಗಮನೆಂತಲೂ, ಅನ್ನುತ್ತಾರೆ. ಮತ್ತು ಸರ್ವಸಂಗ ಪರಿತ್ಯಾಗ ಮಾಡಿ ನಿರಂಜನತ್ವವನ್ನು ಹೊಂದಿ ಪಟ್ಟಣಕ್ಕೆ ಪಂಚರಾತ್ರಿ ಹಳ್ಳಿಗೆ ಒಂದು ರಾತ್ರಿ ಇದ್ದು ದೊರೆತದ್ದರಲ್ಲಿಯೇ ಸಂತುಷ್ಟನಾಗಿ ಧರ್ಮಜ್ಞಾನ ಪ್ರಸಾರ ಮಾಡುವವನು ಪರಜಂಗಮನೆಂದೆನಿಸುತ್ತಾನೆ. ಈ ಬಗೆಯ ಜಂಗಮತ್ವವನ್ನು ತಮತಮಗೆ ಸಾಧ್ಯವಾದ ಮಟ್ಟಿಗೆ ಪ್ರತಿಯೊಬ್ಬನೂ ಸಾಧ್ಯ ಮಾಡಿಕೊಳ್ಳತಕ್ಕದ್ದು ಎಲ್ಲರ ಕರ್ತವ್ಯವಾಗಿರುತ್ತದೆ.

**೪ನೇ ಆವರಣವಾದ** ಪಾದೋದಕವು, ಗುರು, ಲಿಂಗ, ಜಂಗಮರ ಪಾದೋದಕವು ಸಿದ್ಧವಾಗುವಾಗ್ಗೆ ಗುರು, ಲಿಂಗ, ಜಂಗಮರೇ ಕೂಡಿ ಪ್ರಸಾದ, ವಿಭೂತಿ, ರುದ್ರಾಕ್ಷ, ಮಂತ್ರಗಳ ಸಹಾಯದಿಂದ ತಮ್ಮ

ತನ್ನೊಳಗಿನ ಅಹಂಕಾರ ಅಂದರೆ, ಹೆಚ್ಚುಕಡಿಮೆ ಎಂಬ ಅಜ್ಞಾನವನ್ನು ತ್ಯಜಿಸಿ, ವಿನಯ, ಕರುಣ, ಸಮತೆ, ಎಂಬ ಗುಣತ್ರಯಗಳನ್ನು ಹೊಂದುವದಕ್ಕಾಗಿ, ಮೂರೂ ರೂಪಗಳು ಪಡೆದು ಕಂಡರೂ ಒಂದೇ ಯಾಗಿರುತ್ತವೆಂಬ ಸಮರಸಭಾವವನ್ನು ಹೇಗೆ ಹೊಂದುತ್ತವೆಂಬದನ್ನು ತೋರಿಸುವ ಕ್ರಿಯಾಚರಣೆಯೇ ಪಾದೋದಕ ಸೇವನೆಯಾಗಿದೆ. ಅದನ್ನು ಗುರು, ಲಿಂಗ, ಜಂಗಮರೇ ಕೂಡಿ ಸಿದ್ಧಮಾಡಿ ಅವರೇ ಸ್ವೀಕರಿಸುತ್ತಾರೆ. ಪಾದೋದಕ ಸ್ವೀಕಾರದಿಂದ ಪವಿತ್ರತೆಯುಂಟಾಗುತ್ತದೆ.

**೫ ನೇ ಆವರಣವಾದ** ಪ್ರಸಾದವೆಂದರೆ, ಗುರು, ಲಿಂಗ, ಜಂಗಮತ್ವವನ್ನು ಹೊಂದಿದ ಶಿವಭಕ್ತರು ತಾವು ಉಪಜೀವನಕ್ಕೋಸ್ಕರವಾಗಿ ಉಪಭೋಗಿಸತಕ್ಕ ಎಲ್ಲ ವಿಷಯಗಳೆಂಬ ಪದಾರ್ಥಗಳನ್ನು ಆಯಾಯ ಇಂದ್ರಿಯಂಗಳಲ್ಲಿ ನೆಲೆಗೊಂಡ ಲಿಂಗಗಳಿಗೆ ಅರ್ಪಣ ಮಾಡಿ ಆಯಾಯ ಲಿಂಗಗಳ ಪ್ರಸಾದವನ್ನೇ ಸ್ವೀಕರಿಸಬೇಕೆಂಬ ನಿಯಮವು ವೀರಶೈವ ಧರ್ಮದ್ದಾಗಿರುತ್ತದೆ. ಇದರ ಕಾರಣವೇನಂದರೆ, ವಿಷಯಗಳ ಭೋಗದಿಂದ ಭವಬಂಧನ ಉಂಟಾಗುತ್ತಿರುವದರಿಂದ ವೀರಶೈವರು ಅದನ್ನು ಲಿಂಗಕ್ಕರ್ಪಿಸಿ ಆ ಲಿಂಗದ ಪ್ರಸಾದ ಸ್ವೀಕರಿಸುವರಾದುದರಿಂದ ಅವರು ಭವಿಗಳಾಗದೆ ಭಕ್ತರೆನಿಸುತ್ತಾರೆ. ಭವಪಾಶವನ್ನು ಉಳಿಸಿಕೊಂಡವನೇ ಭವಿ ಎನಿಸುತ್ತಾನೆ, ಅದನ್ನು ಪರಿಹರಿಸಿಕೊಂಡವನೇ ಭಕ್ತನಾಗುತ್ತಾನೆ. ಭಕ್ತವರ್ಗದ ಮೆಟ್ಟು ಎಲ್ಲಿದೆ, ಎಂಬದು ಇದರ ಮೇಲಿಂದ ವಿದಿತವಾಗುತ್ತಿದೆ. ಜಗತ್ತಿನಲ್ಲಿಯ ಭೋಗ್ಯ ಪದಾರ್ಥಗಳ ಮೇಲಿನ ವಿಷಯದ ಹಂಬಲವನ್ನು ತ್ಯಜಿಸಿ, ಅದರ ಬಾಧೆಯನ್ನು ಕಳಕೊಂಡು ಪ್ರಸಾದ ಭೋಗಿಗಳಾಗುವದು ಎಂಥ ಮಹತ್ವದ ಕ್ರಿಯಾಚರಣೆಯೆಂಬದನ್ನು ವಿಚಾರ ಮಾಡಿ ಮನನ ಮಾಡಿಕೊಳ್ಳಬೇಕಾಗಿದೆ. ಗುರು ಅಂದರೆ ಜ್ಞಾನ, ಲಿಂಗವೆಂದರೆ ಸುಜ್ಞಾನ, ಜಂಗಮವೆಂದರೆ ಮಹಾಜ್ಞಾನವೆಂತಲೂ ಹೇಳುತ್ತಿರುವದರಿಂದ ಗುರು ಪ್ರಸಾದವೆಂದರೆ ಶುದ್ಧವಾದುದೆಂತಲೂ ಲಿಂಗ ಪ್ರಸಾದವೆಂದರೆ ಸಿದ್ಧವಾದುದೆಂತಲೂ ಜಂಗಮ ಪ್ರಸಾದವೆಂದರೆ ಪ್ರಸಿದ್ಧವಾದುದ್ದೆಂತಲೂ ಹೇಳಿರುವದರಿಂದ ಪರಿಶುದ್ಧಾಚರಣೆಯುಳ್ಳದೇ ಗುರು ಪ್ರಸಾದವು. ಮೋಕ್ಷದ ಸಿದ್ಧತೆಯುಂಟಾದುದೇ ಲಿಂಗ ಪ್ರಸಾದವೆಂತಲೂ ಇವೆರಡೂ ಸಾಧ್ಯವಾದವನು ಪ್ರಸಿದ್ಧವಾಗುವದೇ ಜಂಗಮ ಪ್ರಸಾದವೆಂದು ತಿಳಿಯತಕ್ಕದ್ದು.

**೭ನೇ ಆವರಣವಾದ** ವಿಭೂತಿಯು, ಎಂಬದು ಹೇಳಿಸ ಐದು ಆವರಣಗಳನ್ನು ಸಾಧಿಸಿದವನು ದೊಡ್ಡ ವಿಭೂತಿಯೋ ಎಸಿಸುತ್ತಾನೆ. ವಿಭೂತಿಯನ್ನು ಆವರಿಸೋಣದರಿಂದ ಸರ್ವಪ್ರಕಾರದ ಭವಬಂಧನಾದಿಗಳ ಭೀತಿಯು ನಷ್ಟವಾಗಿ, ಆತನು ಎಲ್ಲ ಬಗೆಯಿಂದಲೂ ನಿರ್ಭೀತನಾಗುತ್ತಾನೆ. ದುರಾಚರಣೆಯುಳ್ಳವನು ಎಂದೂ ನಿರ್ಭೀತನಾಗಲಾರನು. ಚಿಭ್ಭಸ್ಮವೆಂಬದು ಜ್ಯೋತಿರ್ಲಿಂಗವುಯವಾದುದರಿಂದ ಅದೇ ಸ್ವರೂಪದವನಾಗುವದಕ್ಕಾಗಿಯೂ ಚಿಧ್ಭಸ್ಮವನ್ನು ಧರಿಸಿಕೊಂಡು, ನಿರ್ಭೀತರಾಗತಕ್ಕದ್ದು ಎಲ್ಲರ ಕರ್ತವ್ಯವಾಗಿರುತ್ತದೆ.

**೭ನೇ ಆವರಣವಾದ** ರುದ್ರಾಕ್ಷವೆಂದರೆ, ರುದ್ರ ಅಂದರೆ ಈಶ್ವರ, ಅಕ್ಷ ವೆಂದರೆ ಜ್ಞಾನ, ಈಶ್ವರನ ಕಟಾಕ್ಷದಿಂದ ಆನಂದಾಶ್ರುಗಳು ಸುರಿದು ರುದ್ರಾಕ್ಷ ಬೀಜಗಳು ಹುಟ್ಟಿ ಗಿಡಗಳಾಗಿ ರುದ್ರಾಕ್ಷಗಳಾಗಿರುತ್ತವೆ. ಅವನ್ನು ಧರಿಸುವದೆಂದರೆ ಈಶ್ವರನಲ್ಲಿ ಸಾಕ್ಷಾತ್ಕಾರವನ್ನು ಹೊಂದಿ ಆನಂದಾಶ್ರುಗಳನ್ನು ಸುರಿಸುವದೆಂದು ಹೇಳಬಹುದು. ಈ ಬಗೆಯು ಸಾಕ್ಷಾತ್ಕಾರದಿಂದ ಆನಂದಾಶ್ರುಗಳನ್ನು ಸುರಿಸುವದಕ್ಕಾಗಿ ರುದ್ರಾಕ್ಷ ಧಾರಣ ಮಾಡಬೇಕೆಂಬ ನೇಮವು ನಮ್ಮಲ್ಲಿ ಇರುತ್ತದೆ. ಶಿವಾನುಭವಿಯ ಅಲಂಕಾರವೆಂದರೆ ರುದ್ರಾಕ್ಷ ಧಾರಣನೆಂದು ಹೇಳಬಹುದು.

**೮ನೇ ಆವರಣವಾದ** ಮಂತ್ರವನ್ನು ಆವರಿಸುವ ಬಗೆ ಆವುದೆಂದರೆ, ಓಂ ಎಂಬ ಪರಮಾತ್ಮ ವಾಚಕ ಪ್ರಣವವು ಅ, ಉ, ಮ ವೆಂಬ ಸ್ಥೂಲ, ಸೂಕ್ಷ್ಮ, ಕಾರಣ ಗಳನ್ನು ಕೂಡಿಕೊಂಡು ಪ್ರಕಟವಾಗಿ, ಪೃಥ್ವಿ, ಅಪ, ತೇಜ, ವಾಯು, ಆಕಾಶ ವೆಂಬ ಪಂಚತತ್ವವನ್ನು ಪಂಚೀಕರಿಸಿದುದರಿಂದ "ನಮಃಶಿವಾಯ" ವೆಂಬ ಪಂಚಾಕ್ಷರಗಳಿಂದ ವ್ಯಕ್ತವಾಗಿ ಪಂಚಾಕ್ಷರ ಮಂತ್ರವೆಂತಲೂ, ಇದಕ್ಕೆ ಕಾರಣವಾದ ಮೂಲ ಪ್ರಣವವನ್ನು ಕೂಡಿಕೊಂಡು " ಓಂ ನಮಃಶಿವಾಯ " ವೆಂಬ ಷಡಕ್ಷರ ಮಂತ್ರವೆಂತಲೂ ಹೇಳಿಸಿ ಕೊಂಡುದರಿಂದ ಇವೆರಡೇ ಮಂತ್ರಗಳ ಜಪದಿಂದ ಆದೇ ಸ್ವರೂಪವನ್ನು ತಾನೂ ಹೊಂದಬೇಕಾದುವರಿಂದ ಅಂದರೆ ಭೃಂಗ ಕೀಟ ನ್ಯಾಯದಂತೆಯೂ, ಮನವೆಂಬ ಕಲ್ಪವೃಕ್ಷದ ಬಳಿಗೆ ಕೂತು ಇಚ್ಛಿಸಿದ ಫಲಪ್ರಾಪ್ತಿಯಾಗುವಂತೆಯೂ, ಜಗತ್ಕರ್ತನ ಗುರ್ತವು ನಮಗೆ ಹತ್ತಿ ಆತನ ಸಾಕ್ಷಾತ್ಕಾರ ಹೊಂದಿ ಆತನ ಹೆಸರವನ್ನೇ ಜಪಿಸಿ, ಆದೇ ಸ್ವರೂಪದಲ್ಲಿ ತಾದಾತ್ಮ್ಯವನ್ನು ಹೊಂದುವದಕ್ಕಾಗಿ ಮಂತ್ರಾವರ

ಣವನ್ನು ಹೇಳಿರುತ್ತಾರೆ. ಮತ್ತು ಪಂಚಾಕ್ಷರ ಮಂತ್ರಗಳನ್ನೇ ಜಪಿಸಬೇಕೆಂದು ಹೇಳಿರುತ್ತಾರೆ.

ವೀರಶೈವನು ಈ ಬಗೆಯ ಅಷ್ಟಾವರಣಗಳನ್ನು ಸಂಪಾದಿಸುವದಲ್ಲದೆ, ಪಂಚಾಚಾರಗಳಲ್ಲಿ ಪರಾಯಣನಾಗಬೇಕೆಂತಲೂ ಎಂದು ಹೇಳಿರುತ್ತಾರೆ. ಪಂಚಾಚಾರಗಳೆಂದರೆ ಅವು ಎಂಬದನ್ನು ವಿಚಾರ ಮಾಡವಾ. ಅವು ಶಿವಾಚಾರ, ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಗಣಾಚಾರಗಳು ಎಂದು ಹೇಳಿರುತ್ತಾರೆ.

## ಪಂಚಾಚಾರಗಳು.

೧ **ಶಿವಾಚಾರವೆಂದರೆ,** ಜಗತ್ತಿಗೆ ಕಲ್ಯಾಣವನ್ನುಂಟು ಮಾಡತಕ್ಕವನೇ ಶಿವನೆಂತಲೂ, ಆತನು ಶಕ್ತಿಯುಕ್ತನೆಂತಲೂ, ಅವನು ತನ್ನ ಅನಂತ ಶಕ್ತಿಗಳಿಂದ ಅಘಟಿತ ಘಟನಾದಿ ಅತ್ಯದ್ಭುತವಾದ ಕಾರ್ಯಗಳನ್ನು ಮಾಡಿ ಅದರ ಕ್ರಮಾದಿಗಳನ್ನರಿತಾಚರಿಸಿದವರಿಗೆ ಕಲ್ಯಾಣವನ್ನುಂಟು ಮಾಡುವವನಾಗಿರುತ್ತಾನೆ. ಆತನ ಅಂದರೆ ಶಿವನ ಅನುಭವವನ್ನು ಎಲ್ಲ ಕಾರ್ಯಗಳಲ್ಲಿಯೂ ಹೊಂದಿ ಶಿವಾನುಭವಿಯಾಗಿ ಎಲ್ಲರಿಗೂ ಕಲ್ಯಾಣವನ್ನುಂಟು ಮಾಡುವ ಆಚರಣೆಯಿಂದ ಆಚರಿಸುವದೇ ಶಿವಾಚಾರವೆನಿಸುತ್ತದೆ.

೨ **ಲಿಂಗಾಚಾರವೆಂದರೆ,** ಲಿಂಗವು ಜಗತ್ತಿನ ಹುಟ್ಟುವಿಕೆಗೂ ಸಂರಕ್ಷಣಕ್ಕೂ ಲಯಕ್ಕೂ ಕಾರಣವಾಗಿ, ಇಷ್ಟಅಂದರೆ ಸ್ಥೂಲರೂಪ, ಪ್ರಾಣವೆಂದರೆ ಸೂಕ್ಷ್ಮರೂಪ, ಭಾವವೆಂದರೆ ಕಾರಣರೂಪವಾಗಿರುತ್ತದೆ. ಮತ್ತು ಲಿಂಗವು ಪೃಥ್ವೀಸಂಬಂಧದಿಂದ ಆಚಾರಲಿಂಗವಾಗಿ ನಾಶಿಕದಲ್ಲಿರುತ್ತದೆ. ಅಪ್ಪುವಿನ ಸಂಬಂಧದಿಂದ ಗುರುಲಿಂಗವೆನಿಸಿ ಜಿಹ್ವೆಯಲ್ಲಿರುತ್ತದೆ. ಅಗ್ನಿಸಂಬಂಧದಿಂದ ಶಿವಲಿಂಗವಾಗಿ ನೇತ್ರದಲ್ಲಿ ವಾಸಿಸುತ್ತದೆ. ವಾಯು ಸಂಬಂಧದಿಂದ ಜಂಗಮಲಿಂಗವೆನಿಸಿ, ತ್ವಕ್ಕಿನಲ್ಲಿ ವಾಸಿಸುತ್ತದೆ. ಮತ್ತು ಆಕಾಶ ಸಂಬಂಧದಿಂದ ಪ್ರಸಾದಲಿಂಗವೆನಿಸಿ, ಕರ್ಣಸ್ಥಾನದಲ್ಲಿವಾಸಿಸುತ್ತದೆ. ಆತ್ಮಸಂಬಂಧದಿಂದ ಮಹಾಲಿಂಗವೆನಿಸಿ, ಹೃದಯದಲ್ಲಿವಾಸಿಸಿ ಎಲ್ಲ ಲಿಂಗಗಳ ಅನುಭವದಿಂದ ತೃಪ್ತಿಹೊಂದುತ್ತದೆ ಎಂಬದನ್ನು ಅರಿತಾಚರಿಸುವದೇ ಲಿಂಗಾಚಾರವೆನಿಸುತ್ತದೆ.

೩ **ಸದಾಚಾರವೆಂದರೆ,** ಸತ್ಯಾಸತ್ಯವನ್ನು ಚನ್ನಾಗಿಪರೀಕ್ಷಿಸಿ ಸತ್ಯವನ್ನೇ ಅವಲಂಬಿಸಿ ನಡೆಯುವದೇ ಸದಾಚಾರವೆನಿಸುತ್ತದೆ.

೪ **ಭೃತ್ಯಾಚಾರವೆಂದರೆ,** ಸೇವಕಭಾವದಿಂದ ಆಚರಿಸುವದು ಎಂದರೆ, ಲಿಂಗಾಂಗಿಗಳೆಲ್ಲರೂ, ಲಿಂಗಸ್ವರೂಪರಲ್ಲದೆ ಮತ್ತಾರೂ ಅಲ್ಲ ವೆಂಬ ಭಾವನೆಯಿಂದ ಅವರಲ್ಲಿ ಶೇವಕಭಾವದಿಂದಾಚರಿಸುವದೇ ಭೃತ್ಯಾ ಚಾರವೆನಿಸುತ್ತದೆ.

೫ **ಗಣಾಚಾರವೆಂದರೆ,** ಲಿಂಗಾಂಗಿಗಳು ಮೇಲಿನ ಆಚರ ಣೆಗಳಲ್ಲಿ ತಪ್ಪಿದರೆ ತಿಳಿಹೇಳಿ, ಬುದ್ಧಿಗಲಿಸುವದೂ, ಉಪದೇಶಿಸುವದೂ, ಶಿಟ್ಟುಮಾಡುವದೂ, ಶಿಕ್ಷಿಸಿಯಾದರೂ ಅವರನ್ನು ಸನ್ಮಾರ್ಗಗಾಮಿಗಳ ನ್ನಾಗಿಮಾಡುವದೇ ಗಣಾಚಾರವೆನಿಸುತ್ತದೆ. ಅಂದರೆ ಎಲ್ಲರನ್ನೂ ಶಿವಾ ನುಭಾವಿಗಳನ್ನಾಗಿ ಮಾಡುವದೇ ಗಣಾಚಾರವೆಂತಲೂ ಹೇಳಬಹುದು.

ಈ ಬಗೆಯು ಪಂಚಾಚಾರಗಳಲ್ಲಿ ಪರಾಯಣರಾಗಿ ವೀರಶೈವರು ಷಟ್‌ಸ್ಥಲಜ್ಞಾನವನ್ನು ಪಡಕೊಳ್ಳತಕ್ಕದ್ದೆಂಬ ನೇಮುವಿರುತ್ತದೆ. ಷಟ್ ಸ್ಥಲಗಳವಿವರ.

## ಷಟ್‌ಸ್ಥಲಗಳು.

೧ **ಭಕ್ತಸ್ಥಲವೆಂದರೆ,** ಜಗದ್ವ್ಯಾಪಿಯಾದಲಿಂಗ ದೇವನಹೊ ರತು ಅನ್ಯದೈವ ಅಥವಾ ಐಹಿಕ ವಸ್ತುವಿನಲ್ಲಿ ಶ್ರದ್ಧೆಯನ್ನಿಡದೆ, ಕೇವಲ ಎಲ್ಲವನ್ನೂ ಒಳಕೊಂಡ ಇಷ್ಟಲಿಂಗವಲ್ಲಿಯೇ ಪ್ರೇಮಾದರ ಯುಕ್ತಶ್ರ ದ್ಧೆಯಿಂದಿರುವದೇ ಭಕ್ತಸ್ಥಲವೆನಿಸುತ್ತದೆ.

೨ **ಮಹೇಶ್ವರಸ್ಥಲವೆಂದರೆ,** ಮೇಲೆ ವಿವರಿಸಿದ ಶ್ರದ್ಧೆಯುಳ್ಳ ಶಿವಭಕ್ತನೇ ತನ್ನ ಭಕ್ತಿವಿಶೇಷದಿಂದ ಅಂಗದಲ್ಲಿ ಏಕನಿಷ್ಠೆಯುಳ್ಳವನಾಗಿ ಮಹೇಶ್ವರಸ್ಥಲದವನಾಗುತ್ತಾನೆ.

೩ **ಪ್ರಸಾದಿಸ್ಥಲವೆಂದರೆ,** ಮೇಲೆ ನಮೂದಿಸಿದ ಮಹೇಶನ್ನು ಶ್ರದ್ಧಾ, ನಿಷ್ಠೆಗಳಿಂದ ನಿಷ್ಣಾತನಾಗುವದರಿಂದ ಅವಿರಳ ಭಕ್ತನೆನಿಸಿ, ಅವಿರಳಪರಂಜ್ಯೋತಿರ್ಲಿಂಗ ಪ್ರಸಾದಕ್ಕೆ ಅರ್ಹನಾಗಿ ಪ್ರಸಾದಿ ಸ್ಥಲದ ವನೆನಿಸುವನು.

೪ **ಪ್ರಾಣಲಿಂಗಿಸ್ಥಲವೆಂದರೆ,** ಆದೇಪ್ರಸಾದಿಯು ತನ್ನಶ್ರದ್ಧೆ ನಿಷ್ಠೆ, ಅವಿರಳ ಭಕ್ತಿಯಿಂದೊಡಗೂಡಿ ಪ್ರಾಣಲಿಂಗ ಸಂಧಾನಿಯಾಗಿ

ತನ್ನ ಅನುಭವ ಭಕ್ತಿಯಿಂದ ಪ್ರಾಣಲಿಂಗಿ ಸ್ಥಲದವನೆನಿಸುತ್ತಾನೆ.

**೫. ಶರಣಸ್ಥಲ** ವೆಂದರೆ, ಮೇಲೆ ವಿವರಿಸಿದ ಪ್ರಾಣಲಿಂಗಿಯು ಪ್ರಾಣಲಿಂಗ-ಸಂಧಾನದಿಂದ ತನಗುಂಟಾದ ಅನುಭವದಿಂದ ಜ್ಞಾನಿಯಾಗಿ ಅಜ್ಞಾನವನ್ನೊಡಗೂಡಿ ಅನನ್ಯಭಾವದಿಂದ ಭಾವಲಿಂಗಕ್ಕೆ ಶರಣು ಹೋಗಿ ಸರ್ವದರಲ್ಲಿಯೂ ಆತನನ್ನೇ ಕಂಡು ಶರಣನೆನಿಸುತ್ತಾನೆ. ಅಂಥ ಶರಣನ ಎಲ್ಲ ವ್ಯವಹಾರಗಳೂ ಶಿವಾನುಭವದಿಂದೊಡಗೂಡಿದವುಗಳಾಗಿರುತ್ತವೆ. ಆದುದರಿಂದ ಆತನೇ ಶಿವಾನುಭವಿ ಇಲ್ಲವೆ ಶರಣಸ್ಥಲದವನೆನಿಸುತ್ತಾನೆ

**೬. ಐಕ್ಯಸ್ಥಲ** ವೆಂದರೆ, ಆ ಮೇಲೆ ಅದೇ ಶರಣನು ತನಗುಂಟಾದ ತನ್ನ ಸ್ವರೂಪ ಜ್ಞಾನದಿಂದ ತಾನೇ ಲಿಂಗಸ್ವರೂಪನೆಂಬ ಸಮರಸ ಭಕ್ತಿಯಿಂದ್ಯುಕ್ತನಾಗಿ ಐಕ್ಯನೆಂದೆನಿಸುತ್ತಾನೆ. ಇವನೇ ಸರ್ವರಲ್ಲಿ ಐಕ್ಯಭಾವದಿಂದ ವರ್ತಿಸುವವನಾಗಿ ಐಕ್ಯಸ್ಥಲದವನಾಗುತ್ತಾನೆ.

ಈ ಬಗೆಯಾದ ಶಿವಾನುಭವಿಗಳಾಗತಕ್ಕ ಸುಲಭವಾದ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳೆಂಬ ಮಾರ್ಗಗಳನ್ನು ಕ್ರಮದಿಂದ ತಾನು ಕಲಿಯುವದೂ, ಅನ್ಯರಿಗೆ ಕಲಿಸುವದೂ, ಪ್ರತಿಯೊಬ್ಬ ವೀರಶೈವನ ಕರ್ತವ್ಯವಾಗಿರುತ್ತದೆ. ಈ ಕ್ರಮವು ಸಮಾಜದಲ್ಲಿ ರೂಢವಾಗಿದ್ದಾಗ ಶಿವಾನುಭವಿಗಳ ಸಂಖ್ಯೆಯು, ವಿಪುಲವಾಗಿದ್ದಿತು. ಆವಾಗ್ಗೆ ಅನೇಕ ಸ್ತ್ರೀಪುರುಷರೂ, ಬಾಲ ಬಾಲಿಕೆಯರೂ, ಶಿವಾನುಭವಿಗಳಾಗಿದ್ದರು. ಮತ್ತು ಅವರಲ್ಲಿ ಜೀವ ಭಾವದ ಗುಣಗಳಾದ ಅಜ್ಞಾನ, ಅಹಂಕಾರ, ಮತ್ಸರ, ಸ್ವಾರ್ಥ ಮತ್ತು ವಿಷಯಲಂಪಟತೆಗಳೂ ಮನೋವಿಕಾರಗಳಾದ ದುಷ್ಟಶಬ್ದ ದುಷ್ಕಾರ್ಯಗಳ ಪ್ರೇರಣೆ ಮುಂತಾದವುಗಳೂ ಇದ್ದಿದ್ದಿಲ್ಲ. ಮತ್ತು ನಾನು, ನನ್ನದು, ನನಗೆ ಎಂಬ ಶಬ್ದಗಳೇ ಅವರ ಮುಖದಿಂದ ಹೊರಡುತ್ತಿದ್ದಿಲ್ಲ. ಅವರು ಶಿವಾನುಭವಿಗಳಾದುದರಿಂದ ಶಿವನ ಕೃಪೆಯಂತಾಗಲಿ, ಶಿವನಪ್ಪಣೆಯಂತಾಗಲಿ ಶಿವನ ಕಾರ್ಯವು. ಶಿವನು, ಎಲ್ಲರಿಗೂ ಅಂದರೆ, ಅವನಿಗೆ ಅನನ್ಯ ಭಾವದಿಂದ ಶರಣು ಹೋದವರಿಗೆಲ್ಲರಿಗೂ, ಕಲ್ಯಾಣವನ್ನೇ ಉಂಟು ಮಾಡುವನು. ಅವರ ಪಾಪ ಬುದ್ಧಿಯನ್ನು ದೂರ ಮಾಡುವನು. ಪುಣ್ಯ ಕಾರ್ಯಗಳ ಕಡೆಗೇ ಮನವೆಳೆಸುವನು. ಕದಾಚಿತ್, ಪೂರ್ವಜನ್ಮದ ಕರ್ಮಬಲದಿಂದ ಅವರಿಗೆ ಕಷ್ಟಗಳುಂಟಾದರೆ ಅವುಗಳನ್ನು ಸಹಿಸುವ ಶಕ್ತಿಯನ್ನುಂಟು ಮಾಡು

ವನು. ಮುಂದಿನ ಭವದ ಬೀಜನಾದ ವಾಸನೆಯನ್ನೇ ನಷ್ಟಮಾಡಿ ಬಿಡು ವನು. ಎಂಬದಾಗಿಯೇ ಶಿವಾನುಭವಿಗಳ ಭಾವನೆಯಿರುವದರಿಂದ ಅವರು ಶಿವನಲ್ಲಿ ಸಮರಸಹೊಂದಿ ಶಿವಜೀವರ ಐಕ್ಯಮಾಡಿ ಅಂದರೆ ಜೀವಭಾವವನ್ನು ಅಳಿದು ಶಿವಾನುಭವಿಗಳಾಗಿ, ಜೀವನ್ಮುಕ್ತರಾದರು. ಶ್ರೀ ಬಸವೇಶ್ವರನ ಅತ್ಯಧಿಕವಾದ ಭಕ್ತಿಮಾರ್ಗದಿಂದಂತೂ, ಶಿವಾನುಭ ವಿಗಳ ಕ್ಷೇತ್ರವು ಅತಿ ವಿಸ್ತಾರವನ್ನು ಹೊಂದಿತ್ತು. ಶ್ರೀ ಬಸವೇಶ್ವರನು ಗುರುಮಾರ್ಗದ ಆಕುಂಚಿತ ದೃಷ್ಟಿಯನ್ನು ತ್ಯಜಿಸಿ, ಭಕ್ತಿಮಾರ್ಗವೆಂಬ ವಿಸ್ತೃತ್ ದೃಷ್ಟಿಯನ್ನವಲಂಬಿಸಿ, ವೀರಶೈವ ಧರ್ಮಕ್ಷೇತ್ರವನ್ನು ವಿಸ್ತಾ ರಗೊಳಿಸಿದನು. ಮತ್ತು ಮಾನವರೆಲ್ಲರೂ ಸದ್ಗುಣಿ ಸದಾಚರಣಿಗಳಾಗಿ ಈ ಮಾರ್ಗವನ್ನವಲಂಬಿಗಳಾಗಲಿಕ್ಕೆ ಅರ್ಹರಾಗಿರುತ್ತಾರೆಂಬದನ್ನು ತೋರಿಸಿದನು. ಆದುದರಿಂದ ಆಗಿನ ಶಿವಭಕ್ತರಲ್ಲಿ ಜಾತಿ, ಕುಲ, ಗೋತ್ರಗಳ ದುರಭಿಮಾನವು ಇದ್ದಿದ್ದಿಲ್ಲ. ವಿಷಯಗಳಹಂಬಲದಿಂದ ತಮ್ಮ ತಮ್ಮವರನ್ನೇ ನಿಂದಿಸಿ, ತಮಗೆ ಮಾರ್ಗದರ್ಶಕರೂ ಪರಮಪೂ ಜ್ಯರೂ ಆದವರನ್ನು ಜಾತಿಸಂಕರರೆಂತಲೂ, ಅಧರ್ಮಿಗಳೆಂತಲೂ, ಅನಾ ಚಾರಿಗಳೆಂತಲೂ ತಿಳಿಗೇಡಿತನದಿಂದ ಹೀಯಾಳಿಸುವ ಹೀನವೃತ್ತಿಯ ಧರ್ಮಭ್ರಷ್ಟರು ಆತನ ಕ್ಷೇತ್ರದಲ್ಲಿದ್ದಿದ್ದಿಲ್ಲ. ಆದರೆ ಶ್ರೀ ಬಸವೇಶ್ವರನಂ ತರದಲ್ಲಿ ಈ ಸ್ಥಿತಿಯು ಉಳಿಯದೆ, ಜ್ಞಾನಹೀನ, ಆಚಾರಹೀನ, ಜೀವ ಭಾವದ ಅಹಂಕಾರಿಗಳ ಗುರುತ್ವವು ಪ್ರಸ್ಥಾಪಿಸಲ್ಪಟ್ಟದ್ದರಿಂದಲೂ ಅವರ ಅನುಯಾಯಿಗಳ ಶಿವಭಕ್ತರಲ್ಲಿಯೂ, ಅಷ್ಟಾವರಣ ಪಂಚಾಚಾರ ಗಳ ಮತ್ತು ಷಟ್‌ಸ್ಥಲಗಳ ಅರಿಕೆಯು ಅಳಿಯುತ್ತಾಹೋದುದರಿಂದಲೂ ಶಿವಾನುಭವದ ಕ್ಷೇತ್ರವು ಸಂಕುಚಿತಸ್ವರೂಪವನ್ನು ಹೊಂದುತ್ತ ಹೊಂದುತ್ತ ಕಡೆಗೆ, ಸಾಮಾಜಿಕತ್ವವನ್ನು ಬಿಟ್ಟು ವೈಯಕ್ತಿಕ ಸ್ವರೂ ಪವನ್ನು ಹೊಂದಬೇಕಾಯಿತು. ಆದುದರಿಂದ ಈಗ ಶಿವಾನುಭವಿಗಳು ಬಹಳ ಜನರು ಹೊರಡಬಹುದು. ದೊಡ್ಡ ದೊಡ್ಡ ಗುರುಪೀಠಗಳಲ್ಲಿಯೂ ಭಕ್ತಮಹೇಶ್ವರ ಮಠಗಳಲ್ಲಿಯೂ ಈಗ ಶಿವಾನುಭವದ ಬದಲಾಗಿ, ಜೀವನಗುಣಗಳ ಪ್ರಭಾವವೇ ಹೆಚ್ಚಾದ್ದರಿಂದ ಎಲ್ಲಿ ನೋಡಿದಲ್ಲೆಲ್ಲ ವಿಷಯಗಳ ಹಂಬಲವೇ ಕಂಗೊಳಿಸುತ್ತಿದೆ. ಅದರಿಂದ ಆವರ ಜೀವಿ ತವು ಕಠಿಣವಾಗಹತ್ತಿದೆ. ಕೇವಲ ನಾವು ಮುಖದಿಂದ ಶಿವಾನುಭವಿ ಗಳೆಂದು ಹೇಳುವದರಿಂದ ನಾವು ಶಿವಾನುಭವಿಗಳಾಗಲಾರೆವು. ಜೀವ

ಭಾವವೆಂಬ ವಿಷಯುಗಳ ಹಂಬಲದ ದುರಾಶೆಯುನ್ನು ದೂರವಾಡಿದಾಗ್ಗೆ ಶಿವತ್ವ ಪ್ರಾಪ್ತಿಯ ಮಾರ್ಗವು ದೊರಕುತ್ತದೆ. ಅಲ್ಲಿಯ ವರೆಗೆ ನಾವು ಶಿವಸಂಬಂಧಿಕರು ಸಹ ಆಗಲಾರೆವು. ಶಿವ ಸಂಬಂಧಿಗಳು ತಾವು ಮಾಡ ತಕ್ಕ ಎಲ್ಲ ಕಾರ್ಯಗಳಲ್ಲಿಯೂ ಶಿವಭಾವವನ್ನು ಮರೆಯಲಾಗದು. ತಾನು ಮಾಡತಕ್ಕ ಕಾರ್ಯವು ತನ್ನದಾಗಿರದೆ ಅದು ಶಿವನ ಕಾರ್ಯ ವೆಂದು ತಿಳಿದು ಮಾಡತಕ್ಕದ್ದು. ಅದು ನನ್ನ ಕಾರ್ಯವೆಂಬ ಭಾವನೆ ಯುಂಟಾದರೆ ಅಲ್ಲಿ ಜೀವ ಭಾವವು ಅಳಿಯಲಿಲ್ಲವೆಂದು ಳಿತಿಯಬೇಕು. ಅದರಿಂದ ಭವಪಾಶವು ಹರಿಯಲಾರದು. ಈ ರೀತಿಯಾಗಿರುವದರಿಂದ ಈಗ ಶಿವಾನುಭವಿಗಳು ಅತಿ ವಿರಳವಾಗಿ, ಮನೋವಿಕಾರಿಗಳೂ ಅಹಂ ಕಾರಿಗಳೂ ದುರಭಿಮಾನಿಗಳೂ ಮುಂದಾಗಿ ಸಮಾಜದ ಸ್ಥಿತಿಯನ್ನು ಕೆಡಿಸಲಿಕ್ಕೆ ಕಾರಣರಾಗಿರುತ್ತಾರೆ. ಆದುದರಿಂದ ಶಿವಾನುಭವವಿಲ್ಲದೆ ನಮ್ಮ ಸಮಾಜಕ್ಕೆ ತರುಣೋಪಾಯುವಿಲ್ಲ. ಅದು ಉಂಟಾಗಬೇಕೆಂಬ ಉದ್ದೇಶದಿಂದ ಪುನಃ ಶಿವಾನುಭವವು ಅವತಾರವನ್ನು ತಾಳಬೇಕಾಯಿತು. ಈ ಬಗೆಯಾದ ಸದ್ಬುದ್ಧಿಯಿಂದಲೂ, ಶಿವನ ಪ್ರೇರಣೆಯಿಂದಲೂ, ಹೊರಟ ಶಿವಾನುಭವವು ನಮ್ಮ ಉದ್ಧಾರಕ್ಕಾಗಿ ತಾನಾಗಿಯೇ ಮನೆಗೆ ಸಾಗಿಬಂದರೆ, ಅದನ್ನು ಪ್ರೇಮಾದರಗಳಿಂದ ಸ್ವೀಕರಿಸದಿರುವವರಿಗೆ ಏನನ್ನ ಬೇಕೆನ್ನುವದನ್ನು ವಾಚಕರಿಗೆ ಒಪ್ಪಿಸುತ್ತೇನೆ. ಅವರಿಗಾವರೂ ಅನ್ನುವ ದೇನದೆ, ಅವರ ಜನ್ಮದಲ್ಲಿಯೇ ಶಿವಾನುಭವವೆಂಬ ಶಬ್ದವು ಸಹ ಅವರ ಕಿವಿಗೆ ಬೀಳದಿದ್ದ ಬಳಿಕ ಅದರಲ್ಲೇನಿದೆ ಎಂಬದು ಅವರಿಗೆ ಗೊತ್ತಾಗುವ ಬಗೆಯಾವದು? ಇದಕ್ಕೆ ಕಾರಣರಾರಿರಬಹುದೆಂಬದನ್ನು ವಾಚಕ ಮಹಾ ಶಯರೇ ವಿಚಾರಿಸಿಕೊಳ್ಳತಕ್ಕದ್ದು. ಈಗಂತೂ ಮಠಮನೆಗಳಲ್ಲಿ ಮನೋ ವಿಕಾರಗಳ ಒದರಾಟ, ಅಹಂಕಾರದ ಬಡಿದಾಟ, ಅಜ್ಞಾನದ ಜಗಳಾಟ, ಮತ್ಸರದ ಈರ್ಷಾಸೂಯಗಳ ಗೋಳಾಟಗಳಿಂದ ಎಲ್ಲ ಸ್ಥಲವೂ ತುಂಬಿ ದ್ದರಿಂದ ಶಿವಾನುಭವವು ಒಳಗೆ ಬರಲಿಕ್ಕೆ ಅವಕಾಶವಿಲ್ಲಾಗಿದೆ. ಲಕ್ಷಾ ವಧಿಗೃಹಗಳಿದ್ದರೂ ಅವುಗಳೊಳಗಿನ ಒಂದು ಸಾವಿರಾರು ಮನೆಗಳ ಲ್ಲಿಯೂ ಸಹ ಅದರ ಪ್ರವೇಶವಾಗದಿದ್ದ ಬಳಿಕ ಅದರ ಅಭಿಲಾಷೆಯು ನಮ್ಮವರಲ್ಲಿ ಎಷ್ಟರಮಟ್ಟಿಗೆ ಇರುತ್ತದೆಂಬದು ಮೇಲೇ ಕಂಡುಬರುತ್ತದೆ. ನಮ್ಮ ಪುರುಷ ವರ್ಗದವರ ಹಾಡೇ ಹೀಗಾದ ಮೇಲೆ ಸ್ತ್ರೀಯರಿಗೆ ಅನ್ನುವದೇನದೆ? ಹೇಳಿ ಕೇಳಿ ಅವರು ಅಶಿಕ್ಷಿತರು ಅಜ್ಞಾನಿಗಳು. ಅವರ

ಶಿಕ್ಷಣದ ಬಗ್ಗೆ ಪ್ರಯತ್ನ ಮಾಡುವವರಗಿಂತ ಅವರನ್ನು ಅಜ್ಞಾನ ದೆಶೆಯಲ್ಲಿಯೇ ಇಡಬೇಕೆಂಬುವವರೇ ವಿಶೇಷವಾಗಿರುವದರಿಂದ ಅವರಿಗೆ ಶಿವಾನುಭವವು ದೊರೆಯುವದು ಬಹಳ ಕಷ್ಟಸಾಧ್ಯವಾಗಿದೆ. ಶಿವಾನುಭವವಿಲ್ಲದ್ದರಿಂದ ಎಷ್ಟೋ ಸ್ತ್ರೀಯರಲ್ಲಿ ಮನೆಗೆಲಸದ ಸಲುವಾಗಿಯೂ, ಊಟೋಪಚಾರಗಳ ಬಗ್ಗೆಯೂ, ತಮ್ಮ ತಮ್ಮ ಮನೆಯವರಲ್ಲಿಯೇ ಜಗಳಾಡುವದಲ್ಲದೆ, ಲಿಂಗಾಂಗಿಗಳಲ್ಲಿ ಉದ್ಯೋಗಗಳ ಮೇಲಿಂದ ಜಾತಿ ಕಲ್ಪನೆ ಮಾಡಿ ತಾವು ಮಾತ್ರ ಶ್ರೇಷ್ಠರೂ, ಅನ್ಯರು ತಮಗಿಂತ ಕಡಿಮೆಯವರೂ ಎಂದು ಭಾವಿಸಿ ಅನ್ಯಮತೀಯರಗಿಂತಲೂ ಹೀನಾವಸ್ಥೆಯನ್ನು ತಂದುಕೊಳ್ಳುವ ದುರಭಿಮಾನಿಗಳೇ ಬಹಳಾಗಿರುತ್ತಿರುವದು ನಮ್ಮ ಧರ್ಮದ ಔನತಿಯನ್ನು ಚನ್ನಾಗಿ ತೋರಿಸುತ್ತದೆ. ಈಗಿನ ಕಾಲವೆಂದರೆ, ಜಗತ್ತಿನವರೆಲ್ಲರಿಗೂ ಶಿವಾನುಭವವನ್ನು ಕೊಡತಕ್ಕದ್ದಾಗಿದೆ. ಆದರೆ ಅದು ಈಗ ಅದರ ಅನುಯಾಯಿಗಳಿಗೇ ಚನ್ನಾಗಿ ದೊರೆಯದಂತಾಗಿರುವದರಿಂದ ಅದನ್ನು ಕೊಡುವವರೇ ಇಲ್ಲದಂತಾಗಿರುತ್ತದೆ. ಅಲ್ಪ ಸ್ವಲ್ಪ ಜನರು ಅದರ ಪ್ರಸಾರದ ಕಾರ್ಯವನ್ನು ಕೈಕೊಂಡರೂ ಅದನ್ನು ಕಂಡು ಆನಂದಗೊಂಡು ಅದಕ್ಕೆ ಸಹಾಯ ಮಾಡುವವರು ಕೆಲವರಿದ್ದಾರೆ. ಅದು ಸಹನವಾಗದವರೂ ಕೆಲವರು ಹೊರಡಬಹುದು. ಆದರೂ ಅದರ ಕಡಿಗೆ ಶಿವಾನುಭವ ಪ್ರಸಾರಕರು ಲಕ್ಷ ಕೊಡುವ ಕಾರಣವಿಲ್ಲೆಂದು ನಮಗೆ ತೋರುತ್ತದೆ. ಮತ್ತು ಅವರು ತಾವು ಕೈಕೊಂಡ ಕಾರ್ಯವನ್ನು ಏಕೋಭಾವದಿಂದ ಸಾಗಿಸುವದೇ ಅವರ ಕರ್ತವ್ಯವಾಗಿರುತ್ತದೆಂಬದನ್ನು ಹೇಳುವ ಕಾರಣವಿಲ್ಲ. ಅವರಿಗೆ ಧನದ ಸಹಾಯ ಮಾಡಿ ಶಿವಾನುಭವಕ್ಕೆ ಉತ್ತೇಜನ ಕೊಡುವದೂ, ಅದನ್ನು ತಾವೂ ಸಾಧ್ಯಮಾಡಿಕೊಳ್ಳುವದೂ ಎಲ್ಲರ ಕರ್ತವ್ಯವಾಗಿರುತ್ತದೆ. ಶಿವಾನುಭವವು ಜಗತ್ತಿಗೇ ಸಂಬಂಧವಾದುದೆಂಬದನ್ನೂ ಪೃಥ್ವಿಯೇ ಆಚಾರಲಿಂಗವಾಗಿರುವದನ್ನೂ ಜಲವೇ ಗುರುಲಿಂಗವಾಗಿರುವದನ್ನೂ ತೇಜವೇ ಶಿವಲಿಂಗವಾಗಿರುವದನ್ನೂ ವಾಯುವೇ ಜಂಗಮ ಲಿಂಗವಾಗಿರುವದನ್ನೂ ಆಕಾಶವೇ ಪ್ರಸಾದಲಿಂಗವಾಗಿರುವದನ್ನೂ ತಿಳಿದು ಶಿವಾನುಭವಿಗಳಾಗಿ, ಎಲ್ಲರಿಗೂ ಇರುವ ಶಿವಸಂಬಂಧದ ಅರಿಕೆಯನ್ನುಂಟು ಮಾಡುವದೇ ಶಿವಾನುಭವಿಗಳ ಕರ್ತವ್ಯವಾಗಿರುತ್ತದೆಂಬದನ್ನು ಇನ್ನೊಮ್ಮೆ ಹೇಳಿ ತಮ್ಮ ಅಪ್ಪಣೆ ಪಡಕೊಳ್ಳುತ್ತೇನೆ.

# ಶ್ರೀಮಜ್ಜಗದ್ಗುರು ಪಂಚಾಚಾರ್ಯ

# ಸ್ತೋತ್ರ ಪಂಚಕಂ.

(ಲೇಖಕ:—ಶ್ರೀಪಟ್ಟಾಧ್ಯಕ್ಷ ಬೃಹನ್ಮಠ ಹೋಟಗೀ ವಾರದ ಪಾಠಶಾಲಾ ಸೋಲಾಪುರ.)



ಶ್ರೀಕಂಠಾಸ್ಯ ಕಬಂಧ ಜನ್ಮಜನನಾನ್ ಶ್ರೀಕಂಠ ಸಂಪೂಜಕಾನ್ ।
ಶ್ರೀರಂಭಾಪುರ ಪತ್ತನಾದಿನಗರೇಷ್ವತ್ಯಂತ ವಾಸಾನ್-ಸದಾ ॥
ಕುಂಭೋತ್ಪತ್ತಿ ಮುನೀಂದ್ರಮುಖ್ಯಯತಿಭಿಃಸಂಸ್ತಾವಿತಾಂಘ್ರ್ಯಂಬುಜಾನ್।
ಪಂಚಾಚಾರ್ಯ ಜಗದ್ಗುರೂನ್ ಪರತರಾನ್ ವಂದೇಽನಿಶಂ ಪಾವನಾನ್ ॥೧॥

ಶ್ರೀಮದ್ರೇಣುಕ ದಾರುಕಾದಿ ಪರಮಾಖ್ಯಾಭಿಃ ಸದಾಪಂಚಭಿಃ ।
ಲೋಕೇಷುತ್ರಿಷು ರಾಜಿತಾನ್ ಗುರುವರಾನ್ ಸರ್ವಾಘಸಂಹಾರಕಾನ್ ॥
ಪಂಕಧ್ವಾಂತ ಸಮೂಹ ನೀರಜಪತೀನ್ ಮರ್ತ್ಯಾಘ ಸಚ್ಛಂಕರಾನ್ ॥
ಪಂಚಾಚಾರ್ಯ ಜಗದ್ಗುರೂನ್ ಪರತರಾನ್ ವಂದೇಽನಿಶಂ ಪಾವನಾನ್ ॥೨॥

ಉರ್ವೀಪಾಲನ ಲೋಲಭೂಪ ನವನಾ ನೇಹೋತ್ತಮಾಂಗಸ್ಥಿತೈಃ ।
ಪುಷ್ಪೈಃಪಂಕಿತ ಪಾದಪಂಕಜ ಯುತಾನ್ ಸತ್ಯಂ ಮುದಾಶಾಂತಿದಾನ್॥
ಶ್ರೀಮದ್ವೀರಸುಶೈವಸಾಗರವರಂ ಸಂಸ್ಥಾಪಿತಾನ್ ದೇವತಾನ್ ॥
ಪಂಚಾಚಾರ್ಯ ಜಗದ್ಗುರೂನ್ ಪರತರಾನ್ ವಂದೇನಿಶಂ ಪಾವನಾನ್ ॥೩॥

ಮಾರಾನೇಕಪದರ್ಪ ಪಂಚವದನಾನ್ ಕ್ರೂರಾದಿಜಾಲಾಪಹಾನ್ ।
ಮಾರಾರ್ಯಂಕಿತ ಲಿಂಗಧಾಯಿನ ಇಮಾನ್ ನಿರ್ವಾಣಮಾರ್ಗಪ್ರದಾನ್ ॥
ಸುತ್ರಾಮಾದಿ ಸುರೈ ಸ್ತ್ರಿವಿಷ್ಟಪಗತೈಃ ಸಂಪೂಜಕೈಃ ಪೂಜಿತಾನ್ ।
ಪಂಚಾಚಾರ್ಯ ಜಗದ್ಗುರೂನ್ ಪರತರಾನ್ ವಂದೇನಿಶಂ ಪಾವನಾನ್ ॥೪॥

ಕಂಥಾ ದಂಡಕಮಂಡಲೂನ್ ಪರಿಧರಾನ್ ವೀರಾದಿಗೋತ್ರಾಧಿಪಾನ್ ।
ಸೂತ್ರೈಃ ಪಡ್ವಿಡಿ ವೃಷ್ಟಿ ಲಂಬನ ಸುಮುಕ್ತಾಗುಚ್ಛ ಪಂಚಾಕ್ಷರೈಃ ॥

ಯುಕ್ತಾನ್ ಜಂಗಮ ಪುಂಗವಾನ ಸುಲಲಿತಾಂ ಪಂಚಾಕ್ಷರೀಂ ಬೋಧಕಾನ |
ಪಂಚಾಚಾರ್ಯ ಜಗದ್ಗುರೂನ್ ಪರತರಾನ್ ವಂದೇಽನಿಶಂ ಪಾವನಾನ್ ॥೫॥

ಪರಮ ಗುರುವ ರೇಣ್ಯಾಸ್ತೋತ್ರಮೇತನ್ಮನುಷ್ಯೈಃ ।
ಪಠತಿಸತತ ಭಕ್ತ್ಯಾ ಪಂಚಕಂ ಪಾವನಂಚ ॥
ಭುವನಜನನ ಬಾಧಾಕ್ಷೀಯತೇತಸ್ಯ ನಿತ್ಯಂ ।
ಪಠತ ಪಠತ ಲೋಕಾ ಮುಕ್ತಿದಾನೇ ಪ್ರಸಕ್ತಂ ॥೬॥



# ಗುರುಪಾದ ಶಿವಯೋಗಿಗಳು.

ಲೇಖಕಃ—'ಶಾಂತವೀರ'

ನಾವು ನಮ್ಮ ಕರ್ತವ್ಯದಲ್ಲಿ ನಿಷ್ಣಾತರಾಗಬೇಕಾದರೆ, ಮತ್ತು ನಮ್ಮ ಜೀವಿತಚರಿತ್ರೆಯಲ್ಲಿ ಏನಾದರೂ ಮಹತ್ವದ ಬದಲಾವಣೆಯನ್ನು ಮಾಡಿಕೊಳ್ಳಬೇಕಾದರೆ ಹಿಂದೆ ಆಗಿಹೋದ ಮಹನೀಯರ ಚರಿತ್ರೆಗಳನ್ನು ಅತ್ಯವಶ್ಯವಾಗಿ ತಿಳಿಯಬೇಕಾಗುತ್ತದೆ. ಆದರೆ ನಮ್ಮ ವೀರಶೈವ ಸಮಾಜದಲ್ಲಿ ಅಂಥ ಎಷ್ಟೋ ಮಹನೀಯರು ಆಗಿಹೋಗಿದ್ದರೂ ಅವರ ಚರಿತ್ರೆಗಳು ಉಪಲಬ್ಧವಿಲ್ಲದಮೂಲಕ ನಮ್ಮ ಮುಂದಿನ ನಡೆಯು ಕುಂಠಿತವಾಗಹತ್ತಿರುತ್ತದೆ ಈ ನ್ಯೂನತೆಯನ್ನು ಕೆಲಮಟ್ಟಿಗಾದರೂ ಕಡಿಮೆ ಮಾಡಬೇಕೆಂಬ ಉದ್ದೇಶದಿಂದ ವಿಜಾಪುರ ತಾಲೂಕಿಗೆ ಸೇರಿದ ಬಬಲೇಶ್ವರ ಗ್ರಾಮದಲ್ಲಿ ಈಗ್ಗೆ ೫೦-೬೦ ವರ್ಷಗಳಹಿಂದೆ ಆಗಿಹೋದ ಮಹಾಜ್ಞಾನಿಗಳಾದ 'ಗುರುಪಾದ ಶಿವಯೋಗಿ' ಗಳ ಚರಿತ್ರೆಯನ್ನು ಸಂಕ್ಷಿಪ್ತರೂಪದಿಂದ ಕೊಡಲು ನಾನು ಉಪಕ್ರಮಿಸಿದ್ದೇನೆ.

## ೧ ಪೂರ್ವ ಪರಿಚಯ.

ಇವರು ಅದೇಊರಲ್ಲಿದ್ದ ಚನ್ನಬಸವಪ್ಪನವರೆಂಬ ಒಬ್ಬ ಸದ್ಭಕ್ತ ಶಿರೋಮಣಿಗಳ ಧರ್ಮಪತ್ನಿಯರಾದ ಬಸಮ್ಮನವರ ಉದರದಲ್ಲಿ ೧೮ನೇ ಶತಮಾನದ ಅಂತ್ಯಭಾಗದಲ್ಲಿ ಜನಿಸಿದರು. ಚಿಕ್ಕವರಿರುವಾಗಲೇ ಇವರು ಒಳ್ಳೇ ಗುಣಿಗಳಿದ್ದದರಿಂದ ಆಊರ ಹಿರೇಮಠದ ಪಟ್ಟಾಧಿಕಾರಿಗಳಾದ ಶ್ರೀ. ಶಾಂತವೀರಸ್ವಾಮಿಗಳು ಅವರನ್ನು ತಮ್ಮ ಮಠಕ್ಕೆ ಮರಿಯಾಗಿ ಕೊಡಲು ಕೇಳಲು ಅವರು ಅದಕ್ಕೆ ಒಪ್ಪಿಕೊಂಡು ಇವರನ್ನು ಮಠಕ್ಕೆ ಕೊಟ್ಟರು.

ಆನಂತರ ಅವರು ಮಠದಲ್ಲಿಯೇ ಇರಹತ್ತಿದರು. ಪ್ರತಿದಿವಸ ಗುರುಗಳ ಸೇವೆಯನ್ನು ಅತ್ಯಂತ ಭಕ್ತಿಯಿಂದ ಮಾಡುತ್ತ ಯಾವಾಗಲೂ ಶಿವಮಂತ್ರಜಪದಲ್ಲಿಯೇ ಕಾಲಕಳೆಯುತ್ತಿದ್ದರು. ಅವರಿಗೆ ಅಕ್ಷರೀ ಶಿಕ್ಷಣವು ತಕ್ಕಷ್ಟು ದೊರೆತರೂ ಧಾರ್ಮಿಕ ಶಿಕ್ಷಣದಲ್ಲಿ ಪೂರ್ಣಪಾ

ರಂಗತರಾದರು. ಇದರಿಂದ ಅವರ ಅಜ್ಞಾನವು ನಾಶವಾಗಿ ಗುರುಪೀಠವನ್ನು ಅಲಂಕರಿಸಲಿಕ್ಕೆ ಯೋಗ್ಯರಾದರು.

## ೨ ಪಟ್ಟಾಧಿಕಾರ.

ಆ ಮೇಲೆ ಅವರಿಗೆ ಆ ಮಠದ ಪಟ್ಟಾಧಿಕಾರವು ಕೊಡಲ್ಪಟ್ಟಿತು. ಅದಕ್ಕೆ ಸರಿಯಾಗಿ ತಮ್ಮ ಕರ್ತವ್ಯಗಳನ್ನು ಇಟ್ಟುಕೊಂಡರು. ಬರೇಸ್ವಾಮಿಗಳಿಂದ ಮಠದಲ್ಲಿ ನಿಶ್ಚಿಂತೆಯಿಂದ ಕೂಡ್ರದೆ ಯಾವಾಗಲೂ ಭಕ್ತರ ಕಲ್ಯಾಣಾರ್ಥವಾಗಿ ದುಡಿಯುತ್ತಿದ್ದರು. ಯಾರಾದರೂ ಭಕ್ತರು ಮಠಕ್ಕೆ ಬಂದರೆ ಅವರಿಗೆ ಸನ್ಮಾರ್ಗಗಳನ್ನು ಬೋಧಿಸುವದೂ, ಧಾರ್ಮಿಕ ನೇಮಗಳನ್ನು ತಿಳಿಸುವದೂ, ಬಂದವರ ಆದರಾತಿಥ್ಯವನ್ನು ಮಾಡುವದೂ ಅವರ ಮುಖ್ಯ ಕೆಲಸಗಳಾಗಿದ್ದವು. ಪ್ರತಿವರ್ಷ ಶ್ರಾವಣಮಾಸದಲ್ಲಿ ಪುರಾಣವನ್ನು ಹಚ್ಚಿಸಿ ಭಕ್ತಾದಿಗಳಿಗೆ ಧಾರ್ಮಿಕ ಶ್ರವಣವು ಲಭಿಸುವಂತೆ ಮಾಡುತ್ತಿದ್ದರು.

## ೩ ಸ್ವಾಮಿಗಳ ಪರ್ಯಟನ.

ಈ ಮಠವು ಬಾಳೇ ಹಳ್ಳೀಪೀಠಕ್ಕೆ ಹೊಂದಿದ್ದಾಗಿದೆ. ಸ್ವಾಮಿಗಳು ಜಗದ್ಗುರುಗಳ ದರ್ಶನಲಾಭವನ್ನು ಮಾಡಿಕೊಳ್ಳಬೇಕೆಂಬ ಕಾಂಕ್ಷೆಯಿಂದ ಅಲ್ಲಿಗೆ ಹೋಗಲು ಹೊರಟರು. ಈಗಿನಂತೆ ಆಗ್ಗೆ ರೇಲುಗಳಿರಲಿಲ್ಲ. ತಮ್ಮ ಪ್ರವಾಸವನ್ನು ಎತ್ತುಗಳ ಸಹಾಯದಿಂದಲೇ ಮುಗಿಸಬೇಕಾಗಿತ್ತು. ಬಾಳೇಹಳ್ಳಿಯ ಪೀಠವು ಮೈಸೂರ ಸಂಸ್ಥಾನದ ಕಡೂರ ಜಿಲ್ಹೆಗೆ ಸೇರಿದ್ದಾಗಿದೆ. ಅದು ಮಲಯಪರ್ವತದ ಮಧ್ಯದಲ್ಲಿದೆ. ಈಗಲೂ ಕೂಡಾ ಅಲ್ಲಿಗೆ ಹೋಗಲು ಸರಿಯಾದ ಏರ್ಪಾಡಗಳಿಲ್ಲ. ಆಗಿನ ಕಾಲದ ಮಾತಂತೂ ಹೇಳುವದೇನಿದೆ. ಅಂಥಾ ದುರ್ಗಮವಾದ ಪ್ರವಾಸವನ್ನು ಕೇವಲಗುರುಗಳ ದರ್ಶನಲಾಭವನ್ನು ಹೊಂದೇ ತೀರಬೇಕೆಂಬ ಕಾಂಕ್ಷೆಯಿಂದ ಅದನ್ನು ತೀರಿಸಿ ಜಗದ್ಗುರುಗಳದರ್ಶನವನ್ನು ಪಡೆದು, 'ಅದ್ವಿತಿಯ ಬ್ರಹ್ಮಚರ್ಯರು' ಎಂಬ ಬಿರುದನ್ನು ಹೊಂದಿದರು. ವಿಜಾಪುರ ಜಿಲ್ಹೆಯ ಸಂಬಂಧವಾಗಿ ಜಗದ್ಗುರುಗಳು ಇವರ ಸಂಗಡಲೇ ಮುಂದೆ ಪತ್ರವ್ಯವಹಾರವನ್ನು ಒಂಟಿಯ ಸವಾರರ ಮುಖಾಂತರವಾಗಿ ಮಾಡುತ್ತಿದ್ದರು. ಇದರಿಂದ ಆ ಕಾಲಕ್ಕೆ ಇವರ ವರ್ಚಸ್ಸವು ಈ ಭಾಗದಲ್ಲಿ ಎಷ್ಟಿತ್ತೆಂಬದು ಕಂಡು ಬರುತ್ತದೆ.

ಸ್ವಾಮಿಗಳು ಬಾಳೇಹಳ್ಳಿಯಿಂದ ಹಾಗೇ ದಕ್ಷಿಣ ದಿಕ್ಕಿಗೆ ಪ್ರವಾಸಕ್ಕೆ ಹೊರಟರು. ಆ ಕಾಲಕ್ಕೆ ಮೈಸೂರ ಜಿಲ್ಹೆಗೆ ಸೇರಿದ ನಂಜನಗೂಡ ಎಂಬ ಗ್ರಾಮದಲ್ಲಿ ನಂಜುಂಡೇಶ್ವರ ಎಂಬದೊಂದು ಪ್ರಸಿದ್ಧ ದೇವಾಲಯ ಇರುತ್ತದೆಂದು ಕೇಳಿ ಅಲ್ಲಿಗೆ ಹೋಗಿದ್ದರು. ಅದು ಮೈಸೂರ ಮಹಾರಾಜರ ಮುಖ್ಯ ದೇವಸ್ಥಾನವು. ಆಗಿನ ಮಹಾರಾಜರೂ ದೇವರ ದರ್ಶನಾರ್ಥವಾಗಿ ಅಲ್ಲಿಗೆ ಬಂದಿದ್ದರು. ಆ ಕಾಲಕ್ಕೆ ಸ್ವಾಮಿಗಳ ದರ್ಶನವನ್ನು ಹೊಂದಿ, ಅತ್ಯಂತ ಭಕ್ತಿಯಿಂದ ತಮ್ಮ ಅರಮನೆಗೆ ಕರೆದುಕೊಂಡು ಹೋಗಿ ಅವರ ಅತಿಥಿಸತ್ಕಾರವನ್ನು ಒಳ್ಳೇ ಭಕ್ತಿಯಿಂದ ಮಾಡಿ ಕಳಿಸಿದರು. ಸ್ವಾಮಿಗಳು ಅಲ್ಲಿಂದ ಹೊರಡುವಕಾಲಕ್ಕ ಶ್ರೀಮನ್ಮಹಾರಾಜರನ್ನು ಕುರಿತು ಅಂದದ್ದು:—'ನೀವು ಧರ್ಮದ ಕಡೆಗೆ ವಿಶೇಷಲಕ್ಷಕೊಡುವದರ ದುರೂಪಯೋಗವನ್ನು ನಿಮ್ಮ ರಾಜಾಧಿಕಾರಿಗಳು ಮಾಡಿಕೊಂಡು ನಿಮಗೆ ತೊಂದರೆಯಾಗುವಂತೆ ಮಾಡುವರು. ಆದರೂ ಈಶ ಕೃಪೆಯಿಂದ ನಿಮ್ಮ ರಾಜ್ಯಕ್ಕೆ ಯಾವ ತರದ ತೊಂದರೆಯು ಉಂಟಾಗಲಾರದು. ಆದರೂ ನಿಮ್ಮ ಸುಖಕೀರ್ತಿಗಳಿಗೆ ಸ್ವಲ್ಪ ವ್ಯತ್ಯಾಸವಾಗುವದು.' ಎಂದು ಹೇಳಿ ಬಂದರಂತೆ ಅದರಂತೆ ಲಾರ್ಡವುಲಿಯಮ್ ಬೇಟಿಂಗರವರ ಕಾಲದಲ್ಲಿ ಮೈಸೂರು ಸಂಸ್ಥಾನವು ರೆಸಿಡೆಂಟನ ಕಡೆಗೆ ಹೋಗಿತ್ತು. ಮುಂದೆ ಆಗುವದು ಕೂಡಾ ಜ್ಞಾನಿಗಳಿಗೆ ತಿಳಿಯುವದೆಂಬ ಮಾತು ಇದರಿಂದ ಕಂಡು ಬರುತ್ತದಲ್ಲಾ!

## ೪ ದುಷ್ಕಾಳದಲ್ಲಿ ಜನರಿಗೆ ಸಹಾಯಮಾಡಿದ್ದು.

ನಮ್ಮ ವಿಜಾಪುರ ಜಿಲ್ಹೆಗಂತೂ ದುಷ್ಕಾಳಗಳು ಮೇಲಿಂದಮೇಲೆ ಬರುತ್ತವೆಂಬದು ಪ್ರಸಿದ್ಧವೇ ಇರುತ್ತದೆ. ಅದರಂತೆ ಸ್ವಾಮಿಗಳ ಕಾಲದಲ್ಲಿ ಒಂದುಸಾರೆ ದುಷ್ಕಾಳಬಿದ್ದಿತ್ತು. ಜನರಿಗೆ ತಿನ್ನಲಿಕ್ಕೆ ಧಾನ್ಯಸಿಗದೆ ಉಪವಾಸ ಕಾಲ ಕಳೆಯುವ ಪ್ರಸಂಗವು ಒದಗಿತು. ಈ ಸ್ಥಿತಿಯನ್ನು ಕೇಳಿ ಮರಮರನೆ ಮರುಗಿ ತಮ್ಮ ಕಾರಕೂನನನ್ನು ಕರೆಯಿಸಿ ಹೇಳಿದ್ದು-ಜನರಿಗೆ ತಿನ್ನಲಿಕ್ಕೆ ಜೋಳವಿಲ್ಲವಂತೆ ಕಾರಣ ಮಠದ ಹಗೆಗಳನ್ನು ತೆಗೆದು ಯಾರಿಗೆ ಧಾನ್ಯವಿಲ್ಲವೋ ಅವರಿಗೆ ಕೊಡಿರೆಂದು ಹೇಳಿದರು. ಅದಕ್ಕೆ ಆ ಕಾರಕೂನನು:—ಇದ್ದ ಧಾನ್ಯವನ್ನೆಲ್ಲಾ ಕೊಟ್ಟರೆ ನಮ್ಮ ಗತಿ ಹೇಗೆ ಎಂದು ಅಂದನಂತೆ ಅದಕ್ಕೆ ಸ್ವಾಮಿಗಳು ಹೀಗೇನು? ಅಂತಾ

ಅಂದು ಆ ಹೊತ್ತು ಸ್ನಾನವನ್ನೇ ಮಾಡಲಿಲ್ಲವಂತೆ. ಅದನ್ನು ನೋಡಿ ಗಾಬರಿಯಾಗಿ ಕಾರಕೂನನು ಹೀಗೇಕೆ ಬುದ್ಧೀಎಂದು ವಿಚಾರಿಸಲಾಗಿ ಅದಕ್ಕೆ ಅವರು ಅಂದದ್ದು:—ಹಗೆಗಳನ್ನು ತೆಗೆದು ಜನರಿಗೆ ಕಾಳುಗಳನ್ನು ಕೊಡುವದರಿಂದ ನಮಗೆ ಅಡಚಣಿಯಾಗುತ್ತದೆ. ಕಾರಣ ಹಗೆಗಳನ್ನೇ ತೆಗೆಯಬೇಡಿರಿ. ಯಾಕಂದರೆ ವಿನಾಕಾರಣ ಧಾನ್ಯಗಳು ಹಾಳಾಗುತ್ತವೆ. ಆದಕಾರಣ ಆ ಧಾನ್ಯಗಳನ್ನಾದರೂ ನಾನೇಕೆ ಖರ್ಚುಮಾಡಬೇಕು. ಅಲ್ಲೇ ಇರಲೆಂದು ಹೀಗೆಮಾಡಿದ್ದೇನೆ ಎಂದು ಹೇಳಿದರಂತೆ. ಅದನ್ನು ಕೇಳಿ ಆತನು ನನ್ನ ಕಡೆಗೆ ತಪ್ಪಾಯಿತು ತಾವು ಯಾವಪ್ರಕಾರವಾಗಿ ಹೇಳುವಿರೋ ಅದರಂತೆ ವರ್ತಿಸುತ್ತೇನೆಂಬದಾಗಿ ವಿಜ್ಞಾಪಿಸಿಕೊಂಡನಂತರ ಹಗೆಗಳನ್ನು ತೆಗಿಸಿ ಬಡಜನರಿಗೆ ಧಾನ್ಯಗಳನ್ನು ಕೊಟ್ಟನಂತರ ತಾವು ಸ್ನಾನಮಾಡಿ ಊಟಮಾಡಿದರು. ಮಹಾತ್ಮರ ಅಂತಃಕರುಣ ಎಷ್ಟು ಮೃದುವಾದದ್ದಿರುತ್ತದೆಂಬದು ಇದರಿಂದ ಕಂಡು ಬರುತ್ತದೆ.

## ೫. ಬಡ್ಡೀ ವ್ಯವಹಾರ ಬಂದು ಮಾಡಿದ್ದು.

ಮಠದಲ್ಲಿ ಧನ ಧಾನ್ಯಗಳು ಯಾವಾಗಲೂ ಇರುತ್ತಿದ್ದು ಅವರು ಅವುಗಳನ್ನು ಜನರ ಅಡಚಣಿಯನ್ನು ದೂರಮಾಡಲಿಕ್ಕೆ ಉಪಯೋಗಿಸುತ್ತಿದ್ದರು. ಮತ್ತು ಬಡ್ಡೀ ವ್ಯವಹಾರ ಮಾಡುತ್ತಿದ್ದರು. ಹೀಗಿರಲು ಒಂದು ದಿವಸ ಒಬ್ಬ ಕಾಯಕದ ಅಯ್ಯನವರು ಬಂದಿದ್ದರು. ಸ್ವಾಮಿಗಳು ಸಾಯಂಕಾಲ ಲಿಂಗಾರ್ಚನೆಯಾದನಂತರ ಒಂದು ತಾಸು ಯಾರಾದರೂ ಹಾಡುವವರಾಗಲಿ ಕಥೆಗಳನ್ನು ಹೇಳುವವರಾಗಲೀ ದೊರೆತರೆ ಕೇಳುತ್ತ ಕೂಡ್ರುತ್ತಿದ್ದರು. ಮತ್ತು ಅದರ ಮೇಲೆ ಒಳ್ಳೇ ಅವರ ಪ್ರೇಮವಿತ್ತು. ಆ ದಿವಸ ಆ ಕಾಯಕದ ಅಯ್ಯನವರನ್ನು ಕರೆದು ಒಂದು ಪದವನ್ನು ಅನ್ನಬೇಕೆಂದು ಹೇಳಿದರು. ಅದಕ್ಕೆ ಅವನು ನನಗೆ ಪದ ಬರುವದಿಲ್ಲ. ಕಾರಣ ಒಂದು ಕಥೆಯನ್ನು ಹೇಳುವೆನೆಂಬದಾಗಿ ಒಂದು ಕಥೆಯನ್ನು ಸುರುವು ಮಾಡಿದನು. ಅದರಲ್ಲಿ ಸಾಹುಕಾರಿಕೆ ಮಾಡುವದು ಒಳ್ಳೇ ಪಾಪದ ಕೆಲಸವೆಂಬ ವಿಷಯ ಬಂದಿತ್ತು. ಅದನ್ನು ಸ್ವಾಮಿಗಳು ಕೇಳಿ ಆನಂದಪಟ್ಟು ಬಹಳೇ ಚನ್ನಾಗಿ ಹೇಳಿದೆ. ನಾನು ಇಲ್ಲಿಯವರೆಗೆ ಇಂಥ ಕಥೆಯನ್ನೇ ಕೇಳಿದ್ದಿಲ್ಲೆಂದು ಹೇಳಿಕೊಂಡರು. ಮಲಗಿ

ಮುಂಜಾನೆ ಕಾರಕೂನನು ಕೆಲಸಕ್ಕೆ ಬಂದನು. ಅವನಿಗೆ ಸ್ವಾಮಿಗಳು-ಈ ಹೊತ್ತು ಎಲ್ಲರಿಂದಲೂ ನಮಗೆ ಬರತಕ್ಕ ಹಣವನ್ನು ವಸೂಲ ಮಾಡ ಬೇಕೆಂದು ಹೇಳಿದರು. ಅವರ ಹೇಳಿಕೆಯ ಮೇರೆಗೆ ಕಾರಕೂನನು ಎಲ್ಲ ಸಾಲಗಾರರನ್ನು ಕರಿಸಿದನು. ಆಗ ಸ್ವಾಮಿಗಳು ಸಾಲಗಾರರು ಕೊಟ್ಟಷ್ಟರ ಮೇಲೆಯೇ ಸಾಲವನ್ನು ತೀರಿಸಿಕೊಂಡರು. ನಂತರ ಸ್ವಾಮಿ ಗಳು ಊರಲ್ಲಿಯ ಯಾವತ್ತೂ ಜಂಗಮರನ್ನೂ, ಬ್ರಾಹ್ಮಣರನ್ನೂ ಇತರ ಯಾಚಕವರ್ಗವನ್ನೂ ಬರಮಾಡಿಕೊಂಡು ಅವರಿಗೆ ಮಠದ ಲ್ಲಿದ್ದ ಜಂಗಮ ಆಸ್ತಿಯನ್ನೆಲ್ಲ ದಾನಮಾಡಿ ನಂತರ ತಾವು ಸ್ನಾನ ಮಾಡಿ ಊಟಮಾಡಿದರಂತೆ. ಇದು ಎಂಥಾ ಅತುಲ್ಯವಾದ ಗುಣವು! ಒಬ್ಬ ಕಾಯಕದ ಅಯ್ಯನು ಹೇಳಿದ ಮಾತು ಸಹ ಇವರಿಗೆ ಪರಮ ಮಾರ್ಗದರ್ಶಕವಾಗಿ ಪರಿಣಮಿಸಿತು. ಅಂತೇ ಸತ್ಪುರುಷರ ಗುಣಗ್ರಾಹ ಕತೆಯು ಎಷ್ಟಿರುತ್ತದೆಂಬದು ಇದರಿಂದ ಕಂಡು ಬರುತ್ತದೆ. ಅಂದಿನಿಂದ ಮುಂದೆ ಬಡ್ಡೀ ವ್ಯವಹಾರವನ್ನೇ ಬಂದುಮಾಡಿಬಿಟ್ಟರು.

## ೬ ಸಮದೃಷ್ಟಿ

ಮಠದಲ್ಲಿ ದನಕರುಗಳು ವಿಪುಲವಾಗಿದ್ದವು. ಇದರಿಂದ ಮಠದಲ್ಲಿ ಯಾವಾಗಲೂ ಹೈನು ಇರುತ್ತಿತ್ತು. ಆದ್ದರಿಂದ ಮಜ್ಜಿಗೆ ಬೇಡಲಿಕ್ಕೆ ಜನರು ಮಠಕ್ಕೆ ಬರುತ್ತಿದ್ದರು. ಆದರೆ ಮಠದ ಮುದಿಕೆಯು ಜನರಿಗೆ ಮಜ್ಜಿಗೆಯಲ್ಲಿ ನೀರು ಕೂಡಿಸಿ ಕೊಡುತ್ತಾಳೆಂಬದಾಗಿ ಸ್ವಾಮಿಗಳಿಗೆ ತಿಳಿಯಿತು. ತಮ್ಮ ಊಟಕ್ಕೆ ಬರುವ ಮಜ್ಜಿಗೆ ಮಾತ್ರ ಒಳ್ಳೇ ಉತ್ತಮ ಇರುತ್ತಿದ್ದವು. ಇದರ ನಿಜ ಸ್ಥಿತಿಯನ್ನು ನೋಡಬೇಕೆಂದು ಒಂದು ದಿವಸ ತಾವು ಊಟಕ್ಕೆ ಕೂತವೇಳೆಯಲ್ಲಿ ಮಜ್ಜಿಗೆಯನ್ನು ಒಯ್ಯಲಿಕ್ಕೆ ಒಬ್ಬರು ಬಂದಿದ್ದರು. ಅವರು ಮಜ್ಜಿಗೆಯನ್ನು ತೆಗೆದುಕೊಂಡು ಹೋಗುವ ಮುಂದೆ ಅವರನ್ನು ಕರೆದು ಅವರ ಮಜ್ಜಿಗೆಯನ್ನೂ ತಾವು ಉಣ್ಣತಕ್ಕ ಮಜ್ಜಿಗೆಯನ್ನೂ ನೋಡಿದರು. ತಮ್ಮ ಮಜ್ಜಿಗೆಗಿಂತಲೂ ಅವು ನೀರಾಗಿ ಇದ್ದದರಿಂದ ಇದರಲ್ಲಿ ನೀರು ಕೂಡಿಸಿದ್ದು ನಿಶ್ಚಯವೆಂದು ತಿಳಿದು ತಾವು ಉಣ್ಣತಕ್ಕ ಮಜ್ಜಿಗೆಯಲ್ಲಿ ನೀರು ಹಾಕಿಕೊಂಡು ಉಣ್ಣಲಿಕ್ಕೆ ಹತ್ತಿದರು. ಹೀಗೆ ತಮ್ಮ ಮಠದಲ್ಲಿ ತಪ್ಪು ಆದ್ದರಿಂದ ಸ್ವಾಮಿಗಳು

ಲಿಂಗೈಕ್ಯರಾಗುವ ಪರ್ಯಂತರವೂ ಇದೇ ಪ್ರಕಾರವಾಗಿ ಮಾಡಿದರಂತೆ ಇದರಿಂದ ಮಹಾತ್ಮರ ಸಮದೃಷ್ಟಿಯು ವ್ಯಕ್ತವಾಗುತ್ತದೆ. ಈಗಿನ ಪಂಕ್ತಿ ಭೇದವು ಉಂಟಾಗಲು ಸಮದೃಷ್ಟಿ ಇಲ್ಲದಿರುವದೇ ಮೂಲಕಾರಣವಲ್ಲವೆ?

## ೭ ದಿನಚರ್ಯ ಮತ್ತು ಗುಣಾನುವಾದ.

ಮುಂಜಾನೆ ಎದ್ದು ಊರಲ್ಲಿ ಭಿಕ್ಷಕ್ಕೆ ತಾವೇ ಹೋಗಿ ಮಧ್ಯಾನ್ಹಕ್ಕೆ ಬಂದು ಸ್ನಾನ ಶಿವಾರ್ಚನೆಯನ್ನು ಮಾಡಿಕೊಂಡು, ಯಾರಾದರೂ ಅತಿಥಿಗಳು ಬಂದಿದ್ದರೆ ಅವರನ್ನು ಕರೆದುಕೊಂಡು ಊಟಮಾಡುತ್ತಿದ್ದರು. ಅವರ ಊಟವು ಬಲು ಸಾದಾ ತರದ್ದಿತ್ತು. ಅವರಿಗೆ ಭಕ್ತರಿಗೆ ಉಪದೇಶ ಮಾಡುವದು, ಮಿತವ್ಯಯದಿಂದ ಪ್ರಪಂಚ ಮಾಡುವದು ಇವನ್ನು ಯಾವಾಗಲೂ ಬೋಧಿಸುತ್ತಿದ್ದರು. ವಿದ್ಯಾವಂತರ ಮೇಲೆ ಒಳ್ಳೇ ಪ್ರೇಮವುಳ್ಳವರು. ಯಾವದಾದರೂ ಪಾಠಶಾಲೆಗಳಿಗೆ ಹೋದರೆ ವಿದ್ಯಾರ್ಥಿಗಳಿಗೆ ಇನಾಮು ಕೊಟ್ಟು ಅವರಿಗೆ ನೀವು ಓದಿದಂತೆ ನಡೆಯುವದನ್ನು ಮಾತ್ರ ಮರೆಯಬಾರದೆಂದು ಹೇಳುತ್ತಿದ್ದರು. ಸತ್ಯನಿಷ್ಠರೂ ಮಹಾಜಿತೇಂದ್ರಿಯಗಳೂ, ಕೋಮಲಾಂತಃಕರುಣಿಗಳೂ ಆಗಿದ್ದರು. ಅವರು ಯಾರಿಂದಲಾದರೂ ಗುಣವನ್ನೇ ಗ್ರಹಣಮಾಡುವ ಅಲೌಕಿಕವಾದಗುಣವುಳ್ಳವರಾಗಿದ್ದರು. ಅವರಿಗೆ ಪ್ರಾಣಲಿಂಗಾನುಸಂಧಾನವು ಒಳ್ಳೇ ಪ್ರಿಯಕರವಾಗಿ ಅದರಲ್ಲಿಯೇ ಯಾವಾಗಲೂ ಕಾಲಕಳೆಯುತ್ತಿದ್ದರು.

## ೮ ಲಿಂಗೈಕ್ಯರಾದದ್ದು.

ತಾವು ಲಿಂಗೈಕ್ಯರಾಗುವದು ಸಮೀಪಿಸಿದ ಕೂಡಲೆ ಜನರನ್ನು ಕರೆಯಿಸಿ ಇನ್ನು ಸ್ವಲ್ಪ ದಿವಸಗಳಲ್ಲಿ ತಾವು ಲಿಂಗೈಕ್ಯರಾಗುವ ಸಂಗತಿಯನ್ನು ಅರುಹಿದರು. ಅದರಿಂದ ಭಕ್ತಾದಿಗಳಿಗೆ ದುಃಖವೆನಿಸಿತು. ಆದರೂ ಈಶಸಂಕಲ್ಪಕ್ಕೆ ತಪ್ಪುವವರಾರು? ಅವರು ತಾವು ತಿಳಿಸಿದ ಸರಿಯಾದ ವೇಳೆಗೆ ತಮ್ಮ ಈ ಜಡದೇಹದಿಂದ ಮುಕ್ತರಾಗಿ ಶಿವನಲ್ಲಿ ಬೆರೆತರು. ನಂತರ ಅವರ ಮಠದ ಮಗ್ಗಲಲ್ಲಿ ಮೊದಲೇ ತಯಾರಿಸಿದ ಸಮಾಧಿಯಲ್ಲಿ ಅವರ ಅಂತ್ಯಸಂಸ್ಕಾರವನ್ನು ಮಾಡಿದರು. ಅದು ಒಂದು ದೊಡ್ಡ ಗದ್ದುಗೆ ಇರುತ್ತದೆ. ಅದರಲ್ಲಿ ಅವರ ಗುರುಗಳಾದ ಶ್ರೀ ಶಾಂತ

ವೀರ ಸ್ವಾಮಿಗಳು ಮತ್ತು ಅವರ ಪರಮ ಶಿಷ್ಯರಾದ ಶ್ರೀ ಶಾಂತವೀರ ಸ್ವಾಮಿಗಳು ಮತ್ತು ಶ್ರೀಗುರುಪಾದ ಶಿವಯೋಗಿಗಳು ಹೀಗೆ ಮೂರು ಗದ್ದುಗೆಗಳು ಕೂಡಿ ಒಂದು ದೊಡ್ಡ ಗದ್ದುಗೆ ಇದೆ. ಅದಕ್ಕೆ ಈ ಭಾಗದ ಎಷ್ಟೋ ಭಕ್ತರು ನಡೆದುಕೊಳ್ಳುತ್ತಾರೆ. ಪ್ರತಿವರ್ಷ ಶ್ರಾವಣ ಮಾಸದಲ್ಲಿ ಮಠದಲ್ಲಿ ಪುರಾಣವೂ ಗಣಾರಾಧನೆಯೂ ಈಗ್ಗೆಯೂ ನಡೆಯುತ್ತದೆ.

ಇವರ ತರುವಾಯ ಮೂವರು ಸ್ವಾಮಿಗಳಾಗಿ ಹೋಗಿದ್ದಾರೆ. ಈಗ್ಗೆ ಶ್ರೀ ಶಾಂತವೀರಸ್ವಾಮಿಗಳು ಪಟ್ಟಾಧ್ಯಕ್ಷರಾಗಿದ್ದಾರೆ. ಇವರು ಒಳ್ಳೇ ಯೋಗ್ಯರೂ, ಜಿತೇಂದ್ರಿಯವುಳ್ಳವರೂ, ಭಕ್ತಾದಿಗಳ ಉದ್ಧಾರದಲ್ಲಿ ಕಾಲಕಳೆಯುವವರೂ ಇರುತ್ತಾರೆ. ಕೇವಲ ತಮ್ಮ ಧಾರ್ಮಿಕ ವಿಷಯದಲ್ಲಿ ಕಾಲಕಳೆಯದೆ ಆಧುನಿಕ ಪರಿಸ್ಥಿತಿಗೆ ತಕ್ಕಂತೆ "ಒಂದು ವೀರಶೈವ ತರುಣ ಸಂಘ" ವನ್ನು ಸ್ಥಾಪಿಸಿ ಅದರ ಮುಖಾಂತರವಾಗಿ ಒಂದು ಇಂಗ್ಲಿಷ ಶಾಲೆಯನ್ನು ನಡಿಸಿರುತ್ತಾರೆ. ಇದು ಭೂಷಣಾಸ್ಪದವೇ ಸರಿ.



# ಶ್ರೀಮದಲ್ಲಮ ಕಲ್ಪತರು ಪಂಚಕವ್.

ಲೇಖಕ:—ಪಂ ಶ್ರೀ ಬಸವರಾಜಶಾಸ್ತ್ರೀ ಮಲ್ಲಿನಾಥಶಾಸ್ತ್ರೀ ಕೋಡಿಕೊಪ್ಪ
ಮಠ ಶ್ರೀಸಿದ್ಧೇಶ್ವರ ಹೈಸ್ಕೂಲ ವಿಜಾಪುರ.

## ಪುಷ್ಪಾಂಜಲಿ ವೃತ್ತಮಿದವ್

ಪರಶಿವರೂಪ ನಿರಂಜನ ಜಂಗಮಲಿಂಗ ಶುಭಾಂಗ ಷಡಂಗ ಗುರೋ।
ನಿಗಮವಿಶಾರದ, ಶಾರದ ನೀರದ ಕಾಂತಿಕಲೇವರ, ದೇವ ಗುರೋ॥
ಪ್ರಮಥಗಣೋದಯಕಾರಣ ಭೋಕರುಣಾಕರ, ಶಂಕರ ವಿಶ್ವಗುರೋ।
ಜಯ ಜಯ ಧೀಸಚಿವೇಶ ವೃಷೇಶ ಮನೋವರದಾಲ್ಲಮ ಕಲ್ಪತರೋ॥೧॥

ಶಮನತಮೋಗುಣಪುಂಜಮದೋತ್ಕಟ ಕುಂಜರ ಭಂಜನ ವೀರಮತೇ।
ಭವಭಯಕಾರಣಮನ್ಮಥ ಜಾರಣ ವಾರಣ ದಾರಣ ಧೀರಮತೇ॥
ದಲಿತಜಲಂಧರ ಚೀಲಳ ಕಂಧರ ಶೋಣಿತ ಪಾರಣ ಭೂರಿರತೇ।
ಜಯ ಜಯ ಧೀಸಚಿವೇಶ ವೃಷೇಶ ಮನೋವರದಾಲ್ಲಮ ಕಲ್ಪತರೋ॥೨॥

ಜನನ ಜರಾಮಯ ಪೀಡಿತ ಮಾನವ ದಾನವ ಕಾಮಿತ ಕಾಮಧರ।
ರುಚಿರಸುಧಾಕರಶೇಖರ ಮಾಕರ ಕಿಂಕರಶಂಕರ ಶೂಲಧರ॥
ಗಿರಿಧರಸೇವಿತಪಾದಸರೋರುಹ ನೀರಜಜಾತಕಪಾಲಧರ।
ಜಯ ಜಯ ಧೀಸಚಿವೇಶ ವೃಷೇಶ ಮನೋವರದಾಲ್ಲಮ ಕಲ್ಪತರೋ॥೩॥

ವರವೃಷವಾಹನ ದಿವ್ಯತಪೋಧನ ಭೂರಿ ಯಶೋಧನ ಯೋಗರತೇ।
ಚಿರಸುಖದಾಯಕ ಲೋಕವಿನಾಯಕ ಭಾವುಕಮಾಯಿಕ ದೇಹಗತೇ॥
ಉರಗ ವಿಭೂಷಣ ನಿರ್ಮಲಭಾಷಣ ಕರ್ಮಠಪೋಷಣ ಪುಣ್ಯಮತೇ।
ಜಯ ಜಯ ಧೀಸಚಿವೇಶ ವೃಷೇಶ ಮನೋವರದಾಲ್ಲಮ ಕಲ್ಪತರೋ॥೪॥

ಜಲನಿಧಿಜಾತಹಲಾಹಲಪೀತ ಸುರಾಸುರಜಾತದಯಾಕರ ಭೋ।
ಶಿವಮತಷಟ್‌ಸ್ಥಲಪೂತಗುರುಸ್ಥಲಪಾಲ ಚರಸ್ಥಲವಾಸ ವಿಭೋ॥
ಜಗತಿ ಜನೇಪ್ಸಿತಧಾಮವಿಧಾಯಕ ಯೋಗಿ ಜಗದ್ಗುರು ಜಂಗಮ ಬೋ।
ಜಯ ಜಯ ಧೀಸಚಿವೇಶ ವೃಷೇಶ ಮನೋವರದಾಲ್ಲಮ ಕಲ್ಪತರೋ॥೫॥

ಭುವಿ ದಿವಿ ಸನ್ನುತ ಚಿತ್ರವಿಚಿತ್ರ ಪವಿತ್ರ ಚರಿತ್ರ ಸುಗಾತ್ರ ವಿಭೋ।
ತ್ವಮವ ತು ಮಾಮನಿಶಂ ಭಯಸಂಸೃತಿಸಾಗರತಃ ಶರಣಾಸ್ವಿತ ಭೋ॥
ಶಿವಪುರ ವಾಸ ವೃಷೇನ ಸುಮಾಂಜಲಿಪೂಜಿತಪಾದಪಯೋರುಹ ಭೋ ।
ಜಯ ಜಯ ಧೀಸಚಿವೇಶ ವೃಷೇಶ ಮನೋವರದಾಲ್ಲಮ ಕಲ್ಪತರೋ॥೬॥



# ಕೊರವಂಜಿ ವಚನ.

[ ಈ ವಚನವನ್ನು ಶಿ॥ ಮೂ॥ ರೇವಯ್ಯ ಸ್ಥಾವರಮಠ ಸಾ. ಗಲಗಲಿ. ಇವರು ಕಳಿಸಿದ್ದಾರೆ. ]



ಕೈಯ್ಯ ತೋರೆಯಮ್ಮ ಕೈಯ್ಯ ನೋಡೋನೂ ॥ ವೈಯ್ಯಾಲಪುರ ದಿಂದ ಇಳಿದು ನಾ ಬಂದೆ। ನಿನ್ನ ಮೈಯ್ಯೊಳಗಿರ್ದ ವಸ್ತುವನೆಲ್ಲ ಪೇಳುವೆನು ॥ಪಲ್ಲ॥

ಎಂಟು ಮಂದಿನೆಂಟರು ನಿನಗಮ್ಮಾ। ಉಂಟಾದ ಹತ್ತು ದಿಕ್ಕಿನ ಬಳಗ ನಿನಗಮ್ಮ। ಗಂಟಲ ಮೆಟ್ಟಿ ಕೊಂಡೈದಾರೆ ನಿಮ್ಮ। ಸೊಂಟರ ಗಾಳ್ಯಾಗಿ ತಿರುಗಿದೆಯಮ್ಮ। ಕಂಟಕ ಬಿಡಿಸುವೆ ಕರುಣದಿ ನಿಮ್ಮ। ನೀಲಕಂಠನಂಘ್ರಿಯನು ಬಿಡದೆ ಪಿಡಿಯಮ್ಮಾ॥೧॥

**ಟೀಕು**:—ಅದು ಎಂಥ ಕಂಟಕದಲ್ಲಿ ತೊಳಲಿ ಬಳಲುತ್ತಿದ್ದೆಯಮ್ಮ! ಅದು ಎಂಥಾ ಕಂಟಕವೇ ತಾಯಿ! ಇರುವೆಮೊದಲು ಆನೆಕಡೆ ಎಂಬತ್ತು ನಾಲ್ಕು ಲಕ್ಷ ಜೀವರಾಶಿಯಲ್ಲಿ ಸತ್ತು ಸತ್ತು ಹುಟ್ಟಿದೆಯಮ್ಮಾ. ಬಾರದ ಭವಂಗಳಲ್ಲಿ ಬಂದೆ. ಉಣ್ಣದ ಊಟವನುಂಡೆ. ತೊಡದ ಜೋಹವ ತೊಟ್ಟೆ. ಇಲ್ಲಿಯ ಈ ಮನೆಗೆ ಬಂದೆ. ನಿನ್ನವರು ನಿನಗೆ ವೈರಿ. ಅನ್ಯರು ನಿನಗೆ ಸೇರರು. ಅಂಜಬೇಡವೆಯಮ್ಮ. ಅಂಜಿಕೆಯ ಬಿಡಿಸುವೆ. ಅಂಜನವ ಕೊಡಿಸುವೆ. ನಿರಂಜನನ ಪಾದದಲ್ಲಿರಿಸುವೆನೆ ಅಮ್ಮ.

ಒಡನೆ ಹುಟ್ಟಿದರೈವರು ನಿನಗಮ್ಮ। ಕೆಡಹಿ ಆರು ಮಂದಿ ಕೊಲ್ಲುತ್ತೈದಾರೆ। ಬಿಡದೆ ಏಳು ಮಂದಿ ಬೈಗಳು ಘನವಮ್ಮಾ। ಹಿಡಿದರೆ ನಾಲ್ವರು ಹೆದರದಿರಮ್ಮಾ। ಪೊಡವೀಶನಡಿಯನು ಬಿಡದೆ ಪಿಡಿಯಮ್ಮಾ। ಒಡಲ ಕಿಚ್ಚಿನ ಕೊರವಿಯಲ್ಲ ಕಾಣಮ್ಮಾ॥೨॥

**ಟೀಕು**:—ಅದು ಎಂಥ ಚಿಂತೆಯಲ್ಲಿ ಅಳಲು ಬಳಲುತಿದ್ದೆಯಮ್ಮ. ಅದು ಎಂಥ ಚಿಂತೆಯೆ ತಾಯಿ. ಚತುರ್ಮುಖದ ಬ್ರಹ್ಮ ಹಡೆವ ಅಳು

ತಿದ್ದಾನೆ. ದಿನಕ್ಕೆ ಏಳು ಜೀನಸಾಗುವೆಯಮ್ಮಾ. ಅಂಜಿ ಬಂದು ಅಳು ವಾಗ ಅಬ್ಬರಿಸಿ ಅಹಂಕರಿಸಿ ಮನದಿಚ್ಛೆಗೆ ಹರಿವೆ. ಅರೆಂದು ನೋಡುವೆ. ಚಿತ್ತದಲ್ಲಿ ನೆನೆವೆ. ಬುದ್ಧಿಯಲಿ ನಿಶ್ಚಯಿಸುವೆ. ಒಮ್ಮೆ ಮರನಾಗುವೆ. ಒಮ್ಮೆ ಮನುಷ್ಯಳಾಗುವೆ. ಏಳು ಮಕ್ಕಳ ತಾಯಿ ಹಡೆದು ಹೀರಿಹಿಪ್ಪಿಯ ಮಾಡುತಿದ್ದಾರೆಯಮ್ಮಾ. ದಿನಕ್ಕೆ ಏಳು ಬಗೆಯಾಗುವೆ. ಅಳುಕುವೆ. ನಡುಗುವೆ. ಯತ್ತರ ತತ್ತರವಂ ಮಾಡಿ ಮರುಳಾಗಿ ನುಡಿವೆ. ಕಂಗೆಟ್ಟು ಕಳವಳಿಸುವೆ. ಕೆಟ್ಟ ಕನಸ ಕಾಂಬುವೆ. ಐವರಣ್ಣಗಳು ಬೈದು ಹೊಯ್ದು ಕೊಯ್ದು ಕೊರೆದು ಚೀರಣದಲ್ಲಿ ಛಿದ್ರಿಸುತ್ತಿದ್ದಾರೆಯಮ್ಮಾ. ಒಳಯಕೆ ಬಂದರೂ, ಕಾವುಲ. ಹೊರೆಯಕೆ ಹೋದರೂ ಕಾವುಲ. ಈ ಆರು ನಾಯಿ ಗಳು ಅಡ್ಡ ಸುಳಿಯಗೊಡವಮ್ಮಾ. ಇದಿರೊಳು ನಿಲ್ಲದೆ, ಚಿಂತೆ ಹೋಗಿ, ನಿರ್ಮಳವಾಗಿ ನೆಲೆಗಂಡೆನೆಂಬುತಿದ್ದೆಯಮ್ಮಾ. ಚಿಂತೆಯ ಕಳೆವೆ. ನಿಶ್ಚಿಂತೆಯಂ ಮಾಡುವೆ. ನಿಜದಲ್ಲಿ ನುಡಿವೆನೆಯಮ್ಮಾ. ಮಂಗಳವಾರ ದಿನ ಮನೆಯ ಸಾರಿಸಿ ಮುಟ್ಟಚಟ್ಟನೆಲ್ಲ ಹೊರಿಯಕೆ ಬಿಸಾಟಿ ಹುಟ್ಟಿದ ಮಾರ್ಗದಲ್ಲಿ ಹೋಗೆ, ನಿರ್ಮಳ ಲಿಂಗ ಉಂಟು ಅಮ್ಮಾ.

ಈಶ ಮಹೇಶ ಮನೆ ದೈವವಮ್ಮಾ। ಬೇಸರ ಮಾಡಿ ಹೇಸಿ ದೈವವ
ಹಿಡಿದೆ । ಕಾಸಿಗೆ ಬಾರದ ಕಸವಾದೆಯಮ್ಮಾ। ಹೇಸಿ ದೈವವ ಬಿಡೆ.
ಈಡಿ ಈಶನಡಿಯ । ವಿಾಸಲ ಹಿಡಿಯಮ್ಮಾ ಸೂಸದೆ ಮನವ ।
ನಾಸಿಕಾಗ್ರದಲ್ಲಿ ಗಮನಿಸಿ ನಿಲ್ಲಮ್ಮಾ ॥೩॥

**ಟೀಕು**:—ಆ ದೇವರ ಪರಿ ಎಂತೆಂದೊಡೆ, ಅದು ಹೇಗೆ ತಾಯಿ? ನಡೆವ ಹಿಡಿದಾಡುವ ಕೆಡಕು ದೈವವ ಬಿಡು. ಪೊಡವಿಗೊಡೆಯನೇ ಮೃಡನ ನೆನೆಯಮ್ಮಾ. ನಾಭಿ ಪವನವನೆತ್ತಿ, ನಾಸಿಕಾಗ್ರದಲ್ಲಿ ನಿಲ್ಲಿಸಿ, ರವಿಶಶಿಗಳಾ ಟವ ನೋಡಿ, ತಾಳಮದ್ದಳೆಯಂ ಬಾರಿಸಿ, ಓಂನಮಃ ಶಿವಾಯ ಎಂಬ ಓಲಗವ ಮಾಡಿ ತುಂಬಿದ ಕೊಡದೊಳಗಣ ಅಮೃತವ ತೆಗೆದು, ಶಂಭು ಲಿಂಗಕ್ಕೆ ಸಲಿಸನೀಡೆ, ಗಗನಾಂಬರ ಆತ್ಮಸಿಧಿಯಾಗೆಯಮ್ಮಾ.

ಕುಂಭಿನಿ ದೈವವ ಹಿಡಿದು ನೀ ಕೆಟ್ಟೆ। ಶಂಭುಲಿಂಗನ ಕೈಯ್ಯ
ಬಿಟ್ಟೆ ನೀ ಭ್ರಷ್ಟೆ। ಇಂಬುಗೊಡುವನಲ್ಲ ಇದಿರಿಟ್ಟ ಕಲ್ಲ। ಹಂಬಲ
ಬಿಡೆ ಭ್ರಷ್ಟದೈವವನೆಲ್ಲ। ನಂಬಿ ಶುದ್ಧವಾಗೆ ನಿಜಲಿಂಗದಲ್ಲಿ ಹೆ
ಬ್ಬಾಗಿಲೊಳು ಪೊಕ್ಕು ಲಾಲಿಸೆ ಸೊಲ್ಲ ॥೪॥

**ಟೀಕು:**— ಅದು ಎಂಥ ನೈಷ್ಠೆಯಮ್ಮ? ಅದು ಹೇಗೆ ತಾಯಿ? ಅನ್ಯದೈವಕ್ಕೆರಗದೆ ಆಚಾರದಲ್ಲಿ ನಿಂದುದೇ ನೈಷ್ಠೆಯಮ್ಮಾ. ಮಲಮೂರು ಮುಟ್ಟದೆ ಅರಿವಿನಲ್ಲಿ ನಿಂದುದೇ ನೈಷ್ಠೆ. ಕರಸ್ಥಲದಲ್ಲಿ ಲಿಂಗವಿದ್ದು ಕಾಂಚನಕ್ಕೆ ಕೈಯ್ಯಾನದೆ ಮಹಾಘನದಲ್ಲಿ ನಿಂದುದೇ ನೈಷ್ಠೆಯಮ್ಮ. ಅನಾದಿ ಲಿಂಗವೆಯಮ್ಮ ಕರಸ್ಥಲಕೆ ಬಂದಿರಲು ಲೋಕ ಮರೆದು ಕಾಕು ದೈವವ ಹಿಡಿದರು. ಕರ್ಮಕ್ಕೆ ಈಡಾದರುಯಮ್ಮ. ನೈಷ್ಠೆ ಇಲ್ಲದೆ ಪೂಜೆ ಎಷ್ಟು ಕಾಲ ಮಾಡಿದರೇನು? ನಷ್ಟವಹುದಲ್ಲದೆ ದೃಷ್ಟವುಂಟೆಯಮ್ಮ? ಇದು ಕಾರಣ ಒಂಬತ್ತು ಬಾಗಿಲ ಮುಚ್ಚಿ ಒಳಿಯಕೆ ಒಬ್ಬರ ಬಿಡದೆ ಓಮ್ಮನವ ನೀಡೆ, ಸುಮ್ಮನೆ ಪೊಗೆ, ಗಮ್ಮನೆ ಕಳುಹೆ, ಸಂಭ್ರಮದ ಪೂಜೆಯಂ ಕಟ್ಟಿ, ಎಡಬಲನ ತಡಹೆ, ಬೀಗದ ಕೈ ಕೊಳ್ಳೆ, ಕುಂಭಿನಿಯ ಬಾಗಿಲ ಕದವ ತೆರೆಯೆ, ಒಳಪೊಕ್ಕು ಒಂದಾಗೆ, ಪರತತ್ವದೊಳಗೆ ಬೆರಿಸಿದ ನೈಷ್ಠೆಗೆ ನಮೋ ನಮೋಎಂಬೆನೆಯಮ್ಮಾ.

ಆದಿಯನರಿಯಮ್ಮಾ ಭೇದಿಸಿ ನೀ ಮುನ್ನ। ಮೇದಿನಿಯೊಳು
ಬಂದು ಮರದೆಲೆಯಮ್ಮಾ। ಆದಿಗಣೇಶ್ವರನ ಮಗಳಲ್ಲೆ ಯಮ್ಮಾ।
ತಂದೆಯ ಹೆಜ್ಜೆಯ ಹೇಳುವೆನಮ್ಮ। ಮಹಾಘನ ಮಾರ್ಗದಲ್ಲಿ ಗಮಿ
ಸಿ ನೀ ನಿಲ್ಲಮ್ಮಾ। ಭ್ರೂಮಧ್ಯದ ಮನೆಯೊಳಗಿರ್ದ ಕಾಣಮ್ಮಾ।೫॥

**ಟೀಕು:**— ಅದು ಎಂಥ ಕ್ರಮದಿಂದ ಹುಟ್ಟಿದೆಯಮ್ಮಾ? ಅದು ಹೇಗೆ ತಾಯಿ? ಉತ್ಪತ್ತಿ ಸ್ಥಿತಿ ಲಯವಿಲ್ಲದಂದು, ಪೃಥ್ವಿ ಆಕಾಶವಿಲ್ಲದಂದು, ಸಾಕ್ಷಿ ಬೆಳಗಿಲ್ಲದಂದು, ಮೂದೇವ ಮೂರ್ತಿಗಳಿಲ್ಲದಂದು, ಆದಿ ಆಧಾರವಿಲ್ಲದಂದು, ನಾದ ಬಿಂದು ಕಳೆಗಳಿಲ್ಲದಂದು, ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಃಶೂನ್ಯವಿಲ್ಲದಂದು, ತಾನೆ ತಂದೆಯಾಗಿದ್ದನಮ್ಮಾ. ತನಗೆ ಮಕ್ಕಳು ಬೇಕಾಗಿ ನೆನೆಯಲ್ಕೆ, ಓಂಕಾರಪುಟ್ಟಿತ್ತು. ಆ ಓಂಕಾರದೊಡನೆ ಒಬ್ಬ ಶಿವನಾದ. ಆ ಶಿವನೊಡನೆ ಶರಣ ಪುಟ್ಟಿದನೆಯಮ್ಮಾ. ಆ ಶರಣನ ಶಕ್ತಿಯ ಹೆಸರು ×× ಯಮ್ಮ. ಅದರೊಡನೆ ಸದಾಶಿವನಾದ. ಆ ಸದಾಶಿವಂಗೆ ಜ್ಞಾನಶಕ್ತಿಯು ಸಂಬಂಧಿಸಿ ಧಾರೆಯ ನೆರೆದರು. ಅವರೊಡನೆ ಕ್ರಿಯಾಶಕ್ತಿ ಯಮ್ಮ. ಅವರೊಡನೆ ಈಶ್ವರನಾದ. ಆ ಈಶ್ವರಂಗೆ ಇಚ್ಛಾಶಕ್ತಿಯು ಸಂಬಂಧಿಸಿ ಧಾರೆಯುನೆರೆದರು. ಅವರೊಡನೆ ವಿಷ್ಣು

ವಾದ. ಆ ವಿಷ್ಣುವಿಂಗೆ ಮಹಾಲಕುಮಿಯು ಸಂಬಂಧಿಸಿ, ಧಾರೆಯ ನೆರೆದವರು. ಅವರೊಡನೆ ಬ್ರಹ್ಮನಾದ. ಆ ಬ್ರಹ್ಮಂಗೆ ಸರಸ್ವತಿಯು ಸಂಬಂಧಿಸಿ ಧಾರೆಯನೆರೆದವರು. ಇಂತೀ ಮೂವರೂ ಉತ್ಪತ್ತಿ ಸ್ಥಿತಿ ಲಯಕ್ಕೊಳ ಗಾದರು. ಅವರೊಡನೆ ಕೂಡಿ ನಿನ್ನ ಮರವೆ ಯಮ್ಮ. ಅವರ ಸಂಗವ ಬಿಟ್ಟರೆ ನಿನ್ನ ಗಂಡ ಈಶ್ವರನು ಕರುಣವಾದನು. ಈಶ್ವರನನರಿವಡೆ ಮುಂದೆ ಮುಕ್ತಿ ತಾನೆಯಮ್ಮಾ.

ನಾಗರ ಕಾಟಕ್ಕೆ ನವದಲ್ಲೆಯಮ್ಮ! ನಾಗಲೋಕದಿಂದ ಹಿಡಿ ದವೆ ನಿಮ್ಮ! ಜಗವನೆಲ್ಲವ ನುಂಗಿ ಜಾಳಿಸುತಿದೆ! ಗಂಗಾಧರನ ಕಂಠದ[* *]ವಮ್ಮ! ನಾಗಸ್ವರವಿಡಿದು ನಲಿದಾಡುಯಮ್ಮ! ಬೇಗನೆ ಎತ್ತಿ ಗಗನಕ್ಕೆ ಪೋಗೆಯಮ್ಮ॥೬॥

**ಟೀಕು:**— ಅದು ಎಂಥ ಕುಂಡಲೀ ಸರ್ಪನೆಯಮ್ಮ! ಅದು ಎಂಥ ಶೇಷನೇ ತಾಯಿ!! ಈರೇಳು ಲೋಕವನು ಕಚ್ಚಿ ಕೆಡಹುತಿದ್ದಿತು. ಪ್ರಳಯ ಕಾಲನೆಂಬ ಕಾಳೋರಗನೆಯಮ್ಮ. ಪಂಚವರ್ಣದ ಸರ್ಪನೆ ಯಮ್ಮ. ತನುವೆಂಬ ಹುತ್ತಿನಲ್ಲಿ ಠಾವ ಮಾಡಿಕೊಂಡಿಹುದು. ಆ ಹುತ್ತಿಂಗೆ ಒಂಬತ್ತು ಬಾಗಿಲು. ಆವ ಕಡೆಯಿಂದ ಬಂದು ಕಚ್ಚಿ ಕೆಡಹಿತೆಂಬುದ ನರಿಯೆ. ಐದು ಮುಖದ ಸರ್ಪನೆಯಮ್ಮ. ಪೂರ್ವಕೊಂದು ಮುಖವಾಗಿ ಹುದು. ದಕ್ಷಿಣಕೊಂದು ಮುಖವಾಗಿಹುದು. ಉತ್ತರಕೊಂದು ಮುಖ ವಾಗಿಹುದು. ಅಧೋಮುಖಕ್ಕೆ ಒಂದು ಮುಖವಾಗಿಹುದು. ಇಂತೀ ಅಜನ ಸೃಷ್ಟಿಗೆ ಸಿಲ್ಕಿ ಪರಿದಿತೆಯಮ್ಮ. ಇಂಥಾ ಶೇಷನ ಹಿಡಿವ ಪ್ರಸಾ ದವ ಪಡೆವ ಪರಿಯೆಂತೆಂಪಡೆ, ಆದಿಯ ಹಿಮ್ಮಡದಿಂದೊತ್ತಿ, ಅಧೋ ಕುಂಡಲಿಯ ಊರ್ಧ್ವಕ್ಕೆ ತಿರುಹಿ ಆ ಹುತ್ತದ ಒಂಬತ್ತು ಬಾಗಿಲ ಮುಚ್ಚಿ ನಾಗಸ್ವರದ ಶೃತಿಯ ನಾಸಿಕಾಗ್ರದಲ್ಲಿ ಹಿಡಿಯೆ, ಝೇಂಕಾರದ ಸಪ್ತಸ್ವರದಿಂದ ತಿರುಹಿ, ಕುಂಡಲಿಯನಾಲಿಸಿ, ನಾಗಸ್ವರವು ನಾಭಿ ಮಂಡಲದಿಂದೆತ್ತಿ, ಆ ಉಸಿರು ಉನ್ಮನಿಯ ಮುಟ್ಟಿತ್ತು. ಮೇಲಣ ಕೋಣದೊಳಗಣ ಕಪ್ಪೆ ಸರ್ಪನ ನುಂಗಿತ್ತು. ಆ ಸರ್ಪನ ನೆತ್ತಿಯಲ್ಲಿ ರತ್ನವಿತ್ತು. ಆ ರತ್ನ ನಡುಮಧ್ಯದಲ್ಲಿ ಉಳಿಯಿತ್ತು. ನವನಾಳಕ್ಕೆ ಪೊಂದೆ, ಬೆಳಗಾಯಿತ್ತು. ಆ ಶೇಷನ ಪ್ರಸಾದವ ಬೆಳಗಿಂಗೆ ನಮೋ ನಮೋ ಎಂಬೆನೆಯಮ್ಮಾ.

ಎಲ್ಲವ ಹೇಳುವೆ ಎಲ್ಲಿರುವೆ ಕೊರವಂಜಿ । ಕಲ್ಯಾಣದಾಚೆಲಿ ವೈಕುಂಠಪುರವಮ್ಮ । ಅಲ್ಲಿದ್ದ ನಿಲವನು ಹೇಳುವೆನಮ್ಮ । ವೇಳೆ ಯಾಯಿತು ಪೋಗೆ ಎಡೆಮಾಡುತಾರೆ । ಮೇಲಾದ ಪಂಚ ಭಿಕ್ಷವ ಕೊಂಡು ಬಾರೆ । ಚನ್ನಮಲ್ಲಿಕಾರ್ಜುನನ ವರ ಉಂಟುಯುಮ್ಮಾ ॥೭॥

**ಟೀಕು**:—ಅದು ಎಂತಹ ದೇವರ ವರದಿಂದೆ ಪೇಳುತಿದ್ದೆಯುಮ್ಮಾ? ಆದು ಹೇಗೆ ತಾಯಿ? ನೆಲದುರ್ಗದ ಭರತಾದೇವಿ, ಸಲಿಲಪುರದ ಲಕ್ಷ್ಮೀ ದೇವಿ, ಅನಲಪುರದ ಕ್ರಿಯಾ ಮಹಾಕಾಳೀ, ಮರುತಪುರದ ಇಚ್ಛಾ ಮಹೇಶ್ವರೀ, ಗಗನಪುರದ ಜ್ಞಾನ ಮಹೇಶ್ವರಿ, ಅಂಬರಪುರದ ಪರಮೇಶ್ವರೀ ಇವರ ವರ ಉಂಟೆಯುಮ್ಮಾ. ಮತ್ತೆಂತಹ ದೇವರ ವರದಿಂದೆ ಪೇಳುತಿದ್ದೆ ಯುಮ್ಮಾ. ಭುವನದೊಳಗಿರುವ ಬ್ರಹ್ಮದೇವರು, ಸಲಿಲದೊಳಗಿರುವ ವಿಷ್ನುದೇವರು, ಅಗ್ನಿಯೊಳಗಿರುವ ರುದ್ರದೇವರು, ಮರುತದೊಳಗಿರುವ ಈಶ್ವರ ದೇವರು, ಗಗನದೊಳಗಿರುವ ಪರಶಿವದೇವರು, ಇವರ ವರ ಉಂಟೆಯುಮ್ಮಾ. ಮತ್ತೆಂತಹ ದೇವರ ವರದಿಂದೆ ಪೇಳುತಿದ್ದೆಯುಮ್ಮಾ. ಸದ್ಯೋಜಾತ ಮುಖದ ಆಚಾರಲಿಂಗ ದೇವರು, ವಾಮದೇವ ಮುಖದ ಗುರುಲಿಂಗ ದೇವರು, ಅಘೋರ ಮುಖದ ಶಿವಲಿಂಗದೇವರು ತತ್ಪುರುಷ ಮುಖದ ಚರಲಿಂಗದೇವರು, ಈಶಾನ್ಯಮುಖದ ಪ್ರಸಾದಲಿಂಗ ಹೇವರು ಇವರ ವರ ಉಂಟೆಯುಮ್ಮಾ. ಈ ದೇವರನು ಊಣಿಸುವ ಕ್ರಮ ವೆಂತೆಂದೊಡೆ, ಸದ್ಭಕ್ತಿಯಿಂದ ಭಕ್ತನನರಿದು, ಸುಚಿತ್ತಹಸ್ತದಿಂದ ಸುಗಂಧವನು ಆಚಾರಲಿಂಗದೇವರಿಗೆ ಅರ್ಪಿಸಬೇಕೆಯುಮ್ಮಾ. ನೈಷ್ಠಿಕ ಭಕ್ತಿಯಿಂದ ಮಹೇಶ್ವರನನರಿದು, ಸುಬುದ್ಧಿ ಹಸ್ತದಿಂದ ರುಚಿಯನು ಗುರುಲಿಂಗದೇವರಿಗೆ ಅರ್ಪಿಸಬೇಕೆಯುಮ್ಮಾ. ಸಾವಧಾನ ಭಕ್ತಿಯಿಂದ ಪ್ರಸಾದಿಯನರಿದು ನಿರಹಂಕಾರವೆಂಬ ಹಸ್ತದಿಂದ ರೂಪು ಶಿವಲಿಂಗದೇವರಿಗೆ ಅರ್ಪಿಸಬೇಕೆಯುಮ್ಮಾ. ಅನುಭಾವ ಭಕ್ತಿಯಿಂದೆ ಪ್ರಾಣಲಿಂಗಿಯನರಿದು ಸುಮನವೆಂಬ ಹಸ್ತದಿಂದ ಸ್ಪರುಶನವನು ಚರಲಿಂಗದೇವರಿಗೆ ಅರ್ಪಿಸಬೇಕೆಯುಮ್ಮಾ. ಆನಂದ ಭಕ್ತಿಯಿಂದ ಶರಣನನರಿದು ಸುಜ್ಞಾನವೆಂಬ ಹಸ್ತದಿಂದ ಶಬ್ದವನು ಪ್ರಸಾದಲಿಂಗದೇವರಿಗೆ ಅರ್ಪಿಸಬೇಕೆಯುಮ್ಮಾ. ಸಮರಸಭಕ್ತಿಯಿಂದ ಐಕ್ಯನನರಿದು ಸದ್ಭಾವವೆಂಬ ಹಸ್ತದಿಂದ ಸಕಲ ಪದಾರ್ಥವನು ಮಹಾಲಿಂಗದೇವರಿಗೆ ಅರ್ಪಿಸಬೇಕೆಯುಮ್ಮಾ. ಇಂತು ಒಂದೆ ಮೂರಾಯಿತ್ತು, ಮೂರು ಆರಾಯಿತ್ತು, ಆರು ಮೂವ

ತ್ತಾರಾಯಿತ್ತು, ಮೂವತ್ತಾರು ಇನ್ನೂರ ಹದಿನಾರು ಲಿಂಗದೇವರಿಗೆ ತೃಪ್ತಿಯ ಬಡಿಸಬೇಕೆಯಮ್ಮಾ. ಇಷ್ಟು ದೇವರಿಗೆ ಒಂದೇ ದೇವರ ಪರವುಂಟೆ ಯಮ್ಮಾ. ಅದು ಎಲ್ಲಿ ಉಂಟು ಎಂದೊಡೆ, ಒಂದು, ಎರಡು, ಮೂರು, ನಾಲ್ಕು, ಐದು, ಆರು, ಮೀರಿ, ಏಕನಾಳವೆಂಬ ಬೆಸಕನ ಪರ ಉಂಟೆಯಮ್ಮಾ. ಒಳಹೊರಗೆ ಪರಿಪೂರ್ಣವಾಗಿ ಪೇಳಿದೆನೆಯಮ್ಮಾ.



# ವರದಾನಿ ಗುಡ್ಡಮ್ಮ.

ಲೇಖಕಃ—ಈಶ್ವರ ಸಣಕಲ್ಲ.

---

ವಾ. ಷ.

ವರದಾನಿ ಗುಡ್ಡಮ್ಮ ಭಕ್ತವತ್ಸಲೆ ನಿನ್ನ ।
ಚರಣದರ್ಶನದಾಶೆಯಿಂದ ನಾ ಹಗಲಿರುಳು ।
"ಬರಬೇಕು ಬರಬೇಕು" ಎಂದು ಹಂಬಲಿಸುತ್ತೆ ಕಡೆಗಿಂದು ಬಂದು ನಿನ್ನ ||
ಪರಮ ಪಾವನ ಮೂರ್ತಿಯನ್ನು ಕಣ್ದಣಿ ನೋಡಿ ।
ಹರುಷದಿಂದೊಡಗೂಡಿ ಭಕ್ತಿಗಿಂಬನು ಮಾಡಿ ।
ಹೊರಳುತ್ತಲಿರುತಿಹೆನು ನಿನ್ನಯಡಿಹುಡಿಯಲ್ಲಿ ಬೆರಗಾಗಿ ತವ ಲೀಲೆಗೆ ||೧||

ಇಲ್ಲಿ ಸುಳಿಯುವ ಗಾಳಿ ಕಲ್ಪತರುವಿನ ಗಾಳಿ ।
ಇಲ್ಲಿರುವ ನುಣುಪಾದ ಹಾಸುಗಲ್ಲುಗಳೆಲ್ಲ ।
ಚೆಲ್ವವಾಗಿಹ ಹಂಸದುಪ್ಪಳದ ಹಾಸಿಗೆಗಳಿಲ್ಲಿರುವ ಗುಡ್ಡದೊಳಗೆ ||
ಕಲ್ಲುಕೊರಕಲದಲ್ಲಿ ಕಂಡುಬರುತಿಹ ನೀರು ।
ಅಲ್ಲಿ ಸಗ್ಗದೊಳಿರುವ ಸುಧೆಯನಣಕಿಸುತಿಹವು ।
ಇಲ್ಲಿರುವ ಅನ್ನವದು ರುಚಿಯಾದ ಪ್ರಸಾದವು ಮಾತೆಯುದರಿಂದೆ ಜನರು ||೨||

ಬಾಳುವೆಯ ಕಾಟದಿಂ ಬೇಸತ್ತು ನಿನ್ನೆಡೆಗೆ ।
ಮೇಳೈಸಿ ತಪ್ಪದಲೆ ಭಕ್ತಿಯಿಂದಾಗಮಿಸಿ ।
ಬೀಳಲ್ಕೆ ನಿನ್ನ ಪಾದಂಗಳಿಗೆಯವರ ತನು ಶಾಂತಿಯನು ತಳೆಯುತಿಹುದು ||
ಮಾಲಿನ್ಯವನು ಕಳೆದು ಮನವು ತಿಳಿಯಾಗುವದು ।
"ಪಾಲಿಸಮ್ಮಾ"ಯೆಂದು ನಿನ್ನ ಸನ್ನಿಧಿಯಲ್ಲಿ ।
ಕಾಲಕಳೆವರು ತಮ್ಮ ದುಃಖ ಚಿಂತೆಗಳನ್ನು ಮರೆಯುತ್ತ ಜಗದ ತಾಯೀ ||೩||

ತಿರುಗಲೆಂತಮ್ಮ ನಾ ನಿನ್ನ ಗುಡಿಯನು ಬಿಟ್ಟು।
ಸುರಿಯುವವು ಹೊರಸೂಸಿ ದುಃಖದಿಂ ಕಣ್ಣೀರು।
ಒರಲಾರೆಯೇಂ ತಾಯಿ ತನ ಮರುಳ ತರಳನಂ ಮುದ್ದಿಡಲು ಶಾಂತಿಪ್ರದೇ||

ಇರುತಿರುವಿ ನೀನೆಲ್ಲ ತಳಗಳಲಿಯೆಂದು ಜನ।
ರೊರೆಯುತಿರೆ ನೀನೇಕೆ ಕಾಣಲೊಲ್ಲಿಯೆಯಮ್ಮ।
ಭರದಿಂದ ಬಾರಮ್ಮ ತೋರಮ್ಮ ಮೊಗವನ್ನು ನಿನ್ನಳುವ ಕಂದಗೀಗ ||೪||

ಚಿತ್ತವಿಲ್ಲಿಯೆ ಸುಳಿವುದತ್ತಣಪೋದರೂ।
ಸುತ್ತಲುಂ ನಿನ್ನಯ ಸುಮೂರ್ತಿಗಳೆ ಕಾಣುವವು।
ಎತ್ತಲುಂ ನಿನ್ನ ಸ್ತುತಿಗಾನಗಳೆ ಕೇಳುವವು ನಿನ್ನ ಧವಲಿತಕೀರ್ತಿಯು||

ಹತ್ತು ದಿಕ್ಕುಗಳಲ್ಲಿ ಹರಡಿ ಹೊರಚೆಲ್ಲುವದು।
ಎತ್ತ ನಾ ನಿರುತಿರುವೆ ನೀನೆತ್ತ ನೆಲಸಿರುವಿ।
ಮತ್ತೆಮತ್ತರಸುವೆನು ತಿಳಿಯೆ ನಿನ್ನಿರವನ್ನು ಕರುಣಪೊಂದಿರಲಿ
ಜನನೀ ||೫||



# ಕಲ್ಯಾಣಪಟ್ಟಣ.

ಲೇಖಕ:—ಓರ್ವವೀರಶೈವ ಚೊಳಚಗುಡ್ಡ.

---

ಕಲಬುರಿಗೆಯ ೧೪ನೇ ಕನ್ನಡಸಾಹಿತ್ಯ ಪರಿಷತ್ತಿಗೆ ನಾನು ಹೋಗಿದ್ದೆನು. ಆವರ ಕಾರ್ಯಗಳು ಮುಗಿದನಂತರ ಕಲ್ಯಾಣಕ್ಕೆ ಹೊರಟೆನು. ಕಲಬುರಿಗೆಯಿಂದ ಕಲ್ಯಾಣವು ೫೦ ಮೈಲಿನ ಮೇಲಿರುವದು. ಲೈನ ಮಾರ್ಗವು ತಗ್ಗುದಿನ್ನೆಗಳುಳ್ಳ ಮೊರಡಿಯೊಳಗಿಂದ ಹೋಗಿರುತ್ತದೆ. ದಾರಿಯಲ್ಲಿ ಹುಮನಾಬಾದ ಎಂಬ ದೊಡ್ಡಗ್ರಾಮವು ಹತ್ತುತ್ತದೆ. ಇದು ಕಲಬುರಿಗೆಯಿಂದ ೩೯ ಮೈಲಿನಮೇಲಿದ್ದು ಇದು ಈ ಭಾಗದಲ್ಲಿ ವ್ಯಾಪಾರದ ಮುಖ್ಯಸ್ಥಳವಾಗಿರುವದು. ಇಲ್ಲಿ ವೀರಶೈವರ ಸಂಖ್ಯೆಯೇ ವಿಶೇಷವಾಗಿರುತ್ತದೆ. ಊರಸುತ್ತಲೆಲ್ಲ ಕೋಟೆಯುಂಟು. ಅದು ಈಗ ಕೆಲವು ಕಡೆಯಲ್ಲಿ ಬಿದ್ದುಹೋಗಿರುವದು. ಇಲ್ಲಿ ವೀರಭದ್ರದೇವರ ಗುಡಿಯು ಪ್ರಸಿದ್ಧವಾಗಿರುವದು. ಇದು ಉತ್ತರದಿಕ್ಕಿಗಿರುವ ಅಗುಸೆಯಹತ್ತರವಿದ್ದು, ಇದನ್ನು ರಾಜಾರಾಮಚಂದ್ರನು ಕಟ್ಟಿಸಿದನೆಂತಲೂ ಈ ರಾಜಾರಾಮಚಂದ್ರನು ಆಳಿಯ ಬಿಜ್ಜಳನ ಮಗನೆಂತಲೂ ಅಲ್ಲಿಯವರು ಹೇಳುತ್ತಾರೆ.

ಹುಮನಾಬಾದದಿಂದ ಕಲ್ಯಾಣಕ್ಕೆ ಹೋಗುವಮಾರ್ಗವು ಕೆಂಪುಭೂಮಿಯ ಬೈಲುಸೀಮೆಯೊಳಗಿಂದ ಹಾದು ಹೋಗುತ್ತದೆ. ಕಲ್ಯಾಣವು ಈ ಲೈನಮಾರ್ಗವನ್ನು ಬಿಟ್ಟು ಉತ್ತರಕ್ಕೆ ಸುಮಾರು ೨ ಮೈಲಿನಮೇಲಿದ್ದು ಆದರ ಸುತ್ತಲು ಚಿಕ್ಕ ಚಿಕ್ಕಗಿಡಗಂಟೆಗಳಿಂದ ಕೂಡಿದ ಮೊರಡಿ ಮಾತ್ರ ಇರತ್ತದೆ. ಕಲ್ಯಾಣದ ಊರೊಳಗೆ ಹೋಗುವಾಗ್ಗೆ ಎಡಕ್ಕೆ ಮರಿದೇವರ ಗುಡ್ಡವೂ ತ್ರಿಪುರಾಂತಕೇಶ್ವರ ಕೆರೆಯೂ ಹತ್ತುವವು. ಈ ಕೆರೆಯಹತ್ತರವೇ ತ್ರಿಪುರಾಂತಕವೆಂಬ ಸಣ್ಣಹಳ್ಳಿಯು ಇದ್ದು ಇದು ಕಲ್ಯಾಣದ ಒಂದು ಭಾಗವಾಗಿ ಎಣಿಸಲ್ಪಡುತ್ತದೆ. ಈ ಹಳ್ಳಿಯಿಂದ ಕಲ್ಯಾಣವು ಒಂದು ಮೈಲಿನಮೇಲಿದ್ದು ಸುತ್ತಲಿನ ಪ್ರದೇಶವು ಕೆಂಪು ಮತ್ತು ಮೊರಡಿಯ ಭೂಮಿಯುಳ್ಳದ್ದಾಗಿರುವದು. ಪಟ್ಟಣದ ಸುತ್ತಲಿನ ಕೋಟೆಗೋಡೆಯು ಬಹುಮಟ್ಟಿಗೆ ನಾಶವಾಗಿರುವದು. ಇದು ಮುಸಲ್ಮಾನರ ಕೈಸೇರಿದನಂ

ತರ ಕಟ್ಟಲ್ಪಟ್ಟ ಒಂದು ಕಿಲ್ಲೆಎಂದು ತೋರುತ್ತದೆ. ಜನಸಂಖ್ಯೆಯು ೯೧೮೭ ಇದ್ದು ಇವರಲ್ಲಿ ವೀರಶೈವರ ಜನವಸತಿಯು ¾ವಾಗಬಹುದು. ಊರಿನಿಂದ ದಕ್ಷಿಣಕ್ಕೆ ಮುಕ್ಕಾಲು ಮೈಲಿನಮೇಲೆ ಬಸವೇಶ್ವರನ ಅರಮನೆಇದ್ದಸ್ಥಳವೂ, ಪ್ರಭುವಿನ ಶೂನ್ಯಪೀಠವೂ, ತ್ರಿಪುರಾಂತಕೇಶ್ವರ ಕೆರೆಯೂ ಇನ್ನುಳಿದ ಶರಣರು ವಾಸಿಸಿದಸ್ಥಳವೂ ಇರುತ್ತವೆ.

**ಪ್ರಭುದೇವರ ಗದ್ದುಗೆ**—ಈ ಗದ್ದುಗೆಯು ಊರುಬಿಟ್ಟು ೧ಮೈಲಿ ನಮೇಲೆ ಇರುವದು. ಇದು ೨೪ಚೌರಸಫೂಟು ಉಳ್ಳದ್ದಾಗಿದೆ. ಇದಕ್ಕೆ ಪ್ರಭುದೇವರ ಗದ್ದುಗೆಯ ಮಠವೆಂದೂ ಅನ್ನುವರು. ಈ ಮಠದ ಅಧಿಕಾರವು ಒಳ್ಳೇಯೋಗ್ಯರಾದ ಸ್ವಾಮಿಗಳವರಿಗೆ ಕೊಡಲ್ಪಟ್ಟಿದ್ದು ಇವರಿಗೆ ಅಧಿಕಾರವು ಹೋದವರುಷವೇ ಆಗಿರುತ್ತದೆ. ಈ ಗದ್ದುಗೆಯೇ ಶೂನ್ಯ ಸಿಂಹಾಸನವೆಂತಲೂ ತನ್ನ ಗುರುವಾದ ಪ್ರಭುವಿನಸಲುವಾಗಿ ಬಸವೇಶ್ವರನು ನಿರ್ಮಿಸಿದ ಸಿಂಹಾಸನವು ಇದೇ ಎಂತಲೂ ಸ್ವಾಮಿಗಳೂ ತಿಳಿಸಿದರು. ಅಲ್ಲಮನು ಯಾವಪೀಠದಮೇಲೆ ಮಂಡಿಸಿ ಬಸವಾದಿಗಳಿಗೆಲ್ಲಾ ಶಿವಾನುಭವ ತತ್ವೋಪದೇಶವನ್ನು ಮಾಡಿದನೆಂದು ಪುರಾಣೇತಿಹಾಸಗಳಿಂದಕಂಡು ಬರುತ್ತದೋ, ಆ ಪೀಠವು ಇದೇಎಂಬ ಬಗ್ಗೆ ನಿಶ್ಚಿತ ಆಧಾರವಾದ ಉಲ್ಲೇಖಗಳೇನೂ ನಮಗೆ ಕಂಡುಬರಲಿಲ್ಲ. ಆದರೆ ಜನರಗ್ರಹಿಕೆಯು ಮಾತ್ರ ಹೀಗೆ ಇರುತ್ತದೆ.

ಈ ಮಠದ ಕಟ್ಟಡದ ಕೆಲವು ಭಾಗವು ಪೂರ್ವದ್ದೆಂದು ಕಂಡುಬರುತ್ತದೆ. ಮಠದ ಹೊರಗೆ ಮತ್ತು ಒಳಗೆ ಹೀಗೆ ಎರಡು ಭಾವಿಗಳುಂಟು. ಮಠದ ಒಳಗಿನ ಭಾವಿಯನೀರು ಆರೋಗ್ಯಕರವು. ಮಠವು ಎತ್ತರವಾದ ಸ್ಥಳದಲ್ಲಿ ಕಟ್ಟಲ್ಪಟ್ಟಿರುವದು.

**ಬಸವರಾಜನ ಅರಮನೆ**—ಇದು ಪ್ರಭುದೇವರಮಠದಿಂದ ಸುಮಾರು ಒಂದುವರೆ ಫರ್ಲಾಂಗ ಅಂತರದಮೇಲೆ ಎತ್ತರವಾದ ಮತ್ತು ವಿಸ್ತೀರ್ಣವಾದ ಸ್ಥಾನದಲ್ಲಿರುತ್ತದೆ. ಆದರೆ ಆ ಮಹನೀಯನ ಅರಮನೆಯ ಒಂದೂಕಲ್ಲು ಸಹ ಅಲ್ಲಿ ಇಲ್ಲದಿರುವದು ದುರ್ದೈವದ ಸಂಗತಿಯು. ವಿಸ್ತಾರವಾದ ಪ್ರದೇಶದ ಪೂರ್ವಭಾಗವಲ್ಲಿ ಅಲ್ಪಸ್ವಲ್ಪ ಒಳ್ಳೇ ಚನ್ನಾಗಿ ನೆಲಗಟ್ಟುಮಾತ್ರ ಇದ್ದದ್ದು ತೋರಿಬರುತ್ತದೆ. ಇದರ ಕೆಳಗೆ ಎರಡು ಗುಹೆಗಳು ಇರುತ್ತವೆ. ಇವುಗಳಿಗೆ ಬಸವೇಶ್ವರನಗವಿಗಳೆಂದು ಜನರು

ಹೇಳುತ್ತಾರೆ. ಈ ಗವಿಗಳ ಎದುರಿನಲ್ಲಿ ಒಂದು ಹಾಳುಭಾವಿಯೂ ಇರುತ್ತದೆ.

**ಮಹಾದೇವಿಯಕ್ಕನಗವಿ:**—ಇದು ಬಸವನಅರಮನೆಯಿಂದ ಸ್ವಲ್ಪ ಅಂತರದಮೇಲೆ ಇರುತ್ತದೆ. ೭-೮ ಅಂಕಣದ ಇಮಾರತಿಇದ್ದು ಇದರಲ್ಲಿ ಮೂರು ಗವಿಗಳು ಇವೆ. ಈ ಕಟ್ಟಡದ ಬಲಕಿರುವ ಗವಿಯ ಒಳಗಿನ ಮುಂಭಾಗದಲ್ಲಿರುವ ಕಂಬಗಳ ಮಾಟವು ಹಳೆತರದ್ದು. ಈ ಭಾಗವನ್ನು ದಾಟಿ ಕೆಳಗೆ ಇಳಿದು ಸ್ವಲ್ಪ ಮುಂದಕ್ಕೆ ಹೋದರೆ ಅಲ್ಲಿ ಒಂದು ಸಾಧಾರಣ ಒಂದುವರೆ ಅಂಕಣದಷ್ಟು ಕೋಣೆಇರುತ್ತದೆ. ಈ ಕೋಣೆಯಲ್ಲಿ ಒಂದು ಶಿವಲಿಂಗವಿದ್ದು ಇದರ ಎಡಬಲಕ್ಕೆ ಸ್ತ್ರೀಪುರುಷರ ವಿಗ್ರಹಗಳಿವೆ. ಈ ಶಿವಲಿಂಗದ ಎಡಕ್ಕೆ ಇರುವ ವಿಗ್ರಹವು ಯಾವದೆಂಬದು ತಿಳಿಯಲಿಲ್ಲ. ಆದರೆ ಬಲಗಡೆಯ ವಿಗ್ರಹವು ಮಾತ್ರ ಪಾರ್ವತೀಪರಮೇಶ್ವರರದು ಇರುತ್ತದೆ. ಪಾರ್ವತೀಪರಮೇಶ್ವರರಿಗೆ, ಚಾಮರಿಯನ್ನು ಹಾಕುವದಕ್ಕೋಸ್ಕರ ಒಂದು ಹೆಣ್ಣುವಿಗ್ರಹವು ಕೈಯಲ್ಲಿ ಚಾಮರಿಯನ್ನು ಹಿಡಿದಿದ್ದು, ಈ ವಿಗ್ರಹವನ್ನು ನೋಡಿದ ಕೂಡಲೇ ಪ್ರತ್ಯಕ್ಷ ಚಾಮರಿಯನ್ನು ಹಾಕುತ್ತದೋ ಏನೋ ಎಂಬಂತೆ ಭಾಸವಾಗುತ್ತದೆ. ಈ ವಿಗ್ರಹದ ವಸ್ತ್ರಾಭರಣಗಳು ಸಾಮಾನ್ಯ ಸ್ತ್ರೀವಿಗ್ರಹಗಳಂತೆ ಜರತಾರಿ ವಸ್ತ್ರಗಳಿಂದಾಗಲೀ ಸುವರ್ಣದ ಆಭರಣಗಳಿಂದಾಗಲೀ ತೋರಿಸಲ್ಪಟ್ಟಿಲ್ಲ. ಆವಿಗ್ರಹದ ತುರುಬು ಮೊದಲು ಮಾಡಿ ಇಡೀ ಅಂಗದಲ್ಲೆಲ್ಲ ರುದ್ರಾಕ್ಷಿಗಳೇ ಇವೆ. ಇದರ ಮೇಲಿಂದ ಈ ವಿಗ್ರಹವು ಇತ್ತೀಚಿನದಲ್ಲೆಂದು ಊಹಿಸಬಹುದು. ಇದರಿಂದ ಬಸವನ ಕಾಲದ ಶರಣಸ್ತ್ರೀಯರು ತಮ್ಮ ಅಂಗವನ್ನೆಲ್ಲ ಬೆಳ್ಳಿ ಬಂಗಾರಗಳ ಆಭರಣಗಳಿಂದ ಮುಚ್ಚದೆ ಭಸ್ಮರುದ್ರಾಕ್ಷಿಗಳನ್ನೇ ಪ್ರೀತಿಯಿಂದ ಧರಿಸುತ್ತಿದ್ದರೆಂಬದು ಕಂಡುಬರುತ್ತದೆ. ಉಳಿದ ಎರಡು ಗವಿಗಳಲ್ಲಿ ಒಂದು ಗವಿಯು ತೀರಆಳವಿದ್ದದರಿಂದ ಹೋಗುವದಾಗಲಿಲ್ಲ. ಮತ್ತೊಂದು ಗವಿಯಲ್ಲಿ ಯಾವವಿಗ್ರಹಗಳೂ ಇಲ್ಲದೆ ದುಂಡಾಗಿ ಅಗಿದ ತಗ್ಗುಮಾತ್ರ ಇರುತ್ತದೆ. ಈ ಅಕ್ಕನಾಗಮ್ಮನ ಗವಿಯ ಕಟ್ಟಡದ ಪ್ರಾಕಾರದಲ್ಲಿ ಒಂದು ತೀರ ಆಳವಾದ ಭಾವಿಯುಂಟು. ಈ ಭಾವಿಯಲ್ಲಿ ಹಣಿಕಿಹಾಕಿ ನೋಡಲು ನೀರೇನು ಕಾಣಿಸದೆ ಕತ್ತಲೆಯೇ ತುಂಬಿಕೊಂಡಿತ್ತು. ಈ ಭಾವಿಯ ಎದುರಿನಲ್ಲಿ ಸಣ್ಣದಾದ ಗಚ್ಚಿನ ಡೋಣಿಇರುತ್ತದೆ. ಇದು ಅಚ್ಚಳಿಯದೇ ಹಾಗೇ ಇದೆ. ಈ ಭಾವಿಯಿಂದ ಮೂರು ಫೂಟಿನಮೇಲೆ ಇಮಾರತಿಯಗೋ

ಡೆಯು ಇದ್ದು ಈ ಗೋಡೆಗೆ ಹೊಂದಿ ಎರಡು ಹಳೇತರದ ಕಂಬಗಳು ನಿಂತಿವೆ. ಇವುಗಳ ಮೇಲಿಂದ ಈ ಭಾವಿಯಮೇಲೆ ಒಂದು ಕಟ್ಟಡವು ಮೊದಲಿಗೆ ಇದ್ದು ಕಾಲಾಂತರದಿಂದ ಅದು ನಷ್ಟಹೊಂದಿರಬಹುದೆಂದು ತೋರುತ್ತದೆ.

**ತ್ರಿಪುರಾಂತಕೇಶ್ವರ ಕೆರೆಯು:—** ಇದು ಪ್ರಭುದೇವರ ಮಠ, ಬಸವನ ಅರಮನೆ, ಮತ್ತು ಅಕ್ಕಮಹಾದೇವಿಯ ಗವಿ ಇವುಗಳ ಸಮೀಪದಲ್ಲಿಯೇ ಇದೆ. ಅಂದರೆ ಈ ಕೆರೆಯ ಪೂರ್ವದಂಡೆಯಿಂದ ಸ್ವಲ್ಪ ಅಂತರದ ಮೇಲೆ ಇವು ಇರುತ್ತವೆ. ಈ ಕೆರೆಯ ವಿಸ್ತೀರ್ಣವು ಸುಮಾರು ಚಚ್ಚೌಕು ೩-೪ ಮೈಲು ಆಗಬಹುದು. ಇದಕ್ಕೆ ಮೇಲಿಂದ ಮೇಲೆ ದುರಸ್ತು ಮಾಡುವವರಿಲ್ಲದ್ದರಿಂದ ಹುಗಿದು ಹೋಗಿರುವದು. ಇದರ ಸುತ್ತಲೆಲ್ಲ ಎತ್ತರವಾದ ಮೊರಡಿಯು ಇರುವದರಿಂದ ಇದಕ್ಕೆ ಸ್ವಾಭಾವಿಕವಾದ ಒಡ್ಡೇ ಆಗಿರುವದು. ಈ ಕೆರೆಯ ಪೂರ್ವಭಾಗದಿಂದ ಒಂದು ಬಿಡುಗಾವಲಿಯು ಈಗ ಇದೆ. ಈ ಕಾಲಿವೆಯ ಸಹಾಯದಿಂದ ಎಷ್ಟೋ ಜಮೀನುಗಳಿಗೆ ನೀರಿನ ಪುರವಠೆಯಾಗಿ ಭತ್ತ ಕಬ್ಬು ಮೊದಲಾದ ನೀರಾವರಿ ಪೈರುಗಳು ಬೆಳೆಯುತ್ತವೆ. ಆದರೆ ಇತ್ತಿತ್ತ ಮಳೆಯ ಅಭಾವದ ಮೂಲಕವಾಗಿಯೂ ಕೆರೆಗೆ ಸರಿಯಾದ ದುರಸ್ತು ಇಲ್ಲದ್ದಕ್ಕಾಗಿಯೂ ಕೆರೆಯು ಈಗ ಸಂಪೂರ್ಣವಾಗಿ ಬತ್ತಿ ಹೋಗಿರುತ್ತದೆ ಇದರ ಪೂರ್ವದಂಡೆಯ ಮೇಲೆ ಉಗ್ರಾಣಗಳಿಂದ ಕೂಡಿದ ಒಂದು ಕಟ್ಟಡವಿದೆ. ಇದು ಹೊಡೆದ ಕಲ್ಲುಗಳಿಂದ ಕಟ್ಟಿದ್ದಿರುವದರಿಂದ ಬಸವನ ತರುವಾಯ ಬಂದ ಮುಸಲ್ಮಾನರ ಕಾಲದಲ್ಲಿ ಇದು ಆಗಿರಬಹುದೆಂದು ತೋರುತ್ತದೆ.

ಬಸವನ ಕಾಲದಲ್ಲಿ ಈ ಕೆರೆಯಿಂದ ಅನೇಕ ಭೂಮಿಗಳು ಸಾಗು ಆಗುತ್ತಿದ್ದವೆಂಬದು ಸ್ಪಷ್ಟವು. ಈಗ್ಗೆಯೂ ಇಲ್ಲಿಯ ಜನರು ಈ ಕಾಲಿವೆಯ ಸಹಾಯದಿಂದ ಭತ್ತವನ್ನು ಬೆಳೆಯುತ್ತಾರೆ. ಈ ಕಾಲಿವೆಯ, ನೀರನ್ನು ಉಪಯೋಗಿಸಿಕೊಳ್ಳುವವರಿಗೆ ಸರಕಾರದ ಕರವು ಕೂಡ್ರಿಸಲ್ಪಟ್ಟಿದೆ. ಈ ಕೆರೆಯ ಹೆಸರು ತ್ರಿಪುರಾಂತಕೇಶ್ವರವಿರುವದರಿಂದ ಬಸವೇಶ್ವರನು ತನ್ನ ಮಂತ್ರಿಪದದ ಕಾಲದಲ್ಲಿ ಇದನ್ನು ಕಟ್ಟಿಸಿರಬಹುದು.

**ಮರಿದೇವರಗುಡ್ಡ:—** ಇದು ತ್ರಿಪುರಾಂತಕ ಕೆರೆಯ ಪಶ್ಚಿಮ ದಂಡೆಯ ಮೇಲೆ ಇರುವದು. ಇಲ್ಲಿ ಒಂದು ಕಟ್ಟಡವು ಇದ್ದು ಒಳಗೆ

ಒಂದು ಗವಿಯು ಇರುತ್ತದೆ. ಈ ಗವಿಯಲ್ಲಿ ಯಾವ ವಿಗ್ರಹಗಳಿಲ್ಲ. ಈ ಗುಡ್ಡದಲ್ಲೆಲ್ಲಾ, ನುಲಿಚಂದಯ್ಯನಗವಿ, ಮಡಿವಾಳ ಮಾಚಯ್ಯನ ಗವಿ, ಹಡಪದ ಅಪ್ಪಣ್ಣನ ಗವಿ, ಮೊದಲಾದ ಗವಿಗಳುಂಟು. ಈ ಗುಡ್ಡದ (ಎತ್ತರವಾದ ಮೊರಡಿಯು)ಲ್ಲೆಲ್ಲ ಪತ್ರಿ ಗಿಡಗಳ ಬನವಿರುವದು. ಎಲ್ಲ ಶರಣರ ಗವಿಗಳು ಒಂದು ಕಡೆಗೆ; ಬಸವನ, ಪ್ರಭುವಿನ, ಅಕ್ಕ ಮಹಾದೇವಿಯ ಮನೆಗಳು ಮತ್ತೊಂದು ಕಡೆಗೆ ಇರುವದರಿಂದ ಬಸವನು ಎಲ್ಲ ಶರಣರೂ ಒತ್ತಟ್ಟಿಗೆ ವಾಸಿಸುವ ಹಾಗೆ ಇವರೆಲ್ಲರಿಗೆ ದೊಡ್ಡ ಇಮಾರತಿಯನ್ನು ಕಟ್ಟಿಸಿಕೊಟ್ಟಿರಬಹುದೆಂದು ತೋರುತ್ತದೆ. ಎಲ್ಲ ಶರಣರ ಆಚರಣೆಗೆ ಯಾವ ತರದ ಅಡ್ಡಿಯಾಗಬಾರದೆಂದು ಊರ ಬಟ್ಟು ದೂರದಲ್ಲಿ ಪರಸ್ಪರವಾಗಿ ಇವರಿಗೆಲ್ಲ ಇರುವ ವ್ಯವಸ್ಥೆಯನ್ನು ಮಾಡಿರಬಹುದು.

ಊರಲ್ಲಿ ಪರಸು ಗಟ್ಟಿ ಎಂಬ ಕಟ್ಟೆಯು ಇರುತ್ತದೆ. ಇದು ಬಸವೇಶ್ವರನು ದಾನ ಧರ್ಮ ಮಾಡುತ್ತಿದ್ದ ಸ್ಥಳವು. ಆದರೆ ಅಲ್ಲಿ ಈಗ ಕಟಕರು ಮಾಂಸವನ್ನು ಮಾರುತ್ತಾರೆ. ಈ ಪರಸುಗಟ್ಟಿಯ ಮೇಲೆ ಕುಳಿತು ವ್ಯಾಪಾರ ಮಾಡಿದರೆ ಲಾಭವು ಬರುವದೆಂಬ ತಿಳುವಳಿಕೆಯು ಕಟಕರಿಗೆಲ್ಲಾ ಇರುತ್ತದೆ. ಇದು ಎಷ್ಟರ ಮಟ್ಟಿಗೆ ನಿಜವಿದೆಂಬದು ತಿಳಿಯದು. ಆದರೆ ಕೂತು ಮಾರುವವರಿಗೆ ದಿವಸಕ್ಕೆ ೧ ರೂ. ೪ ಆಣೆ ಕರವನ್ನು ಮಾತ್ರ ಅಲ್ಲಿಯ ಜಹಾಗೀರದಾರನು ಕೂಡಿಸಿರುವನೆಂದು ಜನರು ಹೇಳಿದರು.

ಪೀರ ಪಾಚ್ಛಾನ ದರ್ಗಾ ಎಂದು ಒಂದು ದೊಡ್ಡದಾದ ಇಮಾರತಿಯು ಇರುತ್ತದೆ. ಇದನ್ನು ಬಿಜ್ಜಳನ ರಾಜವಂಶವು ನಷ್ಟವಾದನಂತರ ಮುಸಲ್ಮಾನರು ಕಲ್ಯಾಣವನ್ನು ಆಕ್ರಮಿಸಿದನಂತರ ಈ ಇಮಾರತಿಯು ಆಗಿರಬಹುದು. ಬಿಜ್ಜಳನ ಅರಮನೆ, ದರ್ಬಾರ ಮೊದಲಾದವುಗಳನ್ನೆಲ್ಲ ನೆಲಸಮ ಮಾಡಿ ಆ ಇಮಾರತಿಗಳ ಕಲ್ಲುಗಳಿಂದಲೇ ಮುಸಲ್ಮಾನರು ಕಿಲ್ಲೆ ಮತ್ತು ಈ ದರ್ಗಾ ಕಟ್ಟಿಸಿದರೆಂದು ಜನರು ಹೇಳುತ್ತಾರೆ. ಈ ಸಂಗತಿಯು ನಿಜವಿರಬಹುದು. ಯಾಕೆಂದರೆ ಅಲ್ಲಿಗೆ ಹೋಗಿ ನೋಡಲಾಗಿ ಇಮಾರತಿಯ ಒಂದು ಭಾಗದ ಮೂರು ಅಂಕಣದ ಜಾಗೆಯಲ್ಲಿ ಪೂರ್ವಕಾಲದ ಕಂಬಗಳನ್ನು ನಿಲ್ಲಿಸಿ ಅವುಗಳ ಮೇಲೆ ಇಮಾರತಿಯನ್ನು ಕಟ್ಟಿದ್ದಾಗಿ ತೋರುತ್ತದೆ. ಈ ಜಾಗೆಯಲ್ಲಿ, ದೊಡ್ಡ ದೊಡ್ಡ

ಹಾಸಿಗೆಗಲ್ಲುಗಳು ಕೂಡ್ರಿಸಲ್ಪಟ್ಟವೆ. ಇವುಗಳಲ್ಲಿಯ ಹಾಸುಗಲ್ಲಿನಮೇಲೆ ಒಂದು ಕನ್ನಡ ಶಿಲಾಲಿಪಿಯು ಇದೆ. ಆದರೆ ಕಲ್ಲಿನ ಮೇಲಿನ ಅಕ್ಷರಗಳೆಲ್ಲ ಸವೆದು ಹೋಗಿ ಇದರ ಮೇಲ್ಭಾಗದಲ್ಲಿ ಮಸು ಮಸುಕಾದ ೨--೩ ವಳಿಗಳು, ಕೆಳಭಾಗದಲ್ಲಿ ೨ ವಳಿಗಳು ಹೀಗೆ ಇದ್ದವು. ಇದನ್ನು ನೋಡಿದೊಡನೆಯೇ ಈ ಇಮಾರತಿಯು ಹಿಂದೂ ಇಮಾರತಿಯ ಕಲ್ಲುಗಳಿಂದ ಕಟ್ಟಿದೆಂದು ನಿಸ್ಸಂಶಯವಾಗಿ ಕಂಡು ಬಂದಿತು.

ಬಿಜ್ಜಳನ ಅರಮನೆಯ ಅವಶೇಷಗಳೇನೂ ಇಲ್ಲಿ ಇರುವದಿಲ್ಲ. ಮತ್ತು ಚನ್ನಬಸವನ ಅರಮನೆಯಾಗಲೀ ಅಥವಾ ಉಳಿದವರಂತೆ ಚನ್ನಬಸವನ ಗವಿಯಾಗಲಿ ಇರುವದಿಲ್ಲ. ಅದರಂತೆ ಪುರಾತನ ಕಟ್ಟಡಗಳಾವವೂ ಕಂಡು ಬರಲಿಲ್ಲ. ಕಲ್ಯಾಣವು ಪೂರ್ವ ಕಾಲದಲ್ಲಿ ಬಹು ಪ್ರಸಿದ್ಧವಾದ ರಾಜಧಾನಿಯು, ಮತ್ತು ಅಲ್ಲಿ ಅನೇಕ ವೈಭವಶಾಲಿಗಳಾದ ಅರಸರು ಆಳಿ ಹೋದರು. ಆದರೆ ಪೂರ್ವದ ವೈಭವದ ಚಿನ್ಹಗಳೇನೂ ಈಗ ಅಲ್ಲಿ ತೋರಿಬರಲಿಲ್ಲ. ಕಲ್ಯಾಣದ ಚಾಲುಕ್ಯರ ತರುವಾಯ ಸ್ವಲ್ಪ ಕಾಲದ ಮೇಲೆ ಮುಸಲ್ಮಾನ ಅರಸರು ಕಲಬುರಿಗೆಯಲ್ಲಿ ಆಳಹತ್ತಿದರು. ಅವರು ಹಿಂದೂ ಅರಸರಾದ ವಿಜಯನಗರದವರೊಡನೆ ಅನೇಕ ಧರ್ಮಯುದ್ಧಗಳನ್ನು ಮಾಡಿದ್ದು ಇತಿಹಾಸ ಪ್ರಸಿದ್ಧವದೆ. ಈ ಮುಸಲ್ಮಾನರು ಧರ್ಮಾಂಧತೆಯಿಂದ ಇಲ್ಲಿಯ ಹಿಂದಿನ ದೇವಾಲಯಗಳನ್ನು ನಾಶಗೊಳಿಸಿರಬಹುದೆಂದು ತೋರುತ್ತದೆ.

ಊರಲ್ಲಿ ಜೈನರ ಮನೆಗಳು ಮೊದಲಿಗೆ ವಿಶೇಷವಿದ್ದು ಅವು ಈಗ ಹಾಳಾಗಿರುವವೆಂದು ಜನರು ಹೇಳಿದರು. ಇದೇ ಪ್ರಕಾರವಾಗಿ ವೀರಶೈವ ಶ್ರೀಮಂತರ ಮನೆಗಳೂ ಹಾಳಾಗಿರುತ್ತವೆಂದು ಹೇಳಿದರು. ಒಳ್ಳೇ ಭವ್ಯವಾಗಿದ್ದ ಎರಡು ಶ್ರೀಮಂತರ ಮನೆಗಳು ನಿರ್ವಂಶವಾಗಿದ್ದು ಇಮಾರತಿಗಳು ಮಾತ್ರ ಹಾಗೆ ಇರುವದನ್ನು ನೋಡಿದೆವು. ಇದೇ ಪ್ರಕಾರ ಎಷ್ಟೋ ಮನೆಗಳು ಹಾಳು ಬಿದ್ದಿರುತ್ತವೆಂದು ಹೇಳಿದರು.

ಕಲ್ಯಾಣ ಪಟ್ಟಣದಲ್ಲಿ ಹುಲಿ ಕಂಥಿಮಠದಲ್ಲಿ ಸುಮಾರು ೧೨-೧೩ ನೂರು ವರ್ಷಗಳ ಪೂರ್ವದಲ್ಲಿಯ ತಾಮ್ರ ಪಟಗಳೂ, ಕಂಚಿನ ಪತ್ರಗಳೂ, ಇರುತ್ತವೆಂದು ತಿಳಿದು ಬರುತ್ತದೆ.

ಕಲ್ಯಾಣದಲ್ಲಿ ನಮಗೆ ಶಿಲಾಲೇಖಗಳು ಸಿಗದಿದ್ದರೂ ಸುತ್ತು ೧೦-೧೨ ಮೈಲುಗಳಲ್ಲಿ ಅಸಂಖ್ಯ ಶಿಲಾಲೇಖಗಳು ಇರುವವೆಂದು ಜನರು ಹೇಳುತ್ತಾರೆ. ಅವುಗಳನ್ನೆಲ್ಲ ಕನ್ನಡಿಗರು ಶೋಧಿಸಿದ್ದದ್ದಾದರೆ ಅನೇಕ ಮಹತ್ವದ ಐತಿಹಾಸಿಕ ಸಂಗತಿಗಳು ತಿಳಿದು ಬರಬಹುದು. ಈ ಕಾರ್ಯವನ್ನು ಕನ್ನಡಿಗರು ತೀವ್ರವಾಗಿ ಕೈಕೊಳ್ಳುವದು ಅತ್ಯವಶ್ಯಕವಿದೆ.

ಕಲ್ಯಾಣವು ತನ್ನ ಪೂರ್ವದ ಸಿರಿಸೊಬಗುಗಳನ್ನು ಕಳಕೊಂಡು ತೇಜೋಹೀನವಾದ ಹಾಳು ಕೊಂಪೆಯ ಸ್ಥಿತಿಯಲ್ಲಿದ್ದರೂ ಕನ್ನಡಿಗರಿಗೆ ಇತಿಹಾಸ ದೃಷ್ಟಿಯಿಂದ ಆದರಣೀಯ ಸ್ಥಾನವೇ ಆಗಿರುವದು. ಅಲ್ಲುಳಿದ ಅಲ್ಪ ಸ್ವಲ್ಪ ಅವಶೇಷಗಳು ಕನ್ನಡಿಗನ ಎದೆಗೆ ತಾಕಿದೊಡನೆಯೇ ಆಗಿನ ಕಾಲದ ಪರಿಸ್ಥಿತಿಯು ತಟ್ಟನೆ ಹೊಳೆಯದಿರಲಾರದು. ಇತಿಹಾಸ ಪ್ರಸಿದ್ಧ ಸ್ಥಾನಗಳು ಸದ್ಯಕ್ಕೆ ಎಷ್ಟೋ ಕೀಳಾಗಿದ್ದರೂ ಅಲ್ಲಿ ಕೆಲವಾದರೂ ಐತಿಹಾಸಿಕ ಸಾಮುಗ್ರಿಗಳು ದೊರೆಯುವವೆಂದು ನಿರ್ವಿವಾದವಾಗಿ ಹೇಳಬಹುದು. ಸದ್ಯಕ್ಕೆ ಕರ್ನಾಟಕದಲ್ಲಿ ಪ್ರತಿಯೊಂದು ಇತಿಹಾಸ ಪ್ರಸಿದ್ಧ ಸ್ಥಳಗಳಿಗೆಲ್ಲಾ ಹೋಗಿ ಪರಿಶೋಧಿಸಿದ್ದಾದರೆ ಅನೇಕ ಮಹತ್ವದ ವಿಷಯಗಳು ಕಂಡು ಬಂದು ಕರ್ನಾಟಕ ಇತಿಹಾಸಕ್ಕೆ ಮತ್ತಿಷ್ಟು ಜೀವಕಳೆಯು ಏರದೆ ಇರಲಾರದು. ಇದನರಿತು ಕರ್ನಾಟಕಾಭಿಮಾನಿಗಳು ಶೀಘ್ರದಲ್ಲಿಯೇ ಈ ಕಾರ್ಯ ಕೈಕೊಳ್ಳದಿದ್ದರೆ ಈಗಿರುವ ಅಲ್ಪ ಸ್ವಲ್ಪ ಅವಶೇಷಗಳೂ ಸಹ ನಷ್ಟ ಹೊಂದುವವೆಂಬದರಲ್ಲಿ ಸಂಶಯವಿಲ್ಲ.

ಕಲ್ಯಾಣದ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನನಗೆ ಒದಗಿಸಿ ಕೊಡುವದಾಗದಿದ್ದರೂ ನಾನು ನೋಡಿದಷ್ಟು ಅಲ್ಪ ಸ್ವಲ್ಪ ಸಂಗತಿಗಳನ್ನುತಮ್ಮಪತ್ರಿಕೆಯ ವಾಚಕರಿಗೋಸ್ಕರ ಅರುಹಿರುವೆನು.



# ಆ ಬಳಿಕ.

ಬರೆದವ:— ಸಿಂಪೀ ಲಿಂಗಪ್ಪ ಚಡಚಣ.



[ತನಗೆ ದೊರೆಯಲಿರುವ ವೈಭವವು, ವಿಧಿವಶದಿಂದ ಬೇರೆರ ಪಾಲಾಗಲು ಆ ಹತದೈವಿಯು ಹೀಗಂದು ಕೊಳ್ಳುವುದು ಸಹಜ!]

ನನ್ನ ಮುತ್ತಿನ ಸರವು ಯಾರ ಕಂಠವ ಸೇರಿತೇ?
ನನ್ನ ರತುನದ ಬೆಳಕು ಯಾರ ಮನೆಗಾಯಿತೇ?
ನನ್ನ ದಂಡೆಯು ಯಾವ ಮುತ್ತೈದೆಗಾಯಿತೇ?
ನನ್ನ ಸಂಪಗೆ ಹೂವು ಯಾರ ಮುಡುಪಿಂಗಾಯಿತೇ? ॥ ೧ ॥

ಬೊಗಸೆ ಸಿಂಪಿಗೆ ಸ್ವಾತಿ ಮಳೆಯಿಲ್ಲದಾಯಿತೇ।
ಮುಗಿಲಿನಂಗಣದಲ್ಲಿ ಚಂದಪ್ಪನೊಡಗೂಡಿ॥
ಜಿಗಿದಾಡಿ ನಲಿವ ನಲ್ಮೆಯ ನಿಲ್ಲದಾಯಿತೇ ।
ಬಗೆಯ ಬಸುರಿಗೆ ಒಂದು ನಲ್ಗೂಸು ಇಲ್ಲಾಯಿತೇ॥ ೨ ॥

ಯಾಕೆ ಕಸಿದೆಯೊ ದೇವ ನನ್ನ ಕೈತುತ್ತವನು।
ಯಾಕೆ ಮಸೆದೆಯೊ ನನ್ನ ಮೇಲೆ ಕೈಕತ್ತಿಯನು॥
ಯಾಕೆ ಬಿಡಿಸಿದಿ ಹೇಳು, ಜೋಡಿಯುವನಾಟವನು।
ಯಾಕೆ ಕೆಡಿಸಿದಿ ಅಂಥ ರಮ್ಯವಹ ರಮ್ಯವನ್ನು॥ ೩ ॥

ಯಾರು ಯತ್ನಿಸಲೇನು, ಯಾರು ಯೋಚಿಸಲೇನು?
ಯಾರು ಹೂಡಿದರೇನು? ಆ ವಿಧಾತನವ ನಿಂತು
ಬೇರೆ ಕಲ್ಪಿಸಿ ಮಾಡಿ, ಹೊಂದುವನು ಹರಿಸವನು।
ಬಾರಿ ಬಾರಿಗು ನನ್ನ ಮನ ಹೊಂದಲೀ ಬಗೆಯನು॥ ೪ ॥



**ಮತ್ತೇಭಃ**— ಪಿರಿದುಂ ಧ್ಯಾನಜಪಂ ನಮಸ್ಕೃತಿ ಲಸತ್ಪೂಜಾದಿ ಕರ್ಮಂಗಳಂ। ನಿರುತಂ ತೋರದೆ ದೃಶ್ಯಮಂ ಮರೆದು ಶುದ್ಧಾಶುದ್ಧ ಭೋಗಂಗಳಿಂ॥ ಬೆರಡಂ ಪೊರ್ದದೆ ಕಾರ್ಯಕಾರಣಮವಂ ಮೀರಿರ್ದ ತಲ್ಲಿಂಗವೇ। ಪರನಂತಾತನೆ ನೀನಲಾ ನಿಜಮಿದೇ ಶ್ರೀ ಸಿದ್ಧಲಿಂಗೇಶ್ವರಾ ॥೫೩॥

**ಗದ್ಯಃ**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಐವತ್ತು ಮೂರನೆಯದಾದ ಪರಜಂಗಮಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೫೮. ಕ್ರಿಯಾಗಮಸ್ಥಲ.

**ಸೂತ್ರಃ**— ಇಂತು ನವಸ್ಥಲಂಗಳೀ ತ್ರಿವಿಧ ತ್ರಿವಿಧ ಸ್ಥಲಂಗಳೇಕವಾದ ಆಚಾರಲಿಂಗವು ವೀರಮಾಹೇಶ್ವರನ ಗುರುಲಿಂಗವು ಸತ್ಕ್ರಿಯೆಯಲ್ಲಿ ಆಗಮ ಸ್ವರೂಪವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಕ್ರಿಯಾಗಮಸ್ಥಲವಾದುದು.

**ವಚನಃ**— ಶಿವಾಚಾರವೆಂಬುದೊಂದು ಬಾಳಬಾಯಿಧಾರೆ ಲಿಂಗ ಮೆಚ್ಚಬೇಕು, ಜಂಗಮ ಮೆಚ್ಚಬೇಕು, ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಿರಬೇಕು. ಬೇರಾದರೆ ಮೆಚ್ಚುವನೇ ನಮ್ಮ ಕೂಡಲ ಸಂಗಮ ದೇವಾ.

ಪದ—ರಾಗ—ಘುರ್ಜರಿ

ಭಕ್ತಿಯರಿದರಿದಾರಿಗು ಆಗದು ಶರಣ ಸಾರಾಯ ಸುಸಂಗ। ಅರಿವ ಗರಗಸದಂತಿರ್ದುದು ಅಹಿ ಪತಿಯಾಭರಣ ॥ಪ॥

ಶಿವಸಾರಾಯದಲ್ಲೊದಗಿದ ಬೀಜದ ಪರಿಯೆಂತೆಂದೆನೆ ಹೇಳುವೆ ಕೇಳಿರಿ। ಶಿವಭಕ್ತರ ಕ್ಷೇತ್ರದೊಳಗೆ ಹುಟ್ಟಿತೊಂದು ನಾರಿವಾಣದ ಸಸಿಯು॥ ದಿವರಾತ್ರಿಗಳೆಂಬ ತಂಗಾಳಿ ಬೀಸಲು ಆವರಿಚ್ಛೆಗೆ ಆದು ಒಲಿಯದು ನೋಡ ಒಲಿವು ಸಜ್ಜನ ಶರಣರು ಸಾತ್ವಿಕ ಸದಾಭಕ್ತರುಗಳಲಿ ॥೧॥

ಪರವ್ರವ್ಯಂಗಳ ಪರಸಮಯಂಗಳ ಪರಸ್ತ್ರೀಯರ ಪರದ್ರವ್ಯವ ಮುಟ್ಟರು । ಇರವಿಗೆ ಸೀಮೆಯ ಮಾಡಿಕೊಂಡಿಹಡೊಂದಾಚಾರದ ಕಾಹಾ॥ ಕರ ಸೋಜಿಗ ಜೇನ್ನುಪ್ಪವನಾಹುಳ ಪರವಾದಿ ಯಂಜಲೆಂದರೆ ಮುಟ್ಟದು। ಶಿವಭಕ್ತನಾಗಿ ಇವ ಬಿಡದಿರ್ದಡೆ ಆವ ಕರಪಾತಕನೂ॥೨॥

ಬ್ರಹ್ಮೇತಿಕಾರನು ಸುರೆಸೇವಕರನು ದುರ್ಮುಖ ಚೋರನು ಗುರುತಲ್ಪಕರನು। ಒಮ್ಮೆಯು ಬೆರಸಿದಡೈದನೆಯ ಪಾತಕನೆಂದುದು ಗುರು ವಚನಾ॥ ವರ್ಮವರಿದು ಮತ್ತವದಿರ ಬೆರಸುವ ಕರ್ಮಿಗಳಿಗೆ ಇನ್ನಾವುದು ಗತಿಯು। ಜನ್ಮಜನ್ಮದಿ ಹುಳುವಿನ ಕೊಂಡವೆ ನರಕವೆ ಪ್ರಾಪ್ತಿಗಳು ॥೩॥

ಭವಿಸಂಗಡದಲಿ ಬಟ್ಟೆಯ ಬಾರನು ಭವಿನುಡಿಗಡಣವನೆಂತು ಕೇಳನು। ಭವಿಯಾಸನದಲಿ ಕುಳ್ಳಿರನಾತನ ಸಹ ಪಂಕ್ತಿಯಲುಣ್ಣನು॥ ಭವಿಶುಶ್ರೂಷೆಯನು ಭವಿಹೊಗಳತೆಯನು ಭವಿಶಯನಂಗಳ ಭವಿಸಾಕಂಗಳ। ಭವಿನೆರೆಮನೆಯೊಳಗಿರನಾ ಶರಣನು ಲಿಂಗದ ಶೃತಿಗೇಳಿ ॥೪॥

ಲಿಂಗವಿಲ್ಲದ ನಡೆ ಲಿಂಗವಿಲ್ಲದ ನುಡಿ ಲಿಂಗವಿಲ್ಲದ ಸಂಭಾಷಣೆಯ ಸುಖ। ಲಿಂಗಭಕ್ತನು ಮಾಡಲಾಗಿ ಮತ್ತಲ್ಲಿಯೆ ಬರುತಿಹನು॥ ಲಿಂಗಾರ್ಚನೆ ಲಿಂಗಾರ್ಪಣವಿಲ್ಲದೆ ಕೊಂಡಡೆಕಿಪ್ಪತ ನಾಯಕ ನರಕವು। ಲಿಂಗದ ಶೃತಿ ಇಂತೆಂದುದಾಗಿ ಇವ ಕೇಳದಿರಲು ಬಹು ಪಾಪಾತ್ಮನು ॥೫॥

ಹುತ್ತುದೊಳಯಿಕೆ ಸರ್ಪ ಹೊಗಲು ಮನೆಗಟ್ಟಿದೊರಲೆ ಬಿಟ್ಟೋಡುವ ತೆರದಿಂ। ಸತ್ಯರ ಸಾರಾಯರ ಅನುಭಾವದುಸದೇಶಂಬರಲು॥ ಸುತ್ತಿದ ಪ್ರಪಂಚು ಭವಕರ್ಮಂಗಳು ಬಿಟ್ಟೋಡುವ ಶರಣರಾಜ್ಞೆಗೆ। ಭಕ್ತಿಯ ಸಂಗ ವಿಷದ ಸಂಗವರಿದನು ಬಸವಣ್ಣಾ ॥೬॥

ಭಾಷೆಯ ಸತ್ಯರ ಅನುಭಾವಂಗಳ ನಿಂಬುಗೊಂಡ ಮಹಂತರ ಪಾದವ ನಂಬಿದ ತೆರನರಿಯದೆ ಉದ್ಧರಿಸುವ ಲಿಂಗವ ತೋರುವರು॥ ಇಂತೆಂದುದು ಕೂಡಲಚನ್ನಸಂಗನಲ್ಲಿ ತಂದೆ ಬಸವಣ್ಣ ತೋರಿದ ಪಥವಿದು ನಂಬಿದ ಭಕ್ತರಿಗಹುದಲ್ಲದೆ ಅಭ್ಯಾಸಿಗಳಿಗಳವಡದು ॥೭॥

ಮತ್ತೇಭಃ—ಅಮಲಜ್ಞಾನ ವಿಶಿಷ್ಟಲಿಂಗವದು ತಾನೇ ಸತ್ಕ್ರಿಯಾ ಮಾರ್ಗದೋಳ್। ಗಮನಂಗೊಂಡಿರೆ ಭಕ್ತಿಯಿಂ ಸಕಲ ಪೂಜಾದ್ರವ್ಯದಿಂದಾವಗಂ॥ ಪ್ರಮುದಂಬೆತ್ತತಿ ಶುದ್ಧನಾಗಿ ನಿಜದಿಂದಂ ಪೂಜಿಸ

ಲ್ಯಂತವಂ। ಕ್ರಮದಿಂ ವ್ಯತ್ಯಯವ ನಿಂತು ದಾಂಟುವನಲಾ ಶ್ರೀ ಸಿದ್ಧ ಲಿಂಗೇಶ್ವರಾ ।೫೪॥

**ಗದ್ಯ:**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಐವತ್ತು ನಾಲ್ಕನೆಯದಾದ ಕ್ರಿಯಾಗಮಸ್ಥಲದ ವಿಚಾರವು ಅನುಭವಿಸಿಂ ಮುಗಿಯ ಲಾಯಿತು.



## ೫೯. ಭಾವಾಗಮಸ್ಥಲ.

**ಸೂತ್ರ:**— ಇಂತು ಕ್ರಿಯಾಗಮ ಸ್ವರೂಪವನ್ನೈದಿದ ಲಿಂಗವು ವೀರ ಮಾಹೇಶ್ವರನ ಅಂಗದೊಳಗೆ ನಿಷ್ಠಾಸ್ವರೂಪವನ್ನೈದಿದ ಭೇದವೆಂತಿರ್ದು ದೆಂದಡೆ ಮುಂದೆ ಭಾವಾಗಮಸ್ಥಲವಾದುದು.

**ವಚನ:**— ಸುತ್ತಿ ಸುತ್ತಿ ಬಂದಡಿಲ್ಲ; ಲಕ್ಷಗಂಗೆಯ ಮಿಂದಡಿಲ್ಲ; ಮೇರುಗಿರಿಯ ಮೆಟ್ಟಿ ತುಟ್ಟತುದಿಯಲ್ಲಿ ನಿಂದು ಕೂಗಿದಡಿಲ್ಲವಯ್ಯಾ! ನಿಚ್ಚನೇಮದಿಂದ ತನುವ ಮುಟ್ಟಿಕೊಂಡಡಿಲ್ಲವಯ್ಯಾ. ನಿಚ್ಚನಿಚ್ಚ ನೆನೆವ ಮನವನರಿದಂಬಿಂಗೆ ಅತ್ತಿತ್ತ ಹರಿಯಗೊಡದೆ ಚಿತ್ತೈಕಾಗ್ರತೆಯಾಗಿ ನಿಲಿಸ ಬಲ್ಲಡೆ ಬಚ್ಚಬರಿಯ ಬೆಳಗು ಗುಹೇಶ್ವರಾ ನಿಮ್ಮ ಶರಣಾ ॥೨॥

ಪದ—ರಾಗ—ವರಾಳಿ.

ಲಿಂಗವನೋಡಿ ಶಿವಸುಖರತಿಯೊಳಗೋಲಾಡಿ ಯಾಡಿ। ವೈಮರಿ ವೃತ್ತ ಪೂಜೆಯ ಮಾಡುತಿರ್ಪೆನಯ್ಯಾ ॥ಪ॥

ಹೊರಗೆ ಮಾಡುತಿರ್ಪ ಸತ್ಕ್ರಿಯು ಮಂಗಳಮಯವಾಗಿ ಒಳಗೆ ಕಣ್ದೆರದು। ಪರಮಾನಂದ ರಸದೊಳಗೆ ಓಕುಳಿಯನಾಡುತಿರ್ಪೆನಯ್ಯ ॥೧॥

ಮನದ ನೆನಹು ಭಾವದೊಳಗೆ ಅನುಪಮವಾಗಿರಲಳವಟ್ಟ ಘನ ಸುಖ। ಕರತಳಾಮಳಕವಾಗಿ ನಿಮ್ಮೊಳಿರಡರಿಯದೆ ನೋಡತಿರ್ಪೆನಯ್ಯಾ॥೨॥

ನಿಮ್ಮನೋಟ ವೆನಗುಪಮಿಸಬಾರದ ಕೂಟ ನಿಮ್ಮ ನೋಟದ ತತಿ। ಯೊಳಗೆ ಅನೇನೆಂದರಿಯದೆ ನಿಜ ಸುಖಿಯಾಗಿರುತಿರ್ಪೆನಯ್ಯಾ॥೩॥

ರೋಮಾಂಚನ ಗುಡಿಗಟ್ಟಿಯಾಮಿಷ ವಿಷಯಂಗಳ ಮರದು ಕಾಮಿಸಿ। ಬಂದ ಪದಾರ್ಥವ ನಿಮ್ಮ ನಾಮಾಮೃತ ರಸದೊಳಗಿತರವ ನರಿಯೆನಯ್ಯ ||೪||

ಕಂಗಳ ನೋಟವೆ ಕರುವಾಗಿ ಮನದ। ಕೂಟವು ಜ್ಞಾನದಲ್ಲಿ ಹಿಂಗದೆ ನಿಮ್ಮ ಸಂಗ ಸಮ। ನಿಸಿ ಕೂಡಲ ಸಂಗಯ್ಯನ ಲಿಂಗಯ್ಯಾ ಎಂದು ಯೇನುಶಿರ್ಪೆನಯ್ಯಾ ||೫||

**ಮತ್ತೇಭಃ**—ಮುದದಿಂ ದಾವುದು ಭಾವಗೋಚರ ಮದೇ ತದ್ವಸ್ತು ತಾನಪ್ಪುದಂ। ತದರಿಂ ಸೂರ್ಯ ಶಶಿಪ್ರಭಾದಿಗಳನೆಲ್ಲಂ ಮೀರಿ ತಚ್ಚಿತ್ತಮಾ॥ ವಿದಿತಂ ಪಜ್ಜಳಿಪಾ ಮಹೇಶ್ವರನನಾವಂ ಭಾವಿಪಂ ಮತ್ತವಂ। ಪದೆದಾ ಶಂಕರನಪ್ಪ ನೆಂಬುದೆ ದಿಟಂ ಶ್ರೀ ಸಿದ್ಧಲಿಂಗೇಶ್ವರಾ ||೫೫||

**ಗದ್ಯಃ**—ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಐವತ್ತೈದನೆಯದಾದ ಭಾವಾಗಮಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೫೦. ಜ್ಞಾನಾಗಮ ಸ್ಥಲ.

**ಸೂತ್ರಃ**—ಇಂತು ನಿಷ್ಠೆ ನಿಬ್ಬೆರಗೆನಿಸಿದ ವೀರ ಮಾಹೇಶ್ವರನ ಭಾವ ಸದ್ಭಾವಸನ್ನಹಿತವಾದ ಲಿಂಗದ ಮಹಾಜ್ಞಾನ ಚಾರಿತ್ರವೆಂತಿರ್ದುದೆಂದಡೆ ಮುಂದೆ ಜ್ಞಾನಾಗಮ ಸ್ಥಲವಾದುದು.

**ವಚನಃ**—ಅರಿದೆನು, ಅರಿದೆನು, ಎಂದಡೆ ಅದೇಕೋ ಮುಂದಣ ಮರವೆ? ಅರಿದೆನೆಂಬದು ನಿನ್ನಲ್ಲೆ ಲೇಸಾಗಿ ಉಳ್ಳಡೆ, ನಿನ್ನರಿವೆಲ್ಲವ ಹರಿಹಂಚು ಮಾಡಿ ನೀನರಿ ಮರುಳೇ. ಸ್ವತಂತ್ರ ಘನದೊಳಗಿರ್ದು ನಿಜವನರಿಹೆನೆಂದಡೆ ಮೂರ್ತಿ ಕಿರಿದಲ್ಲ. ನಿಲ್ಲು. ಮಾಣು. ಗುಹೇಶ್ವನೆಂಬ ಲಿಂಗದ ಘನಗಟ್ಟಿಯನರಿವಡೆ ನಿನ್ನರಿವೆಲ್ಲ ಹರಿಹಂಚು ಮಾಡಿ ನೀನರಿ ಮರುಳೇ ||೧||

ಪದ—ರಾಗ—ಗೌಳ.

ಘನದ ಘನತೆ ಇನ್ನಾರಿಗೆ ವೇದ್ಯವಾಗದು। ಬ್ರಹ್ಮವ ಹೇಳುವಡೆ ನಿರ್ಮಾಲ್ಯವಾದುದು ||ಪ||

ಚತುರ್ಮುಖ ನಾಲ್ಕುವೇದ ಲಿಂಗ ತಮ್ಮ ತತ್ತ್ವಲಿಲ್ಲೆಂದರಿಯರು । ತಮ್ಮದೊಂದುದ್ರೇಕದಿಂದ ತಮ್ಮ ತಾವು ಲಯವಾದರೂ ॥೧॥

ಅರಿದೆನೆಂಬವನರಿವೆಯು ಹೊದ್ದನು ಕುರುಹಿನ ಸಂಸಾರಿಯಾಗಿ । ಪಂಚೇಂದ್ರಿಯಂಗಳ ಸಂಚುವನರಿಯದೆ ಕಾಲಕರ್ಮ ಲಯಕ್ಕಾದರೂ ॥೨॥

ಅಂಡಜ ಉದ್ಭಿಜ ತಾರಾಮಂಡಲದೊಳಗೊಂದು ನಾದವ ಕಂಡೆನು । ಅಖಂಡಿತ ನಿರ್ಣಯವನರಿಯದ ಮರುಳು ಮಾನವರೆತ್ತ ಬಲ್ಲರೂ ॥೩॥

ಉದಯಾಸ್ತ ಮಾನದ ನಡುವೆ ಒಂದು ತ್ರಿಜಗವೆಂಬ ಹುಳವು ಹುಟ್ಟಿತಲ್ಲ । ಅದಕಡಿದು ಸುಡುವದೊಂದು ಕಾರಣದ ಜಡಜೀವಿಗಳೆತ್ತ ಬಲ್ಲರು ॥೪॥

ಸರ್ವ ಜೀವದಯಾಪರನೊಬ್ಬ ಗಣೇಶ್ವರನು । ಸರ್ವಜನ ಪ್ರಳಯ ಕರ ನವನೊಬ್ಬನು । ಇವರಿಬ್ಬರ ತಪ್ಪಿಸಿ ಪೂಜಿಸಬಲ್ಲಡೆ ಪೂಜೆಯ ಕೈಕೊಂಬ ಗುಹೇಶ್ವರಾ ॥೫॥

**ಶಾರ್ದೂಲಃ**—ನಾನಾಶಾಸ್ತ್ರ ವಿಚಾರ ಮೊಯ್ದದ ವಿಕಲ್ಪಂ ಪೂರ್ವ ದಿರ್ದ್ದದ್ವಿತೀ । ಯಾನಂದಾತ್ಮಕ ಚಿತ್ಪ್ರಸನ್ನ ಶಿವನಂ ಚಿನ್ಮಾರ್ಗ ಗಮ್ಯ ರ್ವಿಬೋ ॥ ಧ್ಯಾನುಷ್ಠಾನವೆ ಕಾಣ್ಬರಂತವರ ವಿದ್ಯಾ ಪಾಶವಿಚ್ಛೇದ್ಯರ । ನ್ನ್ಯೂನರ್ಥನ್ಯರತೀವ ಮಾನ್ಯರೆ ಗಡಾ ಶ್ರೀ ಸಿದ್ಧಲಿಂಗೇಶ್ವರಾ ॥೫೬॥

**ಗದ್ಯಃ**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಐವತ್ತಾರನೆಯದಾದ ಜ್ಞಾನಾಗಮಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೫೧. ಸಕಾಯ ಸ್ಥಲ.

**ಸೂತ್ರ**— ಇಂತು ಕ್ರಿಯಾಗಮ ಭಾವಾಗಮ ಜ್ಞಾನಾಗಮ ವೆಂಬೀ ತ್ರಿವಿಧ ಸ್ಥಲನೇಕವಾದ ಲಿಂಗವು ವೀರ ಮಾಹೇಶ್ವರನ ಸರ್ವಾಂಗ ಮಥನದಿಂ ಲಿಂಗಕಾಯ ಸಂಬಂಧ ಸ್ವರೂಪವನೈದಿದ ಭೇದವೆಂತಿರ್ದುದೆಂದಡೆ ಮುಂದೆ ಸಕಾಯ ಸ್ಥಲವಾದುದು.

ವಚನಃ--- ಅಯ್ಯಾ, ಸಜ್ಜನ ಸದ್ಭಾವಿಗಳ ಸಂಗದಿಂದ ಮಹಾನುಭಾವಿಗಳ ಕಾಣಬಹುದು. ಅಯ್ಯಾ ಮಹಾನುಭಾವಿಗಳ ಸಂಗದಿಂದ ಗುರುನಾಥನ ಕಾಣಬಹುದು. ಅಯ್ಯಾ ಗುರುವಿನ ಸಂಗದಿಂದ ಲಿಂಗದೇವನ ಕಾಣಬಹುದು. ಅಯ್ಯಾ ಲಿಂಗಯ್ಯನ ಸಂಗದಿಂದ ಜಂಗಮಸ್ವಾಮಿಯು ಕಾಣಬಹುದು. ಅಯ್ಯಾ ಜಂಗಮಗಳ ಸಂಗದಿಂದ ಪ್ರಸಾದವ ಕಾಣಬಹುದು. ಇದು ಕಾರಣ ಕೂಡಲ ಚನ್ನಸಂಗಮದೇವಯ್ಯಾ, ನಿಮ್ಮ ಸಜ್ಜನ ಶುದ್ಧ ಶಿವಾಚಾರ ಮಹಾನುಭಾವಿಗಳ ಸಂಗವನೇ ಕರುಣಿಸಯ್ಯಾ ॥೪॥

ಪದ-ರಾಗ-ಭೈರವಿ.

ಅಂಗಸಂಗಿಯು ಸಂಬಂಧಿಯುಲ್ಲ । ಲಿಂಗವಲಾಪ್ಯಯುನವಾಗಿತರಸು । ಖಂಗಳಬಿಟ್ಟ ಕಳದು ಸುಮನ ಸಾರಾಯುನಾದ ಶರಣನೂ ॥ಪ॥

ಗುರು ಕರುಣ ಸಂಯೋಗದಿಂದ ಶಿಷ್ಯನಿಂತು ಕರದಲ್ಲಿ ಹುಟ್ಟಿದನು । ಕರುಣ ಸನ್ನಿಹಿತವಾ ಗ್ರಾಹಿಯಾಗಿ ಗಾಳಿಯು ಸುಳುಹಡಗಿದ ಶರಣನೂ ॥೧॥

ಆಶೆಯೆಂಬುದ ಸುಳುಹಾಗಿ ಹಿಡಿದ ಛಲವ ಬಿಡೆನೆಂದೆಂಬ ಬೇರೂರಿ । ಸಂಕಲ್ಪ ವಿಕಲ್ಪವೆಂಬೆರಡಿಲ್ಲದೆ ನಿಷ್ಕಳನಾಗಿಪ್ಪ ನಿಜ ಶರಣನೂ ॥೨॥

ಮಾಡುವರ ಕಂಡು ಮಾಡುವನಲ್ಲ ಮಾಡದವರ ಕಂಡು ಮಾಡದವನಲ್ಲ । ತಾ ಮಾಡುವ ಮಾಟಕ್ಕೆ ತವಕಿಗನಾಗಿ ಹಿಂದು ಮುಂದರಿಯದ ಶರಣನೂ ॥೩॥

ಎಲ್ಲವು ತಾನೆಂಬ ಕರುಣಾಕರನಲ್ಲ ನಿಷ್ಕರುಣಿಯಾಗಿ ಜಡದೇಹಿಯಲ್ಲ । ಭೋಗಿಪ ಭೋಗಂಗಳ ಯಾಶೆಯಾಮಿಷ ತಾಮಸ ವಿಷಯ ವಿರಹಿತ ಶರಣನೂ ॥೪॥

ಘನವನಿಂಬುಗೊಂಡು ಮನದ ಬೆಂಬಳಿವಿಡಿದುಳಿದಲ್ಲಿ ನಿಜವಾಗಿ ನಿಂದನು । ತಾನೆಂಬುದಿಲ್ಲ ನಿರಂತರ ಸುಖಿ ಗುರುಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣನು ॥೫॥

ಮತ್ತೇಭಃ--- ಸಕಲದ್ವಂದ್ವವಿಮುಕ್ತನುದ್ಧತ ಜಗತ್ಸಂತ್ಯಕ್ತ ಮಾಹೇಶನು । ತ್ಸಕ ಲಿಂಗಾತ್ಮಕ ಕಾಯುವಂತದು ಲಸನ್ನಿರ್ವಾಣ ಚಿಹ್ನಂ ಪವಿ ॥ ತ್ರಕವಾದೇಹದ ವರ್ತನಂ ಸಹಜವೆಂತತ್ಯಂತ ಸದ್ಭಕ್ತಿಪೂ । ರ್ವಕದಿಂದ ಚರ್ಿಸುಗುಂ ಸುಖೇಪ್ಸಿತಜನಂ ಶ್ರೀ ಸಿದ್ಧಲಿಂಗೇಶ್ವರಾ ॥೫೭॥

ಗದ್ಯ:—ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಐವತ್ತೇಳನೆಯದಾದ ಸಕಾಯ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೫೨. ಅಕಾಯ ಸ್ಥಲ.

ಸೂತ್ರ:—ಇಂತು ಲಿಂಗಕಾಯ ಮಥನದಿಂ ವೀರ ಮಾಹೇಶ್ವರನ ದೇಹ ನಿರ್ದೇಹವಾದ ಭೇದವೆಂತಿರ್ದುದೆಂದಡೆ ಮುಂದೆ ಅಕಾಯ ಸ್ಥಲವಾದುದು.

ವಚನ:—ಕುಲಮದವೆಂಬುದಿಲ್ಲ ಅಯೋನಿ ಸಂಭವನಾಗಿ. ಛಲಮದವೆಂಬುದಿಲ್ಲ ಪ್ರತಿದೋರದಾಗಿ. ಬಲಮದವೆಂಬುದಿಲ್ಲ ಅಸಾಧ್ಯ ಸಾಧಿಸಿದನಾಗಿ. ಮತ್ತಾವ ಮದವಿಲ್ಲ ನೀನವಗ್ರಹಿಸಿದ ಕಾರಣ. ಚನ್ನ ಮಲ್ಲಿಕಾರ್ಜುನಯ್ಯಾ ನಿಮ್ಮ ಶರಣ ಅಕಾಯ ಚರಿತ್ರನಾಗಿ ॥೫॥

**ಪದ—ರಾಗ—ದೇಶಿ**

ಮಂಗಳ ಮಂಗಳ ಶ್ರೀ ಗುಹೇಶ್ವರನ ಶರಣ ಲಿಂಗೈಕ್ಯಂಗೆ ಮಂಗಳಾ ॥ಪ॥

ಜಗವನೆಲ್ಲನೂರ ಮಾಡಿ ಊರನೆಲ್ಲವ ಮನೆಯ ಮಾಡಿ ಹೊಗದೆಶಿಯಿಲ್ಲದ ಸುಳುಹು ನೋಡಾ । ಸುಳುಹಿನ ಭೇದವನರಿಯದ ಕಾರಣ ದೇವಲೋಕ ಮರ್ತ್ಯ ಲೋಕವೆಲ್ಲ ಭ್ರಮೆಗೊಂಡಿತ್ತಲ್ಲ ॥೧॥

ಎಂಭತ್ತು ನಾಲ್ಕುಲಕ್ಷ ಯೋನಿಮುಖ ಜೀವಿಗಳಿಗೆ ಎಂಭತ್ತು ನಾಲ್ಕು ಲಕ್ಷಾರಾಧನೆಯ । ನೊಂದೊಂದರಿಯದೆ ಗೊಂದಣಗೊಂಡು ನಿಂದಲ್ಲಿ ನಿಲಲೀಯದೆ ಬರಿದೆ ಲಯವಾದುದೆಲ್ಲ ॥೨॥

ಭಕುತಿ ಯುಕುತಿಯನರಿಯ ಷೋಡಶೋಪಚಾರವನರಿಯ ಭಾವ ಸಂಕಲ್ಪ ವಿಕಲ್ಪವ । ನರಿಯ ನಾವು ಸೀವೆುಗಳೆಲ್ಲವ ನೇಮಿಸಿ ಕಳದಂಗೆ ಆವಲೋಕ ಕಂಪಿತವಾದುದಾತಂಗೆ ॥೩॥

ಕುಲವಳಿದು ಛಲವಳಿದು ಬಲುಹಳಿದು ನಿಲಲು ಸೂತ್ರದ ಜಂತ್ರದ ವಳಿಯೊಲು ಫಲಸಿದ್ಧಿ । ಎನಿಸಿ ನಿಷ್ಫಲಸಿದ್ಧಿಯನೆ ಬಿಟ್ಟು ಭಕ್ತ್ಯಾಂಗನೆಯ ಮರ್ತ್ಯಕ್ಕೆ ತಂದಿತ್ತವಂಗೆ ॥೪॥

ಮಧ್ಯಸ್ಥಾನದ ಲೋಕಕೆ ಹೋಗಿ ಮರುವಾಳವನರಿಯದ ಪರಿಯಂ ನೋಡಿರೇ । ತನುರುಚಿಯನೆ ಮರೆದು ಘನರುಚಿಯ ನರಿದೆನ್ನ ತನ್ನಂತೆ ಮಾಡಿದ ಗುಹೇಶ್ವರ ಲಿಂಗಾ ॥೫॥

**ಮತ್ತೇಭಃ**—ಘನವಿದ್ಯುತ್ಪವನಾದಿಗಳ್ಸಲೆ ಶರೀರಾಯುಕ್ತಮಾಗಿ ರ್ಪವೋ । ಲನಿಶಂ ವ್ಯೋಮದಿ ನಿಂತು ದಾಂಟ ವಿಲಸಜ್ಜ್ಯೋತಿಸ್ವರೂಪಾ ದನಿ ॥ ತ್ಯನ ಮೂರ್ತಿತ್ವವದಿಷ್ಟಲಿಂಗವದರೊಳ್ಲಿಂಗಾಂಗ ಮುಳ್ಳಾತನೇ । ತನು ಸಂಸಕ್ತಿಯದಿಲ್ಲ ದಕ್ಷಯನಲಾ ಶ್ರೀ ಸಿದ್ಧಲಿಂಗೇಶ್ವರಾ ॥೪॥

**ಗದ್ಯಃ**—ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಐವತ್ತೆಂಟ ನೆಯದಾದ ಅಕಾಯಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೫೯. ಪರಕಾಯ ಸ್ಥಲ.

**ಸೂತ್ರಃ**—ಇಂತು ಅಕಾಯ ಸ್ವರೂಪವನ್ನೈದಿದ ಲಿಂಗವು ವೀರ ಮಾಹೇಶ್ವರನಲ್ಲಿ ಸಕಳ ನಿಷ್ಕಳಾತೀತ ಕಾಯವೆಂತಿರ್ದುದೆಂದಡೆ ಮುಂದೆ ಪರಕಾಯ ಸ್ಥಲವಾದುದು.

**ವಚನಃ**—ಪ್ರಾಣ ಪ್ರಾರಂಭ ಪ್ರಾರಬ್ಧವಿಲ್ಲವಾಗಿ ಪರಚಿಂತೆ ಪರ ಬೋಧೆ ಪರಿಚಿತನಲ್ಲ. ಉಸುರ ಬೀಜದ ಹಸಿಯಬಣ್ಣದ ದಶವಿಧವಾಗಿ ವಶಗತನಲ್ಲ. ನಿರಂತರ ಸ್ವತಂತ್ರ ಶರಣ. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಶಬ್ದ ಮುಗ್ಧವಾಗಿ. ॥೬॥

ಪದ—ರಾಗ—ವರಾಳಿ.

ಮುನ್ನವೇ ಕೀರ್ತಿ ಪಡೆದರು ಪ್ರಮಥರು ಅನುಸರಣೆಯನಿನಿ ತಂ ನೋಡದೆ ಮನ ಶಿವಲಿಂಗದಲ್ಲಿ ॥ಪ॥

ತೊಟ್ಟ ಸರಳಿನಂತೆ ನಿಷ್ಠೆನಿರ್ವಾಣದ ದೃಷ್ಟಿಮುಟ್ಟಿ ಶರಸಂಧಾನದ ಕಿಟ್ಟವಿಟ್ಟಂತೆ । ಶಿವನ ನಂಬುಗೆಯಲ್ಲಿ ತೆರಹು ಗೊಡದೆ ಒಟ್ಟೈಸಿದರು ತನುಮನಧನವ ಹಿಂದಿಕ್ಕಿ ॥೧॥

ಊರಿತೋಯದಲ್ಲಿ ಹುಟ್ಟಿ ಶರಿರಶೈತ್ಯವ ಸೋಂಕಿ ಅರಿಷಡ್ವರ್ಗವಲ್ಲ ವಿದು ನಿಜಪದ ಹಿರಿ । ಯರು ಸಮಧಾತು ಭಕ್ತಿಯನೆರೆವರು ಬರವಸಕ್ಕೆ ಬಂದಭರಿತ ಘಟಸ್ಥಕವಧರಿಸದಂತೆ ॥೨॥

ಆದಿಯಾಧಾರದಲ್ಲಿ ಪಿಂಡವಾದ ಪರಿಯು ಮರಳಿ ಹೋದ ಪರಿಯು ಮರಳಿ ವಿಚಾರದಿಂದ । ಸ್ವಾಧಿಷ್ಠಾನ ಮಣಿಪೂರಕದಿಂದ ಪರಮಗುಣ ಪ್ರಾಜ್ಞರಾಗಿ ಪ್ರಥಮ ಲಿಂಗಾಶ್ರಮ ಘನವೇದ್ಯರು. ॥೩॥

ನುಡಿದಂತೆ ನಡೆಯ ಪೂರವಿಸಲು ನಡೆದಂತೆ ನುಡಿಯ ಪೂರವಿಸಲು ಮೊದಲಾದಿ ವಿಡಿದುಗಡಣ । ದಲ್ಲಿ ಬಳಸಿ ಬ್ರಹ್ಮಚಾರಿಗಳು ಉಂಡು ಉಪ ವಾಸಿಗಳು ಎಡೆಕಟ್ಟಿ ಕಡೆಕಂಟಣಿಸದ ಸಾಧ್ಯರು ॥೪॥

ಭೃಂಗ ಸಂಪಗೆಯಲ್ಲಿ ಸಂಗಕ್ಕೆ ಬಂದು ಸಂಗವನೊಲ್ಲದೆ ಮರಳಿ ಘನರೂಪವೆಂದು ಅಂಗದ । ಶಂಕೆಯೆಂಬ ಭಂಗದೋರದೆ ಮಚ್ಚಿನಚ್ಚಿ ಲಿಂಗದಲ್ಲಿ ನಿರುತ ಭರಿತರಾದರೂ ॥೫॥

ಪಥಲಿಂಗಾಧೀನದಿಂದ ಮಥಲಿಂಗ ವಶನಾಗಿ ಆಯತ ಲಿಂಗಾಧೀನ ದಿಂದ ಬೆಸನೆನುತ । ಕಥೆಕಾರಣ ರಹಿತಹಂಕಾರ ಗುಣವಳಿದು ನಿರಾ ಭಾರಿಗಳಾಗಿ ಕಲ್ಪಿತ ಸೇರದ ಸುಸಂವೇದ್ಯರು. ॥೬॥

ಸಕಲಗುಣ ನಿಳಯಾನಂದದ ಸುಖಚರಿತ್ರ ವೆಡೆಗೊಂಡು ಮಾಣಿಕ. ಸ್ವಯಂಜ್ಯೋತಿ ತಾನುತಾನಾಗಿ । ಅಕಳಂಕ ಕೂಡಲಚನ್ನ ಸಂಗಯ್ಯನಲ್ಲಿ ಮಹಾನುಭಾವರೇಕಮುಖ ಸಜ್ಜನರನಂತ ಶಿಲೆಯ ಮಂಗಳಾರತಿ ಯನೂ ॥೭॥

**ಮತ್ತೇಭಃ—** ಪಿರಿದುಂ ಸಂಸ್ಕೃತಿ ಬೀಜದಂಕುರದ ದೇಹಂ ನಾಡೆ ಚಿಸ್ವನ್ನಿಯುಂ । ನಿರುತಂ ದಹ್ಯಮುದಾಗಿಯಾಶಿವನ ತತ್ಸೃಷ್ಟ್ಯಾದಿ ಕೃತ್ಯ ಕ್ಕೆ ಸಾ ॥ ದರದಿಂದಾಲಯ ಮಾಗದಿಂತು ನಿಜ ಚಿಲ್ಲಿಂಗಕ್ಕೆ ಯಾವಾ ಸಮಾ । ಗಿರಲಾಕಾಯವನುಳ್ಳವಂ ಪರಶಿವಂ ಶ್ರೀ ಸಿದ್ಧಲಿಂಗೇಶ್ವರಾ॥೫೯॥

**ಗದ್ಯಃ—** ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಐವ ತ್ತೊಂಭತ್ತನೆಯದಾದ ಪರಕಾಯ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

## ೪೪ ಧರ್ಮಾಚಾರ ಸ್ಥಲ.

**ಸೂತ್ರ**:— ಇಂತು ಸಕಾಯ ಅಕಾಯ ಪರಕಾಯ್ಯವೆಂಬ ತ್ರಿವಿಧ ಸ್ಥಲಂಗಳೇಕವಾದ ಲಿಂಗವು ವೀರಮಾಹೇಶ್ವರನ ಸದ್ಧರ್ಮಾಚರಿತ್ರ ನಿಮಿತ್ಯ ವೇಕವಾದಭೇದ ವೆಂತಿರ್ದುದೆಂದಡೆ ಮುಂದೆ ಧರ್ಮಾಚಾರ ಸ್ಥಲವಾದುದು.

ವಚನ:— ಭಕ್ತ ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯವಾಗಿರಬೇಕು. ಭೂತಹಿತವಹ ವಚನವ ನುಡಿಯ ಬೇಕು. ಲಿಂಗ ಜಂಗಮದಲ್ಲಿ ಕುಂದು ನಿಂದೆಗಳಿಲ್ಲದಿರಬೇಕು. ಸಕಲ ಪ್ರಾಣಿಗಳ ತನ್ನಂತೆ ಭಾವಿಸಬೇಕು. ತನು ಮನ ಧನವ ಗುರುಲಿಂಗ ಜಂಗಮಕ್ಕೆ ಸಮರ್ಪಿಸಬೇಕು. ಅಪಾತ್ರ ದಾನವಂ ಗೈಯ್ಯದಿರಬೇಕು. ಸಕಲ ಇಂದ್ರಿಯಂಗಳು ತನ್ನ ವಶಗತವಾಗಿರಬೇಕು. ಇದೇ ಮೊದ ಲಲ್ಲಿ ದೇಹಶೌಚ ನೋಡಾ! ಲಿಂಗವ ಪೂಜಿಸಿಪ್ರಸಾದವ ಪಡೆವಡೆ ಎನ ಗಿದೇ ಸಾಧಕವು ನೋಡಾ ಕೂಡಲ ಸಂಗಮದೇವಾ ॥ ೭ ॥

ಪದ—ರಾಗ—ಮಾಳವಗೌಳ.

ಸತ್ಯ ಸದಾಚಾರದಲ್ಲಿ ನಡೆವುದು ಮಿಥ್ಯ ವಂಚನೆಯನರಿಯದೆ।
ಚಿತ್ತದಲ್ಲಿ ನಿರ್ಮಲನಾಗಿರ್ಪಡೆ ಮುಕ್ತಿ ಬೇರುಂಟೆ ಹೇಳಾ ॥ ಪಲ್ಲವ ॥

ಸರ್ವ ಜೀವಂಗಳ ಹಿಂಸೆಯ ಮಾಡ್ಬದು ಓರ್ವರನು ಕೆಡೆ ನುಡಿ ಯದೆ ವ್ಯರ್ಥ। ಸಂಸಾರದ ನಿತ್ಯವನರಿದು ತತ್ವ ವಿವೇಕದಿ ನಡೆವುದು ನೋಡಾ ॥ ೧ ॥

ಅನ್ಯರ ಕೆಡೆ ನುಡಿಯದೆ ತನ್ನ ತಾ ನಿರ್ಬಂಧಿಸದೆ ತನು ಮನ ಧನ ದಲ್ಲಿ। ಕಪಟ ಕುತಂತ್ರ ಕುಹಕಂಗಳಿಲ್ಲದಿರ ಬಲ್ಲಾತನೆ ಹಿರಿಯನು ॥ ೨ ॥

ನಿಂದಿಸಬೇಡ ಸ್ತುತಿಸಬೇಡ ಬಂಧಿಸಬೇಡ ಮನದಲ್ಲಿ। ಒಂದಲ್ಲ ದೆರಡರಿಯದಿರ್ದಡೆ ಮುಂದಣ ಮುಕ್ತಿ ತನ್ನಲಿ ॥ ೩ ॥

ಸಮತೆ ಶಾಂತಿ ಸದುಗುಣಿಯಾಗಿ ಕ್ರಮವರಿದು ತನಗೆ ತಾನಕ್ಕೆ। ಮನ ಮೆಚ್ಚಿ ನಡೆದರೆ ಶಿವನು ತನ್ನಲ್ಲಿಯೆ ನೆಲಿಸಿರ್ಪನು ॥ ೪ ॥

ತಾನಾರಿಗು ಮುನಿಯದೆ ತನ್ನ ನೊಬ್ಬರು ನಿಂದಿಸಿದರೆನ್ನದೆ। ಸಮಾ ಧಾನಿಯಾಗಿರ್ಪ ಶರಣನ ವೀರಸೊಡ್ಡಳನಗಲದಿರ್ಪನು ॥ ೫ ॥

**ಶಾರ್ದೂಲ:**—ಧರ್ಮಂ ಭಾವಿಸಲಿಂತು ಸರ್ವ ಜಗದಾಧಾರಂ ಸದಾ ಲೋಕದೊಳ್। ಧರ್ಮಂ ಗೈಯ್ಸವನಂ ಪ್ರಜಾಪ್ರಕರವೇಗಂಬಂದು ಪೊರ್ದಿಕ್ಕುಮಾ॥ ಧರ್ಮಂ ಪಾವನೆಯ್ದಿ ಸಂಹರಿಪುದೆಂದಾ ಧರ್ಮ ಸನ್ಮಾರ್ಗಮುಂ। ಧರ್ಮಿಷ್ಠರ್ಮಿಗೆ ಪೇರ್ಮೆಯಿಂ ನಡೆಯುರ್ ಶ್ರೀ ಸಿದ್ಧ ಲಿಂಗೇಶ್ವರಾ ॥೬೦॥

**ಗದ್ಯ:**—ಇಂತೀಪ್ರಕಾರದಿಂ ನೂರೊಂದುಸ್ಥಲದೊಳಗೆ ಅರವತ್ತನೆಯದಾದ ಧರ್ಮಾಚಾರಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೪೫ ಭಾವಾಚಾರಸ್ಥಲ.

**ಸೂತ್ರ:**—ಇಂತು ಧರ್ಮಾಚಾರಸ್ವರೂಪವನೈದಿದ ಲಿಂಗವು ವೀರ ಮಾಹೇಶ್ವರನ ಮನಸ್ಥಲದಲ್ಲೆಡೆಗೊಂಡ ಸದ್ಭಾವ ಚರಿತ್ರ ವೆಂತಿರ್ದುದೆಂದಡೆ ಮುಂದೆ ಭಾವಾಚಾರಸ್ಥಲವಾದುದು.

**ವಚನ:**—ರೂಪವನೆ ಕೂಡರು ನಿರೂಪವನೆಕೂಡರು। ತನುವನೆಕಂಡರು ಅನುವಕಾಣರು. ಆಚಾರವನೆಕಂಡರು ವಿಚಾರವ ಕಾಣರು. ಗುಹೇಶ್ವರಾ ನಿಮ್ಮ ಕುರುಹನೆ ಕಂಡರು ಕೂಡಲರಿಯದೆ ಕೆಟ್ಟರು. ॥೮॥

ಪದ—ರಾಗ—ದೇಶಿ

ಭಾವಿಸಿ ನಡೆದಿಹೆನೆಂದಡೆ ತಾನಾಭಾವದೊಳಗೆ ತನ್ನೊಳು ಸದ್। ಭಾವವು ಭಾವಭೇದವಿಲ್ಲದಿಪ್ಪ ಶರಣನ ಸತುಪಥವನೇನೆಂಬೆನೂ ॥ಪ॥
ಮೂರುಗ ಕ್ರೀಗಳೊಳಗೆ ನಿಷ್ಪತಿಯಾಗಿ ದೇವಕ್ರೀ ವಿಡಿದ ಕಾರಣ ಭಿನ್ನಭಾವವಳಿದು। ಶಿವಾಚಾರವೇ ಜೀವವಾಗಿ ಲಿಂಗದೊಳು ಬೆರಸಬಲ್ಲಡಾತಯೋಗಿ।೧॥

ತದುಗತವಾಗಿ ನಿರಂತರ ನಿಜಲಿಂಗದಿ ಪರಮಾನಂದವನೈದಿ ಸದಮಲ। ನಿರುಪಾಧಿಕನಾಗಿಪ್ಪ ಚರಿತದಾಚಾರವನೇನೆಂಬೆನು ॥೨॥

ಧ್ಯಾನವೆ ನಿಶ್ಚಲವಾಗಿಪ್ಪ ಶರಣನ ಕಾಮಿತ ಭಾವಿತ ಕ್ರೀಗಳು ತಾ ಮುನ್ನವೆ ಲಿಂಗದೊಳವಿರಳವಾಗಿ ಸೀಮೆಯ ನೀಕರಿಸಿರ್ಪನು ॥೩॥

ಪ್ರಾಣನ ಹಸ್ತದೊಳಗೆ ಅಂಗಲಿಂಗಭಾವ ಹಸ್ತದೊಳಗಣಪ್ರಾಣ। ಪ್ರಾಣಭಾವವೆನ್ನದಿರ್ಪ ಶರಣನಾಚಾರ ವಿಚಾರವನೇನೆಂಬೆನು ॥೪॥

ಒಡಲಳಿದು ಒಡಲುವಿಡಿದ ಕ್ರೀಗಳ ಗಡಣವಡಗಿ ನಿರ್ದೇಹದೊಳೆಂಬ ಭಾವ। ವೆಡೆಗೊಂಡ ನಿಷ್ಠೆಯಾಚರಣೆಯು ಕೂಡಲ ಚನ್ನಸಂಗನೊಳು ಸತ್ಪಥವು ॥೫॥

**ಮತ್ತೇಭ:**—ಅನುವಿಂ ಭೂಮಿಯೊಳಂಬು ಬೀಳ್ವನಿತುಕಾಲಂ ಮೇಣ್ಣಳಿಕ್ಕಂತೆಗೋ। ಸ್ತನದಿಂ ಕ್ಷೀರದಧಾರೆಯುಂ ಕರೆವನಿತ್ತುಂ ಪೊಳ್ತು ಮೇಣ್ಮತ್ತೆಕಂ॥ ಣ್ಣಿನಿತುಂನೋಡೆ ಪಳಂಚುತಿರ್ಪನಿತು ಕಾಲಂ ಅಂಗಮುಂ ಭಾವಿಪಾ। ತನೆ ಜನ್ಮಂಗಳ ನಿಂತು ದಾಂಟುವನಲಾ ಶ್ರೀ ಸಿದ್ಧಲಿಂಗೇಶ್ವರಾ ॥೬೧॥

**ಗದ್ಯ:**—ಇಂತೀಪ್ರಕಾರದಿಂ ನೂರೊಂದುಸ್ಥಲದೊಳಗೆ ಅರವತ್ತೊಂದನೆಯದಾದ ಭಾವಾಚಾರಸ್ಥಲದ ವಿಚಾರವು ಅನುವಿನಿಂ ಮುಗಿಯಿತು.

---

## ೬೭. ಜ್ಞಾನಾಚಾರಸ್ಥಲ.

**ಸೂತ್ರ:**—ಇಂತು ಮನೋಮಧ್ಯದಲ್ಲಿ ಸದ್ಭಾವ ಚರಿತ್ರ ಸಂಬಂಧವಾದ ಲಿಂಗವು ವೀರಮಾಹೇಶ್ವರನ ಮಹಾಜ್ಞಾನಾಚರಣೆಯ ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಜ್ಞಾನಾಚಾರಸ್ಥಲವಾದುದು.

**ವಚನ:**—ಉರವಣಿಸುವ ಮನ ಮುಟ್ಟುವನ್ನಕ್ಕ ಕಾಡುವದು. ಘನಾಘನದಲ್ಲಿ ಮನನಂಬುವನ್ನಕ್ಕ ಕಾಡುವದು. ಶ್ರೀಮನ್ ಮಹಾಂತ ಗುಹೇಶ್ವರನೆಂಬ ಶಬ್ದವುಳ್ಳನ್ನಕ್ಕ ಕಾಡುವದು ॥೯॥

ಪದ—ರಾಗ—ಅರಬಿ

ಮೊದಲುಗೂಡದಹರದು ಎನಗಾದುದಯ್ಯ ಮೊದಲುಗಡದಹರದು॥ಪ॥

ಬೆವಹಾರವ ಮುಂದು ಗೊಂಡಿರ್ದೆನಯ್ಯಾ ಬೆವಹಾರದ ಪರಿಯು ನಾನರಿಯೆನಯ್ಯಾ ॥೧॥

ಆತ್ಮಜ್ಞಾತವ್ಯನಚ ಪುನರೇವ ಕಥನಚ ಪುನರಥ ಅತ ಎಂದುದಾಗಿ ||೨||

ಜ್ಞಾನಾಗ್ನಿ ಸರ್ವಕರ್ಮಾಣಿ ಭಸ್ಮಸಾತ್ಕುರತೆ ಎಂದುದಾಗಿ ॥೩॥
ಭವಗೇಡಿ ಲಿಂಗೈಕ್ಯ ರೊಡನಾಡಿ ಅವರ ಪರಿಎನ್ನ ಹತ್ತಿತಲ್ಲಯ್ಯ ॥೪॥
ಕೂಡಲ ಚನ್ನಸಂಗಯ್ಯನೆಂದರಿದು ಮರುಳ ಮಾಡಿದ ಬಳಿಕಂತರ ನೇನೆಂಬೆ ॥೫॥

**ಶಾರ್ದೂಲ:**— ಜ್ಞಾನಾತೀತಮೆನಿಪ್ಪ ಕೇವಲ ವಿಶುದ್ಧಾಕಾರಮಾಗಿರ್ಪನಿ। ತ್ಯಾನಂದಾತ್ಮಕ ತತ್ವಮಂ ಪರಮಶುದ್ಧ ಜ್ಞಾನದಿಂ ಭಾವಿಪರ್ ॥ ನ್ಯೂನಾಧಿಕ್ಯತೆಯೆಂಬುದಿಲ್ಲದೆ ಬಹಿರ್ವ್ಯಾಪಾರದಿಂ ನಾಡೆಸ। ನ್ಮಾನಂಬೆತ್ತುರೆ ವರ್ತಿಪರ್ ಭುವನದೊಳ್ ಶ್ರೀ ಸಿದ್ಧಲಿಂಗೇಶ್ವರಾ ॥೬೨॥

**ಗದ್ಯ:**— ಇಂತೀಪ್ರಕಾರದಿಂ ನೂರೊಂದುಸ್ಥಲದೊಳಗೆ ಅರವತ್ತೆರಡನೆಯದಾದ ಜ್ಞಾನಾಚಾರಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

ಇಂತೆಂಬಲ್ಲಿಗೆ ಏಕೋತ್ತರ ಶತಸ್ಥಲಂಗಳಲ್ಲಿ ದೀಕ್ಷಾಗುರುವಾದಿಯಾಗಿ ಪರಜಂಗಮಾಂತ್ಯವಾದ ಒಂಬತ್ತುಸ್ಥಲಂಗಳು ಆಚಾರಲಿಂಗಸ್ಥಲಕ್ಕೆ ಸಲ್ಲಲು ಕ್ರಿಯಾಗಮಸ್ಥಲವಾದಿಯಾಗಿ ಜ್ಞಾನಾಚಾರ ಸ್ಥಲಾಂತ್ಯವಾದ ಒಂಬತ್ತುಸ್ಥಲಂಗಳಿಂ ಗುರುಲಿಂಗಸ್ಥಲ ವೆರಡನೆಯಸ್ಥಲವೆಂದು ಮುಗಿದುದು.

---

## ೬೩. ಕಾಯಾನುಗ್ರಹಸ್ಥಲ.

**ಸೂತ್ರ:**— ಇಂತು ನವಸ್ಥಲಂಗಳೇ ತ್ರಿವಿಧ ತ್ರಿವಿಧಂಗಳಾಗೇಕಮಾದ ಗುರುಲಿಂಗವು ಅವಿರಳ ಲಿಂಗಸಂಗ ಸುಖಿಯಾದ ಪ್ರಸಾದಿಯ ಶಿವಲಿಂಗವೇ ಕಾಯದಲ್ಲಿ ಅನುಗ್ರಾಹಕವಾದ ಭೇದ ವೆಂತಿರ್ದುದೆಂದಡೆ ಮುಂದೆ ಕಾಯಾನುಗ್ರಹಸ್ಥಲವಾದುದು.

**ವಚನ:**— ಎತ್ತಣ ಮಾಮರವು, ಎತ್ತಣ ಕೋಗಿಲೆಯು, ಎತ್ತಣಿಂದೆತ್ತ ಸಂಬಂಧವಯ್ಯಾ! ಬೆಟ್ಟದ ಮೇಲಣ ನೆಲ್ಲಿಯಕಾಯಿಯು ಸಾಗರದೊಳಗಣ ಲವಣವು ಎತ್ತಣಿಂದೆತ್ತ ಸಂಬಂಧವಯ್ಯಾ. ಗುಹೇಶ್ವರಾ, ಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯಾ ॥೧॥

ಪದ—ರಾಗ—ಭೂಪಾಳಿ

ಗುರು ಸಂದರ್ಶನ ಅಂಗವ ಸೋಂಕೆ ಎರಡರಿಯೆನು ಅಂಗಸಂಖೆಯನೂ ॥ಪ॥

ಕಾಯವಳಿದು ಭಕ್ತಿಕಾಯವಾಗೆ ಆ ಕಾಯವನಾಲಿಂಗವ ಗ್ರಹಿಸಿ ಕಾಯವೆನ್ನದೆಂಬ ಭಾವವನರಿಯದೆ ಮಾಯವಳಿದು ನಿಶ್ಚಿಂತನಾದನಯ್ಯಾ ॥೧॥

ತನುವೆಂಬ ಶಿಷ್ಯನ ಶಿವಲಿಂಗವೆಂದೆಂಬ ಘನಮಹಾ ಗುರುಕರುಣಹಸ್ತದಮನ ಮನಬೆರಸಿ ಚಿತ್ತದ ಮಸ್ತಕ ಮುಟ್ಟೆ ಉರಿತೃಣ ಉಂಡಂತಾದುದು ॥೨॥

ಅಂಗದೊಳಗೆ ಲಿಂಗಾಂಗ ವಿವೇಕ ಸುಸಂಗ ಸಮನಿಸಲು ಸರ್ವಾಂಗಲಿಂಗದೊಳಗೆ ಪೆರತರಿಯದೆ ಉಭಯದ ಸಂಗವೆಂಬ ನಾಮ ಹಿಂಗಿದುದು ॥೩॥

ಪರತತ್ವವೆಡೆಗೊಳಲಂಗವೆಂಬ ಮಿಥ್ಯಹರಿಯಲು ನಿಮಿಷಕ್ಕೆ ಮುಗಿಲೋಡಿನಂತೆ ಗುರುಮೂರ್ತಿ ನೆಲೆಗೊಂಡಿಪ್ಪುದರಿಂದ ಶರಿರವ ನಾನು ಪಮಿಸಲಮ್ಮೆ ॥೪॥

ಉರಿಕರ್ಪುರವ ಸೋಂಕಿದಡಾ ಕರ್ಪುರವೆಂತುರಿಯಾಗಿರ್ಪುದುಐಸರಿ ಕೂಡಲ ಚನ್ನಸಂಗನ ಸೋಂಕಿನ ಸುಖವನಾನೇಂಬೆನು ॥೫॥

**ಮತ್ತೇಭಃ**—ತವೆಚೌಲಾದಿ ಸಮಸ್ತ ಸಂಸ್ಕೃತಿಯನಾವಿಪ್ರಂಬಳಿಕ್ಕಂ ದ್ವಿಜ । ತ್ವವನೆಂತೆಯ್ದುವನಂತೆ ಪೋಲ್ವ ಸುಜ್ಞಾನೋಪದೇಶಂ ದಲಂ ॥ ಗವನಾತರ್ರಿಸಲಾ ಮಹಾಪುರುಷನಂಗಂ ಲಿಂಗದೇಹಂ ಬಳಿ । ಕ್ಕಾತನೇಹೃದ್ಯತಮಂ ತಪೋವಿರಹಿತಂ ಶ್ರೀ ಸಿದ್ಧಲಿಂಗೇಶ್ವರಾ॥೬೩॥

**ಗದ್ಯಃ**—ಇಂತೀಪ್ರಕಾರದಿಂ ನೂರೊಂದುಸ್ಥಲದೊಳಗೆ ಅರವತ್ತು ಮೂರನೆಯದಾದ ಕಾಯಾನುಗ್ರಹಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.



## ೪೮. ಇಂದ್ರಿಯಾನುಗ್ರಹಸ್ಥಲ.

**ಸೂತ್ರ**:—ಇಂತು ಕಾಯದಲ್ಲಿ ಸಂಬಂಧವಾಗಿ ಅನುಗ್ರಹ ಸ್ವರೂಪವನ್ನೈದಿದ ಲಿಂಗವು ಪ್ರಸಾದಿಯ ಸರ್ವೇಂದ್ರಿಯ ಮುಖದಲ್ಲಿ ಸಂಗವಾದ ಭೇದವೆಂತಿರ್ದುದೆಂದಡೆ ಮುಂದೆ ಇಂದ್ರಿಯಾನುಗ್ರಹಸ್ಥಲವಾದುದು.

**ವಚನ**:—ಎನ್ನ ಪ್ರಾಣಮನ ಬುದ್ಧಿಚಿತ್ತಂಗಳು ನಿಮ್ಮ ತೊತ್ತಿರುಗಳು ಸತ್ವರಜತಮಂಗಳು ನಿಮ್ಮ ಭೃತ್ಯರುಗಳು ಅತಃಕರಣಂಗಳು ನಿಮ್ಮ ಮಂತ್ರಿಗಳು ಪಂಚೇಂದ್ರಿಯಂಗಳು ನಿಮ್ಮ ಪರಿಹಾರರು ಅರಿಷಡ್ವರ್ಗಂಗಳು ನಿಮ್ಮ ಲೆಂಕರು ಸಪ್ತಧಾತುಗಳು ನಿಮ್ಮ ಬಾಣಸಿಗರು ಅಷ್ಟಮದಂಗಳು ನಿಮ್ಮ ಕುಮಾರರು ನವದ್ವಾರಂಗಳು ನಿಮ್ಮ ಭಂಡಾರುಗಳು ದಶವಾಯುಗಳು ನಿಮ್ಮ ಸೀಗುರಿ ಚಾಮರಂಗಳು ಷೋಡಶ ಕಳೆಗಳು ನಿಮ್ಮ ರಾಣಿವಾಸ ಶಂಭುಸೋಮನಾಥಲಿಂಗ ನಿಮಗೆಎನ್ನಕಾಯಮುಂತಾಗಿಬಾಹತ್ತರನಿಯೋಗದ ಡಿಂಗರಿಗರು ॥೨॥

**ಪದ**

ಕಾಯದೊಳಗಣ ವಿಕಾರಂಗಳು ಮಾಯದ ಪ್ರಪಂಚನಳಿದು ।
ಸ್ವಾಯತಸಂಬಂಧ ಸರ್ವೇಂದ್ರಿಯದಲ್ಲಿ ಸನುಮತವಾಗಿರ್ದೆನಯ್ಯಾ ॥ಪ॥

ಪೃಥ್ವಿಎಂಬ ಭೂತದಂಗ ವಿಕಾರದ ಗತಿಯುಳಿದು ಭಿನ್ನಗಂಧದ ವಿಪರೀತ ಭಾವವಳಿದು । ನಾಸಿಕೇಂದ್ರಿಯ ವಶವಾಯಿತ್ತು ಲಿಂಗ ನಿಮ್ಮಲ್ಲಿ॥೧॥

ಅಪ್ಪುವೆಂಬ ಭೂತದಂಗ ವಿಕಾರದ ಹಂಗುಹರಿದು ಭಿನ್ನ ರುಚಿಗಳ ಪ್ರಕೃತಿಯುಡಗಿ । ಜಿಹ್ವೇಂದ್ರಿಯ ಲಿಂಗದ ವಶದೊಳು ತದುಗತವಾಯಿತ್ತು ॥೨॥

ಅಗ್ನಿಯೆಂಬ ಭೂತದಂಗ ವಿಕಾರದ ಪ್ರಭೆಯುಳಿದು ಭಿನ್ನರೂಪುಗಳ ವಿಕೃತಿಯುಡಗಿ । ನೇತ್ರೇಂದ್ರಿಯ ಲಿಂಗದೊಳವಿರಳವಾದುದು ॥೩॥

ವಾಯುವೆಂಬ ಭೂತದಂಗ ವಿಕಾರದ ಭಾವವಳಿದು ಭಿನ್ನ ಸೋಂಕಿನ ವಾಯುದ ಮಿಥ್ಯ ಹರಿದು । ಸ್ಪರ್ಶನೇಂದ್ರಿಯ ಲಿಂಗದೊಳವಿರಳವಾದುದು ॥೪॥

ಆಕಾಶವೆಂಬ ಭೂತದಂಗ ವಿಕಾರದ ಚಿಹ್ನವಳಿದು ಅನ್ಯಶಬ್ದದ ಸೂತಕವಡಗಿ । ಶ್ರೋತ್ರೇಂದ್ರಿಯವೇಕೀಕರಿಸಿ ಕೂಡಲಸಂಗಸಾಕಾರ ಸಂಬಂಧವು ॥೫॥

**ಮತ್ತೇಭ**—ಮನದಿಂ ಸಂಸ್ಕೃತಿಭಂಗಸಂಘದ ಹೃಷೀಕಾಂಬೋಧಿಯಂ ಮೀರಿದ। ಪ್ಪದ ಪ್ರೋಲ್ಲಾಸದ ಸೇತುವಂಸಿರಿಸಿ ಪೂರ್ಣಾನಂದ ಸಂಕೀರ್ಣದ ॥ ದ್ವಿದಿತಬ್ರಹ್ಮವೆನಿಪ್ಪ ನಾವೆಯಿನದಂ ಸರ್ವಾವಧಾನಂತೊಲಂ। ಗದೆಯುತ್ತೀರ್ಣವನೆಯ್ದುವಂ ಜಿತಭವಂ ಶ್ರೀ ಸಿದ್ಧಲಿಂಗೇಶ್ವರಾ ॥೬೪॥

**ಗದ್ಯ**—ಇಂತೀಪ್ರಕಾರದಿಂ ನೂರೊಂದುಸ್ಥಲದೊಳಗೆ ಅರವತ್ತು ನಾಲ್ಕನೆಯದಾದ ಇಂದ್ರಿಯಾನುಗ್ರಹ ಸ್ಥಲದವಿಚಾರವು ಅನುವಿನಿಂ ಮುಗಿಯಲಾಯಿತು.

---

## ೬೫. ಪ್ರಾಣಾನುಗ್ರಹಸ್ಥಲ

**ಸೂತ್ರ**— ಇಂತು ಸರ್ವೇಂದ್ರಿಯ ಮುಖದಲ್ಲಿ ಸಂಗವಾದಲಿಂಗವು ಪ್ರಸಾದಿಯ ಪ್ರಾಣಸ್ಥಲದಲ್ಲಿ ಸಂಗವಾದ ಭೇದವೆಂತಿರ್ದುದೆಂದಡೆ ಮುಂದೆ ಪ್ರಾಣಾನುಗ್ರಹಸ್ಥಲವಾದುದು.

**ವಚನ**—ಆಚಾರವನಾಚಾರವಾಯಿತ್ತು. ಸೀಮೆ ನಿಸ್ಸೀಮೆಯಾಯಿತ್ತು. ಪ್ರಾಣ ಸಂಚಲತಪ್ಪಿ ಲಿಂಗಸಂಚಲವಾಯಿತ್ತು. ಎಲ್ಲಿಶಬ್ದವು ಅಲ್ಲಿ ಲಿಂಗ ಸ್ವಾಯತವಾಯಿತ್ತು. ಎಲ್ಲಿಸುಗಂಧವು ಅಲ್ಲಿ ಲಿಂಗಸ್ವಾಯತವಾಯಿತ್ತು. ಕೂಡಲಸಂಗಮದೇವರ ಕರುಣದ ಕಡೆಗೋಡಿವರಿಯಿತ್ತಯ್ಯಾ ಎನ್ನ ಮೇಲೆ ॥೩॥

ಪದ—ರಾಗ—ದೇಶಾಕ್ಷಿ

ನಿಮ್ಮ ಕಾರುಣ್ಯವೆನ್ನಮನದೊಳಗೆ ಸಂಬಂಧಿಸಿ ಭಿನ್ನಭಾವ। ವರಿಯದೆ ನಿಮ್ಮೊಳಡಗಿದುದಾ ನೇನೆಂದರಿಯೆನಯ್ಯಾ ॥ಪ॥

ದಶವಾಯುಗಳ ಸಂಚುವನರಿದು ದಶನಾಳಂಗಳ ಪಥವಡಗಿ ದಶೇಂದ್ರಿಯಂಗಳ ಸಂಚಲವಳಿದು। ಪ್ರಾಣರತಿಯೊಳು ನಿಮ್ಮ ಸಂಗವ ಕಂಡೆನಯ್ಯಾ॥೧॥

ಚಿತ್ತದ ಕಳೆ ಬುದ್ಧಿಯೊಳಡಗಿ ಬುದ್ಧಿ ಅಹಂಕಾರದೊಳಳಿದು ಅಹಂಕಾರ ಮನದೊಳು। ಮನ ನಿಮ್ಮ ಕರುಣದ ಸಂಗವಾಗಿ ಕಣ್ದೆರದೆನಯ್ಯಾ ॥೨॥

ಷಡುಚಕ್ರಗಳವುಲವಲ್ಲಿ ಸುಳಿದಾಡುವ ಪ್ರಾಣಹಂಸನ ತಿಳುಹಿ ಮಹಾ ನುಭಾವದೊಳು। ನೆಲಸಿ ನಿರ್ಮಳ ಲಿಂಗ ಪ್ರಾಣಿಯಾದೆನಯ್ಯಾ ॥೩॥

ಚೈತನ್ಯವೆ ನೀನೆಂದರಿದು ಸಾತ್ವಿಕ ಭಾವವೆಂದರಿಯದೆ ಸೂಕ್ಷ್ಮತನು ವಿನೊಳಗೆ। ನಿಷ್ಕಳ ಜ್ಞಾನಜ್ಯೋತಿಯ ಬೇಗಸುಂಡೆನಯ್ಯಾ ॥೪॥

ನೀನೆನ್ನ ಪ್ರಾಣದೊಳಗೆ ಪ್ರಾಣವಾಗಿ ನಾನಿನ್ನ ಪ್ರಾಣದೊಳಗೆ ಪ್ರಾಣ ವಾಗಿ। ನಾನೀನೆಂಬುಭಯವನರಿಯದೆ ನಿನ್ಮಕೃಪಾನಂದದೊಳಡಗಿರ್ದೆನು ಕೂಡಲಸಂಗಯ್ಯ ॥೫॥

**ಶಾರ್ದೂಲ**:—ಅವ ಬ್ರಹ್ಮದೊಳಿಪ್ಪ ದೀಪ್ತಿಯುದರಿಂದಂ ಮಾನಸ ಸ್ಥೈರ್ಯವಂ। ತಾವಾಮಾನಸದಾ ಸ್ಥಿರತ್ವದಲಸತ್ಪ್ರಾಣಕ್ಕೆ ಚಾಂಚಲ್ಯವಂ॥ ತಾತಪ್ರಾಣವ ದಾತ್ಮಲಿಂಗದ ನಿಜ ಧ್ಯಾನಾನು ಸಂಬಂಧವಾ। ಯ್ತಾವಿಜ್ಞಾ ನಘನಾತ್ಮ ಲಿಂಗವದುತಾಂ ಶ್ರೀ ಸಿದ್ಧಲಿಂಗೇಶ್ವರಾ ॥೬೫॥

**ಗದ್ಯ**:—ಇಂತೀಪ್ರಕಾರದಿಂ ನೂರೊಂದು ಸ್ಥಲದೊಳಗೆ ಅರುವತ್ತೈದನೆ ಯುದಾದ ಪ್ರಾಣಾನುಗ್ರಹಸ್ಥಲದ ವಿಚಾರವು ಅನುವಿನಿಂ ಮುಗಿಯಲಾ ಯಿತು.

---

## ೬೦ ಕಾಯಾರ್ಪಿತಸ್ಥಲ.

**ಸೂತ್ರ**:—ಇಂತು ಕಾಯಾನುಗ್ರಹ ಇಂದ್ರಿಯಾನುಗ್ರಹ ಪ್ರಾಣಾನು ಗ್ರಹವೆಂಬ ತ್ರಿವಿಧಸ್ಥಲವೇಕವಾದ ಲಿಂಗವು ಅವಿರಳಲಿಂಗ ಸಂಗಸುಖಿ ಯಾದ ಲಿಂಗಪ್ರಸಾದಿಯ ಕಾಯದಲ್ಲಿ ಅರ್ಪಿತಲಿಂಗಮುಖವಾದ ಭೇದ ವೆಂತಿರ್ದುದೆಂದಡೆ ಮುಂದೆ ಕಾಯಾರ್ಪಿತಸ್ಥಲವಾದುದು.

**ವಚನ**:—ಲಿಂಗ ಗಂಭೀರ ನಿಸ್ಸಂಗಿಯ ಸಂಗವ ನಾನೇನೆಂಬೆನಯ್ಯಾ॥ ಪಾರಮಾರ್ಥದಿಂದ ಗಮಿಸುವ ಗಮನವ ನಾನೇನೆಂಬೆನಯ್ಯಾ. ಕೂಡಲ ಸಂಗನ ಶರಣರು ಕಾಯದ ನೆವದಿಂದ ಅರ್ಪಿಸುವ ಬೆಡಗ ನಾನೇನೆಂಬೆ ನಯ್ಯಾ॥೪॥

ಪದ—ರಾಗ—ನಾಟ

ರೋಮಾದಿಗಳೆಲ್ಲ ಕೈಯ್ಯಾಗಿ ಅಮಿಷವಿಷಯಂಗಳ ಮರೆದು। ಕಾಮಿಸಿ ಬಂದ ಪದಾರ್ಥಂಗಳ ನಿಮಗರ್ಪಿಸುವೆನಯ್ಯಾ ॥ಪ॥

ಎನ್ನ ಕಂಗಳು ಭಕ್ತ ಎನ್ನ ಕಿವಿಗಳು ಭಕ್ತಎನ್ನನಾಸಿಕ ಭಕ್ತ ಎನ್ನ ನಾಲಿಗೆ ಭಕ್ತಎನ್ನಕರಚರಣಾದಿಗಳೆಲ್ಲವ ಶ್ರೀ ಗುರುಭಕ್ತನಮಾಡಿದನಾಗಿ ॥ ಎನ್ನ ತನುವುಭಕ್ತ ಎನ್ನಮನವುಭಕ್ತ ಎನ್ನ ನೆನಹು ಭಕ್ತನೆಂಬೀ ಕಾರಣ ವೆಲ್ಲವು । ಸನ್ನುತಲಿಂಗಕರ್ಪಿತವಲ್ಲದೆ ಎನ್ನಂಗಕ್ಕೆ ಸೊಗಸದು ಅಯ್ಯಾ ॥೧॥

ತಟ್ಟಿತ್ತು ಮುಟ್ಟಿತ್ತು ಆಸನ ಶಯನ ಹಲ್ಲುಕಡ್ಡಿ ದರ್ಪಣನಡೆನುಡಿ ಚೈತನ್ಯ । ನೋಡುವಸ್ವರೂಪವು ಕೇಳುವ ಸಂಗೀತಸುಭಾಷೆಗಳೆಲ್ಲವನು ॥ ಸುಗಂಧ ಪುಷ್ಪಪರಿಮಳ ಬೀರಲು ವಾಯುವಾಕಾಶರೂಪು ನಿರೂಪೆಲ್ಲವು । ಸರಸಲಿಂಗಕರ್ಪಿತವಲ್ಲದೆ ಎನ್ನಂಗಕ್ಕೆ ಸೊಗಸದು ಅಯ್ಯಾ ॥೨॥

ಎನ್ನ ಅಧರಕೆ ಬಾಹ ಬಪ್ಪರುಚಿಯುನ್ನು ಎನ್ನಉದರಕೆ ಬಾಹಬಪ್ಪ ಸುಖ ವನ್ನು ಎನ್ನಚೈತನ್ಯಕ್ಕೆ ಬಾಹಬಪ್ಪ ಸುಖಾದಿ ಸಃಖಂಗಳನ್ನು ॥ ಎನ್ನಮನದ ತಲೆವಾಗಿಲೊಳಗಿರಲು ಕರುಣಾದಿಗಳೆಲ್ಲವಕ್ಕೆ ನಿಮ್ಮ । ಸನ್ನುತ ಪ್ರಾಣದವ ನಿಕ್ಕೆ ಕರುಣದಿಂ ಸಲಹಯ್ಯ ಲಿಂಗತಂದೆ ॥೩॥

ಬೇಕುಬೇಡೆನ್ನದ ಪ್ರಸಾದಿ ಸಾಕುಸವಿಯುನ್ನದ ಪ್ರಾಣಾದಿರುಚಿಯ ರುಚಿ ಯುನ್ನದ ಪ್ರಸಾದಿಯು ಕರುಣದಕಂದನಾಗಿ ಭೋಗಿಸಿ ಭೋಗಿಸದಪ್ರಸಾದಿ ॥ ಭಾವಿಸಿದಡೆ ಭಾವಿಸದ ಪ್ರಸಾದಿ ಪ್ರಸಾದದಲ್ಲಿಯು ಆರೂಢದ ನಿಜವುತಾನೆ ತನ್ನಯನೆಲೆಯನು ತನ್ನೊಳು ಕಂಡ ಪ್ರಸಾದಿಯು ಅಯ್ಯಾ ॥೪॥

ದೀಕ್ಷಿತನೆಂದೆನಿಸಿಕೊಳ್ಳದ ಪ್ರಸಾದಿ ದೀಕ್ಷೆಗೆ ತಲೆಗೆಯ್ಯನಿಕ್ಕದಪ್ರಸಾದಿ ಆದೀಕ್ಷೆಯುಮಕ್ಕಳಿಗೆ ತನ್ನ ಪ್ರಸಾದವನಿಕ್ಕದ ಪ್ರಸಾದಿ ॥ ಏಕಲಿಂಗಪತಿ। ಗ್ರಾಹಕನಚ್ಚಪ್ರಸಾದಿ ನಿಚ್ಚಪ್ರಸಾದಿಸನುಮತ। ಶ್ರೀ ಕೂಡಲಚನ್ನಸಂಗಯ್ಯ ನಲ್ಲಿ ಆತನೇಪ್ರಸಾದಿಯೋ ಅಯ್ಯಾ ॥೫॥

**ಮತ್ತೇಭಃ**–ದಿಟದಿಂದಂ ಖಗಸಂಕುಳಂ ವಿಟಪಿಯುಂ ಸಾರ್ವಂತೆ ತತ್ಕಾ ಯದಿಂ ।ಸ್ಫುಟವಮಾಗುದ್ಭವ ಮಾದನೇಕಸುಖಮೆಲ್ಲಂ ಲಿಂಗದೋಳ್ಳಾಡೆಸಂ॥ ಘಟಿಸುತ್ತಿರ್ಪವು ಲಿಂಗಸೋಂಕಿನ ಮಹಾಸೌಖ್ಯಾದಿ ಭೋಗಂಗಳಿಂ। ಪಟುವಾಗಿಂತು ವಿರಾಜಿಸಂ ಲಸದಟಂ ಶ್ರೀ ಸಿದ್ಧಲಿಂಗೇಶ್ವರಾ ॥೬೬॥

**ಗದ್ಯಃ**—ಇಂತೀಪ್ರಕಾರದಿಂ ನೂರೊಂದುಸ್ಥಲದೊಳಗೆ ಅರುವತಾ ರನೆಯದಾದ ಕಾಯಾರ್ಪಿತಸ್ಥಲದ ವಿಚಾರವು ಅನುವಿನಿಂ ಮಗಿಯುಲಾ ಯಿತು.



## ೫೧. ಕರಣಾರ್ಪಿತಸ್ಥಲ.

**ಸೂತ್ರಃ**—ಇಂತು ಕಾಯದಲ್ಲಿ ಅರ್ಪಿತಮುಖವ ನೈದಿದ ಲಿಂಗವು ಪ್ರಸಾದಿಯು ಅಂತರ್ಮುಖದಲ್ಲಿ ಸಮರ್ಪಿತ ಮುಖವಾದ ಭೇದವೆಂತಿ ರ್ದದೆಂದಡೆ ಮುಂದೆ ಕರಣಾರ್ಪಿತ ಸ್ಥಲವಾದುದು.

**ವಚನಃ**—ಶ್ರೀಮದ್ಭಾವದಿಂದಾದ ಶೇಷವ ಕ್ರಿಯೆಕರ್ಪಿಸುವೆ. ಕ್ರಿಯ ದಿಂದಾದ ಶೇಷವ ನಿಷ್ಕ್ರಿಯೆಕ್ಕರ್ಪಿಸುವೆ. ನಿಷ್ಕ್ರಿಯದಿಂದಾದ ಶೇಷವ ಭಕ್ತಿಗರ್ಪಿಸುವೆ. ಭಕ್ತಿಯಿಂದಾದ ಶೇಷವ ಜಂಗಮಕ್ಕರ್ಪಿಸುವೆ. ಜಂಗ ಮದಿಂದಾದ ಶೇಷವ ಪ್ರಸಾದಕ್ಕರ್ಪಿಸುವೆ. ಪ್ರಸಾದದಿಂದಾದ ಶೇಷವ ಲಿಂಗಕ್ಕರ್ಪಿಸುವೆ. ಲಿಂಗದಿಂದಾದ ಜ್ಞಾನ ಆ ಜ್ಞಾನದಿಂದ ತೃಪ್ತನಾ ದೆನು ಕಾಣಾ ಕಲಿದೇವರದೇವಯ್ಯಾ ॥೫॥

**ಪದ—ರಾಗ—ಧನ್ಯಾಸಿ**

ಅರ್ಪಿತಾವಧಾನ ಮುಖದ ಸುಖವನ್ನು ತಪ್ಪದೆ ತಿಳಿದುನೋಡಾ॥ಪ॥

ಧರಣಿ ಎಂಬ ಭಕ್ತನ ಅಂಗಕ್ಕೆ ಕರಸ್ಥಲ ಸುಚಿತ್ತವಾದುದುನೋಡಾ।
ಆಚಾರಲಿಂಗಮಯವು ನಾಸಿಕ ಮುಖಗಂಧಾರ್ಪಿತವು ನೋಡಾ ॥೧॥

ಭಕ್ತಭೂಮ್ಯಾಂಗ ಹಸ್ತಂಚ ಸುಚಿತ್ತಾಚಾರ ಲಿಂಗಯೋಃ ।
ತನ್ಮುಖಂ ಘ್ರಾಣಗಂಧಂಚ ಅರ್ಪಿತಂತೃಪ್ತಿ ಭೋಕ್ತವಾನ್ ॥೧॥

ಅಪ್ಪುಮಹೇಶ್ವರನ ಅಂಗಕ್ಕೆ ಒಪ್ಪುವ ಸುಬುದ್ಧಿ ಹಸ್ತವೆನಿಸಿ ॥
ಇಪ್ಪುದು ಗುರುಲಿಂಗವು ಮುಖ ಜಿಹ್ವೆ ಅರ್ಪಿತ ರಸವುನೋಡಾ ॥೨॥

ಜಲಂಮಾಹೇಶ್ವರಾಂಗಂಚ ಸುಬುದ್ಧಿರ್ಹಸ್ತ ಸದ್ಗುರೋಃ ॥ ಮುಖಂ
ಜಿಹ್ವಾ ರಸಂ ಭೇದಂ ಅರ್ಪಿತಂ ತೃಪ್ತಿ ಭೋಕ್ತವಾನ್ ॥೨॥

ನಿಹಿತಪ್ರಸಾದಿ ಯಂಗತೇಜಕ್ಕೆ ನಿರಹಂಕಾರ ಹಸ್ತವುನೋಡಾ ॥
ಸಹಜದಲ್ಲಿ ಶಿವಲಿಂಗಮುಖನೇತ್ರ ಬಹಳ ರೂಪಾರ್ಪಿತವು ನೋಡಾ॥೩॥

ಅಗ್ನಿಯಂಗಂ ಪ್ರಸಾದೀನಾಂ ನಿರಹಂಕಾರ ಹಸ್ತಯೋಃ ॥ ಶಿವಲಿಂಗಂ
ನೇತ್ರರೂಪಂಚ ಅರ್ಪಿತಂ ತೃಪ್ತಿ ಭೋಕ್ತವಾನ್ ॥೩॥

ಅನಿಲ ಪ್ರಾಣಲಿಂಗಿಯ ಅಂಗಕ್ಕೆ ಮನವೆ ಸುಹಸ್ತವೆನಿಸಿತುನೋಡಾ॥ ಅನುಪಮದ ಚರಲಿಂಗವು ಮುಖ ತ್ವಕ್ಕುತನು ಸುಖಾರ್ಪಿತವುನೋಡಾ॥೪॥

ಅಂಗಂ ತತ್ಪ್ರಾಣಲಿಂಗೀನಾಂ ವಾಯುಸ್ಸುಮನ ಜಂಗಮಂ॥ ತನ್ಮುಖಂ ತ್ವಚಸ್ಪರ್ಶಂಚ ಅರ್ಪಿತಂ ತೃಪ್ತಿಭೋಕ್ತವಾನ್ ॥೪॥

ವ್ಯೋಮಶರಣನ ಅಂಗಕ್ಕೆ ಹಸ್ತವು ಆ ಮಹಾಸುಜ್ಞಾನವೆನಿಸಿ॥ ಸ್ವಾಮಿ ಪ್ರಸಾದಲಿಂಗ ಶ್ರೋತ್ರಮುಖ ವಾ ಮಹಾಶಬ್ದಾರ್ಪಿತನೋಡಾ॥೫॥

ಶರಣಂ ವ್ಯೋಮಮಂಗಂಚ ಹಸ್ತಂ ಜ್ಞಾನಪ್ರಸಾದಿಕಂ॥ ತನ್ಮುಖಂ ಶ್ರೋತ್ರಶಬ್ದಂಚ ಅರ್ಪಿತಂತೃಪ್ತಿ ಭೋಕ್ತವಾನ್ ॥೫॥

ಭಾವೈಕ್ಯಾತ್ಮಾಂಗ ಹಸ್ತವು ದೇವನೆ ಶ್ರೀಮನ್ಮಹಾಲಿಂಗವೆನಿಸಿತು ನೋಡಾ॥ ಭಾವಿಪೊಡೆ ಹೃದಯ ಮುಖ ತೃಪ್ತ್ಯಾರ್ಪಿತತಾವಿದು ಷಟ್ಸ್ಥಲಕ್ಕೆನೋಡಾ ॥೬॥

ಐಕ್ಯಭಾವಾಂಗ ಹಸ್ತಂಚ ಮಹಾಲಿಂಗಾವ ಧಾನಿನಾಂ॥ ನಿರ್ಭಾವಂ ತನ್ಮುಖಂ ತೃಪ್ತಿ ಅರ್ಪಿತಂ ತೃಪ್ತಿ ಭೋಕ್ತವಾನ್ ॥೬॥

ಅಂಗಹಸ್ತಲಿಂಗ ಮುಖದ ಅವರಲ್ಲಿ ಹಿಂಗದೆ ಅನುವರ್ಪಿತ ಇದ॥ ರಂದವ ಬಲ್ಲಾತ ಕೂಡಲ ಚನ್ನಸಂಗಯ್ಯನಲ್ಲಿ ಲಿಂಗೈಕ್ಯನೋಡಾ ।೬॥

**ಮತ್ತೇಭಃ—** ಶಕಟಂ ದೇಹಮದಿಂತು ಬುದ್ಧಿಯೆ ನಿಜಂ ತತ್ಸಾರವೆಪ್ರಗ್ರಹಂ। ಪ್ರಕಟಂ ಮಾನಸ ಮಿಂದ್ರಿಯ ಪ್ರಚಯಮೇತಾಂ ತದ್ಧಯಂನಾಡೆ ಸಂ॥ ಗಿಕದಿಂದಾತ್ಮನೆ ಭಾವಿಸಲ್ಪಧಿಕ ನಿತಾರ್ಥಂಗಳಂ ಮಾನಸಾ। ಧಿಕದಿಂ ಲಿಂಗಮುಖಕ್ಕೆ ನೀಡುವನಲಾ ಶ್ರೀ ಸಿದ್ಧಲಿಂಗೇಶ್ವರಾ ||೬೭||

**ಗದ್ಯಃ—** ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಅರವತ್ತೇಳನೆಯದಾದ ಕರಣಾರ್ಪಿತ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

# ೫೨ ಭಾವಾರ್ಪಿತಸ್ಥಲ.

**ಸೂತ್ರಃ**— ಇಂತು ಅಂತಃಕರಣದಲ್ಲಿ ಸಮರ್ಪಿತ ಮುಖವನ್ನೈದಿದ ಲಿಂಗವು ಪ್ರಸಾದಿಯು ಸರ್ವಾಂಗದಲ್ಲಿ ತಾನೆ ಸರ್ವಾರ್ಪಿತವಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಭಾವಾರ್ಪಿತಸ್ಥಲವಾದುದು.

**ವಚನಃ**— ತನುವುತಾಗದಮುನ್ನ ಮನವುತಾಗದಮುನ್ನ ಆಪ್ಯಾಯನ ಬಂದೆಡೆಗೊಳ್ಳದಮುನ್ನ ಅರ್ಪಿತವ ಮಾಡಬೇಕು. ಗುರುವಿನ ಕೈಲಿ ಎಳತಟವಾಗದ ಮುನ್ನ ಅರ್ಪಿತವ ಮಾಡಬೇಕು. ಎಡದ ಕೈಲಿ ಕಿಚ್ಚು ಬಲದ ಕೈಲಿ ಹುಲ್ಲು ಉರಿಹತ್ತಿತ್ತು ಗುಹೇಶ್ವರಾ ನಿಮ್ಮ ಪರಮ ಪ್ರಸಾದಿಯಾ

ಪದ-ರಾಗ-ರಾಮಕ್ರಿ

ಕಾಯಭಾವದ ಕೈಗಳಿಂದ ಪಂಚೇಂದ್ರಿಯೆಂಬಾಯತದ ಕೈಗಳಿಂ ಲಿಂಗಕರ್ಪಿಸುವೆನೆಂ । ಬಾಯುಕ್ತಿ ಖಂಡಿತವು ತನುಲಿಂಗ ಲಿಂಗತನು ವಾದಡರ್ಪಿತವೆಲ್ಲವೂ ॥ಪ॥

ರೂಪಿಸಿ ಪದಾರ್ಥ ಬಂದುದ ಲಿಂಗಕಿತ್ತು ತಾನಾ ಪ್ರಸಾದವನಲ್ಲ ದೊಲ್ಲೆಂಬ ಭಕ್ತನಿಂ। ದೇಪರಿಯನಾರ್ಪಿತವ ನೆನೆಯು ಬಹುದೇನೊಂದು ಸುಖದುಃಖ ತನುವತಾಗೆ॥ ತಾ ಪತಿಕರಿಸಿಕೊಳ್ಳುವ ಪರಿಯಂತು ಕೊಳ್ಳು ದುದ ಪರಿಹರಿಸಿ ಕೊಂಬ ಪರಿಯಾವುದೆಂಬಾ। ಆಪದೊಳಗದೆವ ವರ್ಮ ಲಿಂಗ ಭಾವಾಂಗ ವಾದಂಗರ್ಪಿತವೆಲ್ಲ ಸಹಜವು ॥೧॥

ನೆನನೆನದು ಮರಮರದು ಖಂಡಿತ ಜ್ಞಾನದಿಂದನುವಾದುದನುವಾ ಗದೆಂಬದುರ್ಭಾವದಿ। ತನು ಮುಟ್ಟಿ ಮನಮುಟ್ಟ ದೊಂದೊಂದು ಸೂತ ಕವ ಕಲ್ಪಿಸಿ ವಿಕಲ್ಪಿಸುತಲಿ ॥ ಅನುವರಿಯದಾಯತವನರಿಯ ಅರ್ಪಿತ ಮುಖದ ಘನವರಿಯ ರುಚಿಯನರ್ಪಿಸಿ। ತನು ರೂಪವನು ಹೊರದು ಪ್ರಳಯಕೊಳಗಹನೆ ಪ್ರಸಾದಿ ಪರಿಪೂರ್ಣ ಭಾವಿತನಲ್ಲದೆ ॥೨॥

ಅಪ್ಪುಗೆಯ ಸೋಂಕು ಸುಖತನುವ ತಟ್ಟದ ಮುನ್ನ ಆಪ್ಯಾಯ ನಾದಿಗಳು ಮನವಂಟದ ಮುನ್ನ। ಅರ್ಪಿಸಲು ಬೇಕು ಕಾಮಿತ ಕಲ್ಪಿತಾದಿ ಗಳು ಭಾವಮುಟ್ಟದೆ ಮುನ್ನ ಮುನ್ನವೇ ॥ ತಪ್ಪಿಸಲು ಬಾರದೇನುವ

ಕಾಯ ಸೋಂಕಿಲ್ಲದಿಪ್ಪುದಿಲ್ಲಾಗಿ ತತ್ಸ್ವಾನ ವರ್ವ ಪ್ರಾಣಾರ್ಪಣಂಗೈದು ಒಡವೊಡಲಗುಣವಳಿದು ಲಿಂಗಾಂಗ ದೊಡಲು ಗೊಂಡುದಾಗಿ ॥೩॥

ಅಂಗವೇ ಲಿಂಗ ಲಿಂಗವೇ ಪ್ರಾಣವಾದುಭಯಸಂಗದಿಂ ಪ್ರಾಣ ಮನವಾಗಿ ಮನಭಾವ ನಿಜ। ಲಿಂಗ ಸ್ವಾಯತವು ಮುಂತಾಗಿ ಮನ ಹಿಂತಾಗಿ ಸಕಲ ಪ್ರವರ್ತನೆಗಳ ನೊಂದಾಗಿ ॥ ಅಂಗೀಕರಿಪಾಮನಕೆ ಶ್ರೋತ್ರ ಘ್ರಾಣಾದಿ ನೇತ್ರಂಗಳಿಗೆ ಜಿಹ್ವೆ ನೈರ್ಮಳ ಭಾವ ಭಾವವಾ। ದಂಗಕ್ಕೆನಾರ್ಪಿತಗಳಿಲ್ಲ ಸರ್ವಾಂಗ ಪ್ರಸಾದ ತನುಮಯ ಶುದ್ಧವಾದಾ ತಂಗೆಯು ॥೪॥

ಭಾವರುಚಿತತ್ವವಿಡಿದಂಗ ರೂಪಾದಿಗಳನಾ ವಿಧಾನವಿ ಪಿಡಿದು ಸೋಂಕು ತೃಪ್ತಿಯಸೂತ್ರ। ವಾವುದೇನಾದಡಂ ಕೈವಿಡಿದು ತ್ರಿವಿಧದೊಳು ತೆರಹು ಮರಹುಗಳದೇನುವಿಲ್ಲದೆ॥ ಸಾವಧಾನದೊಳು ಸಲೆನೆಲೆಯಾಗಿ ಲಿಂಗಾನುಭಾವ ನೆಲೆಗೊಂಡು ರೂಪಾದಿರುಚಿತೃಪ್ತಿಗಳ। ನೀವಭಾವಜ ಬಸವಣ್ಣನೇ ಪ್ರಸಾದಿ ಶ್ರೀಕೂಡಲ ಚನ್ನಸಂಗಯ್ಯನಲ್ಲಿ ॥೫॥

**ಮತ್ತೇಭಃ**— ತನುವಂ ಮುಟ್ಟದಮುನ್ನ ಸೋಂಕಿನ ಸುಖಂ ತತ್ತೃಪ್ತಿತಾನೆಯ್ದಿಯಾ। ಮನವಂ ಮುಟ್ಟದಮುನ್ನ ಕಲ್ಪಿತಮದುಂ ಭಾವಕ್ಕೆ ತಾನೆಯ್ದದಂ॥ ದುನಿಜಂ ಅಂಗಿತಲಿಂಗ ಭಾವದೆ ಮಹಾ ಲಿಂಗಕ್ಕೆ ತತ್ಸೌಖ್ಯಮಂ॥ ಬಿನದಂ ಗೊಂಡುರೆ ಮರ್ಪಿಪಾತನೆ ಶಿವಂ ಶ್ರೀಸಿದ್ಧಲಿಂಗೇಶ್ವರಾ ॥೬೮॥

**ಗದ್ಯಃ**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಅರವತ್ತೆಂಟನೆಯದಾದ ಭಾವಾರ್ಪಿತಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೬೯ ಶಿಷ್ಯಸ್ಥಲ.

**ಸೂತ್ರಃ**— ಇಂತು ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತವೆಂಬ ತ್ರಿವಿಧ ಸ್ಥಲವೇಕವಾದ ಲಿಂಗವು ಪ್ರಸಾದಿಯ ಅಂಗದಲ್ಲಿ ಉಪ

ದೇಶಿಕ ಸ್ವರೂಪದಿಂದ ಶಿಷ್ಯಭಾವವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಶಿಷ್ಯಸ್ಥಲವಾದುದು.

**ವಚನ**:— ಕಂಡುದ ಹಿಡಿಯಲೊಲ್ಲದೆ ಕಾಣದುದನರಸಿ ಹಿಡಿದಿಹೆನೆಂದಡೆ ಸಿಕ್ಕದೆಂಬ ಬಳಲಿಕೆಯ ನೋಡಾ! ಕಂಡುದನೆಕಂಡು ಗುರುಪಾದವ ಹಿಡಿದಲ್ಲಿ ಕಾಣದುದ ಕಂಡು ಕಾಣಬಹುದಯ್ಯಾ ಗುಹೇಶ್ವರಾ ॥೭॥

ಪದ— ರಾಗ—ಬೌಳಿ

ಜ್ಯೋತಿಸೋಂಕಿನಿಂದಲಾದ ಜ್ಯೋತಿಯಂತೆ ಗುರು ಕೃಪೆಯೊಳು। ಜಾತನಾದ ಶಿಷ್ಯ ಗುರುಮಹಾತ್ಮೆವಿಡಿದು ಗುರುವಹಾ ॥ಪ॥

ಪರುಷ ಸೋಂಕಿನಿಂದ ಲೋಹ ಪರುಷ ಸೋಂಕಿ ಪರುಷವಹುದು। ಗುರುಪದಾಬ್ಜಸೋಂಕಿ ಗುರುಪದಸ್ಥನಹ ಶಿಷ್ಯನೂ ॥೧॥

ಆವುದಾವ ಬೀಜದಿಂದಲಾದ ಫಲವು ಬೆಳೆದು ಮರಳಿ ತಾವೆ ಬೀಜವಹವು ವೃಕ್ಷಬೀಜನ್ಯಾಯವು। ಆವ ಪರಿಯದಾವ ಪರಿ ಗುರುಭಾವದಿಂದಲುದಯವಾದ ಪಾವನೀಯ ಶಿಷ್ಯ ಗುರುವಹ ॥೨॥

ಗುರುವಿನಿಂದಲಾದ ಶಿಷ್ಯ ಗುರುವ ನೆರೆವೆನೆಂಬ ಬರದ ಉರವಣಿಯೊಳು ಕೂಡಿ ನಡೆಯಲಾಗದು। ಚರಿಸಲಾಗದವರ ಚರಿಯನಿರುತಗೇಳಲಾಗದವರ ಸರಿಯೊಳಾವ ಭಕ್ತ ಭೋಗ ಮಾಡಲಾಗದು ॥೩॥

ದೃಷ್ಟಗುರುವಿನಂಘ್ರಿ ವಿಡಿದು ದೃಷ್ಟಿಭಾವದ ಗೋಚರದ ಷಟ್ತ್ರಿಂಶತ್ತ್ರಭಾಪಟಲತತ್ವ ಘನತೆಯಾ। ಮುಟ್ಟಿಸಿ ಪರವಸ್ತು ವಿಷಯಕಾಷ್ಟವಾಗಿ ತನ್ನಮನದ ಭೀಷ್ಟಲಿಂಕ ಸೋಂಕಿ ಲಿಂಗವಾಗಿ ಗುರುವಹನೆಂದು ॥೪॥

ತಾನೆಶಿಷ್ಯ ತಾನೆಭಕ್ತ ತಾನೆಗುರುವು ತಾನೆಲಿಂಗ ತಾನೆಜಂಗಮ ತಾನೆಪ್ರಸಾದ ತಾನೆತೃಪ್ತಿಯು೧। ಸ್ಥಾನದಲ್ಲಿ ಸುಖದೊಳಿಹ ಮಹಾನುಭಾವಿಯಾಗಿ ಗುರುವಿನಾಣತಿಯಲ್ಲಿ ಕೂಡಲ ಚನ್ನಸಂಗನಿಮ್ಮಶರಣನಲ್ಲಿ ॥೫॥

**ಮತ್ತೇಭ**:—ಜರಿಯಲ್ಜಿಂಕಿಸೆಯುಂಪೊರಳ್ಸೆಳೆಯುಂ ಮತ್ತಂತಾಡನಂಗೆಯ್ದೊಡಂ। ಬರಿದೆನಿಷ್ಠುರದಿಂದೆಬಯ್ದೊಡ ಮವರ್ಕಂ ಚಿತ್ತದೊಳ್

ಕ್ಲೇಶವೆಂ॥ ತರಿಸಂದಿಲ್ಲದೊಡಂತವಂ ವಿಮಲಸದ್ಭಕ್ತಿ ಪ್ರಭಾವಂಗಳೊಳ್ ।
ಕರೆತಾನೆಳ್ಳನಿತಿಲ್ಲದುತ್ತಮನಲಾ ಶ್ರೀ ಸಿದ್ಧಲಿಂಗೇಶ್ವರಾ ॥೬೯॥

**ಗದ್ಯ:**— ಇಂತೀಪ್ರಕಾರದಿಂ ನೂರೊಂದುಸ್ಥಲದೊಳಗೆ ಅರವತ್ತೊಂಭತ್ತನೆಯದಾದ ಶಿಷ್ಯಸ್ಥಲದವಿಚಾರವು ಅನುವಿನಿಂ ಮುಗಿಯಲಾಯಿತು.



## ೭೦ ಶಿಶ್ರೂಷಾಸ್ಥಲ.

**ಸೂತ್ರ:**— ಇಂತು ಶಿಷ್ಯಭಾವವನ್ನೈದಿದ ಲಿಂಗವು ಪ್ರಸಾದಿಯುಅಂಗದಲ್ಲಿ ಶಿಶ್ರೂಷಾಭಾವವನ್ನೈದಿದ ಭೇದ ವೆಂತಿರ್ದುದೆಂದಡೆ, ಮುಂದೆ ಶಿಶ್ರೂಷಾಸ್ಥಲವಾದುದು.

**ವಚನ:**— ಸ್ವಾಮಿಭೃತ್ಯ ಸಂಬಂಧಕ್ಕೆ ಆವುದು ಪಥವೆಂದರೆ ದಿಟವ ಪಿಡುವುದು, ಸಟೆಯ ಬಿಡುವದು, ನುಡಿದಂತೆ ನಡೆವುದು, ನಡೆದಂತೆ ನುಡಿವುದು, ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚಿಯನೊಲ್ಲನು ನಮ್ಮ ಕೂಡಲ ಸಂಗಮದೇವನು. ॥೮॥

ಪದ— ರಾಗ—ರಾಮಕ್ರಿ.

ಗುರುಪಾದ ಸೇವಾತುರ ಭೃತ್ಯನು ಸಂ। ಸಾರ ಭವಬಂಧವಿರಹಿತನು ॥ಪ॥

ಗುರುಪರಿಚರಿಯುವೆ ಸಕಲಜಪಂಗಳು ಗುರುಪರಿಚರಿಯುವೆ ಸಕಲತಪಂಗಳು । ಗುರುಪರಿಚಯುವೆ ಸದ್ಯೋನ್ಮುಕ್ತಿಯು ಗುರುಸನ್ನಿಹಿತ ಪರಮ ಸುಖವೂ ॥೧॥

ಅರಸಲೇಕೆ ಚಾತುರ್ವಿಧ ಪದಗಳ ಗುರುಚರಣದೊಳಗೆ ಮನಮುಗ್ನನಾಗಿನಿ । ಶ್ಚರಿಯದೊಳಗೆ ಗುರುಭಕ್ತಿಯ ನಳವಡಿಸಿದಡಲ್ಲಿಯೆ ಮುಕ್ತಿ ನೋಡಾ ॥೨॥

ಗುರುವಿನೊಳಿದಿರುತ್ತರವನರಿಯದೆ ತನುಕರಗಿ ಕೊರಗಿ ಭೃತ್ಯಾಚಾರಸ್ಥಲ। ಕರಿಗೊಂಡು ಗುರು ನಿರೂಪವನು ಮಾಡಿದಡಲ್ಲಿಯೆ ಮುಕ್ತಿ ನೋಡಾ ॥೩॥

ಹಂಸ ಪವನದಳ ದಳಂಗಳೊಳಂ ಸಿಕಗಳೊಡಗೂಡಿ ಆತ್ಮನೊಳಂ ಸಮಾಹಿತವಾಗಿ ತೊಳಗುವ ಜ್ಯೋತಿರೂಪಕವು। ಸಂಶಯದ ಸಂಸಾರ ಕಾಯದೊಳು ಸಿಲುಕಿ ಮಹಾಭೂತಗೂಡಿರ್ದು ಸಹಜ ಬೇರಾಗಿ ಸಚರಾ ಚರವ ಚರಿಸುತ್ತಿಹಾ ॥೧॥

ನೇತ್ರ ಸೂತ್ರಂಗಳಂತೆ ದೃಶ್ಯದ ಭ್ರಾಂತು ತನ್ನೊಳಡಗಿ ಶ್ರೋತ್ರ ಸೂತ್ರದಂತಿರೆ ಶಬ್ದ ಗ್ರಾಹಿಸಿ ಘ್ರಾಣವಾಸನೆಯ। ಸೂತ್ರದಂತಿರೆ ಜಿಹ್ವೆರು ಚಿಗಳ ಸೂತ್ರವಿಡಿದಂತಂಗ ಸೋಂಕಿನ ಸೂತ್ರವೆಂತಂತರಾತ್ಮನು ಬೆರಸಿ ಬೆರಸದಿಹಾ ॥೨॥

ಪಶು ಪಶುವಿನಂತಿಹುದು ತಾನಾಪಶುವಿನೊಳಗಣ ಅಮೃತದಂ ತಿಹ ವಿಷಯ ವಿಷಯಗಳೊಳಗಿಹವುತಾನಾ ॥ ವಿಷಯದೊಳಗೆಲ್ಲ ವಚಿಸಿ ಕೊಂಡಿಹ ಜ್ಞಾನದಂತಿಹ ವಸುಧೆ ಜಾತದಫಲ ಫಲಾಂತರದೆ ಸಕರುಚಿ ಯಂತಂತರಾತ್ಮನು ಬೆರಸಿ ಬೇರಿಹನು ॥೩॥

ಸ್ವಪ್ನ ಸೂತ್ರವದೆ ಹೇಗೆ ಗಗನದೊಳಿಪ್ಪ ರವಿಶಶಿ ಕಿರಣಸೂತ್ರಗಳ ಪ್ಪುಗೆಗಳಪ್ಪುಗೆಗಳಂತಂತೆ ವಾರಿಧಿ ಜಠರ ಕುಹರದೊಳಿಪ್ಪ ಸಿಖಿಯಂ ತಖಿಳವನುಗ್ರಹಿಸಿಪ್ಪ ದೃಷ್ಟಿಯ ಸೂತ್ರವೆಂತಂತಿಪ್ಪ ಜಗದಂತರಿಯಾತ್ಮಕ ವಪ್ಪ ರೂಪು ರೂಪಾಗಿ ॥೪॥

ತಾನೆ ಜಗ ತಾನೆ ಮಹಾಗಮ ತಾನೆ ವಿಧಿ ತಾನೆ ಮಹಾಕ್ರಿ ತಾನೆ ಯಾಗಿಯು ತಾನೆಯಲ್ಲದೆ ತಾನೆವರದೆಶೆಯ ॥ ಜನನಸ್ಥಿತಿ ಮರಣದನು ಸಂಧಾನಗಳನನುಕರಿಸ ಮನನ ಜ್ಞಾನದಂತ ಜ್ಯೋತಿರಾತ್ಮ ಗುಹೇಶ್ವ ರನ ಶರಣಾ ॥೫॥

**ಶಾರ್ದೂಲಃ**—ರಾಗದ್ವೇಷ ವಿಮೋಹ ಲೋಭ ಭಯ ಶೋಕಾದಿ ಪ್ರಚಾರಂಗಳೊ। ಳ್ತಾಗಿರ್ದಂತರ ಸಂಜ್ಞೆಯಾತನೆ ಲಸತ್ಪರ್ಯಷ್ಟಕೋ ಪೇತದಿಂ॥ ದೀಗಂಕರ್ತ್ರಿ ಸುತಿರ್ದು ವರ್ತಿಪ ಪರಾತ್ಮಂ ಗೊಪ್ಪುವಾನಂದ ವೈ। ದೇಗೈಯಂ ತಿಳಿವ ಶ್ರುತಿಸ್ಥಿತಿಯುತರ್ ಶ್ರೀ ಸಿದ್ಧಲಿಂಗೇಶ್ವರಾ॥೭೩॥

**ಗದ್ಯಃ**—ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಎಪ್ಪತ್ತು ಮೂರನೆಯದಾದ ಅಂತರಾತ್ಮಸ್ಥಲದ ವಿಚಾರವು ಅನುವಿನಿಂ ಮುಗಿಯ ಲಾಯಿತು.



ದವರು ತಮ್ಮ ಮಹಿಮೆಯಿಂದ ಗಂಗೆಯನ್ನು ಸೃಜಿಸಿದುದರಿಂದ ಅಂದಿನಿಂದಲೂ ಇದನ್ನು "ಸಿದ್ಧಗಂಗೆ" ಎಂಬ ಪುಣ್ಯನಾಮದಿಂದ ಭಕ್ತರು ಕರೆಯಲಾರಂಭಿಸಿದರು. ಅಂದಿನಿಂದ ಇಂದಿನವರೆಗೂ ಈ ತೀರ್ಥವು ಪರಮ ಸುಕೃತ ಪ್ರದೇಶವೆಂದು ಭಾವಿಸಲ್ಪಟ್ಟಿದೆ.

ಸಿದ್ಧಗಂಗೆಯ ಬೆಟ್ಟದ ತಟ ಪ್ರದೇಶದಲ್ಲಿ ಒಂದು ವಿರಕ್ತಮಠವಿದೆ. ಇದನ್ನು ಜನರು 'ಹಳೆಯ ಮಠ'ವೆಂದು ಕರೆಯುವರು. 'ಹಳೆಯ ಮಠವು' ಯಾರ ಕಾಲದಲ್ಲಿ ಮೊದಲು ಕಟ್ಟಲ್ಪಟ್ಟಿತೆಂಬುದು ನಮಗೆ ತಿಳಿಯದು. ಇಲ್ಲಿ ಯಾವ ಶಾಸನಗಳೂ ಕಾಗದ ಪತ್ರಗಳೂ ಸಿಗುವಂತಿಲ್ಲ. ಜನರು ಈಗಿರುವ ಹೊಸ ಮಠವನ್ನು ಕಟ್ಟಿದ ಮೇಲೆ ಇದನ್ನು ಹಳೆಯ ಮಠವೆಂದು ಕರೆದರೋ ಅಥವಾ ಬಹು ಪುರಾತನವಾದುದರಿಂದ ಹೀಗೆ ಕರೆದರೋ ಈಗ ತಿಳಿಯುವಂತಿಲ್ಲ.

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಪ್ರಸಿದ್ಧಿಗೆ ಬಂದವರೆಂದರೆ ಶ್ರೀ ಅಟವೀ ಸ್ವಾಮಿಗಳೇ. ಇವರಿಗಿಂತಲೂ ಮೊದಲೂ ಸಿದ್ಧಗಂಗೆಯಲ್ಲಿ ಕೆಲವು ಮಂದಿ ಮೂರ್ತಿಗಳಿದ್ದರೆಂದು ಐತಿಹ್ಯವಿದೆ. ಆದರೆ ಇದರ ನಿಜಸ್ಥಿತಿಯನ್ನು ತಿಳಿಯಲು ತಕ್ಕ ಸಾಧನಗಳು ನಮಗೆ ಲಭಿಸಿಲ್ಲ.

ಶ್ರೀ ಅಟವೀ ಸ್ವಾಮಿಗಳು ಉತ್ತರ ದೇಶದಿಂದ ಬಂದು ಸಿದ್ಧಗಂಗೆಯಲ್ಲಿ ನೆಲಸಿದರೆಂಬುದು ಬಹು ಜನರ ಹೇಳಿಕೆ. ಇವರು ಪಂಡಿತರಲ್ಲದಿದ್ದರೂ ಪವಾಡಪುರುಷರು.

ಮೊದಲು ಸಿದ್ಧಗಂಗಾ ಕ್ಷೇತ್ರದಲ್ಲಿ ದಾಸೋಹವನ್ನು ಪ್ರಾರಂಭಿಸಿದವರು ಈ ಮಹನೀಯರೇ. ಇವರು ಮೊದಲು ಭಿಕ್ಷಾನ್ನದಿಂದ ಪ್ರಾರಂಭಿಸಿದೀ ಅನ್ನದಾನವು ಈಗ ಅತ್ಯಂತ ಊರ್ಜಿತಾವಸ್ಥೆಯಲ್ಲಿದೆ. ಶ್ರೀ ನಂಜುಂಡ ಯೋಗಿಗಳು ಬಂದು ಆಶ್ರಯಿಸಿದುದು ಈ ಮಹನೀಯರಾದ ಸ್ವಾಮಿಗಳನ್ನೇ. ಅವರಿಗೆ ಉಪದೇಶ ಗುರುಗಳಾದರೂ ಇವರೇ. ಅಂದರೆ ಅಟವೀಶ ಸಾಮಿಗಳೇ.

ಅಟವೀಂದ್ರ ಯೋಗಿಗಳು ಸಿದ್ಧಗಂಗೆಯ ಮಠವನ್ನು ಬಹಳ ಊರ್ಜಿತಾವಸ್ಥೆಗೆ ತಂದುದಲ್ಲದೆ. ಗುಬ್ಬಿ ತೊಟ್ಟಲಕೆರೆ ಎಂಬ ಮತ್ತೆರಡು ಸ್ಥಳಗಳಲ್ಲಿ ತಮ್ಮ ಮಠವನ್ನು ಸ್ಥಾಪಿಸಿದರು. ಮೇಲ್ಕಂಡ ಮೂರು ಸ್ಥಳಗಳಲ್ಲಿನ ಮಠಗಳು ಇಂದಿಗೂ ನಡೆದು ಬರುತ್ತವೆ.

ಶ್ರೀ. ಅಟವೀಂದ್ರ ಯೋಗಿಗಳಾದ ಮೇಲೆ ಇಲ್ಲಿ ಶ್ರೀ ಉದ್ಧಾನ ಸ್ವಾಮಿಗಳು ವಿರಕ್ತಾಶ್ರಮ ಸ್ಥಾನಾಪನ್ನರಾದರು. ಗುರುಗಳ ಕಾಲಕ್ಕಿಂತಲೂ ಈ ಮಹನೀಯರ ಕಾಲದಲ್ಲಿ ಸಿದ್ಧಗಂಗಾಕ್ಷೇತ್ರವು ವಿಖ್ಯಾತವಾಯ್ತು. ಶ್ರೀ ಮನ್ನಿರಂಜನ ಉದ್ಧಾನ ಯೋಗಿಗಳ ಕಾಲದಲ್ಲಿ ಸಿದ್ಧಗಂಗೆಯಲ್ಲಿ ದಾಸೋಹವು ಬಲಪಟ್ಟಿತು. ಸಂಸ್ಕೃತ ಪಾಠಶಾಲೆಯು ಸ್ಥಾಪಿತವಾಯಿತು. ಸಾವಿರಾರುಮಂದಿ ವೀರಶೈವ ಹಾಗೂ ಇತರ ವಿದ್ಯಾರ್ಥಿಗಳಿಗೂ ಸಹಾಯವಾಯ್ತು. ಮಹಾಶಿವರಾತ್ರಿಯ ಕಾಲದಲ್ಲಿ ಒಂದು ವಾರದ ವರೆಗೂ ವಿಜೃಂಭಣೆಯಿಂದ ಜಾತ್ರೆಯು ನೆರೆಯಲಾರಂಭಿಸಿತು. ಹೊಸಮಠ ಪಾಠಶಾಲೆ ಛತ್ರ ಭಾವಿಗಳು ಮೊದಲಾದುವು ವಿಪುಲವಾಗಿ ಕಟ್ಟಲ್ಪಟ್ಟವು. ಇಂಗ್ಲಿಷ ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಪಂಡಿತರಾಗಿಯೂ ಚಿಕ್ಕವಯಸ್ಸಿನವರಾಗಿಯೂ ಇರುವ ಶ್ರೀ ಮರುಲಾರಾಧ್ಯ ಸ್ವಾಮಿಗಳವರಿಗೆ ಉತ್ತರಾಧಿಕಾರವು ನಿರ್ಣಯಿಸಲ್ಪಟ್ಟಿತು. ಶ್ರೀ ಸಿದ್ಧಗಂಗಾ ಕ್ಷೇತ್ರ ವಿಷಯವನ್ನು ಸಂಪೂರ್ಣವಾಗಿ ಹೇಳಬೇಕಾದರೆ ಪ್ರತ್ಯೇಕವಾದ ಲೇಖನವೊಂದನ್ನೇ ಬರೆಯಬೇಕಾಗಿರುವುದರಿಂದ ಪ್ರಕೃತ ನಾವೀ ವಿಷಯವನ್ನು ವಿರಮಿಸಿ ಮುಖ್ಯ ವಿಷಯದ ಕಡೆಗೆ ಗಮನಿಸೋಣ.

**ಶಿವಯೋಗ ಸಿದ್ಧಿಃ—** ಸಿದ್ಧಗಂಗಾ ಕ್ಷೇತ್ರದ ಶ್ರೀಮದಟವೀಶ ಯೋಗೀಂದ್ರರನ್ನು ನಂಜುಂಡ ಸ್ವಾಮಿಗಳು ಭಕ್ತಿಯಿಂದ ಸೇವಿಸತೊಡಗಿದರು. ಇವರ ನಡೆ ನುಡಿಗಳು ಪರಿಶುದ್ಧವಾದವುಗಳಾದುದರಿಂದ ಗುರುಗಳಿಗೆ ಸಂಪೂರ್ಣ ಸಂಸ್ಕಾರ ಜೀವಿಯಾದೀ ಶಿಷ್ಯನ ಮೇಲೆ ಕೃಪೆ ಹುಟ್ಟಿತು. ನಿರ್ಮಲಾಂತಃಕರಣವುಳ್ಳ ಗುರುವೂ ನಿಶ್ಚಂಚಲಮತಿಯಾದ ಶಿಷ್ಯನೂ ಸೇರಿದೆಡೆಯಲ್ಲಿ ಮೋಕ್ಷವು ದೊರೆಯುವುದು ಅಸಾಧ್ಯವಲ್ಲ. ಮುಮುಕ್ಷುಗಳಾದ ನಂಜುಂಡ ಸ್ವಾಮಿಗಳು ಕೃತಾರ್ಥರಾದರು. ಶ್ರೀ ಗುರುವು ಸಂಪೂರ್ಣವಾಗಿ ಅನುಗ್ರಹಿಸಿದನು.

ಶ್ರೀ ನಂಜುಂಡ ಸ್ವಾಮಿಗಳಿಗೆ ಕವಿತೆಯು ನಿಸರ್ಗವಾದ ಗುಣ. ಇವರು ಒಳ್ಳೆಯ ಪಂಡಿತರೂ ರಸಿಕರೂ ಪರಿಶುದ್ಧ ಚರಿತರೂ ಆಗಿದ್ದುದರ ಜೊತೆಗೆ ಒಳ್ಳೆಯ ಕವಿಗಳೂ ಆಗಿದ್ದರು. ಇವರು ಅನೇಕ ಗ್ರಂಥಗಳನ್ನು ಬರೆದರು. ಚಿತ್ರಶಾಸ್ತ್ರದಲ್ಲಿಯೂ ಸಂಗೀತದಲ್ಲಿಯೂ ಇವ

ರಿಗೆ ವ್ಯುತ್ಪತ್ತಿಯಿತ್ತು. ಆದುದರಿಂದ ಹಲವು ಪೂಜಾರ್ಹವಾದ ಚಿತ್ರಪಟಗಳನ್ನೂ ಹಲವು ಶಿವಪರವಾದ ಹಾಡುಗಳನ್ನೂ ಮಾಡಿರುವರು.

**ಕಡೆಗಾಲಃ—** ಶ್ರೀಗಳು ಬಹುಕಾಲ ಗುರು ಸನ್ನಿಧಿಯಲ್ಲಿಯೇ ಇದ್ದರು. ಗುರುಗಳು ಲಿಂಗೈಕ್ಯರಾದ ಮೇಲೆ ಇವರು ಮತ್ತೆ ತಮ್ಮ ಹಿಂದಿನ ಸ್ಥಳವಾದ ಮತುಕೂರನ್ನು ಸೇರಿ ಅಲ್ಲಿನ ಪ್ರಾಚೀನ ಶಿವ ದೇವಾಲಯದಲ್ಲಿ ಇರತೊಡಗಿದರು.

ಮುಪ್ಪಿನ ಕಾಲದಲ್ಲಿ ಇವರನ್ನು ಹಲವು ಮಂದಿ ಭಕ್ತರೂ ಇವರ ಪೂರ್ವಾಶ್ರಮದ ಬಾಂಧವರೂ ಉಪಚರಿಸತೊಡಗಿದರು. ಇವರು ಸ್ವಲ್ಪ ಕಾಲ ಬೆಂಗಳೂರಿನಲ್ಲಿಯೂ ವಾಸವಾಗಿದ್ದರು. ಕಟ್ಟಕಡೆಗೆ ತಮ್ಮ ೯೬—೯೭ ನೇ ವಯಸ್ಸಿನಲ್ಲಿ ತುಮಕೂರಿಗೆ ಸುಮಾರು ೨೫ ಮೈಲಿ ಪೂರ್ವದಿಕ್ಕಿನಲ್ಲಿರುವ 'ಉಪ್ಪಾರ' ಎಂಬ ಹಳ್ಳಿಯಲ್ಲಿ ಶಿವಲಿಂಗೈಕ್ಯರಾದರು. ಈ ಮಹನೀಯರು ಪರಮ ವಿರಕ್ತ ಮೂರ್ತಿಗಳಾದುದರಿಂದ ಇವರ ಅಂತ್ಯವಿಧಿಯು ವೀರಶೈವ ವಿರಕ್ತಮೂರ್ತಿಗಳಿಗಾಗುವಂತೆ ಭಕ್ತ ಮಾಹೇಶ್ವರರುಗಳಿಂದ ನಡೆಸಲ್ಪಟ್ಟಿತು. ಇವರ ಗದ್ದುಗೆಯ ಮೇಲೆ ಈಗ ಮಂಟಪಾದಿಗಳನ್ನು ಕಟ್ಟಿ ಪೂಜಾದಿ ಕರ್ಮಗಳನ್ನು ಭಕ್ತಿಪೂರ್ವಕ ಈಗಲೂ ಮಾಡುತ್ತಿರುವರು.

ಶಿವಯೋಗತತ್ಪರದಿಂದ ಮಾತು ಮಾತಿಗೂ ಶಿವ ಶಿವ ಅನ್ನುತ್ತಿದ್ದ ಇವರನ್ನು ಜನರು ಶಿವಯೋಗಿಗಳೆಂದು ಕರೆದರು. ಇವರ ಭಾವ ಚಿತ್ರಗಳನ್ನು ಇಂದಿಗೂ ಹಲವರು ಶಿವಪೂಜಾಲಯದಲ್ಲಿಟ್ಟು ಪೂಜಿಸುತ್ತಿರುವರು.

ವಾಚಕ ಮಹಾಶಯರೇ, ಇದು ವರೆಗೆ ನಾವು ನಂಜುಂಡ ಶಿವಯೋಗಿಗಳ ಬಾಹ್ಯಾಂಗ ಚರಿತ್ರೆಯನ್ನು ಸಂಕ್ಷೇಪವಾಗಿ ತಿಳಿಸಿದೆವು. ಇನ್ನು ಈ ಮಹಾತ್ಮರ ಗುಣಗಳು ಶಕ್ತಿ ಸಾಮರ್ಥ್ಯಗಳು ಮೊದಲಾದ ಅಂತರಂಗಿಕ ವಿಷಯಗಳ ಕಡೆಗೆ ಕಣ್ಣು ಹಾಕೋಣ.

**ಕವಿತಾ ಶಕ್ತಿಃ—** ಇವರು ಹಲವು ಗ್ರಂಥಗಳನ್ನು ಬರೆದಿರುವರೆಂದು ಕಿರಿವದಂತಿಯುದೆ. ಆದರೆ ನಮಗೆ ಅವಾವೂ ಸಿಗುವಂತಿಲ್ಲ. ಅವರೇ ಪ್ರಕಟಿಸಿದ್ದ ಐದು ಗ್ರಂಥಗಳು ಮಾತ್ರ ನಮ್ಮ ಹಸ್ತಗತವಾ

ಗಿವೆ. ನಾವು ಅವುಗಳ ಸಹಾಯದಿಂದ ಇವರ ಕವಿತೆಯ ಸ್ವರೂಪ ಪರಿಚಯವನ್ನು ಮಾಡಿಕೊಳ್ಳಬೇಕಾಗಿರುವುದು.

೧. **ಮಾರ್ಕಾಂಡೇಯ ವಿಳಾಸಃ**— ಇದು ಯಕ್ಷಗಾನದ ಕಥೆ. ಇದರಲ್ಲಿ ಕಂದ, ವೃತ್ತ, ಆರ್ಯ, ಸೀಸಪದ್ಯ, ವಚನ, ನಾನಾ ಬಗೆಯ ಹಾಡುಗಳಿವೆ. ಕೀರ್ತನಗಾರರಿಗೆ ಈ ಗ್ರಂಥ ಬಹಳ ಉಪಯೋಗಕರ ವಾದುದು.

೨. **ಶ್ರೀ ಮುದಟವೀಶ್ವರ ಗುರು ಭಕ್ತಿಸಾರಃ**— ಇದು ಭಾಮಿನೀ ಷಟ್ಪದಿಯಲ್ಲಿ ಬರೆದಿರುವ ಗ್ರಂಥವು. ಕನ್ನಡ ಭಾಷೆಯಲ್ಲಿ ಬಹಳ ಪ್ರಚಾರದಲ್ಲಿರುವ ಶಿವಭಕ್ತಿಸಾರ, ಹರಿಭಕ್ತಿಸಾರದ ಮಾದರಿಯಲ್ಲಿ ಬರೆದಿರುವರು. ಸಿದ್ಧಗಂಗಾ ಕ್ಷೇತ್ರದ ಅಟವೀಂದ್ರ ಸ್ವಾಮಿಗಳ ಅಂಕಿತದಲ್ಲಿದೆ. ಪ್ರತಿ ಪದ್ಯದ ಕಡೆಯಲ್ಲಿಯೂ 'ಪಾಲಿಪುದೆಮ್ಮನಟವೀಶಾ' ಎಂಬ ವಾಕ್ಯವಿದೆ. ಕವಿಯು ತನ್ನ ಗುರುವಿನಲ್ಲಿದ್ದ ಭಕ್ತಿಯನ್ನು ಈ ಗ್ರಂಥದಲ್ಲಿ ಚೆನ್ನಾಗಿ ಹೊರಪಡಿಸಿರುವನು. ಈ ಗ್ರಂಥವು ಪಾರಾಯಣಕ್ಕೆ ಬಹಳ ಅನುಕೂಲ.

೩. **ಅಟವೀಶ್ವರ ಗೀತಾಮಂಜರಿಃ**— ಇದರಲ್ಲಿ ನಾನಾ ರಾಗದ ಹಾಡುಗಳಿವೆ. ಪ್ರತಿಯೊಂದು ವಚನದಲ್ಲಿಯೂ ಲೋಕ ನೀತಿಯೂ ವೈರಾಗ್ಯವೂ ಬೋಧೆಯಾಗುತ್ತಲಿವೆ. ಇದನ್ನು ಕವಿಯು ನಿಜಗುಣರ 'ಕೈವಲ್ಯ ಪದ್ಧತಿ' ಸರ್ಪಭೂಷಣರ 'ಕೈವಲ್ಯ ಕಲ್ಪವಲ್ಲರಿ' ಎಂಬ ಗ್ರಂಥಗಳ ಮಾದರಿಯಲ್ಲಿ ಬರೆದಿರುವಂತೆ ತೋರುತ್ತದೆ. ಈ ಹಾಡುಗಳನ್ನು ಎಷ್ಟೋ ಜನರು ಈಗಲೂ ಬಾಯಲ್ಲಿ ಕಲಿತುಕೊಂಡು ಹಾಡುತ್ತಿರುವರು.

೪. **ಸುರಾಭಾಂಡೇಶ್ವರಾಖ್ಯಾನಃ**— ಇದು ಸ್ಕಾಂದ ಪುರಾಣಾಂತರ್ಗತದ ಕಾಶಿಕಾಖಂಡದ ಕಥೆ. ಇದನ್ನು ಕವಿಯು ಯಕ್ಷಗಾನ ರೂಪದಲ್ಲಿ ಬರೆದಿರುವನು. ಮಧ್ಯೆ ಮಧ್ಯೆ ಲಕ್ಷಣಬದ್ಧವಾದ ಕಂದ, ವೃತ್ತಗಳಿವೆ. ಒಂದು ದಂಡಕವಿದೆ. ಇವರ ಕಾವ್ಯಗಳಲ್ಲಿ ಇದು ಶೃಂಗಾರರಸಕ್ಕೆ ಸ್ವಲ್ಪ ಪ್ರಾಶಸ್ತ್ಯ ಪಡೆದಿದೆ. ಇತರ ಗ್ರಂಥಗಳಿಗಿಂತ ಇದು ದೊಡ್ಡದು.

**೫. ಹಾಲಾಹಲ ಭಕ್ಷಣೆಯ ಕಥೆ:**— ಇದು ಶಿವನು ಸಮುದ್ರ ಮಥನ ಕಾಲದಲ್ಲಿ ಆವಿರ್ಭವಿಸಿದ ಮಹಾ ಕಾಲಕೂಟ ವಿಷವನ್ನು ಕಂಠದಲ್ಲಿ ಧರಿಸಿದ ಕಥೆ. ಇದೂ ಸಹ ಯಕ್ಷಗಾನ ರೂಪವಾಗಿದೆ.

ಈ ಗ್ರಂಥಗಳ ವಿಸ್ತಾರವಾದ ಪರಿಚಯವನ್ನೂ, ಇವರ ಕವಿತೆಯ ಕೆಲವು ಮಾದರಿಗಳನ್ನೂ ವಾಚಕರಿಗೆ ಮಾಡಿಕೊಡಬೇಕೆಂದು ನಮಗೂ ಬಹಳ ಕುತೂಹಲವಿದೆ. ಆದರೆ ಅದನ್ನೆಲ್ಲಾ ಇಲ್ಲಿ ಬರೆವುದಾದರೆ ಲೇಖನವು ಬಹು ದೊಡ್ಡದಾಗುವುದರಿಂದ ಅದಕ್ಕೆ ಬೇರೊಂದು ಬರಹವನ್ನೇ ಬರೆಯಬೇಕೆಂದು ನಮಗೆ ಬಲವಾದ ಆಶೆಯುಂಟು.

**೬. ಚಿತ್ರಕಲಾನೈಪುಣ್ಯ:**— ಶ್ರೀನಂಜುಂಡ ಶಿವಯೋಗಿಗಳಿಗೆ ಕವನ ಕಲೆಯಲ್ಲಿಯೇ ಅಲ್ಲದೆ ಚಿತ್ರಕಲೆಯಲ್ಲಿಯೂ ಉತ್ತಮತೆರದ ನೈಪುಣ್ಯವಿತ್ತು. ಶ್ರೀಗಳು ಬರೆದಿರುವ ಹಲವು ಚಿತ್ರಗಳು ಈಗಲೂ ಹಲವು ಶ್ರೀಮಂತರ ಮನೆಯನ್ನು ಅಲಂಕರಿಸಿವೆ. ಈ ಚಿತ್ರಗಳಲ್ಲಿ ಕೆಲವು ರವಿವರ್ಮನ ಕಲಾನೈಪುಣ್ಯವನ್ನೂ ಮರೆಸುವಂತಿರುವುವೆಂದು ಹೇಳಿದರೆ ಪಾಠಕರು ಆಶ್ಚರ್ಯ ಪಡಬಹುದು.

ತುಮಕೂರಿನಲ್ಲಿ ಶ್ರೀ ಹಾಲಪ್ಪನವರ ಕರಿಬಸಪ್ಪನವರೆಂಬ ಓರ್ವ ವೀರಶೈವ ಸದ್ಗೃಹಸ್ಥರ ಮನೆಯಲ್ಲಿ ಶ್ರೀಗಳು ಬರೆದ ಕೆಳಗೆ ಸೂಚಿಸಿರುವ ಚಿತ್ರಪಟಗಳು ಈಗಲೂ ಇವೆ.

೧. ಸರ್ವ ಸಿದ್ಧಿಗಣಪತಿ.
೨. ಚಂದ್ರಶೇಖರಮೂರ್ತಿ.
೩. ಗಿರಿಜಾಕಲ್ಯಾಣ ಮಹೋತ್ಸವ.
೪. ಉಮಾಮಹೇಶ್ವರಮೂರ್ತಿ.
೫. ನಂದಿವಾಹನಮೂರ್ತಿ.
೬. ಅಂಧಕಾಸುರ ಸಂಹಾರ.

ಮೇಲಿನ ಚಿತ್ರಗಳಲ್ಲಿ ನಂದಿವಾಹನಮೂರ್ತಿಯು ಬಹು ಸುಂದರವಾದ ಚಿತ್ರವಾಗಿದೆ. ಇದರಲ್ಲಿ ನಂದಿಯು ಆದೊಂದು ವೈಖರಿಯಲ್ಲಿ ನಿಂತಿರುವದು. ಇದರ ಮೇಲೆ ಪಾರ್ವತೀ ಪರಮೇಶ್ವರರು ಕುಳಿತಿರುವರು. ಈ ವಿಧದ ಚಿತ್ರಗಳು ಈಗ ಪ್ರಚಾರದಲ್ಲಿಲ್ಲ.

ಶ್ರೀಗಳ ಚಿತ್ರಕಲಾನೈಪುಣ್ಯವು ರವಿವರ್ಮನನ್ನೂ ಕೆಲವೆಡೆಯಲ್ಲಿ ಹೇಗೆ ಮೀರಿರುವುದು? ಇಂತಹ ಅದ್ಭುತ ಶಕ್ತಿಯುಕ್ತರೂ ನಮ್ಮ ಸಮಾಜದಲ್ಲಿದ್ದರೆ? ಎಂದು ಕೆಲವರು ತರ್ಕಿಸಬಹುದು. ಇದು ಶ್ರೀಗಳ ಚಿತ್ರಗಳನ್ನು ಪ್ರತ್ಯಕ್ಷತಃ ನೋಡುವವರೆಗೂ ಜಿಜ್ಞಾಸುಗಳ ಮನಸ್ಸಿಗೆ ನೆಚ್ಚಿಗೆಯಾಗುವುದಿಲ್ಲ. ಆದರೂ ನಾವು ಅವರೀರ್ವರ ಚಿತ್ರಗಳಲ್ಲಿನ ಒಂದು ದೃಶ್ಯವನ್ನು ಮಾತ್ರ ಇಲ್ಲಿ ವಿವರಿಸುವೆವು.

ರವಿವರ್ಮನು ಬರೆದಿರುವ ಪರಮೇಶ್ವರನ ಪಠವನ್ನು ನಾಗರಿಕ ರೆಲ್ಲರೂ ನೋಡಿರುವರಷ್ಟೆ? ಆದರೆ ಇದರಲ್ಲಿ ಕುಂದೇನಿದೆಯೆಂಬುದು ಬಹು ಜನರಿಗೆ ಹೊಳೆಯುವುದಿಲ್ಲ. ರವಿವರ್ಮನು ಶಂಕರನಿಗೆ ಯಾವ ನಾದರೊಬ್ಬ ಕ್ರೂರಿಯಾದ ಪಾಳೆಯಗಾರನ ಮುಖದ ಗಿರಿಜಾ ಮೀಸೆ ಗಳಂತಹ ಮೀಸೆಗಳನ್ನು ಹಚ್ಚಿರುವನು. ದೇವಾದಿದೇವನ ಸುಂದರ ಮಂದಸ್ಮಿತ ಮುಖಾರವಿಂದದಲ್ಲಿ ಈ ಗಿರಿಜಾ ಮೀಸೆಗಳಿರುವುದನ್ನು ಯಾವ ಕಲಾವಿದನೂ ಒಪ್ಪಲಾರನು. ಈ ಅರ್ಥವನ್ನು ತಿಳಿದ ನಂಜುಂಡ ಯೋಗಿಗಳು ತಮ್ಮ ನಂದಿವಾಹನ ಮೂರ್ತಿಯ ಚಿತ್ರದಲ್ಲಿ ಶಿವನ ಮುಖವನ್ನು ಅತ್ಯಂತ ತೇಜೋನ್ವಿತವೂ ಪ್ರಫುಲ್ಲಿತವೂ ಆಗಿರುವಂತೆ ಚಿತ್ರಿಸಿ ತಮ್ಮ ಕಲಾವಿದತ್ವವನ್ನು ತೋರ್ಪಡಿಸಿರುವರು. ನಂದಿವಾಹನನ ಮುಖದಲ್ಲಿ ಮೀಸೆಯ ಗಲಾಟೆಯೇ ಇಲ್ಲ. ಈ ಮೀಸೆಯ ಗೋಜಿಗೆ ಹೋಗದಿರುವುದೇ ಶಿವನ ಮುಖಸೌಂದರ್ಯವನ್ನು ಹೆಚ್ಚಿಸಿರುವುದು.

ಶ್ರೀಗಳು ಬರೆದಿದ್ದ 'ಜೀವನ್ಮುಕ್ತಿವಿವೇಕ' ಎಂಬ ಚಿತ್ರಪಠವೊಂದು ಬಹು ದಿನದ ವರೆಗೂ ಶ್ರೀ ಅಟವೀಸ್ವಾಮಿ ಗದ್ದುಗೆಯಲ್ಲಿದ್ದುದನ್ನು ಸಿದ್ಧಗಂಗಾಕ್ಷೇತ್ರಕ್ಕೆ ಹೋದವರೆಲ್ಲರೂ ಬಲ್ಲರು. ಈಚೆಗೆ ಅದು ಜೀರ್ಣಿಸಿ ಹೋಯಿತು. ಒಟ್ಟಿನಲ್ಲಿ ಹೇಳುವುದಾದರೆ ಶ್ರೀಗಳವರು ಚಿತ್ರಕಲೆಯ ಲ್ಲಿಯೂ ನೈಪುಣ್ಯವನ್ನು ಹೊಂದಿ ಕಲಾಪ್ರಪಂಚಕ್ಕೂ ಸೇವೆ ಮಾಡಿ ರುವರು.

**ಶ್ರೀಗಳ ರೂಪು ರೇಖೆ**:— ನಂಜುಂಡ ಶಿವಯೋಗಿಗಳ ವಿಷ ಯವಾದ ಈ ಲೇಖನದಲ್ಲಿ ಅವರ ಆಕಾರ ಪರಿಚಯವೂ ಅವಶ್ಯಕ. ಶ್ರೀಗಳು ಸುಮಾರು ೫ ಅಡಿ ಎತ್ತರವುಳ್ಳವರಾಗಿದ್ದರು. ದೇಹವು ಅಷ್ಟು ತೆಳುವಾದುದೂ ಅಲ್ಲ. ಸ್ಥೂಲವೂ ಅಲ್ಲ. ಮುಖಮುದ್ರೆಯು ಸದಾ

ಶಾಂತಾಕಾರವಾಗಿದ್ದಿತು. ನೇತ್ರಗಳು ಹೊಳಪಾಗಿ ಕರುಣಾರಸದ ಪಾತ್ರೆಗಳಂತಿದ್ದುವು. ಶ್ರೀಗಳು ವಾರ್ಧಿಕ್ಯದಲ್ಲಿ ಜಟಾಧಾರಿಗಳಾಗಿರುತ್ತಲಿದ್ದರು. ಕಾವಿಯ ಕಫನಿಯನ್ನು ಧರಿಸುತ್ತಿದ್ದರು. ಕೊರಳಿನಲ್ಲಿ ರುದ್ರಾಕ್ಷಮಾಲೆಯು ಸದಾ ಅಲಂಕೃತವಾಗಿರುತ್ತಿದ್ದಿತು. ಹಣೆಯು ವಿಶಾಲವೂ ಮಹಾಪುರುಷ ಲಕ್ಷಣದ್ಯೋತಕವೂ ಆಗಿದ್ದಿತು. ಶ್ರೀಗಳು ಬಹು ಶ್ರದ್ಧಾಳುಗಳೂ ಶುಚಿರ್ಭೂತರೂ ವೃದ್ಧವಾಕ್ಯಶ್ರವರೂ ಆಗಿರುತ್ತಿದ್ದರು. ಇವರು ತಮ್ಮ ಜೀವಮಾನದಲ್ಲಿ ಬಹುಕಾಲವನ್ನು ಗ್ರಂಥಶ್ರವಣ, ಕಾವ್ಯನಿರ್ಮಾಣ, ಚಿತ್ರಪಠಲೇಖನ, ಪಾಠಬೋಧನ, ಯೋಗಾಭ್ಯಾಸ ವಿದ್ವತ್ಸಂಭಾಷಣಾದಿಗಳಲ್ಲಿಯೇ ಕಳೆದರು.

**ಗುಣ ಶೀಲಗಳು**:— ನಂಜುಂಡ ಸ್ವಾಮಿಗಳು ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳ ನಿಜವಾದ ಅರ್ಥವನ್ನು ತಿಳಿದು ಅಕ್ಷರಶಃ ಅವನ್ನು ತಮ್ಮ ಕೃತಿಯಲ್ಲಿ ತೋರಿಸುತ್ತಿದ್ದರು. ಶಿವಲಿಂಗ ಪೂಜೆಯಲ್ಲಿ ಬಹು ನಿಷ್ಠರು. ಶಿವಭಕ್ತರೆಂದರೆ ಇವರಿಗೆ ಪಂಚಪ್ರಾಣ. ವೀರಶೈವ ಕಾವ್ಯಗಳೂ ಧರ್ಮಗ್ರಂಥಗಳೂ ಇವರಿಗೆ ಮುಖೋದ್ಗತವಾಗಿದ್ದುವು. ಇವರ ಪ್ರತಿಯೊಂದು ಮಾತೂ ಶಿವಾನುಭವ ಮಯವಾಗಿದ್ದವು. ತುಮಕೂರು ಹುಲ್ಕುಂಟೆಮಠದ ವೇ॥ ಪಂಡಿತ ಪರಮೇಶ್ವರಯ್ಯನವರು (ಇವರು ಈಗ ಕೈಲಾಸ ವಾಸಿಗಳಾಗಿರುವರು.) ಬೆಂಗಳೂರು. ವೇ॥ ಸಂ. ಶಿವಪ್ಪ ಶಾಸ್ತ್ರಿಗಳು (ಇವರೂ ಲಿಂಗೈಕ್ಯರಾದರು.) ಮೈಸೂರು. ಆಸ್ಥಾನಮಹಾ ವಿದ್ವಾನ ಕರ್ಣಾಟಕ ಭಾಷಾರತ್ನ ವೇ॥ ಪಿ. ಆರ್. ಕರಿಬಸವ ಶಾಸ್ತ್ರಿಗಳು ಮೊದಲಾದ ವೀರಶೈವ ಪಂಡಿತರಲ್ಲಿ ಇವರಿಗೆ ಒಳ್ಳೆಯ ಸ್ನೇಹವುಂಟಾಗಿತ್ತು, ಶ್ರೀ ಅಟವೀ ಸ್ವಾಮಿಗಳು ಫಲಾಹಾರ ಸ್ವಾಮಿಗಳು. ಮೊದಲಾದ ಶಿವಯೋಗಿಗಳ ಕೃಪೆಗೆ ಇವರು ಸಂಪೂರ್ಣ ಪಾತ್ರರಾಗಿದ್ದು ತಾವೂ ಶಿವಯೋಗಿಗಳೆಂದು ವಿಖ್ಯಾತರಾದರು. ಶ್ರೀಗಳ ಕೈಬರಹದ ಪ್ರತಿಯೊಂದು ಸಿಕ್ಕಿದೆ. ಇವರ ಅಕ್ಷರಗಳು ಬಹು ಮುದ್ದಾಗಿಯೂ, ಶುದ್ಧವಾಗಿಯೂ ಇವೆ. ಅಕ್ಷರ ಪಂಕ್ತಿಯು ಸ್ವಲ್ಪವೂ ಹೆಚ್ಚು ಕಡಿಮೆಯಾಗುವುದಿಲ್ಲ.

ಒಂದಾನೊಂದು ದಿನ ಈ ಮಹಾತ್ಮರ ದರ್ಶನ ಸಂಭಾಷಣಗಳನ್ನು ಹೊಂದುವ ಭಾಗ್ಯವು ಈ ಲೇಖಕನಿಗೆ ಕಾಲು ಗಂಟೆಗಳ ಕಾಲ

ಮಾತ್ರ ಲಭಿಸಿತ್ತು. ಆದರೂ ಇನ್ನು ಮುಂದೆ ಅಂತಹ ಸತ್ಕೃತಿಗಳ ಸನ್ನಿಧಿಯು ಲಭಿಸುವುದೆಂಬುದರಲ್ಲಿ ಲೇಖಕನಿಗೆ ಸಂಪೂರ್ಣ ಭರವಸೆಯಿಲ್ಲ. ಶ್ರೀಗಳಲ್ಲಿ ಸಂಭಾಷಿಸಿದ ಆ ಕಾಲವನ್ನು ತನ್ನ ಆಯುಷಿನಲ್ಲಿ ಬಲು ಮಹತ್ವವಾದುದೆಂಬದನ್ನು ಈ ಬರಹಗಾರನು ಜನ್ಮಾಪಿ ಮರೆಯನು. ಮೇಲಿನದು ಲೇಖಕನ ಸ್ವಂತಾಭಿಪ್ರಾಯವಾಯ್ತು. ಇದಕ್ಕಿಂತಲೂ ಮಹತ್ವವಾದ ಮತ್ತೊಂದು ಸಂಗತಿಯನ್ನು ವಾಚಕರು ಗಮನಿಸಬಹುದು.

ಮೈಸೂರು ಮಹಾರಾಜರವರ ಕಾಲೇಜಿನ ನಿವೃತ್ತ ಪ್ರಥಮ ಪಂಡಿತರೂ, ಜಗದ್ವಿಖ್ಯಾತರೂ, ವೀರಶೈವ ಧರ್ಮ ನಿಷ್ಣಾತರೂ, ಕನ್ನಡ ಸಂಸ್ಕೃತೋಭಯ ಭಾಷಾ ಪಂಡಿತರೂ ೪೦-೫೦ ಗ್ರಂಥಗಳಿಗಿಂತ ಮಿಗಿಲಾಗಿ ಪ್ರಚಾರ ಮಾಡಿ ಸಾಹಿತ್ಯಕ್ಕೂ ವೀರಶೈವ ಸಮಾಜಕ್ಕೂ ಮಹೋಪಕಾರ ಮಾಡಿರುವವರೂ ಜ್ಞಾನವೃದ್ಧವಯೋವೃದ್ಧರೂ ಎನಿಸಿರುವ ಆಸ್ಥಾನ ಮಹಾ ವಿದ್ವಾನ ಕರ್ಣಾಟಕ ಭಾಷಾರತ್ನ ವೇ|| ಪಿ. ಆರ್. ಕರಿಬಸವ ಶಾಸ್ತ್ರಿಗಳವರು ನಮ್ಮ ಲೇಖನಕ್ಕೆ ವಿಷಯರಾದ ನಂಜುಂಡ ಶಿವಯೋಗಿಗಳ ದರ್ಶನವನ್ನು ಬೆಂಗಳೂರಿನಲ್ಲಿ ಮಾಡಿಕೊಂಡು ಅವರ ವಿಷಯವನ್ನೆಲ್ಲಾ ಕೂಲಂಕುಶವಾಗಿ ತಿಳಿದು ಅವರ ಗ್ರಂಥಗಳನ್ನು ಓದಿದ ಮೇಲೆ ಒಂದಾನೊಂದು ಸಮಯದಲ್ಲಿ ಈ ಲೇಖಕನ ಮುಖತಃ ಮುಂದೆ ಹೇಳುವಂತೆ ಅಭಿಪ್ರಾಯ ಪಟ್ಟಿರುವರು. "ನಾನು ಶ್ರೀ ನಂಜುಂಡ ಶಿವಯೋಗಿಗಳನ್ನು ಇಚ್ಛಾಪೂರ್ವಕ ದರ್ಶನ ಮಾಡಿಕೊಂಡೆನು ಸ್ವಾಮಿಗಳ ಗ್ರಂಥಗಳನ್ನೂ ಓದಿದೆನು. ಸ್ವಾಮಿಗಳು ಸುಸಂಸ್ಕೃತವಾದ ಅಂತಃಕರಣವುಳ್ಳವರು ಇಂತಹ ಶುದ್ಧ ಚರಿತ್ರರು ನಮ್ಮ ಸಮಾಜದಲ್ಲಿ ಇತ್ತೀಚೆಗೆ ಅಪರೂಪ. ಇವರ ಕವಿತಾಶಕ್ತಿಯು ಅಸದೃಶವಾದುದು. ನನಗೆ ತಿಳಿದಮಟ್ಟಿಗೆ ಕೈ|| ಅಭಿನವ ಕಾಲಿದಾಸ ಬಸವಪ್ಪಶಾಸ್ತ್ರಿಗಳಿಗೆ ಸಮಾನವಾದ ಕವಿತಾಶಕ್ತಿಯುಳ್ಳವರು ಇತ್ತೀಚೆಗೆ ಇವರೊಬ್ಬರೇ. ಇವರು ಯಾರಾದರೊಬ್ಬ ರಾಜಾಶ್ರಯವುಳ್ಳವರಾಗಿದ್ದರೆ ಲೋಕವಿಖ್ಯಾತ ಕವಿಗಳೆಂದು ಹೇಳಿಸಿಕೊಳ್ಳುತ್ತಿದ್ದರು. ನನ್ನನ್ನು ಅವರು ಬಹಳ ಗೌರವವಾಗಿಯೂ ಪ್ರೀತಿಯಿಂದಲೂ ಕಂಡರು. ನನಗೆ ಆ ಸ್ವಾಮಿಗಳ ವಿಷಯದಲ್ಲಿ ಅತ್ಯಂತ ಪ್ರೇಮವಿದೆ."

**ಸಾರಾಂಶಃ**— ಶ್ರೀಗಳ ಕವನಶಕ್ತಿಯ ವಿಷಯವಾಗಿ ಮತ್ತೊಂದು ಲೇಖನವನ್ನೇ ಬರೆಯಬೇಕಾಗಿರುವುದು. ಮಹಾತ್ಮರೂ, ಕಲಾವಿದರೂ,

ಮಹಾಕವಿಗಳೂ ಆದಿವರ ಜನ್ಮದಿಂದ ವೀರಶೈವ ಸಮಾಜಕ್ಕೆ ಗೌರವ ಬಂದಂತಾಯ್ತು. ತಾವೂ ಕೃತಾರ್ಥರಾದುದಲ್ಲದೆ ಶ್ರೀಗಳು ತಾವು ಹುಟ್ಟಿದ ದೇಶಭಾಷೆಗಳಿಗೂ ಸಮಾಜಕ್ಕೂ ಯಥಾಮತಿ ಸೇವೆ ಮಾಡಿದರು. ಮತ್ತೊಬ್ಬರಿಗೆ ಆದರ್ಶಭೂತವಾದ ನಡೆನುಡಿಯುಳ್ಳವರಾಗಿದ್ದು ತಮ್ಮ ಜೀವನವನ್ನು ಕೀರ್ತಿಶೇಷ ಮಾಡಿದರು. ಇಂತಹ ಮಹಾತ್ಮರ ಸ್ಮರಣೆಯು ಪುಣ್ಯಪ್ರದವೆಂಬುದನ್ನು ಯಾರೂ ಅಲ್ಲವೆನ್ನರು.

**ಶಿವಂಭೂಯಾತ್.**



# ಭಕ್ತಿಯೋಗದಿಂದ ಮೋಕ್ಷಸಾಧನೆ.

(ಲೇಖಕ:— ಮಡಿವಾಳಪ್ಪ ಸಾಸನೂರು ಕಲಕೇರಿ ತಾ॥ ಸಿಂದಗಿ)



ಸಕಲ ವಿಶ್ವದ ಕರ್ತನೂ, ಚಾಲಕನೂ ಆದೊಬ್ಬ ಈಶ್ವರನ ವಿಷಯಕ ಪ್ರೀತಿಯಿಂದಲೂ, ಆತನ ಅರ್ಚನೆಯಿಂದಲೂ ಸರ್ವ ಧರ್ಮಗಳ ಅಂತಿಮಧ್ಯೇಯವನ್ನು ಮಾನವನು ಪಡೆಯಬಲ್ಲನೆಂದು ಭಕ್ತಿಯೋಗವು ಹೇಳುತ್ತದೆ. ಯೋಗದ ಉಳಿದ ಶಾಖೆಗಳಿಂದ ನಾವು ಮುಟ್ಟಬಹುದಾದ ಗುರಿಯನ್ನೇ ಇದರಿಂದಲಾದಗೂ ಮುಟ್ಟುವೆವು. ಆದರೆ ಇದು ಪ್ರೇಮಮಯ ಭಕ್ತಿಮಯರಾದವರಿಗೆ ಮಾತ್ರ ಯೋಗ್ಯವಾದದ್ದು. ಮನುಷ್ಯರು ತಮ್ಮ ದುರ್ಬಲತೆಗಳನ್ನು ಅರಿತು ಬಹಿಃಸಹಾಯವನ್ನಪೇಕ್ಷಿಸುವ ಪರಮಾತ್ಮನಲ್ಲಿ ಆಶ್ರಯವನ್ನು ಬಯಸಿ, ತಮ್ಮ ಜೀವನಕ್ಕೊಳಪಟ್ಟ ನೈತಿಕ ಆಧ್ಯಾತ್ಮಿಕ ನಿಯಮಗಳ ಅರಿವು ಇಲ್ಲದ್ದರಿಂದುಂಟಾದ ಪಾಪಕೃತ್ಯಗಳನ್ನು ಕ್ಷಮಿಸಲೋಸುಗ ಅವನನ್ನು ಪ್ರಾರ್ಥಿಸುವ ಭಕ್ತರಿಗೋಸುಗ ಈ ಯೋಗವಿರುತ್ತದೆ. ಕ್ರಿಸ್ತಧರ್ಮ, ಯಹುದೀಧರ್ಮ, ಮಹಮ್ಮದೀಯಧರ್ಮ ಮೊದಲಾದ ವ್ಯಕ್ತಿ ಈಶ್ವರನ ಪೂಜೆಯನ್ನು ಬೋಧಿಸುವ ಎಲ್ಲ ದ್ವೈತಧರ್ಮಗಳೂ ತಿಳಿಯದೆ ಅಥವಾ ತಿಳಿದು ಭಕ್ತಿಯೋಗವನ್ನೇ ಹೇಳಿ ಈ ಹಾದಿಗುಂಟವಾಗಿಯೇ ಅದರ ಅನುಯಾಯಿಗಳನ್ನು ಕರೆದೊಯ್ಯುತ್ತವೆ.

ಭಕ್ತಿಯೋಗದೊಳಗಣ ಯೋಗದ ಅರ್ಥವು ಆತ್ಮ ಪರಮಾತ್ಮರ ಸಮರಸವಂದಾಗುತ್ತದೆ. ಆದ್ದರಿಂದ ಭಕ್ತಿಯೋಗವು ಪರಮಾತ್ಮನೊಡನೆ ಆತ್ಮನ ಐಕ್ಯತೆಯನ್ನು ತಂದುಕೊಡುವ ಬಗೆಯನ್ನು ಹೇಳುವದು. ಯಾವ ರೀತಿಯಿಂದ ಮುಂದುವರಿದರೆ ಈ ತರದ ಐಕ್ಯವುಂಟಾಗುವದೆಂಬದನ್ನು ಅದು ತೋರಿಸಿ ಕೊಡುತ್ತದೆ. ಮಾನವೀ ಹೃದಯದ ಸಾಧಾರಣ ಭಾವನೆಗಳು ಸಹ ಈಶ್ವರನೆಡೆಗೆ ತಿರುಗಿಸಿದ್ದಾದರೆ ಪರಮಾತ್ಮನೊಡನೆ ಆತ್ಮನ ಏಕತೆಯು ಹೇಗೆ ಸಂಭವಿಸುವದೆಂಬದನ್ನಾದರೂ ಅದು ತಿಳಿಸುತ್ತದೆ.

ಇಚ್ಛೆ, ವಿಕಾರ, ಪ್ರೀತಿ, ದ್ವೇಷ, ಗರ್ವ, ಸಿಟ್ಟು ಮೊದಲಾದವುಗಳು ಹೆಚ್ಚಳವನ್ನು ಹೊಂದುವ ಮೊದಲು ನಿಗ್ರಹಿಸಲ್ಪಡಬೇಕೆಂದು ರಾಜಯೋಗವುಹೇಳುತ್ತದೆ. ರಾಜಯೋಗಿಯಾಗುವವನು ಮೊದಲು ತನ್ನ ಮನಸ್ಸನ್ನು ಯಾವಾಗಲೂ ತನ್ನ ಅಂಕೆಯಲ್ಲಿಟ್ಟುಕೊಳ್ಳಬೇಕಲ್ಲದೆ ಎಂಟು ವಿಧವಾದ ಯೋಗದ ಮೆಟ್ಟಲುಗಳನ್ನವನು ಅನಿವಾರ್ಯವಾಗಿ ಮಾಡಲೇಬೇಕಾಗುವದು. ಆದರೆ ಭಕ್ತಿಯೋಗದಲ್ಲಿ ಶಿಷ್ಟವಾಗಲಿ, ದುಷ್ಟವಾಗಲಿ ಆದ ಭಾವನೆಗಳೆಲ್ಲವೂ ಈಶ್ವರನ ಕಡೆಗೆ ತಿರುಗಿಸಲ್ಪಡಬಲ್ಲವೆಂಬದನ್ನು ಕಲಿಯುತ್ತೇವೆ. ಆ ಮೇಲೆ ಅವು ಆತ್ಮನನ್ನು ಜಗತ್ತಿಗೂ ಪ್ರಾಪಂಚಿಕ ಆಸಕ್ತಿಗೂ ಬದ್ಧನನ್ನಾಗಿ ಮಾಡದೆ ಪರಮಾತ್ಮಜ್ಞಾನವನ್ನು ಪಡೆಯುವ ಸಾಧನೆಗಳಾಗುತ್ತವೆ. ಮತ್ತು ಸ್ವಾರ್ಥತೆ, ದುಷ್ಟತೆಗಳಿಂದ ಪೂರ್ಣವಾದ ಬಿಡುಗಡೆಯನ್ನು ನಾವು ಪಡೆಯುವೆವು.

ಭಕ್ತಿಯೋಗವನ್ನಾಚರಿಸುವವನು ಶಕ್ಯವಿದ್ದಷ್ಟು ದೇವರು ತನಗೆ ಅತ್ಯಂತ ನಿಕಟವಾಗಿ ಸಂಬಂಧಿಸಿದ್ದಾನೆಂದೂ, ಅವನು ವಿಶ್ವದ ಒಡೆಯನಿದ್ದದ್ದಲ್ಲದೆ, ತಂದೆ, ತಾಯಿ, ಸಹೋದರ, ಗೆಳೆಯ, ಅಥವಾ ಮಗನಂತೆ ಯಾದರೂ ಇರುವನೆಂದು ಅವನನ್ನು ಭಕ್ತನು ಭಾವಿಸಬೇಕು. ಐಶ್ವರಿಕ ಪ್ರೀತಿ ಮದಮತ್ತನಾದ ಭಕ್ತನು ಗಂಡಹೆಂಡಿರ ಭಾವದ ಪ್ರೇಮವನ್ನು ಸಹ ತನ್ನಲ್ಲಿ ಮತ್ತು ಈಶ್ವರನಲ್ಲಿ ಬೆಳಿಸಬಹುದು. ಈ ತರದ ಭಾವವುಳ್ಳ ವಚನಗಳು ವಚನಶಾಸ್ತ್ರದಲ್ಲಿ ಹೇರಳವಾಗಿವೆ. ಭಕ್ತನ ಸಕಲ ಹೃದಯ ಪ್ರವಾಹವು ದಾರಿಯಲ್ಲಿಯ ಯಾವ ಎಡರುಗಳನ್ನು ಲೆಕ್ಕಿಸದೆ ಈಶ್ವರನೆಂಬ ಸಮುದ್ರದ ಕಡೆಗೆ ಭರದಿಂದ ಪ್ರವಹಿಸಹತ್ತಿದಾಗ ಜಗತ್ತಿನಲ್ಲಿಯ ಮತ್ತಿನ್ನಾವದೂ ಅವನನ್ನು ಜಗ್ಗುವದಿಲ್ಲ. ಬೇರಿನ್ನಾವ ವಿಚಾರಗಳೂ ಅವನ ಮನಸ್ಸಿನಲ್ಲಿ ಬರುವದಿಲ್ಲ. ಮತ್ತು ತನ್ನ ಸರ್ವಜ್ಞ ಸರ್ವಾಂತರ್ಯಾಮಿ ಪರಮಾತ್ಮನ ಹೊರತು ಮತ್ತೊಂದು ಅವನ ಕಣ್ಣಿಗೆ ತೋರುವದಿಲ್ಲ. ತನ್ನನ್ನು ಸಂಪೂರ್ಣವಾಗಿ ಪರಮಾತ್ಮನ ಅಡಿಗಳಿಗೊಪ್ಪಿಸಿ ತನ್ನ ಇಚ್ಛೆಯನ್ನು ಆ ಪರಮಾತ್ಮನ ಇಚ್ಛಾಧೀನವನ್ನಾಗಿ ಮಾಡುವನು. ಅವನು ಕೆಲಸ ಮಾಡಿದರೂ ಫಲಾಶೆಯನ್ನಿಡುವದಿಲ್ಲ. ಶಾರೀರಿಕ, ಮಾನಸಿಕ ಕರ್ಮಗಳೆಲ್ಲವನ್ನೂ ತನ್ನ ಪ್ರಿಯ ಈಶ್ವರನ ಪ್ರಣಯನಕ್ಕಾಗಿಯೇ ಮಾಡುತ್ತಾನೆ. ಪ್ರೀತಿಯೇ ಅವನನ್ನು ಕೆಲಸಕ್ಕೆ ನೂಕುವ ಪ್ರೇರಣೆಯು. ಆದರಿಂದ ಸ್ವಾರ್ಥಶೃಂಖಲೆಯನ್ನು ಹರಿ

ದೊಗೆದು ಕರ್ಮಬಂಧವನ್ನು ಬಿಸಾಟಿ ಮುಕ್ತನಾಗುವನು. ಹೀಗೆ ನಿಜವಾದ ಭಕ್ತಿಯೋಗಿಯು ಪರಮಾತ್ಮನಲ್ಲಿಯೇ ಲೀನನಾಗಿದ್ದು 'ನಾನು' 'ನನಗೆ' 'ನನ್ನ' ಎಂಬ ಭಾವಗಳನ್ನು ಮರೆತು 'ನೀನು' 'ನಿನ್ನನ್ನು' 'ನಿನ್ನ' ಎಂಬ ಭಾವಗಳಿಗೆಡೆಗೊಡುತ್ತಾನೆ.

ಭಕ್ತನು ತನ್ನ ಭಕ್ತಿಗೆ ವಿಷಯನಾದ ಈಶ್ವರನೊಡನೆ ತನ್ನ ಸಂಬಂಧವನ್ನು ಮರೆಯುವದಿಲ್ಲ. ಅವನ ಮನಸ್ಸು ಏಕಾಗ್ರವಾಗಿರುತ್ತದಾದ ಕಾರಣ ಅದು ಸಹಜವಾಗಿಯೇ ಧ್ಯಾನಾಸಕ್ತವಾಗುವದು. ನಿಜವಾದ ಭಕ್ತಿಯಿಂದ ಅವಿರಳವಾದ ಧ್ಯಾನವು ಲಾಭವಾಗುತ್ತದೆ. ಆ ಮೇಲೆ ಸಮಾಧಿಯಲ್ಲಿ ಅವನ ಆತ್ಮವು ಲೀನವಾಗುತ್ತದೆ. ಆಗ ಅವನಿಗೆ ಪರಮಾತ್ಮನ ಅರಿವಾಗಿ ಮತ್ತೊಂದಾಗ ವಿಚಾರ ಬಾಧೆಗೊಳಗಾಗದೆ ಈಶ್ವರನೊಡನೆ ಸಂಭಾಷಿಸುತ್ತಾನೆ. ಇಂದ್ರಿಯ ಶಕ್ತಿಗಳಿಗೆ ಲಕ್ಷ್ಯಗೊಡದೆ ಐಶ್ವರಿಕ ಸೃಷ್ಟಿಯಲ್ಲಿ ಲೋಲಾಡಹತ್ತುವನು. ಅವನು ದೃಷ್ಟಿಹಾಕಿದೆಡೆಯಲ್ಲೆಲ್ಲಿಯೂ ಸರ್ವವ್ಯಾಪಿ ಪರಮಾತ್ಮನ ಅಸ್ತಿತ್ವವನ್ನು ಕಂಡುಕೊಳ್ಳುತ್ತಾನೆ. ತನ್ನ ಜೀವಿತದ ಪ್ರತಿಕ್ಷಣದಲ್ಲಿ ಅನಿವಾರ ಸುಖ ಶಾಂತಿ ಲಾಭವನ್ನು ಪಡೆಯುತ್ತಾನೆ. ಆದಕಾರಣದಿಂದಲೇ ಭಕ್ತಿಯೋಗವು ಬಹ ಸುಲಭವಾಗಿದೆಯೆಂದೆಣಿಸಲ್ಪಡುತ್ತದೆ. ಎಷ್ಟೋ ವರ್ಷ ಸಾಧನೆ ಮಾಡಿದ ತರುವಾಯ ರಾಜಯೋಗಿಗೆ ಸಿಗುವಂಥ ಪದವು ಭಕ್ತನಿಂದ ಅತಿಶಯ ಭಕ್ತಿ ಪ್ರೇಮಗಳಿಂದ ಸ್ವಲ್ಪ ವೇಳೆಯಲ್ಲಿಯೇ ಸಾಧಿಸಲ್ಪಡುತ್ತದೆ. ಕರ್ಮಯೋಗಿಗೆ ಕಠಿಣವೆಂದು ತೋರುವ ಈ ಸ್ಥಾನವು ಭಕ್ತನಿಗೆ ಸರ್ವಕರ್ಮಗಳ ಉಗಮಸ್ಥಾನವಾದ ಸರ್ವಶಕ್ತ ಪರಮಾತ್ಮನಿಗೆ ತನ್ನ ಕರ್ಮದ ಫಲಗಳನ್ನೆಲ್ಲ ಅರ್ಪಣ ಮಾಡುವದರಿಂದ ಸುಲಭ ರೀತಿಯಿಂದ ಸಾಧನೆಯಾಗುತ್ತದೆ.

ಭಕ್ತಿಯೋಗದಲ್ಲಿ ಎರಡು ತರಗತಿಗಳಿರುತ್ತವೆ. ಒಂದನೆಯದು ಗೌಣ ಅಥವಾ ಪ್ರಥಮ ಸಾಧನೆಗಳು. ಎರಡನೆಯದು ಪರಾ ಅಥವಾ ದೇವರ ವಿಷಯಕ ಪ್ರೀತಿ ಮತ್ತು ಭಕ್ತಿಗಳ ಪರಮ ಸೀಮೆ. ಭಕ್ತಿಯೋಗದಲ್ಲಿ ಮೊದಲಿಗನಾದವನು ಎಲ್ಲ ಪ್ರಾಪಂಚಿಕ ವಿಷಯಗಳಿಂದ ತನ್ನ ಹೃದಯವನ್ನು ಮುಕ್ತಮಾಡಿ ಕ್ಷೇತ್ರವನ್ನು ಸಿದ್ಧಗೊಳಿಸಬೇಕು. ಇದು ಸಂಸಾರ ಹೇಯಸ್ಥಲವು. ಆ ಮೇಲೆ ತನ್ನ ಹೃದಯದಲ್ಲಿ ಈಶ್ವರನ

ದರ್ಶನ ವಿಷಯಕ ಇಚ್ಛೆಯನ್ನುತ್ಪನ್ನ ಮಾಡಬೇಕು. ಆ ಮೇಲೆ ಈಶ್ವರನ ಜ್ಞಾನ ಸಂಪಾದನೆಯ ಎಲ್ಲ ಜ್ಞಾನೋದಯಕ್ಕೆ ಮುಟ್ಟುವದರ ಹಾಗು ಇದೇ ಜೀವಿತದಲ್ಲಿಯೆ ಪೂರ್ಣತೆಯನ್ನು ಹೊಂದುವ ಬಲವಾದ ಬಯಕೆಯು ಅವನಲ್ಲಿ ನೆಲೆಗೊಳ್ಳಬೇಕು. ಅವನು ಸಂಪೂರ್ಣವಾಗಿ ಮನವುರಿದು ದುಡಿಯುತ್ತಿರಬೇಕು. ಶುದ್ಧ ಜೀವಿತನಾದಂಥ, ಯಾವ ಕೊಂಕುಗಳಿಲ್ಲದ ಪ್ರಾಪಂಚಿಕ ಸಂಬಂಧಗಳನ್ನೆಲ್ಲ ಹರಿದು ಹಾಕಿದ ಮತ್ತು ಆತ್ಮಪರಮಾತ್ಮಗಳ ನಿಜವಾದ ಸಂಬಂಧವನ್ನು ಅರಿತಂಥ ಐಶ್ವರಿಕ ಭಕ್ತನ ಸಹವಾಸವನ್ನು ಅವನು ಹುಡುಕಬೇಕು. ದೈವವಶಾತ್ ನಿಜವಾದ ಭಕ್ತನ ಸಂಘಟನೆಯಾದೊಡೆ, ಅವನು ಭಕ್ತಿ ಬೀಜವನ್ನು ಸ್ವೀಕರಿಸಿ ಅದನ್ನು ತನ್ನ ಹೃದಯ ಕ್ಷೇತ್ರದಲ್ಲಿ ಊರಿ ತನ್ನ ಗುರುವಿನ ಬೋಧನೆಗಳಿಗನುಸಾರವಾಗಿ ನಡೆದು ಆ ಪೈರನ್ನು ಸಜೀವವಾಗಿಟ್ಟು ಐಶ್ವರಿಕ ಭಕ್ತಿಯೆಂಬ ಫಲವಾಗುವ ವರೆಗೆ ಅದರ ಬೆಳವಣಿಗೆಗಿಂಬುಗೊಡಬೇಕು. ತನ್ನ ಆಧ್ಯಾತ್ಮಿಕ ಚಕ್ಷುವನ್ನು ತೆರೆಯುವಂಥ ಗುರುವಿನ ವಿಷಯದಲ್ಲಿ ಅವನಿಗೆ ಬಹುಮಾನ, ಆದರ, ಪ್ರೀತಿಗಳು ಇರತಕ್ಕದ್ದು. ಆಗಲವನು ತನ್ನ ಶಿಷ್ಯನಿಗೆ ತನ್ನ ಆಧ್ಯಾತ್ಮಿಕ ಶಕ್ತಿಗಳನ್ನು ನೀಡುವನು. ಈ ಶಕ್ತಿಗಳು ಕೆಲಸ ಮಾಡಹತ್ತಲು ಅಜ್ಞಾನ ಮಾಯೆಗಳ ಗಾಢನಿದ್ರೆಯಲ್ಲಿದ್ದ ಆತ್ಮನನ್ನು ಪ್ರಬುದ್ಧನನ್ನಾಗಿ ಮಾಡುವವು. ಇದೇ ದೀಕ್ಷೆಯ ತತ್ವವಾಗಿರುವದು.

ಗುರುವಿಗೆ ಶಿಷ್ಯನ ಸ್ವಾಭಾವಿಕ ಬಲವು ಗೊತ್ತಿರುವದರಿಂದ ಅವನು ಶಿಷ್ಯನಿಗೆ ಈಶ್ವರ ಮತ್ತು ಅವನಲ್ಲಿಯ ಸಂಬಂಧವನ್ನು ತಿಳಿಸಿ ಕೊಡುವನು. ಅಂದಿನಿಂದ ಆ ಶಿಷ್ಯನು ಐಶ್ವರಿಕ ಚಿಂತನೆಯನ್ನೂ, ಅರ್ಚನೆಯನ್ನೂ, ಮಾಡಹತ್ತುವನು. ಇಂತಹ ಸ್ಥಿತಿಯಲ್ಲಿ ಭಕ್ತನ ಮನಸ್ಸು ಈಶ್ವರನಲ್ಲಿ ಏಕಾಗ್ರವಾಗುವದು. ಈ ಕಾಲದಲ್ಲಿ ಅವನು ತನ್ನ ಆದರ್ಶಕ್ಕೆ ಭಂಗ ತರುವಂಥ ಯಾವ ಸಹವಾಸವನ್ನಾಗಲಿ, ಸ್ಥಳಗಳನ್ನಾಗಲಿ, ವಿನೋದಗಳನ್ನಾಗಲಿ, ಬಿಟ್ಟುಬಿಡುವನು. ಆಗ ಅವನು ಸತ್ಯಾಸತ್ಯ ಭೇದವನ್ನು ತಿಳಿದು ಶುದ್ಧಚರಿತ್ರನಾಗಿರಬೇಕು. ತನ್ನ ಮನೋವಿಕಾರಗಳನ್ನೆಲ್ಲ ಈಶ್ವರನ ಕಡೆಗೆ ತಿರುಗಿಸಿ ಅವನ್ನೆಲ್ಲ ಜಯಿಸತಕ್ಕದ್ದು. ತನ್ನ ಆದರ್ಶವನ್ನು ತಿಳಿಯುದ್ದಕ್ಕಾಗಿ ಅವನು ತನ್ನ ಮೇಲೆಯೇ ಕೋಪಿಷ್ಠನಾಗತಕ್ಕದ್ದು. ಭಕ್ತಿಮಾರ್ಗದಿಂದ ತನ್ನನ್ನು ದೂರಮಾಡಿ ತನ್ನ ಪ್ರಿಯನ

ಸ್ಮರಣೆಯಿಂದ ತೊಲಗಿಸುವ ತನ್ನ ಪಾಪ ಪ್ರಕೃತಿಯನ್ನು ದ್ವೇಷಿಸಬೇಕು. ಈ ರೀತಿಯಾಗಿ ತನ್ನ ತಪ್ಪುಗಳನ್ನು ತಿದ್ದಿಕೊಂಡು ತನ್ನ ಪಾಶವಿ ವೃತ್ತಿಯನ್ನು ನಿಗ್ರಹಿಸತಕ್ಕದ್ದು.

ಭಕ್ತಿಯೋಗದಲ್ಲಿರುವವನು ಶಾರೀರಿಕ ಮಾನಸಿಕ ಸ್ವಚ್ಛತೆಗಳನ್ನು ಕಾದಿಟ್ಟುಕೊಳ್ಳತಕ್ಕದ್ದು. ಸತ್ಯವಂತನಾಗಿರಬೇಕು, ಶಾರೀರಿಕವಾಗಿ ಅಥವಾ ಮಾನಸಿಕವಾಗಿ ಯಾವ ಪ್ರಾಣಿಗೂ ಹಿಂಸೆಗೊಡದೆ ನಿಷ್ಪಾಪ ಜೀವನವನ್ನು ಸಾಗಿಸಬೇಕು. ತನ್ನ ಆಹಾರಕ್ಕೋಸುಗ ಯಾವ ಪ್ರಾಣಿಯನ್ನೂ ಅವನು ಕೊಲ್ಲಕೂಡದು. ಅಥವಾ ತನ್ನದಲ್ಲದ ಪದಾರ್ಥದ ವಿಷಯಕ್ಕೆ ಬಯಕೆಯನ್ನು ಹೊಂದಬಾರದು. ಶಾರೀರಿಕ ಬಲವನ್ನು ಹೆಚ್ಚಿಸುವ ಆರೋಗ್ಯ ವಿಷಯಕ ನಿಯಮಗಳನ್ನು ಮಾನಸಿಕ ರೀತಿಯಿಂದ ಬಲವಾಗಿ ಮಾಡುವ ನೈತಿಕ ನಿಯಮಗಳನ್ನು ಅವನು ಪಾಲಿಸಬೇಕು.

'ದೇವರು ವಿಶಿಷ್ಟ ಆಕಾರದವನಿದ್ದು ನನ್ನಿಂದ ಭಿನ್ನನಿದ್ದಾನೆ. ವಿಶ್ವಕ್ಕಿಂತಲೂ ಬೇರೆಯಾಗಿದ್ದಾನೆ' ಈಪ್ರಕಾರ ಎಲ್ಲಿಯ ವರೆಗೆ ಭಕ್ತನಿಗೆ ಅನಿಸಹತ್ತುವದೋ ಅಲ್ಲಿಯ ವರೆಗೆ ಅವನು ದ್ವೈತಭಾವದಿಂದ ಆತನನ್ನು ಪೂಜಿಸುತ್ತಾನೆ. ಆದರೆ ಅವನುಮುಂದೆ ಮುಂದೆ ಈಶ್ವರನನ್ನು ಸಮೀಪಿಸಿದ ಹಾಗೆಲ್ಲ ಈ ತೆರವಾದ ದ್ವೈತಭಾವವನ್ನು ಕಳೆದು, 'ಈಶ್ವರನು ಅಗಮ್ಯನು' ಪ್ರಕೃತಿಯಲ್ಲೆಲ್ಲ ವ್ಯಾಪಿಯೂ ಆತ್ಮಗಳಿಗೆ ಆತ್ಮನೂ, ಜೀವಗಳಿಗೆ ಜೀವನೂ ಇದ್ದು ನಾವು ಮಾತ್ರ ಅವನ ಕೆಲವಂಶಗಳೆಂದು ತಿಳಿಯಹತ್ತುತ್ತಾನೆ. ಅತ್ಯಂತ ಸೂಕ್ಷ್ಮಪದಾರ್ಥಗಳಿಂದ ಮನುಷ್ಯನ ವರೆಗಿನ ಎಲ್ಲಪ್ರಾಣಿಗಳೂ, ಭಾಗವು ಪೂರ್ಣಕ್ಕೆ ಸಂಬಂಧಿಸಿದ ಹಾಗೆ, ಈಶ್ವರನಿಗೆ ಸಂಬಂಧಿತವಾಗಿವೆ, ಎಂದು ಭಕ್ತನು ತಿಳಿಯುತ್ತಾನೆ. ಆದ್ದರಿಂದ ಅವನು ಯಾವದೊಂದು ಪ್ರಾಣಿಯನ್ನು ಹಿಂಸಿಸಲಾರನು ಅಥವಾ ಕೊಲ್ಲಲಾರನು. ಭಾಗವೆಲ್ಲವೂ ಭಾಗಿಗೆ ಸಂಬಂಧಿತವೆಂಬದನ್ನು ಚನ್ನಾಗಿ ಅರಿತು, 'ನನ್ನದೆಲ್ಲವೂ ನಿನ್ನದೇ' ಎಂದು ಅವನು ಅನ್ನುತ್ತಾನೆ. ಈ ಕ್ಷಣದಿಂದಲೇ ನಿಃಸೀಮ ನಿಸ್ವಾರ್ಥತೆಯೂ 'ಈಶ್ವರೇಚ್ಛಾಬಲೀಯಸೀ' ಎಂಬ ಭಾವನೆಯೂ ಅವನಲ್ಲಿ ನೆಲೆಗೊಳ್ಳುತ್ತವೆ. ಮತ್ತು ನಿನ್ನ ಇಚ್ಛೆಯಂತಾಗಲಿ, ಎಂದು ಅವನು ಹೃನ್ಮಧ್ಯದಿಂದ ಉಸುರಲಿಕ್ಕೆ ಶಕ್ತನಾಗುತ್ತಾನೆ. ತನ್ನ ಆತ್ಮವು ಈಶ್ವರನ ಒಂದು ಭಾಗವೆಂಬದನ್ನು (Thy will be done-Bible) ಎಂದೂ ಮರೆಯುವದಿಲ್ಲ.

ಈ ಕ್ಷಣದಿಂದ ಈ ಸಂಬಂಧನ ಸ್ಮರಣೆಯೇ ಅವನ ಭಕ್ತಿಯು. ಅವನ ಪೂಜೆಯಾದರೂ ಬೇರೊಂದು ರೂಪವನ್ನು ಧರಿಸುವದು. ಶರೀರ ದಿಂದಾಗಲಿ, ಮನಸಿನಿಂದಾಗಲಿ, ಮಾಡಿದ್ದೆಲ್ಲವು ಆ ಪರಮಾತ್ಮನ ಪೂಜೆಯೇ ಆಗುವದು. ಯಾಕಂದರೆ ತನ್ನಲ್ಲಿದ್ದ ಶಕ್ತಿಯೆಲ್ಲವು, ಆ ಪರಮಾತ್ಮನದೇ ಎಂದು ಅವನಿಗೆ ಮನವರಿಕೆಯಾಗಿರುತ್ತದೆ. ತಿನ್ನು ವದು, ಕುಡಿಯುವದು, ನಡೆಯುವದು, ಮಾತಾಡುವದು, ಪ್ರತಿದಿನದ ಪ್ರತಿಯೊಂದು ಕೆಲಸವು ಭಕ್ತಿಯ ಕರ್ಮವೆನಿಸುವದು. ಆ ಮೇಲೆ ಅಂತಃಕರಣಶುದ್ಧಿಯಾಗಿ ಸ್ವಾರ್ಥತೆಯು ಇಲ್ಲದಂತಾಗುತ್ತದೆ.

ಆ ಮೇಲೆ ಭಕ್ತನು ಎರಡನೇ ತರಗತಿಯನ್ನು ಮುಟ್ಟಿ ಭಕ್ತಿ ವೃಕ್ಷದ ಪ್ರೇಮರೂಪಿ ಫಲಗಳನ್ನು ತಿನ್ನಹತ್ತುತ್ತಾನೆ. ಈಗ ಭಕ್ತನಲ್ಲಿಯೂ ಭಕ್ತಿವಸ್ತುವಿನಲ್ಲಿಯೂ ಈ ವರೆಗೆ ಇದ್ದ ಭಿನ್ನತೆಯು ಇಲ್ಲದಂತಾಗುತ್ತದೆ. ಭಕ್ತನೂ, ಭಕ್ತಿಯೂ, ಭಕ್ತಿವಸ್ತುವೂ ಎಲ್ಲವೂ ಐಶ್ವರಿಕ ಸಾಗರದಲ್ಲಿ ಒಂದುಗೂಡುತ್ತವೆ. ಆ ಮೇಲೆ ಆ ಭಕ್ತನು ಸರ್ವಜ್ಞತ್ವ, ಸರ್ವಶಕ್ತತ್ವ, ಸರ್ವಾಂತರ್ಯಾಮಿತ್ವ, ಮೊದಲಾದ ಗುಣಗಳನ್ನು ಹೊರಗೆಡಹುತ್ತ ಭಕ್ತಿಯೋಗದ ಉಚ್ಚತಮ ಗುರಿಯಾದ ಮೋಕ್ಷವನ್ನು ಮುಟ್ಟುತ್ತಾನೆ.



# ಸುಗ್ಗಲ ದೇವಿಯರ ಶಿಲಾಶಾಸನವು-ತೊರಗಲ್ಲು.

(೧೧೮೮ ಇಸ್ವಿ)

ಲೇಖಕ:— ಪ್ರೊ॥ ಎಸ್. ಸಿ. ನಂದೀಮಠ ಎಮ್. ಎ. ರಾಜಾರಾಮ
ಕಾಲೇಜ ಕೊಲ್ಹಾಪುರ.

(**ಟೀಪು:-** ೧೦ ರಿಂದ ೧೨ ನೇ ಶತಮಾನಗಳು ಕರ್ನಾಟಕ ಇತಿಹಾಸದಲ್ಲಿ ಅತ್ಯಂತ ಮಹತ್ವದ ಕಾಲಗಳು ಈ ಅವಧಿಯಲ್ಲಿ ಅನೇಕ ರಾಜಕೀಯ ಸುಧಾರಣೆಗಳೂ ಧಾರ್ಮಿಕ ಚಳವಳಿಗಳೂ ಉಂಟಾಗಿರುತ್ತವೆ. ಈ ಕಾಲಕ್ಕೆಯೇ ವೀರಶೈವ ಧರ್ಮದ ಪ್ರಸಾರವು ಕರ್ನಾಟಕದಲ್ಲಿ ಆಗಿರುತ್ತದೆ. ಆದ್ದರಿಂದ ಇದರ ನಿಜ ಸ್ವರೂಪವನ್ನು ಕಂಡು ಹಿಡಿಯಬೇಕಾದರೆ ಆಕಾಲಕ್ಕೆ ದೇಶದಲ್ಲಿ ಆಗಿ ಹೋದ ಮಹಾಪುರುಷರು ಯಾರು, ಅವರಿಂದ ಯಾವ ಕಾರ್ಯಗಳಾದವು ಇವುಗಳನ್ನು ಐತಿಹಾಸಿಕ ದೃಷ್ಟಿಯಿಂದ ಕಂಡುಹಿಡಿಯುವದು ಅವಶ್ಯವಿರುತ್ತದೆ. ಆದ್ದರಿಂದ ಈ ಕಾಲಕ್ಕಿನ ಶಿಲಾಶಾಸನಗಳನ್ನು ಶೋಧಿಸುವದು ಬಹಳ ಮಹತ್ವದ್ದಿರುತ್ತದೆ. ಪ್ರೊ॥ ನಂದಿಮಠ ಇವರು ಶಿಲಾಶಾಸನ ಸಂಗ್ರಹ ಮಾಡುವದರಲ್ಲಿಯೂ ಅವುಗಳನ್ನು ಓದುವದರಲ್ಲಿಯೂ ವಿಶೇಷ ಪ್ರಯತ್ನ ಮಾಡುತ್ತಲಿರುವರು. ಈ ಸಂಗತಿಯು ಶಿವಾನುಭವದ ವಾಚಕರಿಗೆ ಗೊತ್ತೇ ಇದೆ. ಅವರು ತೊರಗಲ್ಲಿನ ಶಿಲಾಶಾಸನಗಳ ವಿಷಯವಾಗಿ ಈ ಲೇಖವನ್ನು ಬರೆದಿದ್ದು, ಮೇಲ್ಕಂಡ ದೃಷ್ಟಿಯಿಂದ ಇದು ಉಪಯುಕ್ತವಾಗಬಹುದೆಂದು ಇದನ್ನು ಈ ಸಂಚಿಕೆಯಲ್ಲಿ ಕೊಟ್ಟಿದ್ದೇವೆ.— **ಸಂಪಾದಕ**)

ಮಲಪ್ರಹಾರಿಣಿಯು ಕರ್ನಾಟಕದ ಪ್ರಸಿದ್ಧ ನದಿಗಳಲ್ಲಿ ಮಹತ್ವದ ಸ್ಥಾನವನ್ನು ಹೊಂದಿರುವಳು. ತನ್ನ ಪಾನಾಮೃತದಿಂದ ಬಲು ಗಟ್ಟಿಗರಾದ ಕನ್ನಡ ಸಾರ್ವಭೌಮರನ್ನು ಸಲುಹಿದವಳು. ಚಲುಕ್ಯರೂ ರಟ್ಟರೂ ಈ ನದಿಯ ಮೇಲಿರುವ ವಾತಾಪಿಪುರ ಸುಗಂಧ ವರ್ತಿಗಳನ್ನು ತಮ್ಮ ನೆಲೆವೀಡುಗಳನ್ನಾಗಿ ಮಾಡಿಕೊಂಡಿರುವದರಿಂದಲೇ ಅಷ್ಟು ಬೆಳಕಿಗೆ ಬಂದರೆನ್ನಬಹುದು. ಅದು ಇರಲಿ. ಚಲುಕ್ಯರ ಕಡೆಗಾಲದಲ್ಲಿ ಅವರಿಗೆ ಬಹಳ ಸಹಾಯಮಾಡಿ "ಚಲುಕ್ಯ ರಾಜ್ಯ ಪ್ರತಿಷ್ಠಾಪಕ" ನೆಂದು ಹೆಸರನ್ನು ಪಡೆದ ಬಮ್ಮರಸನ ತೊರಗಲೆಯನ್ನು ನೋಡುವಾ.

ಮಲಪ್ರಹಾರಿಣಿಯ ತಟವಲ್ಲಿರುವ ತೊರಗಲೆ, ಅಥವಾ ಈಗಿನ ತೊರಗಲ್ಲು ಕೊಲ್ಹಾಪೂರ ಸಂಸ್ಥಾನದೊಳಗಂತರ್ಗತವಾದುದೊಂದು ಚಿಕ್ಕ ಸಂಸ್ಥಾನವು. ವರ್ಷಾ ಸುಮಾರು ಅರವತ್ತು ಸಹಸ್ರ ರೂಪಾಯಿ ಉತ್ಪನ್ನವುಳ್ಳದು. ಈಗ ಇಲ್ಲಿಯ ಸಂಸ್ಥಾನಿಕರು ಚಿಕ್ಕವರಿರುವದರಿಂದ ಇಲ್ಲಿಯ ಎಲ್ಲ ವ್ಯವಸ್ಥೆಯು ಕೊಲ್ಹಾಪೂರ ದರಬಾರದ ನೇತೃತ್ವದ ಕೆಳಗೆ ನಡೆಯುವುದು. ಇಲ್ಲಿ ಕೊಲ್ಹಾಪೂರ ದರಬಾರಿನಿಂದ ನಿಯಮಿಸಲ್ಪಟ್ಟೋರ್ವ ಕಾರಭಾರಿಯು ಇಲ್ಲಿಯ ವ್ಯವಸ್ಥಾಪಕನಾಗಿರುವನು. ಊರು ಹಾಳಾಗಿ ಜನರೆಲ್ಲರೂ ಸಮೀಪದಲ್ಲಿದ್ದ ಬ್ರಿಟಿಶ ಹದ್ದಿಯಲ್ಲಿಯೂ, ಇಲ್ಲಿಂದ ಸುಮಾರು ೫ ಮೈಲು ಅಂತರದ ಮೇಲಿರುವ ರಾಮದುರ್ಗ ಸಂಸ್ಥಾನದಲ್ಲಿಯೂ ಸೇರಿಕೊಂಡಿರುವರು. ಕೊಲ್ಹಾಪೂರ ದರಬಾರವು ಊರನ್ನು ತುಂಬಿಸಲು ಯತ್ನ ನಡಿಸಿರುವುದು.

ತೊರಗಲ್ಲು ಹಿಂದೆ ಒಮ್ಮೆ ಬಹಳೇ ದೊಡ್ಡ ಪಟ್ಟಣವಾಗಿರಬೇಕೆಂಬುದು ಅದನ್ನು ಈಗಿನ ನಿಕೃಷ್ಟಾವಸ್ಥೆಯಲ್ಲಿ ಕೂಡಾ ನೋಡಿದವರಿಗೆ ತಟ್ಟನೆ ಹೊಳೆಯುವುದು. ಸುಮಾರು ಮೂರು ಮೈಲುಗಳ ವರೆಗೆ ಗುಡ್ಡದ ಅಡಿಯಲ್ಲಿ ಬೆಳೆದ ಮುಳಗಳ್ಳಿಯಲ್ಲಿ ಹಾಳಾದ ಮನೆಗಳ ಗೋಡೆಗಳು ತಮ್ಮ ವೈಧವ್ಯವನ್ನು ತೋರಿಸಲಾರದೆ ಅಡಗಿಕೊಂಡಂತೆ ತೋರುವವು. ಊರು ನಾಲ್ಕು ಸುತ್ತಿನ ಭದ್ರವಾದ ಗೋಡೆಗಳಿಂದ ಬಳಿಸಲ್ಪಟ್ಟಿರುವುದು. ಕೋಟೆಯ ಕೆಲವು ಭಾಗವು ಇನ್ನೂ ಚನ್ನಾಗಿರುವುದು. ಊರನ್ನು ಪ್ರವೇಶಿಸಲು ಉತ್ತರಕ್ಕೊಂದು ದಕ್ಷಿಣಕ್ಕೊಂದು ಹೀಗೆ ಈಗಾವರೂ ಎರಡೇ ಅಗಸಿಗಳು. ನೋಡಿದತ್ತೆಲ್ಲ ಗುಡ್ಡೇ ಗುಡ್ಡ! ಮಲಪ್ರಹಾರಿಣಿಯು ಊರ ನೈರುತ್ಯದಿಂದ ದಕ್ಷಿಣಕ್ಕೊಲಿದು ಪೂರ್ವವಾಹಿನಿಯಾಗಿ ಬಿದ್ದು ಬಟ್ಟಿರುವಳು. ಈ ಮಲಪೂರಿ ಅಮ್ಮನಿಗೆ ಗುಡ್ಡದ ಮೇಲೆ ಬಲು ನಲ್ಮೆ. ಇಲ್ಲಿಯಂತೂ ಗುಡ್ಡದೊಳಗಿಂದ ಬಂದು ಗುಡ್ಡದೊಳಗೆ ಸೇರಿರುವಳು. ಅಂತೂ ಈ ಊರನ್ನು ಯುದ್ಧಕಲಾಚತುರನಾದ ಆವನಾದರೂ ಚಮೂಪತಿಯು ನೋಡಿದರೆ "ಅಭೇದ್ಯವಾದ ದುರ್ಗ" ವೆಂದು ಅನ್ನದೆ ಇರಲಾರನು. ಇದು ಒಂದಾನೊಂದು ಕಾಲದಲ್ಲಿ ಲಕ್ಷ್ಮಿಯ ತಾಯ್ಮನೆಯೂ ಪುಣ್ಯದ ಆಗರವೂ ಆಗಿತ್ತು. ಸಮೀಪದಲ್ಲಿಯೇ ಇರುವ ವಶಿಷ್ಠ ಮಹರ್ಷಿಗಳ ಆಶ್ರಮವೂ, ಭೂತನಾಥವಿಭುವಿನ ನಿಕೇತನವೂ, ಪಾಪಹಾ

ರಿಣಿಯಾದ ಮಲಪ್ರಹಾರಿಣಿಯೂ ಇದಕ್ಕೆ ಸಾಕ್ಷಿ. ಒಟ್ಟಿಗೆ ತೊರಗಲ್ಲು ನಿಸರ್ಗದೇವಿಯ ಸೌಂದರ್ಯವನ್ನು ತುಂಬಾ ನೋಡಬೇಕೆಂಬುವವರ ಆಕಾಂಕ್ಷೆಯನ್ನು ಪೂರ್ಣ ಮಾಡುವುದೆಂದೂ, ಶಿಲಾಲೇಖನಲ್ಲಿಯ ಇದರ ವರ್ಣನೆಯು ಕವಿಯ ಕಲ್ಪನೆಯಾಗಿರದೆ ನಿಜವಾದುದೆಂದೂ ನಮಗೆ ಹೊಳೆಯಿತು.

ಊರ ನೈರುತ್ಯಕ್ಕೆ ಕೋಟೆಯ ಗೋಡೆಯೊಳಗೆ ಬಹಳೇ ಹಳೇ ಗುಡಿಗಳ ಗುಂಪು ಇರುವುದು. ಗುಡಿಗಳಿಂದ ನದಿಗೆ ಹೋಗಲು ಪಾವಟಿಗೆಗಳೂ, ಕೋಟೆಯ ಗೋಡೆಯಲ್ಲೊಂದು ಬಾಗಿಲವೂ ಇರುವವು. ಗುಡಿಗಳು ಸುಮಾರು ೧೨ನೇ ಶತಮಾನಕ್ಕೂ ಹಿಂದಿನವು. ಇವುಗಳಲ್ಲಿ ಮುಖ್ಯವಾದುದು ಭೂತನಾಥನ ದೇವಾಲಯವು. ಈ ಶಿಲಾಲೇಖದಲ್ಲಿರುವ ತೊರಗಲೆಯ ವರ್ಣನೆಯ ಪದ್ಯದಲ್ಲಿ "ಭೂತನಾಥ ವಿಭುವಿಂ ಬಳಿಸಿರ್ಪ ಮಲಪ್ರಹಾರಿಯಿಂ" ಎಂದಿರುವುದರಿಂದ ೧೨ನೇ ಶತಮಾನದ ಆದಿಯಲ್ಲಿ ಭೂತನಾಥನು ಪ್ರಸಿದ್ಧಿಯನ್ನು ಹೊಂದಿದ್ದನೆಂದು ಗೊತ್ತಾಗುವುದು. ಇಲ್ಲಿ ಶಿಲಾಲಿಪಿಗಳೇನಾದರೂ ಅವೆಯೋ ಹೇಗೆಂದು ಶೋಧಿಸಲು ನಮಗೆ ಕಂಡು ಬಂದವು ಐದು, ಅವುಗಳ ವಿವರಃ—

೧-೩. ಈ ಮೂರು ಲೇಖಗಳು ಮುಸಲ್ಮಾನರವು. ಅವು ಅವರ ಅಕ್ಷರ ಮತ್ತು ಭಾಷೆಯಲ್ಲಿರುವವು. ಅವನ್ನು ಕೋಟೆಯ ಬುರುಜುಗಳಲ್ಲಿ ಕೂಡ್ರಿಸಿರುವರು. ಅವು ಆಯಾ ಬುರುಜುಗಳನ್ನು ಜೀರ್ಣೋದ್ಧಾರಮಾಡಿಸಿದ ಮುಸಲ್ಮಾನ ಸರದಾರರ ಹೆಸರನ್ನೂ, ಕಾಲವನ್ನೂ ಸೂಚಿಸುವವು.

೪. ಇದು ಅವದೋ ಒಂದು ಶಿಲಾಲೇಖದ ಮೇಲ್ಭಾಗದ ತುಂಡು. ಭೂತನಾಥ ದೇವಾಲಯದ ಎಡಭಾಗದಲ್ಲಿರುವ— ಪಾರ್ವತೀದೇವಿಯ ಗುಡಿಯ ಪಟಾಂಗಣದಲ್ಲಿರುವುದು. ಅದರಲ್ಲಿ ಸೂರ್ಯ ಚಂದ್ರ ಲಿಂಗ ಮೊದಲಾದ ಗುರುತುಗಳಲ್ಲದೆ "ನಮುಸ್ತುಂಗ ಶಿರಶ್ಚುಂಬಿ" ಯೆಂಬ ಮಂಗಲಪದ್ಯವೂ ಇರುವುದು. ಅಕ್ಷರಗಳು ಕನ್ನಡದಲ್ಲಿ. ಅದರ ಉಳಿದ ಭಾಗವನ್ನು ಶೋಧಿಸಲು ದೊರೆಯಲಿಲ್ಲ.

೫. ಇದೇ ಊರ ಮಧ್ಯದಲ್ಲಿ ಗಚ್ಚಿನ ಮಠವೆಂಬ ಹೆಸರಿನ ಹಾಳಾದಪ್ರದೇಶದಲ್ಲಿ ಬಿದ್ದ ಗೋಡೆಯ ಕಲ್ಲು ಗುಂಪಿಗೆ ಆನಿಸಿ ಪೂರ್ವಕ್ಕೆ

ಮುಖವಾಗಿ ನಿಲ್ಲಿಸಲ್ಪಟ್ಟಿದೆ. ಇದು ಅತ್ಯುತ್ತಮ ಸ್ಥಿತಿಯಲ್ಲಿದೆ. ಗಚ್ಚಿನ ಮಠವು ಬಲು ದೊಡ್ಡ ಮಠವಾಗಿತ್ತಂತೆ. ಇಲ್ಲಿಯ ಸ್ವಾಮಿಗಳಿಗೆ ಬ್ರಿಟಿಶ ಹದ್ದಿಯಲ್ಲಿಯೂ, ತೊರಗಲ್ಲ ಸಂಸ್ಥಾನದ ಹದ್ದಿಯಲ್ಲಿಯೂ ಭೂಮಿಯು ರೂಪದಿಂದ ದೇಣಿಗೆ ಇತ್ತು. ಲಿಂಗೈಕ್ಯರಾದ ಸ್ವಾಮಿಗಳು ಕೊಲ್ಹಾಪೂರ ದರಬಾರದ ನಿಯಮಕ್ಕನುಸರಿಸಿ, ದರಬಾರದ ಅಪ್ಪಣೆಯನ್ನು ಪಡೆದು ಶಿಷ್ಯರನ್ನು ಮಾಡಿಕೊಳ್ಳದೆ ಗತಿಸಿದುದರಿಂದ ಸಂಸ್ಥಾನದಲ್ಲಿಯ ಸುಮಾರು ವರುಷಾ ಸಾವಿರ ರೂಪಾಯಿ ಉತ್ಪನ್ನದ ಭೂಮಿಯನ್ನು ಕೊಲ್ಹಾಪೂರ ಸರಕಾರವು ಹಿಡಿದಿರುವುದಂತೆ. ಈಗಿನ ಸ್ವಾಮಿಗಳು ಬ್ರಿಟಿಶ ಹದ್ದಿಯಲ್ಲಿ ಇರುವರು. ಮಠವು ಸಂಪೂರ್ಣವಾಗಿ ನಾಶವಾಗಿದೆ. ಬಿದ್ದ ಗೋಡೆಯ ಕೆಲವು ಭಾಗದ ಹೊರತು ಮಠವೆಂಬ ಗುರುತುಗಳೇನೂ ಇಲ್ಲ. ಈ ಮಠಕ್ಕೂ ಶಿಲಾಶಾಸನಕ್ಕೂ ಏನೂ ಸಂಬಂಧವಿಲ್ಲವೆಂಬುದು ಶಿಲಾಶಾಸನವನ್ನೋದಿದ ಕೂಡಲೇ ವಾಚಕರಿಗೆ ಹೊಳೆಯುವುದು. ಶಿಲಾಶಾಸನವು ಇಲ್ಲಿಗೆ ಬಂದ ಕಾರಣವನ್ನು ಹೇಳುವುದು ಕಠಿಣವದೆ.

ಈ ಶಾಸನದ ಮೇಲೆ ಮಧ್ಯದಲ್ಲಿ ದೊಡ್ಡ ಲಿಂಗವದೆ. ಲಿಂಗದ ಮೇಲೆ ಸೂರ್ಯ ಚಂದ್ರರಿದ್ದಾರೆ. ಎಡಕ್ಕೆ ಮನುಷ್ಯ (ಪೂಜಕ) ನ ಆಕೃತಿಯು ಕೈಮುಗಿದುಕೊಂಡು ನಿಂತಂತೆ ಇದೆ. ಮನುಷ್ಯನ ಹಿಂದೆ ಬಸವನ ಮೂರ್ತಿ ಇದೆ. ಬಲಭಾಗಕ್ಕೆ ಆಕಳೂ ಮೊಲೆಯುಣ್ಣುವ ಕರುವೂ ಅವೆ. ಇವುಗಳ ಹಿಂದೆ ಸರಳ ಖಡ್ಗದ ಆಕಾರದ ಚಿಹ್ನವದೆ.

| | | ಎತ್ತರ | | | ಅಗಲು | |
|---|---|---|---|---|---|---|
| ಕಲ್ಲಿನ ಅಳತೆ | ಸು. | ೩ಫೂ. | ೬ಇ. | ಸು. | ೨ಫೂ | ೯ಇ. |
| ಮಧ್ಯದಲ್ಲಿ ಕಲ್ಲಿನ ಅಳತೆ | ಸು. | ೪ಫೂ. | ೫ಇ. | | | |
| ಲಿಂಗ | ಸು. | | ೯ಇ. | | | |
| ಪೂಜಕ | ಸು. | | ೮॥ಇ. | | | |
| ಅಕ್ಷರಗಳಿದ್ದ ಸ್ಥಳ | ಸು. | ೨ಫೂ. | ೮ಇ. | ಸು. | ೧ಫೂ | ೬ಇ. |
| ಅಕ್ಷರಗಳ ಅಳತೆ { ದೊಡ್ಡ ಅಕ್ಷರ | ಸು. | | 3/4ಇ. | ಸು. | | 1/2ಇ. |
| ಅಕ್ಷರಗಳ ಅಳತೆ { ಸಣ್ಣ ಅಕ್ಷರ | ಸು. | | 1/2ಇ. | ಸು. | | 1/4ಇ. |

ಕರೇಕಲ್ಲಿನಲ್ಲಿ ಚನ್ನಾಗಿ, ಆಳವಾಗಿ ಈ ಶಾಸನವನ್ನು ಕೊರೆದಿದ್ದಾರೆ. ಇದರಲ್ಲಿ ನಾಲ್ವತ್ತೈದು ಸಾಲುಗಳಿವೆ. ಅವುಗಳಲ್ಲಿಯ ೪೪ನೆಯ ಸಾಲಿನ ಕೆಲವು ಅಕ್ಷರಗಳೂ ೪೫ನೆಯ ಸಾಲಿನ ಎಲ್ಲ ಅಕ್ಷರಗಳೂ ನಾಶವಾಗಿವೆ. ಒಟ್ಟಿನಮೇಲೆ ಈ ಶಿಲಾಶಾಸನವು ಉತ್ತಮ ಸ್ಥಿತಿಯಲ್ಲಿ ಇದೆ.

ಆದಿಯಲ್ಲಿ ಶಿವಸ್ತುತಿಯದೆ. ಸಾಲು ೨ರಿಂದ ೪ರವರೆಗೆ ಆಹವಮಲ್ಲ ಭೂತೇಯ ದೇವನ ಬಿರುದುಗಳಿವೆ. ೪ರಿಂದ ೬ರವರೆಗೆ ಆಹವಮಲ್ಲನೆಂಬ ಬಿರುದು ಬಂದ ಕಾರಣವನ್ನು ಹೇಳಿದೆ. ೭ರಿಂದ ೧೩ರವರೆಗೆ ವಂಶಾವಳಿಯು:—

ಭೂತೇಯದೇವ ಆಹವಮಲ್ಲ.

|

ಡಾವರಮಲ್ಲ.

|

ಚ (ಭ?) ಟ್ಟರಸ

|

ಇಮ್ಮಡಿ ಭೂತೇಯ ಅಥವಾ ಭೂತರಸ

|

ಬಮ್ಮ್ರಭೂಪಾಳ ಅಥವಾ ಬಮ್ಮಿದೇವರಸ.

೧೩-೧೮ ತೊರಗಲೆಯ ವರ್ಣನೆ. ೧೮--೨೨ ಬಮ್ಮಭೂಪಾಳನ ವರ್ಣನೆ. ೨೭ರಿಂದ ೩೩ರವರೆಗೆ ಬಮ್ಮಭೂಪಾಳನ ಹೆಂಡತಿ ಶ್ರೀ ಸುಗ್ಗಲದೇವಿಯವರ ವರ್ಣನೆ. ೩೩ರಿಂದ ೩೭ ಸುಗ್ಗಲದೇವಿಯವರು ಸುಗ್ಗಲೇಶ್ವರನಿಗೆ ಬಿಟ್ಟ ದತ್ತಿ. ಕಾಲ--ಶಕೆ ೧೧೧೦ ಪ್ಲವಂಗ ಸಂವತ್ಸರ ಪುಷ್ಯ ಬಹುಳ ೧೦. ೩೮--೪೦. ಸೀಮಾ ವರ್ಣನೆ. ೪೧--೪೨ ನಂದಾದೀವಿಗೆಗಳಿಗೆ ಕೊಟ್ಟ ಎಣ್ಣೆಯ ಉಲ್ಲೇಖ. ೪೩--೪೫ ಭೂಮಿಯನ್ನು ಪಾಲಿಸಿದವರಿಗೆ ಇಷ್ಟಾರ್ಥಪ್ರಾಪ್ತಿ. ನಾಶಮಾಡಿದವರಿಗೆ ಪುಣ್ಯಸ್ಥಳಗಳಲ್ಲಿ ಪಾರ್ವರು ಗೊರವರು ಗೋವೃಂದವನ್ನು ಕೊಂದ ಪಾಪ.

ಇದರ ಭಾಷೆಯು ಹಳಗನ್ನಡ. ಪದ್ಯಗಳು ಸರಸವಾಗಿವೆ. ದುರ್ದೈವದಿಂದ ಕವಿಯ ಹೆಸರು ಇಲ್ಲ. ಇದರಲ್ಲಿದ್ದ ವೃತ್ತಗಳು.

ಉತ್ಪಲಮಾಲೆ, ಕಂದ, ಚಂಪಕ, ಮತ್ತೇಭ.

ಈ ಶಿಲಾಲೇಖದ ಬರವಣಿಗೆಯಲ್ಲಿ ಕಂಡು ಬರುವ ವಿಶೇಷಗಳು

೧. "ಶ" ದಸ್ಥಳದಲ್ಲಿ ಬಹುಕಡೆ "ಸ" ಉಪಯೋಗಿಸಿದ್ದಾರೆ. ಉದಾಹರಣೆ. ಸರಧಿ, ಸೋಭೆ, ಸರಣಿಲ್ಲೆನಗೆಂದು.

೨. "ಷ" ಕ್ಕೆ ಬದಲಾಗಿ "ಶ" ಉಪಯೋಗಿಸಿದ್ದಾರೆ. ಉದಾಃ—ವಿಭೂಶಣ. (ಸಾಲು ೧೨)

೩. ಕೆಲವು ದ್ವಿತ್ತಕ್ಷರಗಳನ್ನು ಬಿಡಿಸಿ ಬರೆದಿದ್ದಾರೆ. ಉದಾಃ—ಅಬುಜ ಶಬುದ.

೪. "ರ" ಕಾರದಿಂದೊಡಗೂಡಿದ ಅಕ್ಷರವು ಎಲ್ಲ ಸ್ಥಳಗಳಲ್ಲಿ ದ್ವಿತ್ತವನ್ನು ಹೊಂದಿದೆ. ಉದಾ:—ಬರ್ಮ್ಮ. ಚಕ್ರವರ್ತ್ತಿ.

೫. "ಪ್ರ" ಕ್ಕೆ ಬದಲಾಗಿ ಕೆಲವು ಕಡೆ "ಬ್ರ" ಉಪಯೋಗಿಸಿದ್ದಾರೆ. ಉದಾಃ—ಪತಿಬ್ರತೆ; ಗೋಬ್ರಂದ.

೬. "ನೃಪ" ಅಮೃತೇಶ್ವರ, ಪೃಥ್ವೀ ಇವು "ನ್ರಿಪ, ಅಮ್ರಿತೇಶ್ವರ, ಪ್ರಿಥ್ವೀ" ಯೆಂದು ಬರೆಯಲ್ಪಟ್ಟಿರುವವು.

ಇದರಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದ ಮಹತ್ವದ ಐತಿಹಾಸಿಕ ಮತ್ತು ಧಾರ್ಮಿಕ ವಿಷಯಗಳು ಅಡಕವಾಗಿವೆ. ಕರ್ಣಾಟಕದ ಒಂದು ಬಲು ಪ್ರಸಿದ್ಧಮಾಂಡಲಿಕರ ವಂಶಾವಳಿಯೂ, ಅವರು ಕರ್ಣಾಟಕದ ರಾಜ್ಯ ಕಾರಣದಲ್ಲಿ ತೆಗೆದುಕೊಂಡ ಭಾಗವೂ ಇದರಿಂದ ಗೊತ್ತಾಗುವವು. ಅವಾವುವೆಂಬುದನ್ನು ನಿರೀಕ್ಷಿಸುವಾ!

ಈ ವಂಶದ ಮೂಲ ಪುರುಷನು ಭೂತೇಯ ದೇವನೆಂದು ಈ ಶಾಸನದಲ್ಲಿಯ ವಂಶಾವಳಿಯಿಂದ ಗೊತ್ತಾಗುವುದು. ಈತನ ಬಿರುದುಗಳುಃ- ಸಮಧಿಗತ ಪಂಚಮಹಾಶಬುದ, ಮಹಾಮಂಡಳೇಶ್ವರ, ಭುಜಬಳವೀರ, ನಿಗಳಂಕಮಲ್ಲ, ಗೇಣುಕಾರರಾಚಾರ್ಯ, ನುಡಿದಂತೆ (ನಡೆವಂ). ಗಂಡ (ರ) ಗಂಡ, ಮಾರ್ತಂಡ, ಜಗದೋರ್ವ ಗಂಡಂ, ಶ್ರೀ ಮದಾಹವಮಲ್ಲ ಭೂತೇಯದೇವ. ಈತನಿಗೆ ಆಹವಮಲ್ಲನೆಂಬ ಬಿರುದು ಬಂದ ಕಾರಣವು ೪ರಿಂದ ೬ನೇಯ ಸಾಲಿನಲ್ಲಿ ಹೇಳಿದೆ. ಅದರ ಆಶಯವುಃ—

ಪಂಚಲನು ಮುಂದೆ ಯಿದ್ದನು. ನೂಮ್ಮಡಿ ತೈಲನು ಆಜ್ಞೆಯನ್ನು ಮಾಡಿ ಹಿಂದೆಯುಳಿದನು. ಆತನ ಸಾಮಂತ ಸಮೂಹವು ಪಂಚಲನ ಹೊಡತಕ್ಕೆ ಬಿಟ್ಟು ಓಡಿ ಹೋಯಿತು. ಇಂಥ ಸಮಯದಲ್ಲಿ ಪಂಚ

ಲನನ್ನು ಸುತ್ತುಗಟ್ಟಿ ಹೊಡೆದು ಕೊಂದವನು ಭೂತೇಯ ದೇವನು. ಈತನ ಶೌರ್ಯಕ್ಕಾಗಿ ಚಕ್ರವರ್ತಿಯಾದ ತೈಲಪನು ಆಹವಮಲ್ಲನೆಂಬ ಬಿರುದನ್ನು ಕೊಟ್ಟು ಮಾಂಡಳಿಕರಲ್ಲಿ ಮುಖ್ಯನನ್ನಾಗಿ ಮಾಡಿದನು.

ಶಕೆ ೬೭೯ (ಕ್ರಿ. ಶ. ೭೫೭-೮ ) ರಲ್ಲಿ ಚಲುಕ್ಯರ ಇಮ್ಮಡಿ ಕೀರ್ತಿವರ್ಮನನ್ನು ಸೋಲಿಸಿ ಶಕೆ. ೮೯೫ [ಕ್ರಿ. ಶ. ೯೭೩-೪] ರ ವರೆಗೆ ಸುಮಾರು ೧೧೬ ವರುಷಗಳ ವರೆಗೆ ರಾಷ್ಟ್ರಕೂಟರು ಸಾರ್ವಭೌಮರಾಗಿದ್ದರು. ಕರ್ಣಾಟಕದ ಎಲ್ಲ ಭಾಗವನ್ನು ಇವರೇ ಆಳುತ್ತಿದ್ದರು. ಈ ಕಾಲದಲ್ಲಿ ಚಲುಕ್ಯರು ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸಲು ಹೆಣಗಿದರು. ಆದರೆ ಫಲವೇನೂ ಆಗಲಿಲ್ಲ. ಆದರೆ ಶಕೆ ೮೯೫ ರಲ್ಲಿ ಚಲುಕ್ಯ ಮನೆತನದ ಇಮ್ಮಡಿ ತೈಲಪನು ರಾಷ್ಟ್ರಕೂಟರ ಮುಮ್ಮಡಿ ಕರ್ಕನನ್ನು ಸೋಲಿಸಿ ಆತನ ಮಗಳಾದ ಜಾಕಬ್ಬೆ ಅಥವಾ ಜಾಕಲದೇವಿಯನ್ನು ಮದುವೆಯಾಗಿ ಚಲುಕ್ಯರ ರಾಜ್ಯವನ್ನು ಪುನಃ ಸ್ಥಾಪಿಸಿದನು. ಈತನಿಗೆ ಇಮ್ಮಡಿ ತೈಲ, ತೈಲಪ, ನೂರ್ಮಡಿತೈಲ, ಆಹವಮಲ್ಲನೆಂಬ ಹೆಸರುಗಳಿದ್ದವು. ಈತನು ಶಕೆ ೮೯೫ ರಿಂದ ೯೧೯ [ಕ್ರಿ. ಶ. ೯೭೩—೪ ರಿಂದ ೯೯೭—೮ ] ರ ವರೆಗೆ ರಾಜ್ಯವಾಳಿದನು. ಈ ಶಿಲಾಶಾಸನದಲ್ಲಿರುವ ನೂರ್ಮಡಿ ತೈಲನು ಈತನೇ!

ಚಾಲುಕ್ಯರಿಗೂ ರಾಷ್ಟ್ರಕೂಟರಿಗೂ, ನಡೆದ ಗದ್ದಲದಲ್ಲಿ ಶಬ್ಬೆ ಅಥವಾ ಛಬ್ಬೆ ೩೯ ರಲ್ಲಿದ್ದ ಚಾಲುಕ್ಯ ಪಂಚಾನನನೆಂದು ಹೆಸರುಗೊಂಡಿದ್ದ ಪಂಚಲನು ತನ್ನದೊಂದು ರಾಜ್ಯವನ್ನು ಸ್ಥಾಪಿಸಲು ಇದು ಒಳ್ಳೇ ಸಮಯವೆಂದು ತಿಳಿದು ಬಂಡಾಯವನ್ನೆಬ್ಬಿಸಿ ತೈಲಪನ ಮೇಲೆ ಯುದ್ಧವನ್ನು ಹೂಡಿದನು. ಈ ಶಿಲಾಶಾಸನದಲ್ಲಿ ಹೇಳಿದ ಪಂಚಲನು ಈತನೇ! ಈತನನ್ನು ಸುಮಾರು ಕ್ರಿ. ಶ. ೯೭೫ ರಲ್ಲಿ ಪೆಣದಿಕ್ಕಿಕೊಂದವನು ಭೂತೇಯ ದೇವನು.

ಆದರೆ ಮಹಾಕವಿರನ್ನನು ಅಜಿತತೀರ್ಥಕರ ಪುರಾಣತಿಲಕವನ್ನು ಬರೆಯಲು ಕಾರಣವನ್ನು ಹೇಳುವಾಗ,

" ಪೊನ್ನನಿಂದ ಶಾಂತಿ ಪುರಾಣವನ್ನು ಬರೆಯಿಸಿದ ಮಲ್ಲಪನೂ ಪುನ್ನಿಮಯ್ಯನೂ ತೈಲಪನ ಚಮೂಪತಿಗಳಾಗಿದ್ದರು. ಅವರಲ್ಲಿ ಪುನ್ನಿ

ಮುಂಮ್ಯನು ಗೋವಿಂದರನೆಂಬ ದ್ರೋಹಿಯೊಡನೆ ಯುದ್ಧ ಮಾಡಿ ಕಾವೇರೀ ತೀರದಲ್ಲಿ ಮೃತನಾದನು ......... ಮಲ್ಲಪನಿಗೆ ಐವರು ಗಂಡು ಮಕ್ಕಳೂ, ಮೂವರು ಹೆಣ್ಣುಮಕ್ಕಳೂ ಇದ್ದರು. ಹೆಣ್ಣುಮಕ್ಕಳಲ್ಲಿ ಅತ್ತಿಮಬ್ಬೆ ಗುಂಡಮಬ್ಬೆಯೆಂಬಿಬ್ಬರನ್ನು ಚಾಳುಕ್ಯ ಚಕ್ರವರ್ತಿಯ ಮಹಾಮಂತ್ರಿಯಾದ ದಲ್ಲಪನ ಮಗ ನಾಗದೇವನಿಗೆ ವಿವಾಹ ಮಾಡಿಕೊಟ್ಟರು. ......... ನಾಗದೇವನು ಕುಮರರ ಕಾಳಗದಲ್ಲಿ ತನ್ನ ಸಾಹಸವನ್ನು ತೋರಿಸಿ, ಮಹಾರಾಜನನ್ನು ಮೆಚ್ಚಿಸಿ ಸೇನಾಪತಿ ಪದವಿಯನ್ನು ಹೊಂದಿದನು. ಅನಂತರ ಪಂಚಲನನ್ನು * ಜಯಿಸಿ ಕರಹಡ ದೇಶದಿಂದ ಮಲ್ಲನನ್ನು ಓಡಿಸಿದನು" ಎಂದು ಅಂದಿರುವನು.

ಪಂಚಲನನ್ನು ಜಯಿಸಿದವನು ಮಹಾಮಂತ್ರಿಯ ಮಗ ನಾಗದೇವನೆಂದು ಇದರಿಂದ ವ್ಯಕ್ತವಾಗುವುದು. ಮಹಾಕವಿರನ್ನನು ಇಮ್ಮಡಿ ತೈಲಪನ ಆಸ್ಥಾನಕವಿಯಾದುದರಿಂದ, ತಾನು ಕೇಳಿದುದನ್ನು ತನ್ನ ಗ್ರಂಥದಲ್ಲಿ ಬರೆದಿರುವುದು ಸಮಂಜಸವು. ಅಂದ ಮೇಲೆ ಈ ಶಿಲಾಶಾಸನದಲ್ಲಿ ಹೇಳಿದಂತೆ ಭೂತೇಯದೇವನು ಪಂಚಲನ ಮರಣಕ್ಕೆ ಕಾರಣನೆಂಬುದನ್ನು ಹೇಗೆ ನಂಬಬೇಕು? ಇಂಥ ಸಂಶಯವು ಹುಟ್ಟುವುದೇನೋ ಸ್ವಾಭಾವಿಕವು. ಆದರೆ ಇಂಥ ಸಂಶಯವನ್ನು ತೆಗೆದುಕೊಳ್ಳುವ ಕಾರಣವಿಲ್ಲವೆಂದೂ ಈ ಶಿಲಾಲೇಖದಲ್ಲಿ ಹೇಳಿದುದು ಸತ್ಯವಿರಬೇಕೆಂದೂ ನಮ್ಮ ನಂಬುಗೆಯು. ಏಕೆಂದರೆ:— ನಾಗದೇವನು ಚಳುಕ್ಯ ಚಕ್ರವರ್ತಿಯ ಮಹಾಮಂತ್ರಿಯ ಮಗನು. ಮೇಲಾಗಿ ಕುಮರರ ಕಾಳಗದಲ್ಲಿ ಶೌರ್ಯವನ್ನು ತೋರಿಸಿದವನು. ಆದುದರಿಂದಲೇ "ಜನಪತಿ ಮೆಚ್ಚಿ ತನ್ನಯ ಚಮೂಪತಿ ಮಾಡಿದ" ನೆಂದು ರನ್ನನೇ ಅಂದಿರುವನು. ಪಂಚಲನ ಮರಣವು ಈತನು ಚಮೂಪತಿಯಾದ ನಂತರ. ಈತನೇ ಅನೇಕ ಸಾಮಂತ

---

* ಕವಿಚರಿತೆ ಸಂಪುಟ ೧. ಪಾನ ೬೫. ಅಜಿತ ತೀರ್ಥಂಕರ ಪುರಾಣ ತಿಲಕ ಆಶ್ವಾಸ ೧. ಪದ್ಯಗಳು ೨೪ ರಿಂದ ೪೪.

ಕಳಕುಳವಾಗೆ ಪಂಚಲನ ಬಲ್ಪಡೆ ಪಂಚಲನಶ್ವಸಂಕುಲಂ |
ಕಳಕುಳವಾಗೆ ಪಂಚಲನ ದಂತಿ ಘಟಾವಳಿ ಯುದ್ಧರಂಗದೋಳ್ |
ಕಳಕುಳವಾಗೆ ಗಾತ್ರಕರದಂತಿ ವಿಘಾತದೊಳುಗ್ರದಂತಿ ನು |
ಕ್ಕಳಕರುವಾಗರಂ ಪರಿದುದ್ಭಟನಿಂ ಸುಭವ ತ್ರಿಣೇತ್ರನಿಂ || ೧. ೪೪.

ರಿಂದೊಡಗೂಡಿದ ಸೈನ್ಯವನ್ನು ಪಂಚಲನ ಮೇಲೆ ನಡೆಯಿಸಿದ್ದನು. ತೈಲ ಪನು ಆ ಸೈನ್ಯದ ಸಂಗಡವಿದ್ದಿಲ್ಲವೆಂಬುದು "ಬೆಸಸಿ ಪಿಂತಿರೆ ನೂರ್ಮಡಿ ತೈಲ" ನೆಂಬ ಶಿಲಾಲೇಖದ ಶಬ್ದಗಳಿಂದ ಗೊತ್ತಾಗುವುದು. ಈ ಯುದ್ಧ ದಲ್ಲಿ ಓರ್ವ ಆ ಕಾಲಕ್ಕೆ ಪುಟ್ಟ ಸಾಮಂತನಾದ ಭೂತೇಯ ದೇವನ ಶೌರ್ಯದಿಂದ ವಿಜಯವು ದೊರೆತುದರಿಂದ ವಿಜಯದ ಶ್ರೇಯಸ್ಸಿಗೆ ಸೇನಾ ಪತಿಯು ಪಾತ್ರನಾದುದೂ ರನ್ನ ಮಹಾಕವಿಯು ಹಾಗೆ ಬರೆದುಕೊಂಡು ದೂ ಅಸಮಂಜಸವಲ್ಲ.

ಈ ಎಲ್ಲ ಕಾರಣಗಳಿಂದ ಈತನು ರನ್ನನ ಪೋಷಕನೂ, ಚಲುಕ್ಯ ರಾಜ್ಯಪ್ರತಿಷ್ಠಾಪಕನೂ, ಆದ ಇಮ್ಮಡಿ ತೈಲಪನ ಸಮಕಾಲದವನೆಂದು ವ್ಯಕ್ತವಾಗುವುದು. ಈತನು ಕ್ರಿ. ಶ. ೧೦ ನೇ ಶತಮಾನದ ಅಂತ್ಯದಲ್ಲಿ ದ್ದನು. ಸ್ಥಳ ಪುರಾಣದಲ್ಲಿ ತೊರಗಲ್ಲನ್ನೂ, ಭೂತನಾಥನ ದೇವಾಲ ಯವನ್ನೂ, ಭೂತಾಂಕುಶನೆಂಬೋರ್ವ ರಾಜನು ಕಟ್ಟಿಸಿದನೆಂದು ಹೇಳಿ ದೆ. ಭೂತಾಂಕುಶರಾಜನು ಭೂತೇಯದೇವನಾಗಲೀ ಅಥವಾ ಶಾಸನ ವನ್ನು ಕೊಟ್ಟ ಬಮ್ಮರಸನ ತಂದೆಯಾದ ಭೂತರಸನಾಗಲೀ ಆಗಿರಬ ಹುದು. ಸುಗ್ಗಲದೇವಿಯವರು ಮಾಡಿಸಿದ ದೇವಾಲಯವು ಸುಗ್ಗಲೇ ಶ್ವರ ದೇವಾಲಯವೆಂದು ಹೇಗೆ ಪ್ರಸಿದ್ಧಿಯನ್ನು ಹೊಂದಿದೆಯೋ ಹಾಗೆ ಭೂತರಸನು ಕಟ್ಟಿಸಿದ ದೇವಾಲಯಕ್ಕೆ ಭೂತನಾಥ ದೇವಾಲಯವೆಂದು ಹೆಸರು ಬಂದಿರುವುದು ಸ್ವಾಭಾವಿಕವು. ಸ್ಥಳ ಪುರಾಣದ ಭೂತಾಂಕು ಶನು ಇಮ್ಮಡಿ ಭೂತೇಯದೇವ ಅಥವಾ ಭೂತರಸನಾಗಿರಬೇಕೆಂದು ನಮಗೆ ಅನ್ನಿಸುವುದು. ಇದೇ ಅಭಿಪ್ರಾಯವನ್ನು ಭೂತನಾಥ ದೇವರ ಕಟ್ಟಡವು ಬಲಪಡಿಸುವುದು. ಈ ಶಿಲಾಶಾಸನದಿಂದ ಡಾವರಮಲ್ಲ, ಚಟ್ಟ ರಸ, ಮತ್ತು ಭೂತರಸ ಇವರುಗಳ ಬಗ್ಗೆ ಹೆಚ್ಚಿಗೆ ಗೊತ್ತಾಗುವದಿಲ್ಲ. ಭೂತರಸನು ಮಾತ್ರ ಬಲು ಬಂಟನಿದ್ದನೆಂದು ಕಂಡು ಬರುವುದು. ಕಡೆ ಯವನಾದ ಬಮ್ಮರಸನು ಒಳ್ಳೇ ಇತಿಹಾಸ ಪ್ರಸಿದ್ಧ ಮನುಷ್ಯನಿದ್ದಂತೆ ತೋರುವುದು.

ಮೆ॥ ಫ್ಲೀಟ ಸಾಹೇಬರು ಒಬ್ಬ ಬಮ್ಮರಸನ ವಿಷಯಕ್ಕೆ ಹೀಗೆ ಬರೆ ದಿರುವರು. "In sake 1104(A. D. 1182—3), the Subhakrit Sanvatsara, Someswara IV, also called Soma, Vira.—Some-

swara and Tribhuvanamalla III. succeeded in reestablishing for a short time longer the semblance of a Chalukya sovereignty. He owed his power, such as it was, to the influence and energy of his Dandanayaka Barmarasa, who in one of his inscriptions is called Chalukya Rajya—pratisthapaka, or 'the establisher of Chalukya sovereignty.' This person is evidently the same Barmarasa who in saka 1083 (A. D. 1161—2) was the Dandanayaka of Bijjala and had the Government of the Banavasi province under him, while Bijjala was still, nominally, if not actually, only the commander—in—chief of Taila III— and also the Brahma i. e. Barma, the general in command of Kalachuri army by defeating whom, the Hoysalas under Ballala II. first established their power north of the Tungabhadra. This defeat destroyed the power of the Kalachuris. But the Hoysalas, found too much to occupy them in the eastern part of the kingdom to admit of their making at once an attack in the direction of Banavasi, which was not in their possession till saka 1114. And Barmarasa evidently took advantage of this to fall back on Banavasi and there espouse the cause and fortunes of the son of his former sovereign Taila III. Someswar made Annigeri his capital. ......... The Dandanayaka Barmarasa who in the same year (saka 1106) was governing at the capital of Annigeri. §

ಮಿ॥ ಫ್ಲೀಟರವರ ಮೇಲಿನ ಅಭಿಪ್ರಾಯದಿಂದ ಶಕೆ ೧೦೮೩ರಲ್ಲಿ ಚಲುಕ್ಯರ ಮಾಂಡಲಿಕನಾಗಿ ಬನವಾಸಿಯಲ್ಲಿ ಆಳುತ್ತಿದ್ದವನೂ, ಕಳಚುರ್ಯರ ಸೇನಾಪತಿಯಾಗಿ ಹೊಯ್ಸಳರ ಸಂಗಡ ಹೋರಾಡಿದವನೂ, ಕಳಚುರ್ಯರ ರಾಜ್ಯವು ಮುರಿದನಂತರ ಚಲುಕ್ಯರ ಅಧಿಪತ್ಯವನ್ನು

§ Fleet's Dynasties of the Kanarese Districts P. 55

ಸ್ಥಾಪಿಸಲು ಹೆಣಗಿದವನೂ, ಒಬ್ಬನೇ ಬವ್ಮರಸನೆಂದು ಗೊತ್ತಾಗುವುದು. ಈ ಶಿಲಾಲೇಖವಲ್ಲಿರುವ ಭೂತರಸನ ಮಗನಾದ ಬವ್ಮರಸನೇ ಈತನಿರಬೇಕೆಂದು ನಮ್ಮ ಊಹೆ; ಏಕೆಂದರೆ—

೧ ಈ ಶಿಲಾಲೇಖದಲ್ಲಿ ಬವ್ಮರಸನ ಪೂರ್ವಜರು ಚಲುಕ್ಯರ ಮಾಂಡಲಿಕರಾಗಿದ್ದರೆಂದು ಸ್ಪಷ್ಟವಿದೆ. ಕಳಚೂರೀ ರಾಜ್ಯವು ಉದಯವಾಗಿ ಬಹು ದಿವಸ ಬಾಳಲಿಲ್ಲ. ಬಿಜ್ಜ, ಬಿಜ್ಜಣ, ತ್ರಿಭುವನಮಲ್ಲ, ನಿಶ್ಶಂಕಮಲ್ಲನೆಂಬ ಹೆಸರುಳ್ಳ ಬಿಜ್ಜಳನಾದರೂ ಶಕೆ ೧೦೮೩ರ ವರೆಗೆ ಚಾಲುಕ್ಯರ ಮಾಂಡಲಿಕನಾಗಿದ್ದನು. ಬವ್ಮರಸನಾದರೂ ಚಾಲುಕ್ಯರ ಮಾಂಡಲಿಕನಾಗಿ ಬಿಜ್ಜಳನ ಕೈಕೆಳಗಿನವನಾಗಿದ್ದಿರಬಹುದು. ಬಿಜ್ಜಳನ ಮರಣದನಂತರ ಕಲಚೂರೀ ರಾಜ್ಯದ ಕಟ್ಟು ಸಡಿಲಾಗಲು, ಹೊಯ್ಸಳರು ಪ್ರಬಲರಾಗಿ ಕಳಚೂರ್ಯರ ರಾಜ್ಯವನ್ನು ಆಕ್ರಮಿಸಹತ್ತಿದರು. ಆ ಕಾಲಕ್ಕೆ ಚಲುಕ್ಯ ವಂಶದ ನಾಲ್ಕನೆಯ ಸೋಮೇಶ್ವರನು, ಉತ್ಸಾಹಿಯೂ, ಹಿರಿಯರ ರಾಜ್ಯವನ್ನು ತಿರುಗಿ ತೆಗೆದುಕೊಳ್ಳಲು ಅಪೇಕ್ಷೆಯುಳ್ಳವನೂ, ಆಗಿರುವುದು ಸ್ವಾಭಾವಿಕವು. ಅಂಥ ಪ್ರಸಂಗದಲ್ಲಿ ಮೊದಲಿಂದಲೂ ಅವನ ವಂಶದವರು ಒಳ್ಳೇ ನಿಷ್ಠರೂ ಅಭಿಮಾನಿಗಳೂ ಆಗಿದ್ದರೋ ಅಂಥ ಬವ್ಮರಸನ ಸಹಾಯವನ್ನು ತೆಗೆದುಕೊಂಡುದೂ, ಬವ್ಮರಸನಾದರೂ ಸಂತೋಷದಿಂದ ಸಹಾಯ ಮಾಡಿದುದೂ, ಅಸಂಭವನೀಯವಾಗಿ ತೋರುವದಿಲ್ಲ.

೨ ತೊರಗಲ್ಲಿನಿಂದ ಸ್ವಲ್ಪ ಉತ್ತರದ ಕಡೆಗೆ ಸುಮಾರು ಏಳು ಮೈಲು ಅಂತರದ ಮೇಲಿರುವ ಕಟಕೋಳವೆಂಬಲ್ಲಿ ಈತನದೊಂದು ಶಿಲಾಶಾಸನವು ದೊರೆಯಿತು. ಅದು ದುರ್ದೈವದಿಂದ ಒಡೆದು ಮೂರು ತುಂಡಾಗಿರುವುದು. ಅದರಲ್ಲಿಯ ಬಹಳ ಭಾಗವು ಕೆಟ್ಟು ಹೋಗಿದೆ. ಈ ಮೂರೂ ತುಂಡುಗಳು ಈಗ ಕಟಕೋಳ ಕಚೇರಿಯಲ್ಲಿ ಅವೆ. ಇವುಗಳಲ್ಲೊಂದು ಕೈದಿಗಳಿಗೆ ವಸ್ತ್ರ ಒಗೆಯಲಿಕ್ಕೂ ಇನ್ನೊಂದು ಕಾರ ಅರೆಯಲಿಕ್ಕೂ ಉಪಯೋಗವಾಗಹತ್ತಿವೆ. ಈ ಶಿಲಾಶಾಸನವು ಸಂಪೂರ್ಣವಾಗಿ ದೊರೆತಿದ್ದರೆ ಕರ್ಣಾಟಕ ಇತಿಹಾಸದೊಳಗಿನ ಒಂದು ಒಳ್ಳೇ ಮಹತ್ವದ ವಿಷಯವನ್ನು ನಿರ್ಣಯಿಸಲು ಬಹಳ ಉಪಯೋಗವಾಗುತ್ತಿತ್ತು. ಆದರೂ ಅದರಲ್ಲಿ ನಮಗೆ ದೊರೆತ ಕೆಲವು ಶಬ್ದಗಳನ್ನು ವಾಚಕರ ಮುಂದಿಡುವೆವು.

ಶಿಲಾಶಾಸನದ ಮೇಲ್ಭಾಗದ ಮಧ್ಯದಲ್ಲಿ ಗುಡಿ, ಅದರೊಳಗೆ ಲಿಂಗಪೂಜಕ, ಸೂರ್ಯ. ಚಂದ್ರ, ಲಿಂಗದ ಬಲಭಾಗಕ್ಕೆ ಬಸವ, ಎಡ ಭಾಗಕ್ಕೆ ಆಕಳು ಮತ್ತು ಮೊಲೆಯುಣ್ಣುವ ಕರು ಈ ಪ್ರಕಾರ ಚಿಹ್ನ ಗಳಿವೆ. ನಂತರ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ। ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥ ಸ್ವಸ್ತಿ ಸಮಸ್ತ ಭುವ......ಸುವರ್ಣ ವೃಕ್ಷಧ್ವಜಂ......ಡಮರುಗಾ......ವಿಭೂಷಣ ಕರ ......ಭುಜಬಳಮಲ್ಲದೇವ ವಿಜಯ ರಾಜ್ಯಮು......ನಿಗಳಂಕ......... ಶ್ರೀಮತು ಕಳಚುರ್ಯ......ಜಿತಾರ್ಜ್ಜುನಂ......ರುಸ್ತಂಬ ನಿರದೇ...... ರಕ್ರೀಡಾ ವಿನೋದ ಸಮಾ......ಸಂಗಭೂತಯುದೇ......ಭಂ ಸುರುದೆಂಬ ನಿತಾಯ.........ಮುದ್ರಮತಾಂ ಪಿರಿದಾ ಸಮುದ್ರದಿಂ......ಮಪ್ಪುರು ಭೂತಳಾಗ್ರದೊಳು......ಕುಲಗಿರಿಲಿಂಗ ವಿಮಲ......ಗದೊಳು ಬೆಳಗಿಸಿ ದಾನಿಯುಂದು ಕಟಕತ್ರಯುರಾ......ತಸಿ ಕ್ಷೇತ್ರ......ದು ಭೂತ......... ತನೂಜನಪ್ಪ ಶ್ರೀ ಮನ್ಮಹಾಮಂಡಳೇಶ್ವರ ಬಮ್ಮಿದೇವರಸ ......... ವೆಂತೆಂದಡೆ॥ ತುಂಗ ಭುಜಂಗ ಗೋತ್ರಜನ ವಾರಿಧಿ ಪೂರ್ಣಸುಧಾ ಕರಂಗೆ ......... ತ್ತ ಭವಂಗೆ ರಾಯದ ವರಿಗೆ ಗಂಡರನ್ನೆಗಳಿಗಂಡರ ನಾಮ ......... ವರರಿಗೆ ಭಂಡಾರಂ॥ರಾ ...... ದಿಗಂಬರ ದೇಶಮಂ ತಗುಳ್ದಾಯತಿಗೆಟ್ಟರಣ್ಯಮೆ ಶರಣ್ಯೆನುತಂ ಮಾತು ........... ಶಕ ವರ್ಷ ೧೦೯೧ ನೇಯ ಸರ್ವಧಾರಿ ಸಂವತ್ಸರದ ಕಾರ್ತ್ತಿಕ ಶುದ್ಧ ಸೋಮವಾರ ಸಂಕ್ರ ......... ಶ್ರೀ ಮನ್ ಮಹಾಮಂಡಳೇಶ್ವರಂ ಭಂಡಾ ರವಾಡಂಕದ ಕುಳದ ಶ್ರೀ ಮೂಲಸ್ಥಾನ ದೇವರ ನಿತ್ಯ ...... ......... ಸ್ಥಾನ ಮೆಂಬಾಯ್ಯ ದೇವಶಕ್ತಿ ಪಂಡಿತರ ಸುಮಂತ್ರ ............ * ...... (ಮುಂದಿನ ಭಾಗವು ಉಪಲಬ್ಧವಿಲ್ಲ. ಇದರಲ್ಲಿಯ ಸಾಲುಗಳನ್ನು ಕಂಡುಹಿಡಿಯಲು ಸಾಧ್ಯವಿಲ್ಲದುದರಿಂದ ಸಾಲಿನ ಅಂಕಿಗಳನ್ನು ಬರೆ

---

* ಇದರಲ್ಲಿಯ ಮಹಾಮಂಡಳೇಶ್ವರ ಬಮ್ಮರಸನೂ, ತೊರಗಲ್ಲ ಶಿಲಾಶಾಸನದ ಮಹಾಮಂಡಳೇಶ್ವರ ಬಮ್ಮರಸನೂ, ಒಂದೇ ಎಂಬುದು "ಭೂತ ....... ತನಜನಪ ಶ್ರೀ ಮನ್ಮಹಾಮಂಡಳೇಶ್ವರ ಬಮ್ಮಿ ದೇವರಸನ .... ವೆಂತೆಂದಡೆ" ಎಂಬುದು "ಭೂತರಸ ಪ್ರಿಯತನೂಜನಪ್ಪ ಶ್ರೀಮನ್‍ಮಹಾಮಂಡಳೇಶ್ವರ ಬಮ್ಮರಸನ ಪರಾಕ್ರಮವೆಂತೆಂದಡೆ" ಯೆಂದೂ ಇರಬೇಕೆಂದೂ, "..... ಭೂತಯುದೇ ...... " ಯೆಂಬುವ ಈ ವಂಶ ಸ್ಥಾಪಕನಾದ ಮೊದಲನೆಯ ಭೂತಯುದೇವನ ಹೆಸರೂ ಇರುವುದರಿಂದ ಗೊತ್ತಾಗುವುದು.

ದಿಲ್ಲ.) ಈ ಶಿಲಾಲೇಖದಲ್ಲಿ "ಶ್ರೀಮತು ಕಳಚೂರ್ಯ" ಕಳಚೂರ್ಯರ ಗುರುತಾದ "ಸುವರ್ಣ ವೃಷಧ್ವಜ" "ಡಮರುಗ ವಿಭೂಷಣಕರ" ವೆಂಬ ಶಬ್ದಗಳಿರುವುದರಿಂದ ಕಳಚುರ್ಯ ಅರಸರಿಗೂ, ಈತನಿಗೂ, ಸಂಬಂಧ ವಿತ್ತೆಂದು ಗೊತ್ತಾಗುವದು. ಈ ಸಂಬಂಧವನ್ನು ಸೂಚಿಸುವ ಭಾಗವು ದುರ್ದೈವದಿಂದ ಕೆಟ್ಟುಹೋಗಿದೆ. ಶಿಲಾಲೇಖದ ಕಾಲವಾದ ಶಕೆ ೧೦೯೧ ರಲ್ಲಿ ಬಿಜ್ಜಳರಾಜನು ಕಲ್ಯಾಣದಲ್ಲಿ ವೈಭವದಿಂದ ರಾಜ್ಯವಾಳುತ್ತಿದ್ದನು. ಇದರ ಆದಿಯಲ್ಲಿರುವ "ಭುಜಬಳ ಮಲ್ಲದೇವ" ನು ಬಿಜ್ಜಳನೇ ಆಗಿ ರುವನು. ಈತನು ಬಿಜ್ಜಳನ ಮಾಂಡಲೀಕನೆಂಬುದಂತೂ ಸ್ಪಷ್ಟವು. ಕಳಚೂರಿ ಅರಸರ ಸತ್ತೆಯು ಈ ಭಾಗದಲ್ಲಿ ನೆಲೆಗೊಂಡಿತ್ತೆಂಬುದು ತೊರಗಲ್ಲದಿಂದ ಸುಮಾರು ೩ ಮೈಲು ಅಂತರದ ಮೇಲಿರುವ ಸುಣ್ಣಾ ಳದ ಶಿಲಾಲೇಖದಿಂದ ಗೊತ್ತಾಗುವುದು.

ಈ ಶಿಲಾಶಾಸನದಲ್ಲಿರುವ ಈತನ ವರ್ಣನೆಯ ಪದ್ಯಗಳಿಂದ ಈತನು ಬಲು ಪರಾಕ್ರಮಿಯೂ, ಚಕ್ರವರ್ತಿಗಳ ಪ್ರೀತಿಗೆ ಪಾತ್ರನಾದ ವನೂ, ಆಗಿದ್ದು ಚಕ್ರವರ್ತಿಗಳ ಅಪ್ಪಣೆಯ ಮೇರೆಗೆ ಪರರಾಯರ ಮೇಲೆ ದಂಡೆತ್ತಿ ಹೋಗುತ್ತಿದ್ದನೆಂಬುದು "ಅಂತೆಸೆವ ಪರಾಕ್ರಮಂ ಬೆರಸು ಚಕ್ರವರ್ತಿಗಳ ಹೇಳಿಕೆಯಿಂ ಮುಂಗುಳದಾಯದಿಂ ನಾಲ್ಕು ದಿಶಾ ವರಕ್ಕಂ ನಡೆದು ಪೇಳ್ದ ಕೆಲಸವಂ ಸಾಧ್ಯಂ ಮಾಡಿ" ಎಂಬ ಶಬ್ದಗ ಳಿಂದ ತಿಳಿಯುವದು. ಆದುದರಿಂದ ಫ್ಲೀಟಸಾಹೇಬರು ಬರ್ಮ್ಮರಸನು ಈತನೇ ಇರಬೇಕೆಂದು ನಮ್ಮ ಗ್ರಹಿಕೆ.

ಶಕೆ ೧೧೧೦ ರಲ್ಲಿ ಈತನ ರಾಜ್ಯಕ್ಕೊಳಪಟ್ಟ ನಾಡುಗಳು:— ಲೋಕಾಪುರ ಹನ್ನೆರಡು, ಹೊಳಲುಗುಂದ ಮೂವತ್ತು, ದೊಡ್ಡವಾಡ ನವಿ ಲುಗುಂದ ನಾಲ್ವತ್ತು, ಕೊಳನೂರ ಮೂವತ್ತು. ರಾಜಧಾನಿ — ತೊರ ಗಲೆ ಮಹಾಬಂಟ ವೈರಿಗಳನ್ನು ಸದೆಬಡೆದು "ದಂಡಿನ ಗೋವ" ನೆಂಬ ಪದವಿಯನ್ನು ಪಡೆದವನ, ಮಹಾದಾನಿ, ಶೂದ್ರಕ, ಗಾಂಗೇಯ, ಕರ್ಣ ರಿಗೆ ಸಮಾನನಾದವನು.

ಈ ಬರ್ಮಭೂಪಾಳನ ಹೆಂಡತಿ ಸುಗ್ಗಲದೇವಿ. ಈಕೆಯು ಮಹಾ ಪತಿವ್ರತೆ. ಪಾರ್ವತಿ, ಲಕ್ಷ್ಮಿ, ಸರಸ್ವತಿಯರಂತೆ ಜನರಿಗೆ ಕಾಣುತ್ತಿ ದ್ದಳು; ದಾನಶೂರಳು; ಶಿವನ ಪರಮಭಕ್ತಳು. ತೊರಗಲ್ಲದಲ್ಲಿ ಸುಗ್ಗ

ಲೇಶ್ವರ ದೇವಾಲಯವನ್ನು ಮಾಡಿಸಿ, ತನ್ನ ಗಂಡನ ಕೈಯಿಂದ ದಾನ ಮಾಡಿಸಿರುವಳು. ಈಕೆಯು ಬಸವಪುರಾಣದಲ್ಲಿ ಹೇಳಿದ ದೇವರ ದಾಸಿ ಮಾಯ್ಯರ ಶಿಷ್ಯಳಾದ ಸುಗ್ಗಲದೇವಿಯಿಂದ ಭಿನ್ನಳು. ಏಕೆಂದರೆ ಆಕೆಯ ಗಂಡನು ಹೊಟ್ಟಲಕೆರೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಚಲುಕ್ಯ ವಂಶದ ಮುಮ್ಮಡಿ ಜಯಸಿಂಹ [ಕ್ರಿ. ಶ. ೧೦೧೮-೧೦೪೨) *

ಮೇಲಿನ ನಮ್ಮ ಊಹೆಯ ಪ್ರಕಾರ ಮಹಾಮಂಡಳೇಶ್ವರ ಬಮ್ಮರಸನು ಬಸವಣ್ಣನವರ ಸಮಕಾಲದವನಾಗುವನು. ಆವ ಕಳಚೂರಿ ಬಿಜ್ಜಳನ ಮಹಾಪ್ರಧಾನನು ಬಸವಂಣನಾಗಿದ್ದನೋ ಅದೇ ಬಿಜ್ಜಳನು ಚಲುಕ್ಯರ ಮಾಂಡಲಿಕನಿದ್ದ ಕಾಲದಿಂದ ಕಲಚೂರಿ ರಾಜ್ಯದ ಪರಿಸಮಾಪ್ತಿಯ ವರೆಗೆ ದಂಡನಾಯಕನಾಗಿದ್ದನು. ಈ ಬಮ್ಮರಸನು ಕಳಚೂರಿ ಅರಸರ ಅಭ್ಯುದಯವನ್ನೂ, ಅವನತಿಯನ್ನೂ, ಕಣ್ಣಾರೆ ಕಂಡವನು. ಪುನಃ ಚಲುಕ್ಯರ ರಾಜ್ಯಪ್ರತಿಷ್ಠಾಪಕನು. ಆದುದರಿಂದ ಈತನ ಚರಿತ್ರೆಯನ್ನು ಹೆಚ್ಚಾಗಿ ಶೋಧಿಸಿದರೆ ಬಸವಣ್ಣನವರ, ಮತ್ತು ಲಿಂಗವಂತರ ವಿಷಯಕ್ಕೆ ಹೆಚ್ಚು ವಿಶ್ವಸನೀಯವಾದ ಆಧಾರಗಳು ದೊರೆಯಬಹುದೆಂದು ಶೋಧಕರಿಗೆ ಅರುಹುವ ಕಾರಣವಿಲ್ಲ.

ಈತನ ಹೆಂಡತಿ ಸುಗ್ಗಲದೇವಿ. ಪರಮ ಮಾಹೇಶ್ವರಿ. ಈತನ ದಂಡಾಳುಗಳ ಮುಖ್ಯ ಹೆಗ್ಗಡ ಚವುಡಮಯ್ಯನ ಮಗ ಹೆಗ್ಗಡೆಮಲ್ಲಯ್ಯ. ಇದು ಅಲ್ಲದೆ ಕಾಳಾಮುಖ ಸ್ವಾಮಿಗಳಿರಬಹುದಾದ ದೇವಶಕ್ತಿ ಪಂಡಿತರಲ್ಲಿ ಭಕ್ತಿಯುಳ್ಳವನು. ಇವೆಲ್ಲ ಕಾರಣಗಳಿಂದ ಒಳ್ಳೇ ಭಕ್ತಿವಂತನಾದ ಶೈವನಿದ್ದನೆಂಬುದನ್ನು ಎಲ್ಲರೂ ಒಪ್ಪಿಕೊಳ್ಳಲು ಅಡ್ಡಿ ಇಲ್ಲ. ಆ ಕಾಲದಲ್ಲಿ ಉಜ್ವಲತೆಯನ್ನು ಹೊಂದಿದ ವೀರಶೈವ ಧರ್ಮಕ್ಕೂ, ಈತನಿಗೂ, ಏನಾದರೂ ಸಂಬಂಧವಿದೆಯೋ ಹೇಗೆಂಬುದನ್ನು ನಿರ್ಣಯಿಸಲು ಸಾಕಷ್ಟು ಆಧಾರಗಳಿಲ್ಲ. ಶೋಧಕರು ಇತ್ತಕಡೆಗೆ ತಮ್ಮ ದೃಷ್ಟಿಯನ್ನು ತಿರುಗಿಸುವರೆಂದು ನಮ್ಮ ಆಸೆ.

---

Fleet's Dynasties of Kanarese Districts P. 44.

# ಶಿಲಾಲೇಖದ ಮೂಲ.

೧

ಓಂ। ನಮಸ್ತುಂಗ--ಶಿರಶ್ಚುಂಬಿ--ಚಂದ್ರ ಚಾಮರ--ಚಾರವೇ
ತ್ರೈಳೋಕ್ಯ-ನಗರಾರಂಭ-ಮೂಲ ಸ್ತಂಭಾಯ ಶಂಭವೇ॥

೨

ಸ್ವಸ್ತಿ ಸಮಧಿಗತ-ಪಂಚಮಹಾ ಶಬ್ದ--ಮಹಾಮಂಡಳೇಶ್ವರಂ

೩

ಭುಜಬಳವೀರ (೦) ನಿಗಳಂಕಮಲ್ಲ (೦) ಗೇಣಾಕಾರರಾಚಾರ್ಯ್ಯಂ ನುಡಿ
ದಂತೆ (ನಡೆವಂ) ಗಂಡ (ರ) ಗಂಡ (೦) ಮಾರ್ತಂಡ (೦) ಜಗದೋರ್ವ್ವ

೪

ಗಂಡಂ ಶ್ರೀಮದಾಹವಮಲ್ಲ ಭೂತೇಯದೇವನ ಪರಾಕ್ರಮ ವೆಂತೆಂದಡೆ॥೦॥

**ಉತ್ಪಲ.** ೫

ಮುಂತಿರೆ ಪಂಚಲಂ ಬೆಸಸಿ ಪಿಂತಿರೆ ನೂರ್ಮ್ಮಡಿ ತೈಲನಾಂತ ಸಾ
ಮಂತ ಕದಂಬಕಂ ತೊಲಗೆ ಪಂಚಲನಂ ಪೆಣದಿಕ್ಕಿಕೊಂದ ಶೌ

೬

ರ್ಯ್ಯಂ ತನಗಾಗೆ ಚಕ್ರಿಕುಡೆ ಕಾಳ್ದಿದನಾಹವಮಲ್ಲ ನಾಮ ವಿ
ಕ್ರಾಂತದೆ ಮಂಡಳೇಶ ಪದಮಂ ನೆಗಳ್ದಾಹವಮಲ್ಲ ಭೂತಿಗಂ॥

೭

ಇಂತು ಪೆಸರ್ವೆತ್ತಾಹವಮಲ್ಲ ಭೂತೇಯದೇವನಿಂ ತತ್ಪ್ರಿಯ
ತನೂಜಂ ಡಾವರ ಮಲ್ಲ ಭೂಪನಿಂ ತತ್ತನೆ [ನ]ಯಂ ಚಟ್ಟಮಹೀಪಾ

೮

ಳನಿಂ ತತ್ತನೂಭವಂ ಡಾವರ ಮಲ್ಲನಿಂ ತದಪ್ಯಂ ಕಲಿಯುಗ ಯುಧಿ

೯

ಷ್ಠಿರಂ ಚಟ್ಟರಸನಿಂ ತಂನಂದನಂ ಮಂಡಳಿಕ ಮುಖದರ್ಪ್ಪಣ ನರಸಾ
ಸವಾರಿ--ಮದನ--ಮಹೇಶ್ವರನುಮೆಂಬ ಬಿರುದುಗಳಂನ್ವತ್ಥಮಾಗೆ ನೆಗಳ್ದ

೧೦

ಮಹಾಮಂಡಳೇಶ್ವರಂ ಭೂತರಸನಾತನ ಪರಾಕ್ರಮವೆಂತೆಂದಡೆ॥

ಕಂದ ಕೇಳ್ವನ ಕಿವಿಯೊಳು ಗೂಂಟಮ
ನಾಳ್ವನೆಗಂ ಬೆಟ್ಟತೆನಿಸು--ಯೊಟ್ಟಜಿವಿರುದಿಂ

೧೧

ದೇಳ್ವರೆ ಒಕ್ಕೆಯೊಳದಟು
ವ್ವೇಳ್ವನೆಗಂ ನಿಗಳವಿಕ್ಕಿದಂ ಭೂತನೃ[ನೃ]ಪ(೦)॥

**ಚಂಪಕ.** ೧೨

ಸ [ಶ] ರಧಿತರಂಗ ಮಾವರಿಸಿದಂಬರ ವುಂನತ ಮೇರು ಭೂಧರಂ ಗುರುಕುಚ ಮಬುಜ (ಬ್ಜ) ಷಂಡವನುರಾಗ ಮನಾರ್ಜ್ಜಿಸುವಾನನಂಲಸ ೧೩ ತ್ಸರ ನಿಚಯಂ ವಿಭೂಶ (ಷ) ಣ ಮೆನಲ್ಪರಿ ರಾಜಿಪ ನಂದನಾತಿ ಪಿ ಸ್ತರತೆಯು ನಾಂತು ವಿಶ್ವಧರಣೀವಧುಸೋ [ಶೋ] ಬಿಸುಗುಂ ನಿರಂತರಂ॥

೧೪

ಅಂತಾ ಪ್ರಿ [ಪೃ] ಥ್ವೀಮಧ್ಯದ ಮೇರು ಪರ್ವತದ ದಕ್ಷಿಣ ದಿಗು ಭಾಗದ ಭರತ ಕ್ಷೇತ್ರದೊಳು॥

ಕಂದ ಅಂತೊಪ್ಪನಾಂತ ಧಾತ್ರೀ

೧೫

ಕಾಂತೆಯ ಕುಂತಳವೆನಿಪ್ಪ ಕುಂತಳವಂತಾ
ಕುಂತಳ ಶೋಭಾ ಮೌಕ್ತಿಕ
ದಂತೆ ಕರಂ ಸೊಗಯಿಸಿಕ್ಕು ತೊರಗಲೆ ದೇಶಂ॥

ಅಲ್ಲಿ॥

**ಚಂಪಕ.** ೧೬

ನೆರೆದ ಕಾ [ಕ] ವುಂಗು ಬಗ್ಗಿಸುವ ಕೋಗಿಲೆ ತಳ್ತಲೆವಳ್ಳಿ ಸುತ್ತಲುಂ ತುರುಗಿ ತಳುರ್ತ್ತ ಮಾಮರ--ನಿಕಾಯುಮುಗುರ್ವ್ವಿನ ಕರ್ಪ್ಪುರದೋಂಟವಿಂ
೧೭
ತರಿಕೆಯ ಚಾರುನಂದನವನಾವಳಿ ರಾಜಿಸೆ ಸೋ [ಶೋ] ಭೆ ವೆತ್ತುದೀ
೧೮
ತೊರಗಲೆ ಭೂತನಾಥವಿಭುವಿಂ ಬಳಿಸಿರ್ಪ್ಪ ಮಲಪ್ರಹಾರಿಯಿಂ॥

ಅಂತಾ ದೇಶವುನಾಳ್ವ ಭೂತೇಯದೇವನ ಪ್ರಿಯ ತನೂಜಂ ಬರ್ಮ್ಮ ೧೯ ಭೂಪಾಳನ ಪರಾಕ್ರಮವೆಂತೆಂದಡೆ॥

**ಉತ್ಪಲ.**

ಟಂಟಣಿಸುತ್ತವಿರ್ಪ್ಪರಿ ನ್ರಿ (ನೃ) ಪಾಳರ ಹಿಂಡ ನಿಜಾಸಿದಂಡದಿಂ
೨೦
ಕಂಟೆಯ ಬಾರದೊಳ್ಸಳಿಸಿ ಪಾಣಿಯರದ ನೀರನೂಡಿ ನಿಃ
ಕ್ಕ [ಕ]ಂಟಕ ವಾಗೆಮಾಡಿ ಸಡೆದಂ ಸಲೆದಂಡಿನ ಗೋವನೆಂಬುದಂ
೨೧
ಬಂಟರ ಬಲ್ಲಹಂ ನೆಗೆದ ಬಲ್ಲಹರೊಳ್ಕಲಿ ಬರ್ಮ್ಮ ಭೂಭುಜಂ॥

ಮತ್ತೇಭ.

ಅರಿಭೂಪಾಳಕರೊಡ್ಡಿದಲ್ಲಿ ದಿಟದಿಂ ಪುಂಣ್ಯಾಂಗನಾನೀಕ ಸೌಂ
೨೨
ದರವಂ ಕಂಡೆಡೆಯಲ್ಲಿ ವಂದಿನಿಕರಂ ಕಯ್ಯಂತೊಡಂತಲ್ಲಿ ನಿ
೨೩
ರ್ಸ್ವರ ವೀರಂ ಶುಚಿ ದಾನಿ ಶೂದ್ರಕನೊಳಾ ಗಾಂಗೇಯನೊಳ್ಕರ್ಣನೊ
ಳ್ಸರಿಸಂ ದಂಡಿನ ಗೋವ ಬರ್ಮ್ಮ ಮಹೀಪಂ ವಿಶ್ವಂಭರಾ ಭಾಗದೊಳು॥
೨೪
ಅಂತೆಸೆವ ಪರಾಕ್ರಮಂ ಬೆರಸು ಚಕ್ರವರ್ತ್ತಿಗಳ ಹೇಳಿಕೆಯಂ
ಮುಂಗುಳದಾಯುದಿಂ ನಾಲ್ಕು ದಿಶಾವರಕ್ಕಂ ನಡೆದು ಹೇಳ್ದ ಕೆಲಸವಂ
೨೫
ಸಾಧ್ಯಂ ಮಾಡಿ ಹಡೆದ ಲೋಕಾಪುರ ಹಂನೆರಡು ಹೊಳಲುಗುಂದ
೨೬
ಮೂವತ್ತು ದೊಡ್ಡವಾಡ ನವಿಲುಗುಂದ ನಾಲ್ವತ್ತು ಕೊಳನೂರು ಮೂವತ್ತು
ಇಂತೀ ದೇಶಂಗಳನಾಳುತ್ತಂ ಬರ್ಮ್ಮಭೂಪಾಳಂ ತೊಱಗಲೆಯುಲು ಸುಖ
೨೭
ಸಂಕಥಾವಿನೋದದಿಂ ರಾಜ್ಯಂಗೆಯ್ವುತ್ತಿರೆ॥ ಆ ಬರ್ಮ್ಮಭೂಪಾಳನ
೨೮
ಸರ್ವ್ವಾಂಗ ಲಕ್ಷ್ಮಿಯಪ್ಪ ಸುಗ್ಗಲದೇವಿಯರ ಗುಣಾತಿಶಯವೆಂತೆಂದಡೆ॥

ಚಂಪಕಃ

ಸತತ ಮದೀಯ ದೇಯ್ವ [ವ] ವಪ್ರಿ [ವ್ಪ] ತೇಶ್ವರ ನೀನಿಗಳಂಕ ಬರ್ಮ್ಮಭೂ
೨೯
ಪತಿಪತಿಯಂ [ಮ] ನ್ಯಥಾಪಿ ಸ [ಶ] ರಣಿಲ್ಲೆನಗೆಂದು ತ್ರಿಗುಪ್ತಿಯುಕ್ತ ಶು
ದ್ಧತೆಯನುದಗ್ರ ಪುಂಣ್ಯನಿಧಿ ಸುಗ್ಗಲದೇವಿ ಲಸಚ್ಚರಿತ್ರೆ ಭೂ
೩೦
ಶಿ [ಷಿ] ತೆ ಘುಟಸರ್ಪ್ಪವಂ ಹಿಡಿದು ಗೆಲುದಳಿಳಾತಳವೆಯ್ದೆ ಬಂಣಿಸಲು
೩೧
ಕಂದ॥ ಹರಿಯ ಸಿರಿ ಹರನ ಪಾರ್ವ್ವತಿ
ಸರಸಿಜ ಸಂಭವನ ವಾಣಿಯಂದತಿ ಮುದದಿಂ
ಧರೆಪೊಗಳೆ ನೆಗಳ್ದಪೆಂಪಿಂ
ಪರಮ ಪತಿಬ್ರ [ವ್ರ] ತೆಯೆನಿಸಿ ನೀನೆ ಸುಗ್ಗಲದೇವೀ॥

ಅಂತನೇಕ ಗುಣಗಳಾಳಂಕ್ರಿ[ಕ್ಷ]ತೆ ಸಿತಪತ್ರನೇತ್ರೆ ದಾನವಿವಾ
೩೩
ಜಿತೆ ಗೋತ್ರಪವಿತ್ರೆ ಪರಮಮಾಹೇಶ್ವರಿಯು ಮೆನಿಸಿ ನೆಗಳ್ದ ಶ್ರೀಸುಗ್ಗಲ
ದೇವಿಯರು ತಾವು ಮಾಡಿಸಿದ ಶ್ರೀಸುಗ್ಗಲೇಶ್ವರ ದೇವರ್ಗ್ಗೆ॥ ಸ[ಶ]ಕ ವರ್ಷ೯
೩೪
೧೧೧೦ನೇಯ ಪ್ಲವಂಗ ಸಂವತ್ಸರದ ಪುಶ್ಯ(ಷ್ಯ)ಬಹುಳ ೧೦ ವಡ್ಡವಾರ
೩೫
ವುತ್ತರಾಯಣ ಸಂಕ್ರಮಣ ವ್ಯತೀಪಾತದಲು ಬಂಮ್ಮಿದೇವರಸರ ಕಯ್ಯ
೩೬
ಲು ಸುಗ್ಗಲದೇವಿಯರಿಸಿಕೊಂಡು ಹಾಳ ಹೊಳೆಯ ಹೊಲದೊಳಗೆ ದೇವ
ದೇವನೆನಿಪ್ಪ ಶ್ರೀಸುಗ್ಗಲೇಶ್ವರ ದೇವರ ಧೂಪ ದೀಪ ನೈವೇದ್ಯ ತಾಂಬೂ
೩೭
ಳಕ್ಕಾ ಚಂದ್ರಾರ್ಕ್ಕತಾರಂ ಬರಂ ನಡವಂತು ಕೊಟ್ಟ ಮತ್ತೆರೆಡು ಕಂಬಂ
೩೮
ನಾನೂರ ಯುಯಿತ್ತು ಅದಕ್ಕೆ ಸೀಮೆ

ತೆಂಕಲು ಕುಂಬಾರಗೆರೆಯಿಂ ಮೂಡಲು ಸುರುಗನ ಹೊಳಿಂಗೆ
೩೯
ಹೋದ ಬಟ್ಟೆ ಪಶ್ಚಿಮದಲು ಕುಂಬಾರಗೆರೆಯಿಂ ಬಂನಿ· ವೂರಿಂಗೆ
೪೦
ಹಳ್ಳವಂ ದಾಂಟಿ ಹೋದ ಬಟ್ಟೆ ಬಡಗಲು ಬೆಲಗುಪ್ಪೆ ಮೂಡಲು ಹೆಗ್ಗಡೆ
ಚವುಡಮಯ್ಯ ನಾಯಕರ ಮಗ ಹೆಗ್ಗಡೆ ವಲ್ಲಯ್ಯನ ಕೆಯಿ॥
೪೧

ಆ ದೇವರ ಮುಂದಣ ಕಲ್ಲಗಾಣವ ಮಾನೆಣ್ಣೆಯುಂ ದೇವರ ನಂದಾ
ದೀವಿಗೆ (ಗೆ) ಕೊಟ್ಟರು.
೪೨

ಯಿವನೀಯುಂದದಿನೆಯ್ದೆ ಪಾಳಿಸಿದವಂಗೆ ಸ್ವಾತ್ರ್ಥ (ರ್ಥ) ಸಂಸಿದ್ಧಿ
ಸಂಭವಿ.........ಳಿದಂಗೆ ಗಂಗೆ ಗಯ ಕೇದಾರಂ ಕುರುಕ್ಷೇತ್ರ .........
ಪಾರ್ವರಂ ಗೊರವರಂ ಗೋಬ್ಬ (ವ್ವ) ಂದವಮಂ ......... ಕೊಂದಿಕ್ಕಿದ
೪೩
ಪಾಪ— ಮೆಯ್ದುಗಂ.........

(ಶಿಲಾಶಾಸನದಲ್ಲಿರುವ ತಪ್ಪು ಅಕ್ಷರಗಳಿಗೆ, ಸರಿಯಾದ ಅಕ್ಷರಗಳನ್ನು ಅವುಗಳ ಮುಂದೆ [ ] ಈ ಚಿಹ್ನದೊಳಗೆ ಹಾಕಿರುವೆವು. ಶಿಲಾಶಾಸನದಲ್ಲಿ ಹಾರಿದಂಥ ಮತ್ತು ನಮ್ಮ ಊಹೆಯ ಪ್ರಕಾರ ಸರಿಯೆಂದು ಕಂಡು ಬಂದ ಅಕ್ಷರಗಳನ್ನು ( ) ಈ ಚಿಹ್ನದೊಳಗೆ ಹಾಕಿರುವೆವು. ಶಿಲಾಲೇಖವನ್ನು ಸ್ವತಃ ಕಂಡು ಬರೆದುಕೊಂಡು ಬಂದ ಪ್ರತಿಯಿಂದಲೂ, ಸ್ವತಃ ತೆಗೆದುಕೊಂಡು ಬಂದ ಮಸಿಯ ಮುದ್ರಣದ ಸಹಾಯದಿಂದಲೂ, ಮೂಲವನ್ನು ತಯಾರಿಸಿರುವೆವು. ಅಕ್ಷರಗಳು ಶಿಲಾಲೇಖದಲ್ಲಿ ಹೇಳಿದ ಕಾಲಕ್ಕೆ ಸರಿಹೋಲುವುವೆಂದು ನಮ್ಮ ತಿಳುವಳಿಕೆ.)

# ಎಚ್ಚರವಿರಲಿ ನಿನಗೆ !!

ಲೇಖಕಃ— ಲ. ಅ. ಶಿರಹಟ್ಟಿ ಶಾಲಾ ಮಾಸ್ತರ ವಿಜಾಪುರ.

(ಇಂಗ್ಲಿಷ ಗೀತೆಗಳ ಮಾದರಿ.)

೧ ಮೈಯು ಮಾಣಿಕ ಕಾಂತಿ, ಕೈಯೊಳಗೆ ಕಂಕಣವು,
ಬಿಂಕದಿಂದೆರಗಿದನು ಗುರು ಚರಣಕೆ;
ಶುಭವಾಗಲೇಳೆನ್ನು; ಮದುವೆಗೈದೆವು ನಿನ್ನ;
ಒದಗಿದುದು ಭವದ ಬಂಧನವು ಜೋಕೆ.

೨ ಎಚ್ಚರಿಕೆ, ಎಚ್ಚರಿಕೆ! ಎಚ್ಚರ ವಿರಲಿ ನಿನಗೆ!!
ಮುಚ್ಚು ಮಾಯೆಗಳಿಂದ ಮರೆಗೊಳದಿರು;
ಕೊಚ್ಚಿಕೊಳದಿರು ಜನಕೆ ಬೇಕಿಹೆನು ನಾನೆಂದು;
ಹುಚ್ಚನೆಂಬರು ಹಿಂದೆ, ಹೊಗಳುವವರು.

೩ ಆಲಸ್ಯವನು ದೂಡು, ಉತ್ಸಾಹವನು ತಾಳು.
ಕಾಲನಿಂ ಕ್ರೂರ ಹಗೆ ಆಲಸ್ಯವು.
ಕಾಲನೊಯ್ಯುವನೊಂದೆ ಜೀವವಂ; ಆಲಸ್ಯ
ಒಯ್ಯುವುದು ಸುಖಕೀರ್ತಿ ಜೀವಗಳನು.

೪ ತಿಳಿ ಮನದಿ ತಿಳಿದು, ಕೆಲಸಗಳನೆಸಗುವದೊಳಿತು;
ಅಳಿದಬಳಿಕೊಳಿತೆಸಪುದಳವಲ್ಲವು.
ಹಾಲೊಳಗೆ ಹುಳಿಯಿಡಲು ಹುಳಿಮೊಸರಹುದು; ತಿರುಗಿ
ಹಾಲಾಗದೇನಾದರಾ ಮೊಸರವು.

೫ ಜಾಣನಾಗಿರು ನೀನು; ಜಾಣನೆಂದುಬ್ಬದಿರು;
ಜಾಣನೆನಿಸಲು ಜಗದಿ ಬಯಸಬೇಡ;
ಜ್ಞಾನವನು ಗಳಿಸು; ಪರ ಹಿತಕೆ ದೇಹವ ಸವಿಸು;
ಜಾಣ್ಮೆಯಿಂದೊಡಲನೇ ಪೊರೆಯಬೇಡ.

೬ ಸ್ವಾರ್ಥಸಾಧನೆಯೆಂಬ ಭೂತಕಾಡುತಿಯುಹುದು
ಸ್ವಾರ್ಥಸಾಧಕನಾತ್ಮವೇ ಸತತವು;
ಸ್ವಾರ್ಥಕೆಡೆಯಾಗದಿರು; ಲೋಕಹಿತವೆಸಗುತಿರು;
ಸಾರ್ಥಕವಹುದು ಲೋಕದೊಳು ಜನ್ಮವು.

೭ ಲೋಕಹಿತವೆಸಗುತಿರಲೆಡರೊದಗುವದು ಸಹಜ,
ಬರಿಬರಿದೆ ಅರಿಗಳಾಗುವರು ನರರು.
ತೊರೆಯದಿರು ಧೀರತೆಯು; ಎಡರಿಲ್ಲದೆ ಜಸವ
ಪಡೆಯುವುದು ಸಾಧ್ಯವೇ ಪೇಳು ನರರು?

೮ ಆಗದರ ನಿಂದೆಯಿಂ ಕುಂದೇನಹುದು ನಿನಗೆ?
ಸಾಗದಿರು ಆಗದರ ನೋಳ್ಪೆನೆಂದು.
ಲೋಕಾಪವಾದವೊಂದೊದಗದಂದದಲಿ ನಡೆ;
ಅದು ಬರಲು ಬದಿಗಾಗುವುದು ಕಠಿಣವು.

೯ ಬಲು ಸುಖವು! ಸುಖವೆಂದು ನಚ್ಚದಿರು ಸಿರಿಯನ್ನು!
ತೊಲಗಲಿವಳದಕಿಂತ ಬಲು ದುಃಖವು!!
ಸುಖಕೆದುಃಖಕೆ ಸಿರಿಯು ಕಾರಣಳು ತಾನಲ್ಲ;
ಸತತ ಸಂತೃಪ್ತಿಯಿಂದಹುದು ಸುಖವು.

೧೦ ಭೋರೆಂದು ಭರದಿ ಮಂದರಗಿರಿಯು ತಿರುಗುತಿರೆ,
ವಾರಿಧಿಯೊಳುದಯಿಸಿದಳಂದು ಸಿರಿಯು;
ಓರಂತಿರಲು ಜನ್ಮಸಂಸ್ಕಾರ ತಿರತಿರನೆ
ತಿರಿಯುವಳು ಒಂದೆಡೆಯೊಳಿರಳಾಕೆಯು.

೧೧ ಶರದೃತುವಿನೊಳು ಮೇಘಗಳು ಸಂಚಲಿಸುವಂತೆ,
ಮಾನವನ ಸಂಪತ್ತುಗಳು ಚಲಿಸುತಿಹವು.
ಮೇಘಗಳ ಕೂಡ ಬರುವುದು ಕವಿದಕತ್ತಲೆಯು;
ಸಂಪತ್ತಿನೊಡನಿರುವುದಾಪತ್ತಿಯು.

೧೨ ಗೋಶಿರಕೆ ಗಾಯವಾಗಲು ಕುಹಕ ಕಾಗೆಗಳು
ಕೂಗಿ ಕೂಡುವುವೆಲ್ಲ ಕಾಲವಿದೆಯೆಂದು;

ಒಡಲುರಿಯು ತೀರ್ಚವುವೈ. ಹಿಂದು ಗಾಯದ ವಾಂಸ;
ಹಸುವಿಗಾಗುವ ಹಿಂಸೆ ನೋಡವೆಂದು.

೧೩ ಗೌರವದ ಮಾನವಗೆ ಕುಂದೊದಗಲದರಂತೆ
ದಾರಿಯನೆ ನೋಳ್ಪ ಸ್ವಾರ್ಥದ ನೀಚರು
ಕೂಡಿ ಕಾಡುವರವನ ಕುಂದಿನೊಳೆ ನೊಂದಿಸುತ;
ಸೆಳೆಯುವರು ಧನಬಲವ; ದಯದೋರರು.

೧೪ ಮುಳಿದಗಿವುದಾ ಪಾವು ತುಳಿದಾಗ ತನ್ನನ್ನು;
ತುಳಿಯದಲೆ ಖಳನು ತಾ ಮುಳಿದಗಿವನು.
ಇಳೆಯಿದನು ತಿಳಿದಂಜುವುದು ಖಳಗೆ; ಖಳನ ಬಳಿ
ಸುಳಿಯದಿರು; ಸುಳಿಯೆ ಗೈಯ್ವನು ಕೇಡನು.

೧೫ ನೀಚರ ವಿರೋಧದಿಂದುಚ್ಚರಿಗೆ ಕುಂದಹುದು;
ನೀಚ ಜನದೊಡನಾಟದಿಂದಾದರು
ಉಚ್ಚರಿಗೆ ನೀಚ ಗುಣಗಳು ಬರುವುದರಿದೇನು?
ನೀಚರಿಂ ದೂರಿಹುದುಚಿತವುಚ್ಚರು.

೧೬ ರೂಪಾದಿಗಳ ಮೆಚ್ಚಿ ಸುಖಕೆಂದು ವಿಷಯಗಳ
ಬೆಂಬಳಿಸಿ ಬಳಲದಿರು ಭ್ರಮೆಯಿಂದಲಿ;
ಸುಮವೆಂದು ಬಂಗಾರಕೆರಗಿದೊಡೆ. ಮರಿದುಂಬಿ,
ಬಳಲುವುದು ಬರಿದೆ ರಸವಿರದದರಲಿ.

೧೭ ವಿಧಿಯಂತೆ ಪೇಳಿದೆನು ನಿನಗೆರಡು ಮಾತುಗಳ;
ಉಳಿದುದೇನಂತಿರುವೆ ಮೊದಲೆಲ್ಲವ.
ಧರ್ಮವಂ ತ್ಯಜಿಸದಲೆ, ಮನವನನುಸರಿಸದಲೆ,
ನಡೆದು ನೀಗುವುದು ಮಗು ಸಂಸಾರವ.



# ಇತಿಹಾಸದ ಕಣಗಳು.

ಲೇಖಕ:—ಗೆಳೆಯರ ಗುಂಪಿನ ಚನ್ನಮಲ್ಲ ಹಲಸಂಗಿ

## ಬಸವಣ್ಣನಿಗಿಂತ ಮುಂಚಿನ ಶರಣರು
## ದಾಸಿಮಾರ್ಯ.

ಗಿರಿಜಾಕಲ್ಯಾಣವನ್ನೂ ಪಂಪಾಶತಕ ರಕ್ಷಾಶತಕಗಳನ್ನೂ ಬರೆದ ಹಂಪೆಯ ಹರಿಹರದೇವನೇ ಶಿವಶರಣರ ರಗಳೆಯನ್ನೂ ಬರೆದಿದ್ದಾನಷ್ಟೆ. ಇವನ ಯಾವ ಗ್ರಂಥಗಳಲ್ಲಿಯೂ ಬಸವಣ್ಣನವರ ಹೆಸರಿಲ್ಲ. ಆದರೆ ಇವನ ಅಳಿಯ ರಾಘವಾಂಕನು ಸ್ವತ: ಬಸವಣ್ಣನ ಶರಣ ಮಂಡಳಿಯೊಳಗೊಬ್ಬನಾದ ಸೊಲ್ಲಾಪುರದ ಸಿದ್ಧರಾಮನ ಪುರಾಣವನ್ನು ಬರೆದಿದ್ದಾನೆ. ಅಲ್ಲದೆ ಅದರಲ್ಲಿ ಬಸವಾದಿ ಪ್ರಮಥರ ಸ್ತುತಿಯೂ ಇದೆ. ಇದನ್ನು ನೋಡಿದರೆ ಬಸವಣ್ಣನವರ ಮೇಲಾಗಲಿ, ಅವರ ಶರಣರ ಮೇಲಾಗಲಿ, ಹರೀಶ್ವರನಿಗೆ ದ್ವೇಷವಿದ್ದಿತೆಂದು ಹೇಳಬೇಕು, ಇಲ್ಲದಿದ್ದರೆ ಬಸವಣ್ಣನವರು ಖ್ಯಾತಿಗೆ ಬರುವದಕ್ಕಿಂತ ಶೀರ ತುಸು ಮುಂಚೆಯೇ ಅವನು ಮರಣಹೊಂದಿರಬೇಕು. ಇವೆರಡರ ಹೊರತು ಇನ್ನೇನೂ ಹೇಳಲಿಕ್ಕೆ ಬರುವಂತಿಲ್ಲ. ಹರಿಹರನ ಪಂಪಾಶತಕವನ್ನೋದಿದವನಿಗೆ ಹರಿಹರನ ಹೃದಯವೆಂಥ ದಿವ್ಯಭಕ್ತಿ, ಪ್ರೀತಿಗಳ ನೆಲೆಯೆಂಬುದು ಸಹಜವಾಗಿ ತಿಳಿಯುವಂತಿದೆ. ಅಂಥಾ ಭಕ್ತಶಿರೋಮಣಿಯಾದ ಹರಿಹರನ ಹೃದಯವು ದುಷ್ಟವಾಗಿದ್ದಿತೆಂದು ಹೇಳುವುದಕ್ಕೆ ಯಾವನಿಗೂ ಸಾಹಸವಾಗದು. ಈ ಕಾರಣದಿಂದಲೂ, — ಮತ್ತು ಇವನು ಬರೇ ಪುರಾತನರ ಕಥೆಗಳನ್ನೇ ಬರೆದದ್ದರಿಂದಲೂ, — ಪಂಪಾಶತಕದಲ್ಲಿ ಪುರಾತನರಿಗೇ ಶಿವಶರಣರೆಂದು ಹೇಳಿ. ಕೊಂಡಾಡಿದ್ದರಿಂದಲೂ, ಇವನು ಬಸವಣ್ಣನವರು ಪ್ರಧಾನಪಟ್ಟವನ್ನೇರುವುದಕ್ಕೆ ಮುಂಚಿತವಾಗಿಯೇ ಹರೀಶ್ವರನು ಕಾಲವಾಗಿದ್ದನೆಂದು ಹೇಳಬೇಕಾಗುತ್ತದೆ.

ಪಂಪಾಶತಕದ— ಕೆಳಗಿನ ಮೂರು ಪದ್ಯಗಳಿಂದ ಶರಣರ ಬಗ್ಗೆ ಅವನಿಗಿದ್ದ ಆದರವು ವ್ಯಕ್ತವಾಗುವದು.

ಶರಣಂ ಸಂಸಾರಿಯೇ ಮಾಣ್ ಮುಸಿಮುಸಿಯುನಿಸಂ
ಕಾಮಿಯೇ ಪೇಳಲೆಂತುಂ। ಶರಣಂ ತಾಂ ಕ್ರೋಧಿಯೇ
ಸಲ್ಲದು ತೆಗೆ ಶರಣಂ ಮರ್ತ್ಯನೇ ಅಲ್ಲನೈ ಕೇಳ್ ॥ ಶರಣಂ
ನಿರ್ಮಾಯನೆಂತುಂ ಶರಣನತುಳ ನಿಷ್ಕಾಮಿ ಯೆಲ್ಲಂದ
ದಿಂದಂ। ಶರಣಂ ಶಾಂತಂ ನಿತಾಂತಂ ಶರಣನಮಮ
ತಾನೇ ವಿರೂಪಾಕ್ಷಲಿಂಗಂ ॥೪೩॥

ಉಣಿಸುಂ ಸ್ತ್ರೀಸಂಗಮುಂ ನಿದ್ರೆಯುಮಿವು ಮಲ ಮೂ
ತ್ರಂಗಳುಂ ಕುಂದುಗುಂ ಸ। ದ್ಗುಣಮುಂ ಶಾಂತತ್ವಮುಂ
ಕಾಂತಿಯು ಮುರುತರಮಾರೋಗ್ಯಮುಂ ಪೆರ್ಚುಗುಂ ಸಂ॥
ದಣಿಸಿದಾ ಕ್ರೋಧಮುಂ ಮತ್ಸರಮತಿಭಯಮುಂ ಮೋಹ
ಮುಂ ಗರ್ವಮುಂ ತ। ಲ್ಲಣಮುಂ ಶೀರ್ಗುಂ ದಿಟಂ
ನಿನ್ನಯ ನಿಜಶರಣಂಗಂ ವಿರೂಪಾಕ್ಷಲಿಂಗಾ ॥೪೫॥

ಪರಿಕಿಪರುಂಟೆ ಹಂಪಿಯಧಿನಾಥನ ಭಕ್ತರ ಸದ್ಗುಣಂ
ಗಳಂ। ಹರ ಹರ ಪೇಳ್ವೊಡೆನ್ನಳವೆಕೇಳ್ವೊಡೆ ನಿನ್ನಳವೇ ?
**ಪುರಾತನರ್** ॥ ಪರಿದುದೆ ಗಂಗೆ ನಿಂದುದೆ ಸುತೀರ್ಥ
ಮೊಡರ್ಚಿದುದೇ ಸುಕಾರ್ಯ ಮಿ॥ ನ್ನರಿಯುವರಿದುರ್ದೇ
ಸಭೆ ನಿರೀಕ್ಷಣೆಗೆಯ್ವುದೆ ಲೋಕಪಾವನಂ ॥೪೬॥

ಈ ಕೆಳಗಿನ ನಾಲ್ಕು ಪದ್ಯಗಳಲ್ಲಿ ಪುರಾತನರ ಹೆಸರುಗಳು ಬಂದಿವೆ. ಕೊನೆಯ ಪದ್ಯದಲ್ಲಿ **ಪುರಾತನರ ಹೆಸರುಗಳ ಜೊತೆಯಲ್ಲಿಯೇ ದಾಸಿಮಾರ್ಯನ ಹೆಸರೂ ಬಂದಿದೆ.**

ಅದು ಕಣ್ಣಪ್ಪನ ಪೂಜೆಯೆಂಜೆ ಬಗೆಯಲ್ ವೇದೋ
ಕ್ತಮೇ? ಬೇಂಟೆಯಾ। ಡಿದ ಜೊಮ್ಮಣ್ಣನ ಭಕ್ತಿ ಭಾವವರಿ
ಯಲ್ ವೇದೋಕ್ತಮೇ? ತಂದೆಯ॥ ನ್ನಟೆ ಚಂಡೇಶ್ವರ
ಪಿಳ್ಳೆ ಮಾಡಿದುದು ಪೇಳ್ ವೇದೋಕ್ತಮೇ? ಆತನೊ।
ಲ್ದುದೆ ವೇದಾಗಮನೀತಿ ಹಂಪೆಯ ವಿರೂಪಾಕ್ಷಂ ಲಲಾ
ಟೇಕ್ಷಣಂ ॥೪೭॥

ಕೊಡಂ ಭಕ್ತಿಪುರಸ್ಸರಂ ಮಗನನಾ ಶ್ರೀಯಾಳನೇ
ನಾಯ್ತು? ಪೇಳ್। ಕೊಂದಂ ಭಕ್ತಿಪುರಸ್ಸರಂ ಜನಕನಂ

ಚಂಡೇಶನೇನಾಯ್ತು ಪೋ! ॥ ಕೊಂದಂ ಭಕ್ತಿಪುರಸ್ಸರಂ
ಜನನಿಯುಂ ತಾಂ ರಾಮನಾಥಂಗದೇಂ। ಕುಂದಾಯ್ತೇ?
ತೆಗೆ! ಭಕ್ತಿಯುಳ್ಳೊಡೆ ಸದಾಚಾರಂ ವಿರೂಪಾಕ್ಷಲಿಂಗಾ ॥೫೫॥

॥ಶಿವಭಕ್ತರ್ ಮುಟ್ಟಿದಂಭಃ ಕಣಮೆ ಸಕಲತೀರ್ಥಂಗ
ಳೆಂದೆಂಬುದಂ ಕಂ। ಡೆವಲಾ ಕಣ್ಣಪ್ಪನೊಳ್! ಮಾಡಿದುದೆ
ಜಗಕೆ ಸನ್ಮಾರ್ಗವೆಂದೆಂಬುದಂ ಕಂ॥ ಡೆವಲಾ ಜೊಮ್ಮಣ್ಣ
ನೊಳ್! ಮುಟ್ಟಿದ ಧರೆ ಪರಮ ಕ್ಷೇತ್ರನೆಂದೆಂಬುದಂ ಕಂ।
ಡೆವಲಾ ಭೋಗಣ್ಣನೊಳ್ ಹೋ! ಶರಣರೆ ಪರದೈವಂ
ವಿರೂಪಾಕ್ಷ ನಿನ್ನಾ ॥೫೯॥

॥ಬಿಡು ಮಾಣ್ಮಾಣೆಲೆ ಬೊಮ್ಮವಾದಿ ಸಟೆಯುಂ ನೀಂ!
ನಂಬಿಗೋ ಯೆನ್ನನೇ। ಪ್ಪೊಡನಂದಾಡನೆ ನಮ್ಮ ಗೂಡಯುಸ
ಮುಂದಾ **ದಾಸಿಮಯ್ಯಂ** ಕೂಡ॥ ಲ್ಕೊಡನೇ ಸೀರೆಯನುಣ್ಣಾ
ನೇ ಸಿರಿಯನಾಳ್ವಂ ಪೇಳೆ ಕೈಲಾಸಮಂ। ಕುಡನೇ ಸೂರೆ
ಯನೆಮ್ಮ ನಿಂಬಿಗೆ ವಿರೂಪಾಕ್ಷಂ ಲಲಾಟೇಕ್ಷಣಂ ॥೬೬॥

ಹರಿಹರನು ಹೇಳಿದ ಶರಣರು ಬಸವಣ್ಣನವರಿಗಿಂತ ಪೂರ್ವಿಕರಾಗಿದ್ದಿರಲೇಬೇಕು. ಯಾಕೆಂದರೆ ಹರಿಹರನು ಬಸವಣ್ಣನವರಿಗಿಂತ ತುಸುವಾದರೂ ಮುಂಚಿನವನೆಂಬುದಕ್ಕೆ ಸಂದೇಹವೇ ಇಲ್ಲ. ಶಿವನಿಗೆ ಸೀರೆಯನ್ನುಡಿಸಿದ ದಾಸಿಮಯ್ಯನು ಬಸವಣ್ಣನವರಿಗಿಂತ ಪೂರ್ವಿಕನಾದ ಶರಣನೆಂಬುದೀಗ ಸಿದ್ಧವಾದಂತಾಯಿತು. ಇನ್ನು-

ಈ ದಾಸಿಮಯ್ಯನೇ ಚಾಳುಕ್ಯ ಜಗದೇಕಮಲ್ಲನ ಹೆಂಡತಿಯಾದ ಸುಗ್ಗಳದೇವಿಗೆ ಶಿವದೀಕ್ಷೆಯನ್ನಿತ್ತಹಾಗೆ ಅವನ ಸಂಸ್ಕೃತ ಪುರಾಣದಲ್ಲಿ ಹೇಳಿದೆಯೆಂದು ಶ್ರೀ। ಮಹಾಂತಣ್ಣನವರು ಇದೇ ಶಿವಾನುಭವದಲ್ಲಿ ಹಿಂದೊಮ್ಮೆ ಹೇಳಿದ್ದಾರೆ. ಆದರೆ ನಾನೋದಿದ ಶಂಕರ ದಾಸಿಮಯ್ಯನ ಕನ್ನಡ ಪುರಾಣದಲ್ಲಿ ಅವನೇ ಸುಗ್ಗಳದೇವಿಗೆ ದೀಕ್ಷೆಕೊಟ್ಟವನೆಂದೂ ದೇವರ ದಾಸಿಮಯ್ಯನ ಗರ್ವ ಹರಣ ಮಾಡಿದನೆಂದೂ ಹೇಳಿದೆ. ಏನೇ ಇರಲಿ. ಇವರಿಬ್ಬರೂ ದಾಸಿಮಯ್ಯಗಳೂ ಸಮಕಾಲಿಕರಿರಬಹುದು. ಮತ್ತು ಇವರಲ್ಲಿ ಯಾವನೋ ಒಬ್ಬ ದಾಸಿಮಯ್ಯನು ಸುಗ್ಗಳದೇವಿಯ ಮನ್ನಣೆಗೆ ಪಾತ್ರರಾಗಿರಬಹುದು. ಹೀಗೆಂದೂಹಿಸಲು ಅಡ್ಡಿಯಿಲ್ಲ.

ಜಗದೇಕಮಲ್ಲನೆಂಬ ಬಿರುದುಳ್ಳ ಚಾಳುಕ್ಯ ಜಯಸಿಂಹ ರಾಜನು ಕ್ರಿಸ್ತ ಶಕದ ೧೦೩೮ರಿಂದ ೧೦೫೦ರ ವರೆಗೆ ಆಳಿದನು. ಇವನ ಹೆಂಡತಿಯಾದ ಸುಗ್ಗಳದೇವಿಯು ಒಳ್ಳೇ ಪ್ರಖ್ಯಾತಳಿದ್ದಳೆಂಬುದಕ್ಕೆ ನನಗೊಂದು ಪ್ರಮಾಣವಿದೆ. ಅದೇನೆಂದರೆ—

ಸುಮಾರು ಕ್ರಿಸ್ತಶಕದ ೧೨೨೦ರಲ್ಲಿ ಬರೆದ ಒಂದು ಶಿಲಾಲಿಪಿಯಲ್ಲಿ ದ್ವಾರಸಮುದ್ರದ ರಾಜನಾದ ವೀರಬಲ್ಲಾಳನು ಸಾಯಲು ಅವನ ದಂಡನಾಯಕನಾದ ಕುಮಾರ ಲಕ್ಷ್ಮನೂ ಅವನ ಹೆಂಡತಿ ಸುಗ್ಗಳೆಯೂ ಅವನ ಸಾವಿರ ಮಂದಿ ಸೇವಕರೂ ಕೂಡಿ ಬೆಂಕಿಯಲ್ಲಿ ಹಾರಿ ಸುಟ್ಟುಕೊಂಡು ಸತ್ತರೆಂದು ಹೇಳಿದೆ. ಆ ದಂಡಾಧಿಪತಿಯ ಹೆಂಡತಿಯನ್ನು ಜಯಸಿಂಹನ ಹೆಂಡತಿಯಾದ ಸುಗ್ಗಳದೇವಿಗೆ ಸಮಾನಳೆಂದು ಹೇಳಿದೆ. ಆ ಪದ್ಯವನ್ನಿಲ್ಲಿ ಹೇಳುವೆನು—

॥ಜಯಸಿಂಹ ಕ್ಷಿತಿಪಾಳಕಂಗೆ ಜಗಮೆಲ್ಲಂ ಬಣ್ಣಿಸಲ್
ಪೂರ್ಣ್ದು ಭಾ। ಷೆಯನಾ **ಸುಗ್ಗಲದೇವಿ** ಕೊಟ್ಟ ತೆರದಿಂ ಬಲ್ಲಾ
ಳಭೂಪೋತ್ತಮ ॥ ಪ್ರಿಯ ಪುತ್ರಂಗೆ ಕುಮಾರ ಲಕ್ಷ್ಮ ರಥಿನೀ
ನಾಥಂಗೆ ಕೊಟ್ಟಳ್ ಮನಃ। ಪ್ರಿಯೆಯಿೂ ಸುಗ್ಗಲದೇವಿ
ಭಾಷೆಯನಿಳಾಚಕ್ರಂ ಪೊಗಳ್ವನ್ನೆಗಂ॥ *

ಇದನ್ನು ನೋಡಿದರೆ—೧೦೫೦ಕ್ಕೆ ಮುಂಚೆ ಇದ್ದ ಸುಗ್ಗಳದೇವಿಯು ೧೨೨೦ರ ಸುಮಾರಿಗೆ ಅಂದರೆ ೧೭೦ ವರ್ಷಗಳನಂತರ ಅನ್ಯರಾಜ್ಯದಲ್ಲಿ ಕೂಡ ಇಷ್ಟೊಂದು ಆದರ್ಶವತಿಯಾಗಿದ್ದಿರಬೇಕಾದರೆ ಅವಳು ತನ್ನ ಜೀವಮಾನಕಾಲದಲ್ಲಿ ಒಳ್ಳೇ ಪ್ರಖ್ಯಾತಳಿರಲೇಬೇಕು. ಇಂಥವಳು ಶಿವದೀಕ್ಷೆ ಹೊಂದಿರದಿದ್ದರೂ ಶರಣರನ್ನು ಮನ್ನಿಸಿರುವ ಸಂಭವವಾದರೂ ಇದೆ. ಇದರ ಮೇಲಿಂದ ಬಸವಣ್ಣನವರ ಕಾಲದ ಶಿವಶರಣರ ಚಳವಳದ ಮೂಲಾರಂಭವು ಅವರಿಗಿಂತ ನೂರು ವರ್ಷಗಳಿಗೆ ಮೊದಲೇ ಸಣ್ಣಾಗಿ ಆರಂಭವಾಗಿತ್ತೆಂದು ತೋರುತ್ತದೆ.

---

* ಈ ಶಿಲಾಲಿಪಿಯು ಹಳೇ ಬೀಡಿನಲ್ಲಿ (ಪ್ರಾಚೀನ ದ್ವಾರಸಮುದ್ರದಲ್ಲಿ) ಇದೆ. ಇದು ಮೈಸೂರು ಶಾಸನಗ್ರಂಥ ಮಾಲೆಯ ಹಾಸನ ಜಿಲ್ಹೆಯ ಪುಸ್ತಕದಲ್ಲಿ ಬೇಲೂರ ತಾಲೂಕಿನ ೧೧೨ ನೇ ನಂಬರಿನಲ್ಲಿ ಅಚ್ಚಾಗಿದೆ.

## ೨ ತ್ರಿಷಷ್ಠಿ ಪುರಾತನರು.

ಲಿಂಗವಂತರು ಪುರಾತನರನ್ನು ತಮ್ಮವರೆಂದು ಹೇಳಿಕೊಳ್ಳಹತ್ತಿ ಬಹು ದಿನಗಳಾದವು. ಬಸವಣ್ಣನವರ ವಚನಗಳಲ್ಲಿ ಇವರ ಹೆಸರುಗಳು ಅಡಿಗಡಿಗೆ ಬರುತ್ತವೆ. ಅಲ್ಲದೆ ಹಂಪೆಯ ಹರಿಹರೇಶ್ವರನು ಶಿವಶರಣರ ರಗಳೆಯೆಂಬ ತನ್ನ ಗ್ರಂಥದಲ್ಲಿ ಇವರ ಪುರಾಣವನ್ನೇ ಹೇಳಿದ್ದಾನೆ. ಅಲ್ಲದೆ ಬಸವಣ್ಣನವರ ವಂಶದವರದೊಂದು ಶಿಲಾಲಿಪಿಯು ಅರ್ಜುನವಾಡದಲ್ಲಿ ಇತ್ತೀಚೆಗೆ ಸಿಕ್ಕಿದ್ದು ಅದರಲ್ಲಿಯೂ ಬಸವಣ್ಣನವರ ಮರಿಮಗನಿಗೆ "ತೇಸಠ್ಠಿ ಪುರಾತನ ಪಾದಾಚಕಂ" ಎಂದು ಹೇಳಿದೆ. ಅಲ್ಲದೆ ವೀರಶೈವ ಸಿದ್ಧಾಂತ ಶಿಖಾಮಣಿಯಲ್ಲಿಯೂ ಕೂಡ (೧೧ನೇ ಪರಿಚ್ಛೇದದಲ್ಲಿ)—

ಅತ್ಯಂತ ಪಾಪಕರ್ಮಾಪಿ ಶಿವಭಕ್ತ್ಯಾವಿಶುದ್ಧ್ಯತೇ||
ಚಂಡೋಯಥಾಪುರಾ ಭಕ್ತ್ಯಾಪಿತೃಹಾಪಿ ಶಿವೋಭವತ್ ||೫೦||

ಪುರಾತನರ ಕೊಂಡಾಟವಿದೆ. ಇದೆಲ್ಲಾ ನೋಡಿದರೆ ಈ ಪುರಾತನರೆಂಬವರು ಲಿಂಗವಂತರಿಗೆ ಪೂಜ್ಯರಾದ ಪುರಾಣ ಪುರುಷರೆಂಬುದು ನಿರ್ವಿವಾದದ ಮಾತು.

ಆದರೆ ಈ ಪುರಾತನರು ಅರುವತ್ತುಮೂವರೆಂಬ ಮಾತಿನ ಬಗ್ಗೆ ಒಂದು ಇತಿಹಾಸವನ್ನು ಹೇಳುವಂತಿದೆ. ಅದೇನೆಂದರೆ—

ಈ ದೇಶದಲ್ಲಿ ಜೈನರ ವಾಙ್ಮಯವು ಬಹಳೇ ವಿಸ್ತಾರವಾದದ್ದೂ ಮಹತ್ವದ್ದೂ ಇದೆ. ಇವರ ಪ್ರಾಚೀನ ಪುರಾಣ ವಾಙ್ಮಯವನ್ನು ಐತಿಹಾಸಿಕ ದೃಷ್ಟಿಯಿಂದ ಇನ್ನೂ ಹೆಚ್ಚಾಗಿ ಅಭ್ಯಾಸಮಾಡಿದವರಿಲ್ಲ. ಇವರ ೨೪ ತೀರ್ಥಂಕರರಲ್ಲಿ ೨೦ ತೀರ್ಥಂಕರರು ಕಲಕತ್ತೆಯ ಪ್ರಾಂತದ ಸಮ್ಮೇದ ಶಿಖರದಲ್ಲಿಯೂ ಇನ್ನುಳಿದವರು ಗಿರ್ನಾರ, ಪಾವಗಡ, ಕೈಲಾಸ ಶಿಖರ ಮುಂತಾದವುಗಳಲ್ಲಿಯೂ ಮೋಕ್ಷಕ್ಕೆ ಸಂದಿರುವುದಾಗಿ ಜೈನರು ಇದು ವರೆಗೂ ಆಯಾ ಸ್ಥಾನಗಳನ್ನೂ ಸಿದ್ಧ ಕ್ಷೇತ್ರಗಳಾಗಿ ಪರಿಗಣಿಸಿರುವುದನ್ನು ಐತಿಹಾಸಿಕ ದೃಷ್ಟಿಯಿಂದ ವಿಮರ್ಶಿಸಿ ಸಿದ್ಧಪಡಿಸಿದರೆ ಜೈನ ಧರ್ಮವೂ ಹಿಂದುಸ್ತಾನದಲ್ಲಿ ಆರ್ಯರು ಬರುವದಕ್ಕಿಂತ ಮುಂಚೆ ನೆಲೆಗೊಂಡಿದ್ದ ಬಹು ಪುರಾತನ ಧರ್ಮಗಳಲ್ಲೊಂದೆಂದು ಸಿದ್ಧವಾಗುವಂತಿದೆ

ಹಿಂದುಸ್ತಾನದಲ್ಲಿ ಈ ಜೈನರನ್ನು ಒಂದಿಲ್ಲೊಂದು ಬಗೆಯಿಂದ ಹುರುಡುಗಟ್ಟಿದವರು ಬಹಳ. ಬೌದ್ಧರೂ ಕೂಡ ಶಾಕ್ಯಮುನಿ ಗೌತಮ

ಬುದ್ಧನಿಗಿಂತ ಮೊದಲು ಇನ್ನೂ ಇಪ್ಪತ್ತುಮೂರು ಮಂದಿ ಬುದ್ಧರಾಗಿ ಹೋದರೆಂದೂ, ತಮ್ಮ ಧರ್ಮವೂ ಸನಾತನವೆಂದೂ, ಹೇಳುವರು. ಹೇಳುವರೆಂಬುದಿಷ್ಟೇ ಅಲ್ಲ. ಅಶೋಕಮಹಾರಾಜನ ಶಿಲಾಲಿಪಿಯಲ್ಲಿಯೂ ಕೂಡ ೨೩ ನೆಯವನಾದ ಕನಕಮುನಿಬುದ್ಧನ ಉಲ್ಲೇಖವಿದೆ. ನೇಪಾಳ ಪ್ರದೇಶದಲ್ಲಿ ಬಸ್ತಿ ಜಿಲ್ಲೆಯಲ್ಲಿ ರುಮ್ಮಿನದೇವಿ, ಮತ್ತು ನಿಗ್ಲೀವಾ ಎಂಬ ಎರಡು ಸ್ಥಳಗಳಲ್ಲಿ ಅಶೋಕ ಮಹಾರಾಜನ ಎರಡು ಶಿಲಾಲಿಪಿಗಳು ಸಿಕ್ಕಿವೆ. ( ಅಶೋಕಮಹಾರಾಜನು ಕ್ರಿಸ್ತನಿಗಿಂತ ಮೂರು ಶತಮಾನ ಮುಂಚಿನವನು. ) ಇವುಗಳಲ್ಲಿ ರುಮ್ಮಿನದೇವಿಯು ಗೌತಮಬುದ್ಧನ ಜನ್ಮಸ್ಥಾನವೆಂದೂ, ನಿಗ್ಲೀವವು ಕನಕಮುನಿಬುದ್ಧನ ಜನ್ಮಸ್ಥಾನ ವೆಂದೂ, ಹೇಳಿದೆ. x ಇಷ್ಟೇ ಅಲ್ಲ. ಜೈನರು ತಮ್ಮ ತೀರ್ಥಂಕರರು ಭೂತಕಾಲ ದಲ್ಲಿ ೨೪ ಮಂದಿ, ಈ ಕಾಲದಲ್ಲಿ ೨೪ ಮಂದಿ, ಬರುವಕಾಲದಲ್ಲಿ ೨೪ ಮಂದಿಯೆಂದು ಹೇಳುವಂತೆ ಬೌದ್ಧರೂ ಕೂಡ ತಮ್ಮ ಬುದ್ಧರ ಬಗ್ಗೆ ಹೇಳುತ್ತಾರೆ. * ಇದನ್ನು ನೋಡಿದರೆ ಜೈನರಂತೆ ಬೌದ್ಧರು —ಪುರಾತನರಾದ ಕೆಲವು ಜನ ಮಹಾಪುರುಷರನ್ನು ಹುಡುಕಿ ಆಯ್ದು ಒಟ್ಟುಗೂಡಿಸಿ ಸಂಖ್ಯಾಭರತಿಮಾಡಿದರೆಂದು ಸಿದ್ಧವಾಗುತ್ತದೆ.

---

x ರುಮ್ಮಿನ ದೇವೀ ಲಿಪಿ— ದೇವಾನ ಪಿಯೇನ ಪಿಯದಸಿನ ಲಾಜಿನ ವೀಸತಿವಸಾಭಿಸಿತೇನ ಅತನಆಗಾಚ ಮಹೀಯಿತೇ ಹಿದ ಬುಧೇ ಜಾತೇ ಸಕ್ಯಮುನೀತಿ ಸಿಲಾವಿಗಡಭೀಚಾ ಕಾಲಾಪಿತ ಸಿಲಾಥಭೇಚ ಉಸ ಪಾಪಿತೇ ಹಿದಭಗವಂಜಾತೇತಿ ಲುಂಮಿನಿ ಗಾಮೇ ಉಬಲಿಕೆ ಕಟೇ ಅಠಭಾಗಿಯೇಚ |

ನಿಗ್ಲೀವ ಲಿಪಿ—ದೇವಾನಂ ಪಿಯೇನ ಪಿಯದಸಿನ ಲಾಜಿನ ಚೋದಸವಸಾಭಿಸಿತೇನ ಬುಧಸ ಕೋನಕ ಮುನಸ ಥುಬೇ ದುತಿಯಂ ಬಢಿತೇ। ವೀಸತಿ ವಸಾಭಿಸಿತೇನಚ ಆತನ ಆಗಾಚ ಮಹೀಯಿತೇ ಸಿಲಾಥಬೇಚ ಉಸಪಾಪಿತೇ |

[ ರುಮ್ಮಿ— ಅಶೋಕನು ತನ್ನಾಳಿಕೆಯ ೨೦ ನೇ ವರ್ಷದಲ್ಲಿ ಶಾಕ್ಯಮುನಿಬುದ್ಧನ ಜನ್ಮಸ್ಥಾನಕ್ಕೆ ಬಂದು ಪೂಜಿಸಿ ಕಂಬ ನಿಲ್ಲಿಸಿದನು. ಈ ಲಂಬಿನೀ ಗ್ರಾಮದ ಕರವನ್ನು ತೆಗೆದುಹಾಕಿ ತೆರಿಗೆಯನ್ನು ೮ ನೇ ಪಾಲೆಂದು ಮಾಡಿದನು.

ನಿಗ್ಲೀವ— ಕನಕಮುನಿಬುದ್ಧನ ಗೋಪುರವನ್ನು ಅಶೋಕನ. ೧೪ ನೇವರ್ಷ ೨ ನೇ ಸಾರಿ ವೃದ್ಧಿಗೊಳಿಸಿದನು. ಮತ್ತು ಇಪ್ಪತ್ತನೇ ವರ್ಷ ಬಂದು ಪೂಜಿಸಿ ಶಿಲಾಸ್ತಂಭವನ್ನು ಸ್ಥಾಪಿಸಿದನು ]

* ಯೇಚಬುದ್ಧಾ ಅತೀತಾಚ ಯೇಚ ಬುದ್ಧಾ ಅನಾಗತಾ ॥ ಪಚ್ಚುಪನ್ನಾಚ ಯೇ ಬುದ್ಧಾ, ಅಹಂ ವಂದಾಮಿ ಸಬ್ಬದಾ॥
ಸಿಲೋನದ ಬೌಧ ಎದಹಿಲಾ

ಹೀಗೆಯೇ ಬೌದ್ಧರಂತೆ ಶೈವರಲ್ಲಿಯೂ ತೋರುತ್ತದೆ. ಅವರೂ ೬೩ ಮಂದಿಯನ್ನು ಹುಡುಕಿಕೊಂಡಂತೆ ತೋರುತ್ತದೆ. ಯಾಕಂದರೆ ಜೈನರಲ್ಲಿ ತ್ರಿಷಷ್ಠಿಶಲಾಕಾ ಮಹಾಪುರುಷರೆಂಬವರ ಮಹತ್ವವು ಶೀರ ಹೆಚ್ಚಾಗಿ ಇದೆ. ಈ ೬೩ ಮಂದಿ ಮಹಾಪುರುಷರ ಪುರಾಣಕ್ಕೇ ಅವರು ಮಹಾಪುರಾಣವೆನ್ನುವರು. ಈ ಅರವತ್ತುಮೂವರೂ ಒಂದೇ ವಿಧದ ಯೋಗ್ಯತೆಯುವರಲ್ಲ. ೨೪ ಮಂದಿ ತೀರ್ಥಂಕರರು; ೧೨ ಚಕ್ರವರ್ತಿಗಳು; ೯ ವಾಸುದೇವರು; ೯ ಬಲದೇವರು; ೯ ಪ್ರತಿವಾಸುದೇವರು; ಇವರೆಲ್ಲಾ ಕೂಡಿ (೨೪+೧೨+೯+೯+೯ = ) ೬೩ ಮಂದಿ ಮಹಾಪುರುಷರು. ಈ ತ್ರಿಷಷ್ಠಿಶಲಾಕಾ ಮಹಾಪುರುಷರ ಸಂಖ್ಯೆಯಲ್ಲಿ ತಾರತಮ್ಯದ್ದೊಂದು ವೈಶಿಷ್ಟ್ಯವಿದೆ. ಆದರೆ ತ್ರಿಷಷ್ಠಿ ಪುರಾತನರೆಂಬವರದು ಹೀಗಿಲ್ಲ.

ಹರಿಹರನ "ಶಿವಗಣದ ರಗಳೆ" ಯನ್ನು ಕುರಿತು ಹೇಳುವಾಗ ಕವಿಚರಿತ್ರಕಾರರು — "ಇದರಲ್ಲಿ — ತಮಿಳು ಭಾಷೆಯಲ್ಲಿರುವ ಪೆರಿಯ ಪುರಾಣವೆಂಬದರಲ್ಲಿ ಹೇಳಿರುವ ೬೩ ಮಂದಿ ಪುರಾತನರ ಕಥೆಗಳವೆ" ಎಂದು ಹೇಳಿದ್ದಾರೆ. ಜೈನರು ತಮ್ಮದಕ್ಕೆ "ಮಹಾಪುರಾಣ" ವೆಂದು ಹೆಸರಿಟ್ಟಂತೆ ತಮಿಳು ಶೈವರು "ಪೆರಿಯಪುರಾಣ" ವೆಂದು ಹೆಸರಿಟ್ಟದ್ದೂ ಮೇಲ್ಕಂಡ ಸಿದ್ಧಾಂತಕ್ಕೆ ಸಾಧಕವಾಗಿದೆ.

## (೩) ಶಿವಲಿಂಗ.

ಲಿಂಗವಂತರು ಲಿಂಗವನ್ನು ಶಿವಶಕ್ತಿಸಂಯೋಗದ ತತ್ತ್ವಸಂಕೇತ ವೆಂದು ಭಾವಿಸಿದ್ದಾರೆ. ಗದ್ದುಗೆಯೇ (ಪೀಠ) ಶಕ್ತಿಯೆಂದೂ ಪಿಂಡವೇ (ಲಿಂಗ) ಶಿವನೆಂದೂ ಇವರ ಮತ. ಆದರೆ—

೮ನೇ ಶತಮಾನದ ವರೆಗೆ ಶಿವಲಿಂಗದ ಬಗ್ಗೆ ಈ ಕಲ್ಪನೆಗಳಿದ್ದಿದ್ದಿಲ್ಲವೆಂದು ಊಹಿಸಲು ಕೆಲವು ಆಧಾರಗಳಿವೆ. ಹೇಗೆಂದರೆ—ಲಿಂಗದ ಪೀಠಕ್ಕೆ ಜಲಹರಿ, ಪಾನಬಟ್ಟಲ ಮುಂತಾದ ಪ್ರಚಲಿತ ಶಬ್ದಗಳಿವೆಯಷ್ಟೆ. ಈ ಪೀಠವು ದುಂಡಗಿನ ಆಕಾರದ್ದಿದ್ದು ಅಭಿಷೇಕದ ನೀರು ಹರಿದು ಹೋಗುವುದಕ್ಕೆ ಹರನಾಳಿಗೆಯುಳ್ಳದ್ದಾಗಿರುತ್ತದೆ. ಇಂಥ ಹರನಾಳಿಗೆಯುಳ್ಳ ಚೌಕು ಪೀಠಗಳು ದೇವದೇವಿಯರ ಪ್ರತಿಮೆಗಳಿಗೂ ಇರುತ್ತವೆ. ಇದನ್ನು ಬೇರೆ ಬೇರೆ ಪ್ರಾಚೀನ ದೇವಾಲಯಗಳಲ್ಲಿ ಕಂಡುಕೊಳ್ಳಬಹುದು. ಈ ವಿಷಯವು ಮೊದಲು ನನಗೆ ಕಣ್ಣಿಗೆ ಬಿದ್ದಾಗ

ಲಿಂಗಪೀಠ ದುಂಡಗೆಂದೂ ಅನ್ಯ ಪ್ರತಿಮೆಯ ಪೀಠ ಚೌಕೆಂದೂ ಭಾವಿಸಿಕೊಂಡಿದ್ದೆನು. ಆದರೆ ಮೊನ್ನೆ ಮೊನ್ನೆ ನಾನು ಎರಡನೇ ಸಲ ಸಂಗಮ, ಏಹೊಳೆ, ಪಟ್ಟದಕಲ್ಲು, ಬಾದಾಮಿಗಳನ್ನು ನೋಡಲಿಕ್ಕೆ ಹೋದಾಗ ಐಹೊಳೆಯ ಒಂದು ದೇಗುಲದ ಹತ್ತರ ಚೌಕು ಪೀಠದ ಲಿಂಗವನ್ನು ನೋಡಿದೆನು. ಆಗ ಹೆಚ್ಚು ಸೂಕ್ಷ್ಮವಾಗಿ ಪರೀಕ್ಷಿಸಲಿಕ್ಕೆ ನಿಂತೆನು. ಯಾಕಂದರೆ ಮೊದಲು ಅನ್ಯಪ್ರತಿಮೆಯಿರುವಲ್ಲಿ ಧರ್ಮಕ್ರಾಂತಿಯ ಚಳವಳಿಯ ಕಾಲದಲ್ಲಿ ಲಿಂಗಪ್ರತಿಷ್ಠೆಯಾಗಿರುವ ಸಂಭವವೂ ಉಂಟು. ಆದ್ದರಿಂದ ಬೇರೆ ಕೆಲವು ಲಿಂಗಗಳನ್ನು ಪರೀಕ್ಷಿಸಬೇಕೆಂದೆನು. ಆ ಪ್ರಕಾರ ನಾನು ಐಹೊಳೆಯಲ್ಲಿಯೇ ಇರುವ ಒಂದೇ ಕಲ್ಲಿನಲ್ಲಿ ಗುಡ್ಡದೊಳಗೆ ಕೊರೆದ ಶೈವಗವಿಯಲ್ಲಿ (ರಾವಳನಗವಿಯೆಂದು ಅಲ್ಲಿ ಹೇಳುವರು) ಲಿಂಗವಿದ್ದುದನ್ನು ನೆನೆದು ಅಲ್ಲಿಗೆ ಹೋದೆನು. ಅಲ್ಲಿ ಯಾವ ಚಿತ್ರಗೊಂಬೆಗಳನ್ನೂ ಹೊರಗಿನ ಕಲ್ಲಿನಿಂದ ಮಾಡಿ ನಿಲ್ಲಿಸಿಲ್ಲ. ಎಲ್ಲಾ ಮೂಲಗವಿಯ ಬಂಡೆಯ ಕಲ್ಲಿನಲ್ಲೇ ಕೆತ್ತಿದ್ದಾರೆ. ಆ ಗವಿಯ ಮುಖ್ಯ ಸ್ಥಾನದಲ್ಲಿದ್ದ ಅಖಂಡ ಲಿಂಗಕ್ಕೆ ಚೌಕಾದ ಗದ್ದುಗೆ ಇತ್ತು. ಅದು ಸುಮಾರು ೭ನೇ ಶತಮಾನದಲ್ಲಿ ಕೊರೆದ ಗವಿ. ಅದರಲ್ಲಿದ್ದ ಲಿಂಗವೂ ಅದೇ ಕಾಲದ್ದೆಂಬುದು ನಿಸ್ಸಂಶಯ. ಯಾಕೆಂದರೆ ಅದೂ ಅಲ್ಲಿಯ ಮೂಲ ಒಂಟು ಬಂಡೆಗಲ್ಲಿನೊಳಗೆ ಅಲ್ಲಿಯದಲ್ಲೇ ಕೊರೆದು ಮಾಡಿದ್ದಾಗಿದೆ. ಆಗ ನಾನು ಆ ಕಾಲದಲ್ಲಿ ಪೀಠವು ಗದ್ದುಗೆಮಾತ್ರವಾಗಿದ್ದು ಈಗಿನಂತೆ ಶಕ್ತಿ ಪದವಾಚ್ಯವು ಆಗಿರಲಿಲ್ಲವೆಂದು ಭಾವಿಸಿದೆನು. ಆಗ ಲಿಂಗವೆಂದರೆ ಮೇಲಿನ ಸಿಲಿಂಡರಿನಂಥ ಪಿಂಡವಷ್ಟೇ ಎಂಬ ಭಾವನೆಯಿದ್ದಿರಬೇಕೆಂದು ತಿಳಿದೆನು. ಆ ಮೇಲೆ ಪಟ್ಟದಕಲ್ಲಿಗೆ ಬಂದರೆ ಅಲ್ಲಿ ೮ನೇ ಶತಮಾನದ ಆದಿಭಾಗದಲ್ಲಿ ಬಾದಾಮಿಯ ಚಾಲುಕ್ಯ ವಿಕ್ರಮನ ಹೆಂಡತಿಯಾದ ಲೋಕಮಹಾದೇವಿಯು ಕಟ್ಟಿಸಿದ ಲೋಕೇಶ್ವರ (ಈಗ 'ವಿರೂಪಾಕ್ಷೇಶ್ವರ) ದೇವಾಲಯದಲ್ಲಿಯೂ ಇದೇ ಸ್ಥಿತಿ. ಆ ದೇವಾಲಯದಲ್ಲಿ ಒಳ್ಳೇ ಘನವಾದ, ಸುಂದರವಾದ, ಸತೇಜ ಲಿಂಗ ವಿದೆ. ಆ ಲಿಂಗದ ಪೀಠವಾದರೋ ತೀರಾ ಒರಟಾದ ಕೆಂಪು ಬೂರಸುಗಲ್ಲಿನ ಚೌಕು ಗದ್ದುಗೆಯೇ ಇದೆ. ಮೇಲಿನ ಲಿಂಗವೋ ನೋಡಿದರೆ ಹಸಿವು ನೀರಡಿಕೆ ಹಾರಬೇಕು; ಇಂಥ ಹೊಳಪುಳ್ಳ ಕರೇಕಲ್ಲಿನದು. ಇದನ್ನು ನೋಡಿದರೂ ನನಗೆ ಆ ಕಾಲದಲ್ಲಿ ಮೇಲಿನ ಪಿಂಡ

ಕ್ಕಿದ್ದ ಮಹತ್ವವು ಪೀಠಕ್ಕೆ ಎಳ್ಳಷ್ಟು ಇರಲಿಲ್ಲವೆಂದು ಸ್ಪಷ್ಟವಾಗಿ ಅನಿಸಿತು. ದ್ವಾದಶ ಜ್ಯೋತಿರ್ಲಿಂಗಗಳಲ್ಲೊಂದಾದ ಓಂಕಾರೇಶ್ವರ ಮಹಾಕ್ಷೇತ್ರದಲ್ಲಿ ನಾಲ್ಕುಮಂದಿಯು ತೆಕ್ಕೆಗೆ ಅಮರದಂಥ ಒಂದು ಒಳ್ಳೇ ದೊಡ್ಡ ಲಿಂಗವು ಪೀಠವಿಲ್ಲದೆ ಬರೇ ಪಿಂಡಮಾತ್ರವೇ ಇರುವದಾಗಿಯೂ ಕಾಶಿಯಲ್ಲಿ ತಿಲಭಾಂಡೇಶ್ವರನ ಬಲು ಎತ್ತರವಾದ ಲಿಂಗಕ್ಕೂ ಪೀಠವೇ ಇಲ್ಲವೆಂಬುದಾಗಿಯೂ ಪ್ರತ್ಯಕ್ಷದರ್ಶಿಗಳಾದ ನನ್ನೊಬ್ಬ ಶ್ರದ್ಧೇಯ ಸ್ವಾಮಿಗಳು ತಿಳಿಸುತ್ತಾರೆ. ಉಳಿದ ಪ್ರತಿಮೆಗಳಿಗೆಲ್ಲ ಹೇಗೋ ಹಾಗೆ ಲಿಂಗಕ್ಕೂ ಪೀಠವೆಂದರೆ ಬರೇ ಪೀಠವೇ ಸರಿ. ಗದ್ದುಗೆಯೇ ಸರಿ. ಪಟ್ಟದಕಲ್ಲಿನ ದೇವಾಲಯಗಳೆಲ್ಲ ಸಾಧಾರಣವಾಗಿ ಅದೇ ಕಾಲದವು. ಅವೆಲ್ಲವುಗಳಲ್ಲಿಯೂ ಪೀಠದ ಸ್ಥಿತಿಯು ಇದೇ. ಆ ಮೇಲೆ ಬಾದಾಮಿಗೆ ಬಂದು ನಾಲ್ಕು ಮೇಣಬಸ್ತಿಗಳಲ್ಲೊಂದಾದ ಶೈವ ಗುಹೆಯಲ್ಲಿಯೂ, ಐಹೊಳೆಯ ಗವಿಯಂತೆಯೇ ಲಿಂಗದ ಪೀಠ ಚೌಕೇ ಸರಿ.

ಇದನ್ನೆಲ್ಲಾ ನೋಡಿದರೆ ಎಂಟನೇ ಶತಮಾನಕ್ಕಿಂತ ಪೂರ್ವದಲ್ಲಿ ಡಬ್ಬಿ ಕೊಳಗದಂಥ ಸಿಲಿಂಡರಾಕಾರದ ಪಿಂಡಕ್ಕಷ್ಟೇ ಲಿಂಗವೆಂದನ್ನುತ್ತಿದ್ದರೆಂದೂ ಲಿಂಗವೆಂಬ ಶಬ್ದ ಕಿವಿಗೆ ಬಿದ್ದಾಗ ಪೀಠದ ಕಲ್ಪನೆಯೇ ಬಾರದೆ ಬರೇ ಪಿಂಡವೇ ನೆನಪಿಗೆ ಬರುತ್ತಿದ್ದಿತೆಂದೂ ಊಹಿಸಬಹುದಾಗಿದೆ. ಈಗೊಂದು ಸರಸ್ವತಿಯ ಪ್ರತಿಮೆ ಇದೆ ಎಂದು ತಿಳಿಯುವಾ. "ಸರಸ್ವತಿ" ಎಂಬ ಶಬ್ದ ನಮ್ಮ ಕಿವಿಗೆ ಬಿದ್ದರೆ ಪೀಠದ ಹೊರತು ಬರೇ ಮೂರ್ತಿಯ ಕಲ್ಪನೆ ನೆನಪಿಗೆ ಬಂದೀತೇ ವಿನಾ ಗದ್ದುಗೆಯ ನೆನಪಾಗಲಿಕ್ಕಿಲ್ಲ. ಯಾಕೆಂದರೆ ಪೀಠವೆಂಬುದು ಕೂತುಕೊಳ್ಳುವ ಮಣೆ, ಗದ್ದುಗೆ, ಕಟ್ಟೆ ಇಷ್ಟೇ ಸರಿ. ಇಷ್ಟೊಂದು ಮಹತ್ವವುಳ್ಳದ್ದು ಪೂಜಾ ಯೋಗ್ಯವಾದ ಮೂರ್ತಿಗೆ ಸರಿಗಟ್ಟಿಕೊಂಡು ಮುಂದೆ ಬರಲಾರದು.

ಮುಂದೆ ಕಲಾಕೌಶಲ್ಯದ ಉನ್ನತಿಯು ಮತ್ತೊಮ್ಮೆ ಆದ ಕಾಲದಲ್ಲಿ ಅಂದರೆ — ಕಲ್ಯಾಣದ ಚಾಳುಕ್ಯ ತ್ರಿಭುವನಮಲ್ಲ ವಿಕ್ರಮಾದಿತ್ಯನ ಕಾಲದಿಂದೀಚೆಗೆ — (ವಿಕ್ರಮನ ಆಳಿಕೆ ೧೦೭೬—೧೧೨೬ ಕ್ರಿಸ್ತ ಶಕ) ಲಿಂಗದ ಪೀಠವು ವರ್ತುಲಾಕಾರವನ್ನು ಹೊಂದಿದ ಹಾಗೆ ತೋರುತ್ತದೆ. ಯಾಕಂದರೆ ಆ ಕಾಲದಲ್ಲಿ ಕಲಾಕೌಶಲ್ಯವು ಒಳ್ಳೇ ಅಭಿವೃದ್ಧಿಗೆ ಬಂದಿತು. ಶಿಲಾಲಿಪಿಗಳ ಅಕ್ಷರಗಳನ್ನು ನೋಡಿದರೂ ಈ ಮಾತು ಸಿದ್ಧವಾಗುತ್ತದೆ.

ಯಾಕಂದರೆ ಇದೇ ಕಾಲದಲ್ಲಿಯೇ ಕನ್ನಡದ ಅಕ್ಷರಗಳು ಮುತ್ತಿನಂತಾದವು. ಅದು ಮೊದಲು ತೀರಾ ಒರಟೊರಟಾಗಿದ್ದವು. ಈ ಕಾಲದಲ್ಲಿ ಕಲಾಕುಶಲರ ಕಲ್ಪನಾಶಕ್ತಿಗೆ ಹೆಚ್ಚು ಅನುವು ದೊರೆತದ್ದು ಆ ಕಾಲದ ಕಲೆಯಲ್ಲಿ ಕಂಗೊಳಿಸುತ್ತದೆ. ಆಗ ಮೂರ್ತಿಗಳು ಇದಿರು ಮೋರೆ ಮಾಡಿ ಕುಳಿತಿರಲು ಅಥವಾ ನಿಂತಿರಲು ಅದು ಎಡಬಲಕ್ಕೆ ಉದ್ದಾಗಿಯೂ, ಇದಿರು ಬದಿರು ಕಿರಿಯಾಗಲಾಗಿಯೂ, ಇರುವ ಸಂಭವವಿರುವದರಿಂದ ಅದರ ಆಕಾರವನ್ನನುಸರಿಸಿ ಅದರ ಗದ್ದುಗೆಯೂ ಕೂಡ ಎಡಬಲಕ್ಕೆ ಉದ್ದಾಗಿಯೂ, ಇದಿರು ಬದಿರು ಕಿರಿದಾಗಿಯೂ, ಇರುವಂತೆ ಕಾಟಕೋಣ ಚೌಕೋಣಾಕಾರವಾಗಿ ಚೌಕಾದದ್ದಿರಲೇಬೇಕೆಂದೂ, ದುಂಡಗಿನ ಸುತ್ತಳತೆಯುಳ್ಳ ಲಿಂಗಕ್ಕೆ ಅದರ ಆಕಾರವನ್ನನುಸರಿಸಿ ದುಂಡಾಕಾರದ ಗದ್ದುಗೆಯಿರುವುದು ಚೆಂದವೆಂದೂ. ಶಿಲ್ಪಿಗಳು ಕಲ್ಪಿಸಿದರೆಂದು ತೋರುತ್ತದೆ. ಈ ಕಾರಣದಿಂದಲೇ ಸುಮಾರು ಈ ಕಾಲದಿಂದಿತ್ತೀಚಿನ ಕಾಲದ ಗುಡಿಗಳಲ್ಲೆಲ್ಲ ವರ್ತುಲಾಕಾರದ (ದುಂಡು) ಜಲಹರಿಯು (ಪೀಠವು) ಲಿಂಗಕ್ಕೆ ಇದ್ದದ್ದು ಕಾಣುತ್ತದೆ. ಅಲ್ಲದೆ ೧೧ ನೇ ಶತಮಾನದಿಂದಿತ್ತೀಚಿನ ಕಾಲದ ಲಿಂಗಗಳಿಗೆಲ್ಲ ಪೀಠಕ್ಕೂ ಲಿಂಗಕ್ಕೂ ಒಂದೇ ಬಗೆಯಾದ ಕಲ್ಲನ್ನು ಉಪಯೋಗಿಸಿ ಕಲಾದೃಷ್ಟಿಯಿಂದ ಎರಡಕ್ಕೂ ಸಮಾನ ಮಹತ್ವವನ್ನು ಕೊಟ್ಟಂತೆ ಕಾಣುತ್ತದೆ. ಪಟ್ಟದಕಲ್ಲಿನ ೮ ನೇ ಶತಮಾನದ ಗುಡಿಗಳಲ್ಲಿಯಂತೆ ಜ್ಯೋತಿರ್ಮಯವಾದ ಸೌಂದರ್ಯ ಪೂರ್ಣ ಲಿಂಗಗಳಿಗೆ ಕಾಸಿನ ಕಲ್ಲಿನ ಹುರಬರಕು ಒರಟು ಗದ್ದುಗೆಯನ್ನು ಮುಂದಿನ ಶತಮಾನಗಳಲ್ಲಿ ಮಾಡಿಲ್ಲ.

ಇದನ್ನೆಲ್ಲ ನೋಡಿದರೆ ೧೧--೧೨ ನೇ ಶತಮಾನಗಳಿಗಿಂತ ಮೊದಲು ಪೀಠಕ್ಕೆ ಮಹತ್ವವಿರಲಿಲ್ಲವೆಂದು ಸಿದ್ಧವಾಗುವದು.

ಆದ್ದರಿಂದ ಪೀಠಕ್ಕೆ ಶಕ್ತಿಯೆಂದೂ, ಪಿಂಡಕ್ಕೆ ಲಿಂಗವೆಂದೂ ಜೋಡಣೆ ಮಾಡಿ ಈ ಯುಗ್ಮವನ್ನು ಪೂಜಿಸುವುದು ಪ್ರಾಚೀನ ಪದ್ಧತಿಯಾಗಿರದೆ ಬಸವಣ್ಣನವರ ಕಾಲಕ್ಕೆ ತುಸು ಹಿಂದು ಮುಂದೆ ಎಂದೋ ರೂಢಿಗೆ ಬಂದಿರಬೇಕೆಂದು ಸಿದ್ಧವಾಗುತ್ತದೆ. ಈ ತತ್ವದಂತೆ ಲಿಂಗವನ್ನು ನಿರ್ಮಿಸಬೇಕೆಂದು ಹೇಳುವ ಗ್ರಂಥಗಳೆಲ್ಲಾ ಪುರಾತನವಲ್ಲವೆಂಬುದು ಸಿದ್ಧಾಂತವೇ ಸರಿ.

## (೪) ಸಿದ್ಧಾಂತ ಶಿಖಾಮಣಿ ಮತ್ತು ನೂರಾಒಂದು ಸ್ಥಲಗಳು.

ಸಿದ್ಧಾಂತ ಶಿಖಾಮಣಿಯು ಲಿಂಗವಂತರಿಗೆ ಪ್ರಾಚೀನ ಪ್ರಮಾಣ ಗ್ರಂಥ. ಇದನ್ನು ಬಿಟ್ಟರೆ ಪೂರ್ವದ್ದೆಂಬ ಇನ್ನಾವ ಪ್ರಮಾಣ ಗ್ರಂಥ ವಿಲ್ಲೆಂದು ಸದ್ಯಕ್ಕೆ ತಿಳಿಯಲ್ಪಟ್ಟಿದೆ. ಆದರೆ ಇದರ ಕಾಲವು ಬಸವಣ್ಣನವರ ಕಾಲಕ್ಕಿಂತ ಬಹಳ ಪ್ರಾಚೀನವಾಗಿರಲಾರದೆಂದು ನಿಶ್ಚಯಿಸುವುದಕ್ಕೆ ಕಾರಣ ಗಳಿಲ್ಲದೆ ಇಲ್ಲ. ನನಗೆನಿಸುವ ಮಟ್ಟಿಗೆ ಆ ಕಾರಣಗಳನ್ನಿಲ್ಲಿ ನಿವೇದಿಸುವೆನು.

ನೂರೊಂದು ಸ್ಥಲಗಳು "ಜೀವ" ದ ಉತ್ಕ್ರಾಂತಿಯ ಕ್ರಮ ಪರ್ಯಾಯಗಳೆಂದು ನನ್ನ ಮತ. ಹಾಗಿದ್ದುದಾದರೆ ಅದ್ವೈತ ಸತ್‌ವಸ್ತುವೊಂದರಲ್ಲಿ ಚಿತ್ ಶಕ್ತಿಯ ಪ್ರಕಾಶನವಾಗಿ ವಿಶ್ವವು ವ್ಯಕ್ತವಾಯಿತೆಂದು ಹೇಳಬಹುದು. ಇರುವಿನಲ್ಲಿ ಅರಿವುಂಟಾಗಿ ದೇವನಲ್ಲಿ ಜೀವ ಉದಿಸಿತೆಂದು ಭಾವಿಸಬಹುದು. ಈ ಜೀವವು ಪರವೆಯಿಲ್ಲದೆ ಸಂಸಾರ ಮೋಹದಲ್ಲಿ ಮುಳುಗಿ ದುಃಖಾತಿಶಯದಿಂದ ಕೊನೆಗೊಮ್ಮೆ ಎಚ್ಚತ್ತು ಸಂಸಾರಕ್ಕೆ ಬೇಸರಿಸಿ ಸತ್ಯದ ಸಂಧಾನಕ್ಕೆ ನಿಂತಿತು. ಇಲ್ಲೇ ಧರ್ಮದ ಆರಂಭ. ನನ್ನ ಅಭಿಪ್ರಾಯದಂತೆ ಇಲ್ಲಿಗೆ ಮೂರು ಸ್ಥಲಗಳು ಸಂದವು. ಅವು:— ೧ ಪಿಂಡಸ್ಥಳ, ೨ ಪಿಂಡಜ್ಞಾನಸ್ಥಳ, ಸಂಸಾರಹೇಯಸ್ಥಳ. ಈ ಅವಸ್ಥೆಯಿಂದ ಮುಂದೆ ಜೀವನಪ್ರವೃತ್ತಿಯಂತೆ ಒಂದು ಹಾದಿಹತ್ತಿತು. ಇಲ್ಲೇ ಭಕ್ತಿ, ಜ್ಞಾನ, ಯೋಗಗಳೆಂಬ ಮಾರ್ಗತ್ರಯದ ಆರಂಭ. ಹೃದಯ ಪ್ರಧಾನ ಜೀವವು, ವಿಶ್ವವು ವಿಶ್ವೇಶ್ವರನ ಕುರುಹೆಂದು, ಸೃಷ್ಟಿಯು ಸೃಷ್ಟಿಕರ್ತನ ಸೃಷ್ಟಿಯೆಂದು ಬಗೆದು, ಆ ದೇವನ ಮಹಿಮೆಗೆ ಬೆರಗಾಗಿ ಭಕ್ತನಾಗಿ ಭಾವರಾಜನಾಗಬಹುದು. ಬುದ್ಧಿಪ್ರಧಾನ ಜೀವಗಳು ತತ್ವಜ್ಞಾನದ ಸೆಳವಿಗೆ ಬಿದ್ದು ಜ್ಞಾನ ಮಾರ್ಗಿಗಳೂ ಯೋಗಮಾರ್ಗಿಗಳೂ ಆಗಬಹುದು. ದುರ್ಬಲ ಜೀವಿಗಳು, ನಿಶ್ವರಹಸ್ಯವನ್ನು ಬಿಚ್ಚಿ ಹೇಳಿ ಕೈಹಚ್ಚಿ ಎತ್ತುವ ಬಲ್ಲವರನ್ನು ಬಯಸಿ ಬಾಯ್ಬಿಡಬಹುದು. ಜೀವನು ತನ್ನ ಬಯಕೆಯನ್ನು ನೆರವೇರಿಸಬಲ್ಲಂಥ ಬಲ್ಲವನಿಗೇ ಗುರುತರನೆಂದು ಭಾವಿಸಿ ಕೃತಜ್ಞತೆಯಿಂದ ಗುರುವೆಂದೊಪ್ಪಿ ಸೇವಿಸಬಹುದು. ಇದೇ ಳನೆಯದಾದ ಗುರುಕಾರುಣ್ಯಸ್ಥಳವು. ಇಲ್ಲೇ ಸಂಪ್ರದಾಯಗಳ ಆರಂಭ. ದುರ್ಬಲ ಜೀವಗಳಿಗೆ ಸ್ವತಂತ್ರವಾಗಿ ಮುಂದರಿಯುವುದಕ್ಕೆ ಬಲವಿಲ್ಲದ್ದರಿಂದ ಅನ್ಯರ ಶಕ್ತಿಪಾತದ ಆಗತ್ಯವುಂಟು. ಇದಕ್ಕೇ ದೀಕ್ಷೆಯೆನ್ನುವುನು. ಈ ದೀಕ್ಷೆಯ ಫಲವೆಂದರೆ—ಜಿಜ್ಞಾಸು ಜೀವನಿಗೆ ಸಾಧನೋ

ಪಯುಕ್ತವಾದ ಶಕ್ತಿಪೂತ ಶಿವ ಚಿಹ್ನದ (ಲಿಂಗದ) ಲಾಭವೆಂದು ಲಿಂಗವಂತ ಮತೋಕ್ತ ರೀತಿಯಿಂದ ಹೇಳಬಹುದು. ಈ ದೀಕ್ಷೆಗೆ ಜನೆಯುದಾದ ಲಿಂಗಧಾರಣ ಸ್ಥಳವೆಂದು ಹೆಸರು. ಆ ಬಳಿಕ ಜೀವನು ಕ್ರಮವಾಗಿ ಸಾಧನೆಯಲ್ಲಿ ಮುಂದರಿಯುತ್ತ ಳಳನೆಯು ಅವಸ್ಥೆಯಲ್ಲಿ (ಸ್ಥಳದಲ್ಲಿ) ಜೀವಭಾವದಿಂದ ಮುಕ್ತನಾಗಿ ಆತ್ಮಭಾವ ಸಂಪನ್ನನಾದ ಜೀವನ್ಮುಕ್ತನಾದ ಬಳಿಕ ತನ್ನ ದಿವ್ಯ ಶಕ್ತಿಯನ್ನು ಲೋಕದ ದುರ್ಬಲ ಜೀವಗಳಿಗೆರೆಯುತ್ತ ಅಧಿಕಾರದ ೫೭ ಅವಸ್ಥೆಗಳಲ್ಲಿ ಹಾಯ್ದು ಪೂರ್ವ ಪಿಂಡದಲ್ಲೆ ಬಯಲಾಗಬಲ್ಲನು. ಇದೇ ವಿದೇಹಮುಕ್ತಿ. ಹೀಗೆ ದೇವನಲ್ಲಿ ಜೀವ ಹುಟ್ಟಿ, ತಿರುಗಿ ಅದು ದೇವನಲ್ಲೆ ಬೆರೆತು ಹೋಗುವ ಪರಿಯಂತರದ ನೂರೊಂದವಸ್ಥೆಗಳಿಗೇ (ವೀರಶೈವ ಮತೋಕ್ತರೀತ್ಯಾ) ಷಟ್‌ಸ್ಥಲ ಸಿದ್ಧಾಂತ ಇಲ್ಲವೆ ನೂರೊಂದು ಸ್ಥಲದ ಸಿದ್ಧಾಂತವೆಂದೆನ್ನಬಹುದು. ಆದಿಯಿಂದ ಅಂತ್ಯದ ವರೆಗೆ ಹೀಗೆ ಅಕ್ರಮವಿಲ್ಲದೆ ಹೇಳಿದ್ದರೆ ಮಾತ್ರ ಅಗಸ್ತ್ಯರು ರೇಣುಕರ ಪ್ರವಚನವನ್ನು ಕೇಳಿದ್ದಾರು. ಇಲ್ಲದಿದ್ದರೆ ಅಸಂಬದ್ಧ ಸಾಮಯಿಕ ಮತಾಚಾರಗಳನ್ನು ಕೇಳುತ್ತ ಕೂಡುವಷ್ಟು ಅವನು ನಿರುದ್ಯೋಗಿಯಾಗಿರಲಾರನು. (ಯಾಕೆಂದರೆ ಅವನೊಬ್ಬ ಆರ್ಯ ವಸಾಹತುಗಾರನಾಗಿದ್ದನೆಂದು ಇತಿಹಾಸಜ್ಞರ ಮತ.)

ಇದೀಗ ಪ್ರಸಿದ್ಧವಿರುವ ಸಿದ್ಧಾಂತ ಶಿಖಾಮಣಿಯೆಂಬ ಗ್ರಂಥದಲ್ಲಿಯು ಆರಂಭದ ಸ್ಥಳಗಳ ವ್ಯಾಖ್ಯೆಗಳು ಆಪೊಂಮು ವಿಚಾರಾರ್ಹವಾಗಿವೆ. ಹೇಗೆಂದರೆ—

ಪಿಂಡಸ್ಥಳ--ಬಹು ಜನ್ಮಕೃತ ಪುಣ್ಯದಿಂದ ಪಾಪವನ್ನು ಕ್ಷೀಣಗೊಳಿಸಿಕೊಂಡ ಶುದ್ಧಾಂತಃ ಕರಣನಾದ ದೇಹಿಗೇ ಪಿಂಡವೆಂಬಹೆಸರು.

ಪಿಂಡಜ್ಞಾನಸ್ಥಳ—ತಾನು ಶರೀರವಲ್ಲದೆ ಇನ್ನೇನೂ ಅಲ್ಲವೆಂದು ಬಗೆಯದೆ, ತಾನು ಶರೀರದ ವ್ಯತಿರಿಕ್ತ ಬೇರೆ ಯಿರುವುದಾಗಿ ವಿವೇಕವುಳ್ಳವನಿಗೆ ಪಿಂಡ ಜ್ಞಾನಿಯೆಂದು ಹೆಸರು.

ಸಂಸಾರ ಹ್ಯೇಯಸ್ಥಳ—ಹೃದಯದ ಕಳಂಕಗಳೆಲ್ಲ ಲೋಪವಾಗಿರುವ, ನಿತ್ಯ ಅನಿತ್ಯಗಳ ವಿಚಾರವುಳ್ಳವನಿಗೆ ವಾಸನಾಬಲದಿಂದ ಸಂಸಾರದಲ್ಲಿ ಹೇಸಿಕೆಯುಂಟಾಗುವದು.

ಗುರುಕಾರುಣ್ಯಸ್ಥಳ—ವಿವೇಕಸಂಪನ್ನನೂ, ವಿರಾಗಿಯೂ ಆದ ಜಿಜ್ಞಾಸು, ಗುರುವನ್ನು ಪಡೆಯುವನು.

ಲಿಂಗಧಾರಣಸ್ಥಳ—ಆವನಿಗೆ ಗುರುವು ಲಿಂಗಧಾರಣೆ ಮಾಡುವನು.

ಮೊಟ್ಟಮೊದಲಿನ ಇವ್ವೈದು ಸ್ಥಳಗಳನ್ನು ನೋಡಿದರೆ ಜೀವನ ಆದಿ ವಿಚಾರವನ್ನೇನೂ ಹೇಳದೆ—ಸುವಿಚಾರಿಗಳಾದವರಿಗೆ ಮತಾಂತರ ಗೊಳಿಸುವ ಹೇತುವನ್ನೇ ವ್ಯಕ್ತಪಡಿಸಿದಂತಾಗುವದು. ಪೂರ್ವ ಪ್ರಚಲಿತ ಧರ್ಮಗಳ ಸಿಧ್ಧಾಂತಗಳ ಗ್ರಂಥಗಳಲ್ಲಿ ಹೀಗೆಂದಿಗೂ ಹೇಳಿರುವ ಸಂಭವವಿಲ್ಲ. ಹೀಗಿದ್ದರೆ ಲಿಂಗಾಯತರಿಗೆ ವಿವೇಕ ಸಂಪನ್ನರಾದ ವೈರಾಗ್ಯಶಾಲಿಗಳಾಗುವ ವರೆಗೆ ಲಿಂಗಧಾರಣೆಯೇ ಆಗುತ್ತಿರಲಿಲ್ಲವೆಂದು ಹೇಳಬೇಕಾಗುವದು. ಈ ಕಾರಣದಿಂದ ಈ ಗ್ರಂಥವು, ಮತಾಂತರದ ಚಳವಳದ ಕಾಲದಲ್ಲಿ ರಚಿತವಾಗಿರಬೇಕೆಂದು ಸಿದ್ಧವಾಗುವದು. ಇದಲ್ಲದೆ ರುದ್ರಾಕ್ಷಧಾರಣಸ್ಥಳದಲ್ಲಿ—

ಬ್ರಾಹ್ಮಣೋ ವಾಂತ್ಯಜೋ ವಾಪಿ
ಮೂರ್ಖೋ ವಾ ಪಂಡಿತೋಪಿ ವಾ॥
ರುದ್ರಾಕ್ಷಧಾರಣಾದೇವ
ಮುಚ್ಯತೇ ಸರ್ವಪಾತಕೈಃ ॥೬೩॥

ಎಂದು ಬ್ರಾಹ್ಮಣರನ್ನೂ ಚಾಂಡಾಲರನ್ನೂ ಕೂಡ ಸೆಳೆದಿರುವುದು ಮತಾಂತರ ಚಳವಳದ ನಿದರ್ಶಕವಾಗಿದೆ. ಅಲ್ಲದೆ ಮಾಹೇಶ್ವರ ಸ್ಥಳಾಂತರ್ಗತವಾದ ಪೂರ್ವಾಶ್ರಯ ನಿರಸನಸ್ಥಳದಿಂದಲೂ ಈ ಮಾತು ಬಲಪಡುತ್ತದೆ. ಆದ್ದರಿಂದ ನೂರಾ ಒಂದು ಸ್ಥಲಗಳನ್ನು ನಿರ್ಮಿಸಿದ್ದು ಈಚೀಚೆಗೆಂದು ತೋರುತ್ತದೆ. ಅಂದರೆ ಬಸವಣ್ಣನಕಿಂತಲೂ ಸ್ವಲ್ಪ ಹಿಂದು ಮುಂದಾಗಿರಬಹುದು. ಅದರಂತೆ ನೂರಾಒಂದು ಸ್ಥಲಗಳನ್ನು ವಿವರಿಸುವ ಗ್ರಂಥಗಳಾದರೂ ಈಚಿನವಿರಬಹುದೆಂಬ ಊಹೆಗೆ ಆಸ್ಪದವಾಗುತ್ತದೆ.



# ಸಿಗಬಾರದೇ?

ಲೇಖಕಃ— ಶ್ರೀ. ಈಶ್ವರ ಸಣಕಲ್ಲ ಮಿತ್ರಸಮೂಹ ರಬಕವಿ ಸಂ॥ ಸಾಂಗಲಿ.

---

ಗಿಳಿಗೊಂಚಿ ಚಂಚುವಿಂದೊಡೆದ ಮಾವಿನ ಪಣ್ಣು
ಗಳ ರಸದ ಧಾರೆಯಿಂ ನೆನೆದು ತಂಪಾಗಿರುವ
ನೆಲದ ಮೇಲ್ಸ್ಕಳಿತು ತಣ್ಣೆಳಲಿಂದೆ ನೇಸರನ ಕದಿರುಗಳ ಮರೆಯ ಮಾಡಿ।
ಬಳಸಿರ್ದ ಪೈರುಗಳ ನಲವಿನಾಟವ ನೋಡಿ
ಗಿಳಿ ನವಿಲು ಕೋಗಿಲೆಗಳುಲಿಗಳಿಗೆ ಕಿವಿಗೊಟ್ಟು
ಅಳಿಯು ಹಾಡನು ಕೇಳಿ ನಲಿಯುತಿಹ ಮಾನವನ ಸುಖವೆನಗೆ ಸಿಗಬಾ
ರದೇ? ॥ ೧ ॥

ಜುಳುಜುಳೆಂದುಲಿವುತ್ತ ಸಾಗಿರುವ ಹಳ್ಳದಾ
ಜಲದ ಮಾಧುರ್ಯಕ್ಕೆ ಮನಸೋತು ಇಬ್ಬದಿಗ
ಳಲಿ ಬೆಳೆದ ವೃಕ್ಷಗಳು ಬೇರಿನಿಂ ನೀರನ್ನು ಕುಡಿ ಕುಡಿದು ಮನದಣಿಯದೆ।
ತಲೆಯಿಂದೆ ಕುಡಿವಂತೆ ಬಾಗಿ ನೀರನು ಮುಟ್ಟಿ
ಸಲೆ ನೋಟವನು ಬೀರ್ವುದನು ಕಂಡು ಮೈಮರೆದು
ಅಲೆಯುತಲಿ ಹರುಷದಿಂ ಹಾಡುತಿಹ ಮಾನವನ ಸೊಗಸೆನಗೆ ಸಿಗ
ಬಾರದೇ? ॥ ೨ ॥

ಧಾರುಣಿಯ ತಳದಲ್ಲಿ ತೋರುತಲಿಹ ಚಮ-
ತ್ಕಾರಗಳ ಪಾತಾಳ ವೈಚಿತ್ರ್ಯಗಳನು ಮೇ-
ಲೂರ ವೆಗ್ಗಳವನ್ನು ನವರಸಗಳನುಭವವ ಷಡ್ರಿಪುಗಳಾಟವನ್ನು।
ಮೂರು ಗುಣಗಳ ಮೈಮೆಯುಂ ನೋಡಿ ಮೇಣ್ ಕಾಣ-
ಬಾರದನು ಕಂಡು, ಕೇಳ್ಬಾರದನು ಕೇಳುತ್ತೆ
ಭೂರಿ ವಿಸ್ಮಯಗೊಳ್ವ ಪುಸ್ತಕದ ಭಕ್ತನಾ ಸುಖವೆನಗೆ ಸಿಗಬಾರದೇ? ॥ ೩ ॥

ಅಡವಿಯೊಳಗೇಕಾಂತ ತಾಣಕ್ಕೆ ತಾ ಪೋಗಿ
ಗುಡಿಸಲೊಂದನು ಕಟ್ಟಿ ಯದರ ಸುತ್ತಲು ಬಲು ನಿ-
ಬಿಡವಾದ ಮೇಣ್ರಮ್ಯವಾಗಿರುವ ಉದ್ಯಾನವನು ರಚಿಸಿಯದರೊಳಿರುವ।

ಗಿಡಗಳಿಗೆ ನೀರುಣಿಸಿ ಬೆಳಸುತ್ತ ತಿಳಿ ಮನದಿ
ಮೃಡನನ್ನು ನೆನೆವುತ್ತ ಮುಕ್ತಿಯನು ಪಡೆಯುತಿಹ
ಕಡು ಜಾಣ ಯೋಗಿಯಾ ಸ್ಥಿರ ಶಾಂತಿ ಸೌಖ್ಯಗಳು ನನಗಿಂದು ಸಿಗಬಾ
ರದೇ? ॥ ೪ ॥

ನಿಲವು ನಿಂತಿರೆ ಹೊಲದಿ ಹಾಲ್ದಾಳುಗಳಿಗೆ ಮನ-
ವೆಳಸಿರಲು ಸುತ್ತಲಿನ ಹಕ್ಕಿಗಳು ಬಂದು ತೆನೆ-
ಗಳ ಮೇಲೆ ಕೂಡ್ರುತಿರೆ ನೇಸರನು ಮೂಡುತಿರೆ ಸುಳಿಗಾಳಿ ಸುಳಿವುತಿರಲು।
"ಆಲಲೆ, ಹಾ ಹಾ ಹುರ್ರ ಹುರ್ರಿಂ"ದು ಚೀರುತಲಿ
ಬಲವಾಗಿ ಯೆಸೆವುತ್ತ ಕವಣೆಗಲ್ಲುಗಳನ್ನು
ಬೆಳೆಯೊಳಗೆ ಹಿಗ್ಗಿನಿಂದಲೆವೊಕ್ಕಲಿಗನುಬ್ಬು ನನಗಿಂದು ಸಿಗಬಾರದೇ ॥ ೫ ॥

ಮುರುಕ ಗುಡಿಸಲೊಳಿದ್ದು, ಹರುಕು ಚಿಂದಿಯ ಹೊದ್ದು,
ಮರುಕವುಳ್ಳವಳಾಗಿ, ಮುರಕವರಿಯುದಳಾಗಿ
ತಿರುಹುತ್ತ ರಾಟೆಯನ್ನು "ರವತ್ತು ಕೋಟಿಯೀ ರಾಟೆಯಲ್ಲಿರುವದೆಂ" ದು।
ಹರುಷದಿಂ ಹಾಡುತ್ತ ಕಷ್ಟಗಳ ದೂಡುತ್ತ
ಹಸಿಸುತ್ತ ಬಡತನವ ಹಗಲಿರುಳು ನೂಲುತ್ತ-
ಲಿರುವ ಸಾಧ್ವಿಯ ಹೋರೆ ಯಿಂದಿನಿಂ ಸತತೆನಗೆ ತಪ್ಪದಲೆ ಸಿಗಬಾರದೇ?॥೬॥

ಬಿರುಗಾಳಿ ಸುಯ್ಗುಟ್ಟಿ ಕಡಲು ಭೋರ್ಗರೆದರುಂ
ತೆರೆಗಳುರೆ ನೆಗೆಯುತಬ್ಬರಿಸಿ ಯಪ್ಪಳಿಸಿಯುಂ
ಭರದಿಂದ ಹಡಗು ಹೊಯ್ದಾಡಿ ಬಂಡೆಗೆ ಬಡೆದು ಮೇಲ್ಕೆಳಗೆಯಾಗು
ತಿರಲು।

ಅರಿಜನರು ಸುತ್ತಲಿಂ ಶರಮಳೆಯ ಗರೆದರುಂ
ಮರಣವದು ರೌದ್ರರೂಪದಿ ಮುಂದೆ ನಿಂತರುಂ
ತೊರೆಯದಲೆ ಧೈರ್ಯವಂ ನಸುನಗುತಲಿಹ ನಾವಿಕನ ಗುಣವು ಸಿಗ
ಬಾರದೇ ॥೭॥

ಬಡವರೊಳಗತಿ ಬಡವನಾಗಿದ್ದರೂ ತಾನು
ಮಿಡುಕದಲೆ ಮನಮುಟ್ಟಿ ದುಡಿಯುತ್ತ ಹಗಲಿರುಳು
ಪಡೆಯುತ್ತ ನಿಟಿಲದೊಳಗೆನಿತಿರುವದನಿತನೇ, ತೃಪ್ತಿವೊಂದುತಲದರೊಳು।

ಹಿಡಿದ ಧರ್ಮವ ಬಿಡದೆ, ಸತ್ಯ ಶೀಲದಿ ನಡೆದು
ವೃಡನಡಿಯ ನೆಡೆಬಿಡದೆ ಮನದೊಳಗೆ ನೆನೆವುತ್ತ
ಪೊಡವಿಯೊಡೆಯನಿಗಿಂತ ಮಿಗಿಲೆನಿಪ ಮಾನವನ ಮನವೆನಗೆ ಸಿಗಬಾರದೇ? ।೮॥

ಜಗವನೆಲ್ಲವನೊಂದೆ ಬಗೆಯಿಂದೆ ನೋಡುತ್ತೆ
ಬಗೆಯ ನುಡಿಯನೆ ಮಾಡಿ, ನುಡಿಯ ದಿಟವನೆ ಮಾಡಿ
ನಗುತ ಹುಡಿಯೊಳ್ಳುಳಿತು ಹೊನ್ನು ಮಣ್ಣನೆ ಮಾಡಿ, ಮಣ್ಣು ಹೊನ್ನನೆ ಮಾಡುತ।
ಜಿಗಿವಾಸೆಯನು ತೃಪ್ತಿಯೊಳು ಮುಳುಗಿಸುತೆ, ಬಿಸುಟ
ತಗಬಗೆಯ ನನವರತ ಸಂತಸದೊಳಿರುತ ಮಿಗೆ
ಸೊಗಯಿಪೆಳೆ ಮಗುವಿನಾ ಸರಳ ಬಗೆಯಿಂದಿನಿಂ ಸತತೆನಗೆ ಸಿಗಬಾರದೇ? ॥೯॥

ಅಮ್ಮ ಕನ್ನಡತಾಯಿ, ಸಡಗರದೊಳೋಲಾಡಿ
ಯೊಮ್ಮೆ ನೀ ನಲಿಯುತ್ತ ಬೆಡಗುಗೊಳಿಸಿರ್ದ ಮನೆ-
ಯೆಮ್ಮ ಕರ್ನಾಟಕವು ಯಡವಿಪಾಲಾಗಿಹುದು ತಾನೊಡೆದು ಕಳಚಿಬಿದ್ದು।
ಸುಮ್ಮನಿರದಲೆ ನಿನ್ನ ಮಕ್ಕಳೆಲ್ಲೊಡಗೂಡಿ
ಹೆಮ್ಮೆಯಿಂದೇಳುತ್ತೆ ಬಿದ್ದಿರುವ ಮನೆಗಟ್ಟು-
ತುಮ್ಮಳದಿ ನಿನ್ನನುಳಿಸುವದನ್ನು ಕಾಣ್ಬ ದಿನವೆನಗಿಂದು ಸಿಗಬಾರದೇ ॥೧೦॥



# ವೀರಶೈವ ಧರ್ಮವೂ, ಆಂಧ್ರವಾಙ್ಮಯವೂ.

## ಲೇಖಾಂಕ ೨

ಲೇಖಕ:— ಶಿವಸುತ

---

## ಶ್ರೀ ಬಸವೇಶ್ವರ ಯುಗವು.

ಮೇಲ್ಕಂಡ ಶೀರ್ಷಿಕೆಯುಳ್ಳ ಲೇಖಾಪರಂಪರೆಯ ಮೊದಲನೆಯ ಲೇಖಾಂಕದಲ್ಲಿ ಬಸವೇಶ್ವರ ಯುಗಕ್ಕಿಂತಲೂ ಪೂರ್ವದಲ್ಲಿದ್ದ ವೀರಶೈವ ಧರ್ಮಸಂಬಂಧ ಆಂಧ್ರ ವಾಙ್ಮಯವನ್ನು ವಿವೇಚಿಸಿದ್ದಾಯಿತು. ಇನ್ನು ಬಸವೇಶ್ವರಾವತಾರದಿಂದಿತ್ತೀಚೆಗೆ ಉತ್ತರಕರ್ಣಾಟಕದಲ್ಲಿದ್ದ ಆ ಮಹಾಧರ್ಮ ವಿಪ್ಲವದಿಂದ ಆಂಧ್ರಭಾಷೆಯ ಮೇಲೆ ಯಾವ ಪರಿಣಾಮವನ್ನುಂಟುಮಾಡಿತೆಂಬುದನ್ನು ತಿಳಿಪಡಿಸುವದೇ ಈ ಲೇಖಾಂಕದ ಉದ್ದೇಶವಾಗಿದೆ. ೧೨ ನೇ ಶತಮಾನದಲ್ಲಿ ಕಲ್ಯಾಣಪಟ್ಟಣದಲ್ಲಿ ಶ್ರೀ ಬಸವೇಶ್ವರಾದಿಗಳು ಎಬ್ಬಿಸಿದ ವೀರಶೈವ ವಿಜಯಘೋಷವು ಅತಿ ಕ್ಷಿಪ್ರಕಾಲದಲ್ಲಿ ಇಡೀ ದಕ್ಷಿಣ ಹಿಂದುಸ್ತಾನವನ್ನೆಲ್ಲಾ ದಿಮಿಗುಟ್ಟಿಸಿತು. ಇದರಿಂದ ಸರ್ವರೂ ವೀರಶೈವ ದೀಕ್ಷೆಯನ್ನು ಹೊಂದಿದರೆಂದರ್ಥವಲ್ಲ. ಬಸವೇಶ್ವರನ ನೂತನ ಸಂದೇಶವು ಸರ್ವ ಸೌಹಾರ್ದ್ಯಭಾವವು ಭಕ್ತಿತತ್ವವು ಆಗಿನ ಕಾಲದ ಜನತೆಯ ವಿಚಾರ ಪ್ರಗತಿಗೆ ಒಂದು ವಿಲಕ್ಷಣವಾದ ಸ್ವರೂಪವನ್ನು ಕೊಟ್ಟಿತು. ಬಾಹ್ಯಕರ್ಮಾಡಂಬರಗಳ ಬಗ್ಗೆ ಜನರಲ್ಲಿ ವಿಮುಖತ್ವ ಉತ್ಪನ್ನವಾಗಿ ನೈಜವಾದ ಸಪ್ರೇಮ, ಭಕ್ತಿ ಮಿಳಿತವಾದ ಮನಶ್ಶಾಂತಿದಾಯಕವಾದ ಧರ್ಮವು ಜನರ ಭಾವನೆಯನ್ನಾಕರ್ಷಿಸಲಾರಂಭಿಸಿತು. ಮನುಷ್ಯನ ದೃಷ್ಟಿಯು ವಿಶಾಲವಾಯಿತು; ಇದು ವರಿವಿಗೂ ಅಗೋಚರವಾಗಿದ್ದ ನವದೃಶ್ಯಗಳು ಕಾಣಲಾರಂಭಿಸಿದವು. ನವಭಾವನೆಗಳು ಅವನ ಹೃದಯದಲ್ಲಿ ತಾಂಡವವಾಡಲಾರಂಭಿಸಿದವು. ಈ ನವದೃಶ್ಯಗಳನ್ನು ನವಭಾವನೆಗಳನ್ನು ವ್ಯಕ್ತಗೊಳಿಸಲೂ ಭಾಷೆಯು ನವಸ್ವರೂಪವನ್ನು ತಾಳಬೇಕಾಯಿತು. ಕಾವ್ಯಕ್ಷೇತ್ರದಲ್ಲಿ ನವ ಮಾರ್ಗವನ್ನು ತುಳಿಯಬೇಕಾಯಿತು. ಆದಕಾರಣ ೧೨ ನೇ ಶತಮಾನದ ಧರ್ಮವಿಪ್ಲವವು ಕರ್ಣಾಟಕಾಂಧ್ರಭಾಷೆಗಳಲ್ಲಿ ಒಂದು ದೊಡ್ಡ ಗೊಂದಲವನ್ನೇ ಎಬ್ಬಿಸಿತು.

ನಮ್ಮಿಂದ ಹೊರಬೀಳುವ ಭಾಷೆಯೇ ನಮ್ಮ ಹೃದಯಾಂತರಾಳದಲ್ಲಿ ನೆಲೆಗೊಂಡಿರುವ ಭಾವನೆಗಳ ಸ್ವರೂಪವನ್ನು ಬಿಚ್ಚಿ ತೋರಿಸುವುದು. ಅರ್ಥಗಾಂಭೀರ್ಯದಿಂದಲ್ಲವೇ ಶಬ್ದಗಾಂಭೀರ್ಯವು; ಸಹಜವಾದ ಮತ್ತು ಸರಳವಾದ ಧರ್ಮದ ಪ್ರತಿಪಾದನೆಯು ಸಹಜವಾದ ಮತ್ತು ಸರಳವಾದ ಭಾಷೆಯಲ್ಲಿಯೇ ಆಗತಕ್ಕದ್ದು. ಇದು ಕಾರಣವಾಗಿ ಇದೂ ವರಿವಿಗೂ "ಕವಿಸಮಯ" ವೆಂದೆನಿಸಿಕೊಂಡಿದ್ದ ಅರ್ಥಾಲಂಕಾರ, ಶಬ್ದಾಲಂಕಾರ ಸಮನ್ವಿತವಾದ ಕಾಲ್ಪನಿಕ ಪ್ರೌಢಭಾಷೆಯು ನಿರಾಕರಿಸಲ್ಪಟ್ಟು ಮಾನವನು ನಾನಾವಿಧ ಭಾವನೆಗಳುತ್ಪನ್ನವಾದಂತೆ ಅವುಗಳನ್ನನುಸರಿಸಿ ನೈಸರ್ಗಿಕವಾಗಿ ಮಾತಾಡುವಾಗ ಉಪಯೋಗಿಸುವ ಭಾಷೆಯೇ ಕವಿಗಳಿಗೆ ಶರಣ್ಯವಾಯಿತು. ಇಂಥ ಭಾಷೆಗೆ ಸರಿಯಾದ ಛಂದೋ ಮಾರ್ಗವು ಬೇಕಾಯಿತು. ಚಂಪಕೋತ್ಪಲಮಾಲಾದಿ ಪ್ರೌಢವೃತ್ತಗಳು ಸರಿಬೀಳುವದಿಲ್ಲ. ಆದ ಕಾರಣ ಛಂದಸ್ಸಿನಲ್ಲಿ ನೂತನಮಾರ್ಗಗಳು ಕಂಡು ಹಿಡಿಯಲ್ಪಟ್ಟವು. ಇನ್ನು ವ್ಯಾಕರಣ ಸೂತ್ರಗಳಾದರೋ ಗಂಗಾಸಲಿಲದಂತೆ ನಿರರ್ಗಳವಾಗಿ ಹರಿಯುವ ಕವಿತಾಲಹರಿಗೇನಾದರೂ ಪ್ರತಿಬಂಧಕವನ್ನುಂಟುಮಾಡುವಂತಿದ್ದರೆ ಅವುಗಳು ಸಹ ನಿರಾಕರಿಸಲ್ಪಟ್ಟು ಕವಿಯು ಇದು ವರಿವಿಗೂ ಅನುಭವಿಸದೇ ಇದ್ದ ಸ್ವಾತಂತ್ರ್ಯವನ್ನು ಅನುಭವಿಸಲಾರಂಭಿಸಿದನು. ಹೃದಯದಲ್ಲಿ ಉಜ್ವಲ ಭಾವನೆಗಳು ತುಂಬಿ ತುಳುಕುತ್ತಿರಲೂ ಸ್ವಾತಂತ್ರ್ಯ ವಾತಾವರಣದಲ್ಲಿ ವಿಹರಿಸುತ್ತಿರುವ ಕವಿಸಾರ್ವಭೌಮನು ಬೇರೊಂದು ಸೃಷ್ಟಿಯನ್ನೇ ನಿರ್ಮಿಸಬಲ್ಲನಲ್ಲವೆ? ಇಂಥ ಕವಿಚಕ್ರವರ್ತಿಯಾದ ಪಾಲ್ಕುರಿಕೆ ಸೋಮನಾಥನ ವಿಷಯವನ್ನು ವಾಚಕ ಮಹಾಶಯರಿಗೆ ಪರಿಚಯವನ್ನುಂಟುಮಾಡಿಕೊಟ್ಟಲ್ಲಿ ಈ ಯುಗದ ಆಂಧ್ರವಾಙ್ಮಯವನ್ನೇ ಪರಿಚಯ ಮಾಡಿಕೊಟ್ಟಂತಾಗುವುದಾದ ಕಾರಣ ಈ ಲೇಖಾಂಕದಲ್ಲಿಯೂ ಸುಪ್ರಸಿದ್ಧ ಕವಿಯ ವಿಷಯವಾಗಿ ಪ್ರಸ್ತಾಪಿಸುವೆನು.

## ಶ್ರೀ ಪಾಲ್ಕುರಿಕೆ ಸೋಮನಾಥನು.

ಪಾಲ್ಕುರಿಕೆ ಸೋಮನಾಥನ ಹೆಸರನ್ನು ಕೇಳದ ಆಂಧ್ರನಾಗಲಿ, ಕನ್ನಡಿಗನಾಗಲಿ, ಇರಲಾರರು. ವೀರಶೈವ ಕವಿಗಳಿಗಂತೂ ಆತನು ಆರಾಧ್ಯ ದೇವತೆಯು. ೧೩ ನೆ ಶತಮಾನದಿಂದ ಇಂದಿನ ವರಿವಿಗೂ

ಪ್ರಸಿದ್ಧರಾಗಿ ಹೋದ ವೀರಶೈವ ಕವಿಗಳು ಅವರು ಯಾವ ಭಾಷೆಯು ಲ್ಲಾದರೂ ಗ್ರಂಥಗಳನ್ನು ರಚಿಸಿರಲಿ ಅದರಲ್ಲಿ ಸೋಮನಾಥನ ಬಗ್ಗೆ ತನ್ನ ಪೂಜ್ಯಭಾವನೆಯನ್ನು ವ್ಯಕ್ತಗೊಳಿಸದೇ ಇರುವುದು ಅತಿ ವಿರಳ ಆದರೆ ಸಾಧಾರಣ ಜನರಲ್ಲಿ ಸೋಮನಾಥನು ೬೪ ಶೀಲಗಳನ್ನು ಭೀಷ್ಮ ವ್ರತದಿಂದಾಚರಿಸಿದ ಓರ್ವ ಶರಣನಾಗಿಯೂ, ನಾವು ಶ್ರಾವಣಮಾಸ ದಲ್ಲಿ ಪಾರಾಯಣ ಮಾಡುವ ಪಾರಾಯಣವನ್ನು ಬರೆದವನಾಗಿಯೂ, ಮತ್ತು ಕರ್ನಾಟಕದಲ್ಲಿ ಯಾವ ಮೂಲೆಯಲ್ಲಾದರೂ ಕೇಳಬರುವ ಸೋಮೇಶ್ವರ ಶತಕವನ್ನು ಬರೆದ ಕವಿಯಾಗಿಯೂ, ಪ್ರಸಿದ್ಧನಾಗಿರುವನು. ಆದರೆ ವೀರಶೈವ ಮತಸ್ಥಾಪನಾಚಾರ್ಯರಾದ ಶ್ರೀ ಪಂಡಿತಾರಾಧ್ಯರ, ಮತ್ತು ವೀರಶೈವ ಮತೋದ್ಧಾರಕರಾದ ಶ್ರೀ ಬಸವೇಶ್ವರರ ಜೀವಿತ ಚರಿತ್ರೆಗಳನ್ನು ಬರೆದವರ ಪೈಕಿ ಸೋಮನಾಥನೇ ಪ್ರಥಮನೆಂದರಿತವರು ವಿರಳ. ಮತ್ತು ಈತನು ವೀರಶೈವಸಿದ್ಧಾಂತ ಸ್ಥಾಪನೆಗಾಗಿ ಬರೆದ ಸೋಮನಾಥ ಭಾಷ್ಯವಂತೂ ನಮ್ಮವರಿಗೆ ಪೂರ್ಣ ಅಪರಿಚಿತವಾಗಿದೆ.

**ಕವಿ ಕಾಲನಿರ್ಣಯಃ—** ಈ ವಿಷಯದಲ್ಲಿ ಪಂಡಿತರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಈತನ ಗ್ರಂಥಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಬಸವೇಶ್ವರನಿಗಿಂತಲೂ ಪೂರ್ವದಲ್ಲಿದ್ದ ತತ್ವಕ್ಕೂ ಅನಂತರ ಪ್ರಚಾರವಾದ ನೂತನ ತತ್ವಕ್ಕೂ ಬಡಿದಾಟವು ವಿಸ್ಪಷ್ಟವಾಗಿ ಕಂಡು ಬರುತ್ತದೆ. ಸೋಮನಾಥನು ತಾನು ಭೃಂಗಿರಿಟಿ ಗೋತ್ರದವನೆಂದು ಪ್ರಥಮ ಗೋತ್ರವನ್ನು ಹೇಳಿಕೊಂಡಿದ್ದರೂ ಈತನು, ಅನುಯಾಯಿ ಗಳೂ, ಶಿಷ್ಯರೂ, ತಮ್ಮ ಗ್ರಂಥಗಳಲ್ಲಿ ಆಪಸ್ತಂಭಾದಿ ಋಷಿ ಗೋತ್ರಗ ಳನ್ನು ಹೇಳಿಕೊಂಡಿರುವರು. ಮತ್ತು ಈತನು ಆರಾಧ್ಯನೆಂಬ ವಿಶೇಷ ಣವು ಬಸವಯುಗ ಪೂರ್ವ ವೀರಶೈವವನ್ನು ಸೂಚಿಸುವಂತಿದೆ. ಇದ ನ್ನೆಲ್ಲಾ ನೋಡಲಿಕ್ಕಾಗಿ ಸೋಮನಾಥನು ಆ ಎರಡು ಯುಗಗಳ ಸಂಧಿ ಯಲ್ಲಿದ್ದವನೆಂದೂ, ನೂತನ ಭಾವನಾ ಪ್ರವಾಹದ ಸೆಳವಿಗೆ ಸಿಕ್ಕವ ನಾಗಿ ಬಸವನ ನವಸಂದೇಶವನ್ನು ಆಂಧ್ರಮಂಡಲದಲ್ಲಿ ಢಣಾ ಡಂಗು ರವಾಗಿ ಸಾರಿದವನೆಂದೂ, ಆದು ವರಿಪಗೂ ಪ್ರಚಾರದಲ್ಲಿದ್ದ ಕರ್ಮ ಲಿಪ್ತ, ಸಂಕುಚಿತ ದೃಷ್ಟಿಯ ವೀರಶೈವ ಧರ್ಮವನ್ನು ಖಂಡಿಸಿ ಬಸವೇಶ್ವರನಂತೆ ಆಗಮೋಕ್ತ ಶುದ್ಧ ವೀರಶೈವ ಧರ್ಮವನ್ನು ಆಂಧ್ರಮಂಡ ಲದಲ್ಲಿ ಪ್ರಚುರಗೊಳಿಸಿದನೆಂದೂ ಈತನ ಗ್ರಂಥಗಳಿಂದ ವ್ಯಕ್ತವಾಗುತ್ತದೆ.

ಕಲ್ಯಾಣ ಬಸವೇಶ್ವರನಿಗೂ ಈತನಿಗೂ ಸಂಬಂಧವನ್ನು ಕಲ್ಪಿಸುವ ಒಂದಾನೊಂದು ಕಥೆಯುಂಟು. ಯಾವ ರೀತಿ ೧೫ನೆ ಶತಮಾನದಲ್ಲಿ ಕಾನ್‌ಸ್ಟಾಂಟಿನೋಪಲ್ ಮಹಾಪಟ್ಟಣವು ತುರುಷ್ಕರ ವಶವಾದೊಡನೆ ಅಲ್ಲಿ ನೆಲೆಗೊಂಡಿದ್ದ ಗ್ರೀಕ ತತ್ವಜ್ಞರೂ ಪಂಡಿತರೂ ತಮ್ಮ ಗ್ರಂಥಸಂಚಯದೊಡನೆ ಐರೋಪಾ ಖಂಡವನ್ನು ಕಿರುಗುತ್ತಾ, ಪ್ಲೇಟೋ, ಸೋಕ್ರಟೀಸರುಗಳ ಉದಾತ್ತ ತತ್ತ್ವಗಳನ್ನು ಹರಡುತ್ತಾ ಐರೋಪಾ ದೇಶದಲ್ಲೆಲ್ಲಾ ಎಂದೆಂದಿಗೂ ಮರೆಯದಂಥಾ ಒಂದು ದೊಡ್ಡ ಸಂಕ್ಷೋಭವನ್ನೆಬ್ಬಿಸಿ ವಿಚಾರ ಪ್ರಗತಿಯನ್ನು ಹೆಚ್ಚಿಸಿದರೋ ಅದರಂತೆ ೧೨ನೆ ಶತಮಾನದಲ್ಲಿ ಕಲ್ಯಾಣ ಪಟ್ಟಣದ ಜಂಗಮರು ಬಸವನ ಸಂದೇಶವನ್ನು ತಾವು ಹೋದೆಡೆಯಲ್ಲೆಲ್ಲಾ ಹರಡಿದರು. ಆಗಿನ ಕಾಲದಲ್ಲಿ ಕಲುಚೂರಿ ವಂಶದವರ ಆಳಿಕೆಯಲ್ಲಿದ್ದ ಕಲ್ಯಾಣಪಟ್ಟಣವು ಕರ್ಣಾಟಕದಲ್ಲಿ ಕೇಂದ್ರಸ್ಥಾನವಾಗಿದ್ದು ಅಲ್ಲಿ ಎಲ್ಲಾ ದೇಶಗಳಿಂದಲೂ ಪಂಡಿತರೂ ತತ್ತ್ವವೇತ್ತರೂ, ಕವಿಗಳೂ, ಉಪದೇಶಿಕರೂ ಬಂದು ನೆಲೆಗೊಂಡಿದ್ದು ಬಸವೇಶ್ವರನ ಆಶ್ರಯದಲ್ಲಿದ್ದರು. ನಿತ್ಯವೂ ಶಿವಾನುಭವ ಮಂಟಪಗಳಲ್ಲಿ ನಡೆಯುತ್ತಿದ್ದ ಧರ್ಮಪ್ರವಚನಗಳಲ್ಲಿ ಬರೀ ಕರ್ಣಾಟಕಸ್ಥರಲ್ಲದೇ ತೆಲುಗು ಮತ್ತು ತಮಿಳು ದೇಶದವರು ಸಹಾ ಭಾಗಿಗಳಾಗುತ್ತಿದ್ದರು. ಹೀಗೆ ಕಲ್ಯಾಣಪಟ್ಟಣವಲ್ಲಿ ನಾನಾ ದೇಶದವರ ಸಮಾವೇಶವಾಗುತ್ತಿದ್ದಿತು. ಆದರೆ ಹರಳಯ್ಯ ಮಧುವಯ್ಯರುಗಳ ಪ್ರಕರಣದಲ್ಲಿ ಮಹಾವಿಪ್ಲವವುಂಟಾಗಿ ಬಿಜ್ಜಳನು ನೂತನ ಪಂಥದವರ ಮೇಲೆ ಅತ್ಯಾಚಾರವನ್ನು ನಡೆಸಲು ಬಸವೇಶ್ವರನು ಜುಗುಪ್ಸೆಗೊಂಡು ಕೂಡಲಸಂಗಮನ ಸಾನ್ನಿಧ್ಯವನ್ನು ಸೇರಲು ಆತನ ಆಶ್ರಯದಲ್ಲಿದ್ದ ಜಂಗಮರೆಲ್ಲರೂ ದೇಶಾಂತರವಾಸಿಗಳಾದರು. ಅವರಲ್ಲಿ ಕೆಲವರು ಸೋಮನಾಥನಿದ್ದ ಗ್ರಾಮಕ್ಕೆ ಬರಲು ಆತನು ಶ್ರೀ ಬಸವೇಶ್ವರನ ವಿಷಯವನ್ನು ಸಾದ್ಯಂತವಾಗಿ ವಿಚಾರಿಸಿಕೊಂಡು ಕಲ್ಯಾಣ ಪಟ್ಟಣಕ್ಕೆ ತಾನು ಸ್ವತಃ ಹೋಗಿ ತನಗೆ ಬೇಕಾದ ಸಾಧನೆಗಳನ್ನು ಶೇಖರಿಸಿಕೊಂಡು ಬಂದು "ಬಸವೇಶ್ವರ ಪುರಾಣವ"ನ್ನು ಬರೆದನೆಂದು ಪ್ರತೀತಿಯಿದೆ. ಶ್ರೀ ತೋಂಟದಾರ್ಯರು ಬರೆದಿರುವ ಸೋಮನಾಥ ಪುರಾಣದ ಪ್ರಕಾರ ಶ್ರೀ ಬಸವೇಶ್ವರನು ತನ್ನ ಚಿನ್ಮಯ ರೂಪದೊಡನೆ ಈತನ ಶಿವಪೂಜೆಯ ಕಾಲದಲ್ಲಿ ಈತನ ಲಿಂಗದಲ್ಲಿ ಕಾಣಿಸಿಕೊಂಡಿದ್ದನೆಂದು ವರ್ಣಿತವಾಗಿದೆ. ಈತನು ಬಸವೇ

ಶ್ವರವತಾರ ಸಮಾಪ್ತಿ ಕಾಲದಲ್ಲಿದ್ದಿರಬೇಕೆಂದು ಊಹಿಸಲೂ ಅನೇಕ ಸಾಧನಗಳಿವೆ.

(೧) ಸೋಮನಾಥನು ಚರಿತ್ರಪ್ರಸಿದ್ಧನಾದ ಕಾಕತೀಯ ಪ್ರತಾಪ ರುದ್ರನ ಕಾಲದಲ್ಲಿದ್ದನೆಂದು ಪಿಡುಪರ್ತಿ ಸೋಮಕವಿ ವಿರಚಿತ ಆಂಧ್ರ ಬಸವ ಪುರಾಣ ಚಂಪೂ ಗ್ರಂಥದ ಪೀಠಿಕಾ ಭಾಗದಲ್ಲಿರುವ ಈ ಕೆಳಕಂಡ ಪದ್ಯಗಳಿಂದಲೂ, ಮತ್ತು ಅದೇ ಅಂಶವನ್ನೊಳಗೊಂಡಿರುವ ಕೊಂಡವೀಡಿನ ಚರಿತ್ರೆಯಿಂದಲೂ ವ್ಯಕ್ತವಾಗುತ್ತದೆ.

« ಸೀಸಪದ್ಯ »

ಒಕನಾಡು ಶಿವಭಕ್ತು ಲೋರುಗಂಟಿನಸ್ವಯುಂ।
ಭೂದೇವು ಮಂಟಪಮುನವಸಿಂಚಿ॥
ಬಸವ ಪುರಾಣಂಬು ಪಾಟಿಂಚಿವಿನುವೇಳ ಹರುನಿಗೊಲ್ಪ।
ಪ್ರತಾಪುಡಚಟಿತೇಗ
ಈ ಸಂಭ್ರಮಂ ಬೇಮಿಯನುಡು ಭಕ್ತುಲು ಬಸವ।
ಪನಿ ಪುರಾಣಮಿರ್ಥಿ ವಿನೆದರ ನಿನ॥
ವಿನನಾ ಪುರಾಣಂಬು ವಿಧಮೆಟ್ಲಕೋ ಯನ್ನ।
ದೂರ್ತ ವಿಪ್ರುಡೊಕಂಡು ಭರ್ತಜೇರಿ॥
ಪಾಲಕುರಿಕಿ ಸೋಮಪತಿ ತುಡೀ ನಡುಮನು।
ಪೆನಚಿ ಮಧ್ಯವಳ್ಳು ವೆಟ್ಟಿ ದ್ವಿಪದ॥
ಯಪ್ರಮಾಣಮಿ ದಿಯನಾದ್ಯಂಬು ಪದಮುನ್ನ।
ನರಿಗೆ ರಾಜುಭಕ್ತುಲದಿ ಯೆರಿಂಗಿ॥

ಒಂದು ದಿವಸ ಕಾಕತೀಯ ಪ್ರತಾಪ ರುದ್ರದೇವನು ಓರಗಲು ಪುರದಲ್ಲಿ ವಿರಾಜಿಸುವ ಶಿವಾಲಯಕ್ಕೆ ಪರಿವಾರ ಸಮೇತನಾಗಿ ಹೋಗಿದ್ದನು. ಅಲ್ಲಿ ಶಿವಭಕ್ತರು ಮಂಟಪದಲ್ಲಿ ಕುಳಿತುಕೊಂಡು ಪಾಲ್ಕುರಿಕಿ ಸೋಮನಾಥಕೃತ ಬಸವಪುರಾಣ ಪ್ರವಚನವನ್ನು ಕೇಳುತ್ತಿದ್ದರು. ಅವರನ್ನು ನೋಡಿ ರಾಜನು ಅದೇನೆಂದು ಕೇಳಲು ಧೂರ್ತಬ್ರಾಹ್ಮಣನೊಬ್ಬನು "ವೊನ್ನೆ ತಾನೆ ಪಾಲಕುರಿಕೆ ಸೋಮನು ಕಲ್ಪಿಸಿದ ಬಸವ ಪುರಾಣದ ಕಾಲಕ್ಷೇಪ"ವೆಂದು ನುಡಿದನು. ಶಿವಭಕ್ತರು ರೊಚ್ಚಿಗೆದ್ದು

ತತ್ಸಮೀಪ ಗ್ರಾಮದಲ್ಲಿಯೇ ಇದ್ದ ಸೋಮನಾಥನಿಗೆ ಆ ವೃತ್ತಾಂತ ವನ್ನು ವಿದಿತಪಡಿಸಲು ಆತನು ಶಿಷ್ಯ ಸಮೇತನಾಗಿ ಓರುಗಲ್ಲು ಪುರಕ್ಕೆ ಬಂದನು.

ವೃ ವಾರಲವಚ್ಚರಾಕ ವರವಾಮವೆರಿಂಗಿಯುನೇವ ಪಟ್ಟನಾ
ಯೂರವನಿಂ ಚುಮ್ಮುಶ್ಮಡಲಸುನ್ಮದವೃತ್ತಲವಮಾಂಡಿವಾರಲನ್
ಜೇರಗ ಬಲ್ಲ ಚಂದ್ರಧರ ಚಿಹ್ನಿತದೇಹುಲ ಜೇಸಿಯಂದರಂ
ಬೋರುನಮೀರೆದುಕೊರ್ನಗಬೊಂಡನಿಪಂಚಿನದುಂಡುಗಂಟನನ್

ಸೋಮನಾಥನ ಬರುವಿಕೆಯ ಸಮಾಚಾರವನ್ನು ತಿಳಿದವರಾಗಿ ಬ್ರಾಹ್ಮಣರು ಆತನನ್ನಪಹಾಸ್ಯಕ್ಕೀಡುಮಾಡಲೋಸುಗ ಆವೂರಲ್ಲಿದ್ದ ಉಂಡಾಡಿಗರನೆಲ್ಲಾ ವಿಭೂತಿ ರುದ್ರಾಕ್ಷಿಗಳಿಂದಲಂಕರಿಸಿ ಎದುರ್ಗೊಳ್ಳಲು ಕಳುಹಿಸಿದರು. ಆಮೇಲೆ ಸೋಮನಾಥನಾ ಪುರವನ್ನು ಪ್ರವೇಶಿಸಿ ಪ್ರತಿವಾದಿಗಳನ್ನು ರಾಜಾಸ್ಥಾನದಲ್ಲಿ ಜಯಿಸಿ ರಾಜಾಶ್ರಯವನ್ನು ಸಂಪಾದಿಸಿ, ಮಂತ್ರಿಯಾದ ಇಂದುಪುರಿ ಅನ್ನಮಾಮಾತ್ಯನ ಸಾಹಾಯ್ಯದಿಂದ ದೊಂಕಿಪರ್ತಿ ಮೊದಲಾದ ಗ್ರಾಮಗಳನ್ನು ಸಂಪಾದಿಸಿ ಶಿಷ್ಯರಿಗಿತ್ತು ಪಾಲ್ಕುರಿಕೆ ಎಂಬ ಗ್ರಾಮದಲ್ಲಿ ಶಿವಸಾಯುಜ್ಯವನ್ನು ಹೊಂದಿದನು.

(೨) ಪ್ರತಾಪ ರುದ್ರದೇವನು ತನ್ನ ಮಾತಾಮಹಿಯಾದ ರುದ್ರಮ್ಮ ದೇವಿಯು ಗತಿಸಿದ ಮೇಲೆ ೧೨೯೫ ಕ್ರಿ. ಶ. ದಲ್ಲಿ ರಾಜ್ಯಕ್ಕೆ ಬಂದು ಕ್ರಿ. ಶ. ೧೩೨೩ರ ವರಿವಿಗೆ ರಾಜ್ಯವನ್ನಾಳಿದನು. ದಿಲ್ಲೀ ಬಾದಶಹನು ಈ ಪ್ರತಾಪ ರುದ್ರನೊಡನೆ ಕ್ರೀ. ಶ. ೧೩೨೧ ರಲ್ಲಿ ಯುದ್ಧಮಾಡಿ ಸೋತು ಪುನಃ ೧೩೨೩ರಲ್ಲಿ ಪ್ರತಾಪ ರುದ್ರನನ್ನು ಸೆರೆಹಿಡಿದುಕೊಂಡು ಹೋದನೆಂದೂ ಆತನ ಮಂತ್ರಿಯಾದ ಯುಗಂಧರನು ತನ್ನ ಮೇಧಾಬಲ ಸಾಮರ್ಥ್ಯದಿಂದ ತನ್ನ ಪ್ರಭುವನ್ನು ತಪ್ಪಿಸಿಕೊಂಡು ಬಂದನೆಂದೂ, ಚರಿತ್ರದ ಮೇಲಿಂದ ತಿಳಿಯಬರುತ್ತದೆ. ಇವರ ಮೇಲಿಂದ ಈ ಕವಿ ಸಾರ್ವಭೌಮನು ೧೩ನೇ ಶತಾಬ್ದದಲ್ಲಿದ್ದನೆಂದು ಒಡೆದು ಕಾಣಿಸುತ್ತದೆ. ಈತನು ಕ್ರಿ. ಶ. ೧೩೨೫ ರ ಸಂ॥ ವರಿವಿಗೆ ಜೀವಿಸಿರಬಹುದೆಂದು ಆಂಧ್ರ ಕವಿ ಚರಿತ್ರಕಾರರಾದ ಶ್ರೀವೀರೇಶಲಿಂಗಂಪಂತುಲುಯವರು ಊಹಿಸುತ್ತಾರೆ. ಈತನು ಶ್ರೀಬಸವೇಶ್ವರ ಯುಗದ ಅಂತ್ಯ ಭಾಗದಲ್ಲಿದ್ದನೆಂಬುದಕ್ಕೆ ಈತನ ಗ್ರಂಥಗಳ ಮೇಲೆ ಧಾರಾಳವಾಗಿ ಊಹಿಸಬಹುದು.

**ಕವಿ ವಂಶಾವಳಿ:**—ಸೋಮನಾಥನು ತದ್ರಚಿತವಾದ "ಅನುಭವ ಸಾರ"ದಲ್ಲಿ ತಾನು ಭೃಂಗಿರಿಟಿ ಗೋತ್ರದವನೆಂದೂ, ಗುರುಲಿಂಗ ಪುತ್ರ ನೆಂದೂ ಬರೆದುಕೊಂಡಿರುತ್ತಾನೆ.

ಕಂ ಭೃಂಗಿರಿಟಿ ಗೋತ್ರುಡನು ಗುರು।
ಲಿಂಗ ತನೂಜುಂಡ ಶಿವಕುಲೀನುಡು ದುರ್ಗ್ರಾಹ್ಯ॥
ಸಂಗ ವಿವರ್ಜಿತ ಚರಿತುಡ।
ಜಂಗಮು ಲಿಂಗ ಪ್ರಸಾದ ಸತ್ಪ್ರಾಣುಂಡನ್॥

ಈತನು ಪ್ರಸಿದ್ಧ ವೇಮನಾರ್ಯ ಸಂತತಿಯವನು. ಈತನ ವಂಶಾವಳಿಯನ್ನು ಶ್ರೀ ತೋಂಟದಾರ್ಯರು ತಮ್ಮ ಪಾಲ್ಕುರಿಕೆ ಸೋಮೇಶ್ವರ ಪುರಾಣದ ೨ನೆಯ ಸಂಧಿಯಲ್ಲಿ ಕಡುವಿಸ್ತಾರವಾಗಿ ವರ್ಣಿಸಿರುವರು.

ಪಾಲ್ಕುರಿಕೆ ಸೋಮನಾಥನು ಕನ್ನಡ, ತೆಲುಗು ಅರವ, ಮರಾಠಿ ಮತ್ತು ಸಂಸ್ಕೃತದಲ್ಲಿ ಅತ್ಯಂತ ನಿಷ್ಣಾತನಾಗಿದ್ದು ಕವಿತಾಸಾಮರ್ಥ್ಯವುಳ್ಳವನಾಗಿದ್ದನು. ಈ ೫ ಭಾಷೆಗಳಲ್ಲೂ ಶ್ರೀ ಬಸವೇಶ್ವರನ ಸಂಸ್ತವನವನ್ನು ಮಾಡಿ ಧನ್ಯಚರಿತ್ರನಾಗಿರುವನು. ಈತನು ವೇದ ವೇದಾಂತಾಗಮ ಪುರಾಣ ಶಾಸ್ತ್ರಗಳಲ್ಲಿ ನಿಶಿತ ಪಾಂಡಿತ್ಯವುಳ್ಳವನಾಗಿದ್ದನೆಂಬುದಕ್ಕೆ ಈತನು ರಚಿಸಿದ ಸೋಮನಾಥ ಭಾಷ್ಯ ಚತುರ್ವೇದಸಾರ ಪಂಡಿತಾರಾಧ್ಯ ಚರಿತ್ರಯವಾದ ಪ್ರಕರಣ ಮುಂತಾದವುಗಳು ಮತ್ತು ಶಾಸ್ತ್ರೀಯವಾಗಿ ಅನ್ಯಸಮಯಗಳನ್ನು ಖಂಡಿಸಿ ಶಿವಜ್ಞಾನ ಸಿದ್ಧಾಂತವನ್ನು ಸ್ಥಾಪಿಸಿದುದೂ ಸಾಕ್ಷಿಯಾಗಿರುತ್ತವೆ. ಈತನು ಆಂಧ್ರವಾಙ್ಮಯಕ್ಕೆ ಮಾಡಿದ ಮಹದುಪಕಾರವನ್ನು ತದ್ದೇಶೀಯ ಪಂಡಿತರು ಈಗಲಾದರೂ ಕೊಂಡಾಡುತ್ತಿರುವರು. ಆಂಧ್ರದಲ್ಲಿ ದ್ವಿಪದಕಾವ್ಯವನ್ನು ಬರೆಯುವವರು ಈತನ ಹೆಸರನ್ನು ಹೇಳಿಯೇ ಬರೆಯಬೇಕು. ಆಂಧ್ರ ಶತಕವಾಙ್ಮಯದಲ್ಲಿ ಈತನ ವೃಷಾಧಿಪ ಶತಕವು ಅಪೂರ್ವವಾದುದು.

ಕವಿತಾಶೈಲಿ:—ಸೋಮನಾಥನು ತೆಲುಗುಭಾಷೆಯ ಸರಳತೆಯನ್ನೂ ಮಾಧುರ್ಯವನ್ನೂ, ಲಾಲಿತ್ಯವನ್ನೂ ಹೊರಗೆಡಹಿರುತ್ತಾನೆ. ಸಾಧಾರಣವಾಗಿ ತೆಲುಗು ಕವಿಗಳಿಗೆ ಸಂಸ್ಕೃತವೆಂದರೆ ವಿಶೇಷ ಅಭಿಮಾನವು. ಯಾವುದಾದರೊಂದು ಪದ್ಯವನ್ನು ತೆಗೆದುಕೊಂಡರೆ ಅದರಲ್ಲಿ ಮುಕ್ಕಾಲುಪಾಲು ಸಂಸ್ಕೃತ ಪದಗಳೇ ತುಂಬಿರುತ್ತವೆ. ಭಾವನೆಯಲ್ಲಿಯೂ

ವರ್ಣನಾಂಶಗಳಲ್ಲಿಯೂ ಶಬ್ದಾಲಂಕಾರ ಅರ್ಥಾಲಂಕಾರ ಪ್ರಯೋಗಗಳಲ್ಲಿಯೂ, ಸಾಧಾರಣವಾಗಿ ಸಂಸ್ಕೃತಕವಿಗಳೇ ಇವರಿಗೆ ಮಾರ್ಗದರ್ಶಕರಾಗಿರುತ್ತಾರೆ. ಮತ್ತು ಗದ್ಯಪದ್ಯಗಳಲ್ಲಿ ದೀರ್ಘಸಮಾಸಗಳನ್ನುಪ್ರಯೋಗಿಸುವಲ್ಲಿ ಇವರಿಗೆ ತುಂಬಾ ಅಪೇಕ್ಷೆಯು. ಆದರೆ ಜಾಣನಾದ ಸೋಮನಾಥನು ಸಂಸ್ಕೃತದಲ್ಲಿ ಅದ್ವಿತೀಯ ಪಂಡಿತನಾಗಿದ್ದರೂ ತೆಲುಗು ಭಾಷೆಯ ಸಹಜ ಸೌಂದರ್ಯದ ನೆಲೆಯನ್ನು ಕಂಡು ಹಿಡಿದು ಕೊಂಡಿದ್ದು ಜಾನು ತೆಲುಗಿನ ಪ್ರಯೋಗವನ್ನೇ ವಿಶೇಷವಾಗಿಟ್ಟುಕೊಂಡು ತನ್ಮೂಲಕ ತನ್ನ ಧ್ಯೇಯವನ್ನು ಕೊನೆಸಾಗಿಸಿಕೊಂಡನು. ಇದು ವರಿವಿಗೂ ಪ್ರಚಲಿತವಾಗಿದ್ದ ಕವಿಸಮಯ (Poetic Diction) ದಗೋಷ್ಠಿಗೆ ಹೋಗಲಿಲ್ಲ. ಸಾಧಾರಣ ಹಳ್ಳಿಯ ಜನರು ಮಾತಾಡುವ ಮಾತುಗಳನ್ನೇ ಕಿವಿಗಿಂಪಾಗುವಂತೆ ಜೋಡಿಸಿ ಅಲ್ಲಲ್ಲಿ ಥಳಥಳಿಸುವ ರತ್ನಗಳನ್ನು ಇಟ್ಟಂತೆ ಸಂಸ್ಕೃತ ಪದಗಳನ್ನೂ ಸಮಾಸಗಳನ್ನೂ ಇಟ್ಟು ತನ್ನ ಶೈಲಿಯನ್ನು ಸರ್ವ ಜನಮಾನ್ಯವಾಗಿ ಮಾಡಿಟ್ಟನು. ಮತ್ತು ಶುದ್ಧ ತೆಲುಗುಭಾಷೆಯಲ್ಲಿ ಇಷ್ಟೊಂದುಮಾಧುರ್ಯವಿದೆ ಯೆಂಬುದನ್ನು ತದ್ದೇಶೀಯರಿಗೆ ತೋರಿಸಿಕೊಟ್ಟು ತಾನೊಂದು ನವೀನ ಕವಿಸಮಯವನ್ನೇ ಸ್ಥಾಪಿಸಿದನು. ಅನುಕರಣವು ಕವಿಯ ವಿಚಾರ ಸ್ವಾತಂತ್ರ್ಯವನ್ನು ಹದಗೆಡಿಸಿ ಬಿಡುವುದು. ವಿಪಿನದಲ್ಲಿ ಯಾರ ಆತಂಕವಿಲ್ಲದೇ ಕೋಮಲ ಪಲ್ಲವದ ಮೊರೆಯಲ್ಲಿ ಅವಿತುಕೊಂಡು ಸ್ವೇಚ್ಛೆಯಿಂದ ಹಾಡುವ ಹಕ್ಕಿಗೂ ಬಂಗಾರದ ಪಂಜರದಲ್ಲಿ ಕಲಿಸಿದಂತೆ ಹಾಡುವ ಪಕ್ಷಿಗೂ ಭೇದವಿಲ್ಲವೇ?

ಸೋಮನಾಥನು ಕವಿತಾಶೈಲಿಯ ವಿಷಯದಲ್ಲಿ ಸರ್ವವೂ ತುಳಿಯುತ್ತಿದ್ದ ಪಥವನ್ನು ಬಿಟ್ಟು ನವೀನ ಮಾರ್ಗವನ್ನು ತುಳಿಯಲು ಬೇರೊಂದು ಕಾರಣವುಂಟು. ಆತನ ಮನಸ್ಸೆಲ್ಲವೂ ಬಸವೇಶ್ವರ ಉದಾತ್ತ ಸಂದೇಶದಿಂದ ತುಂಬಿ ತುಳುಕುತ್ತಿದ್ದಿತು. ವಿಚಾರಪ್ರಗತಿಯು ಮೇರೆಮೀರಿದ್ದಿತು. ವ್ಯಕ್ತಿಸ್ವಾತಂತ್ರ್ಯಕ್ಕೆ ಪ್ರಾಮುಖ್ಯತೆಯನ್ನುಕೊಟ್ಟು ಅರ್ಥವಿಲ್ಲದ ಪೂರ್ವಾಚಾರದ ಸಂಕೊಲೆಗಳನ್ನೂ ಕಡಿದು ಹಾಕಿ ಬಿಟ್ಟನು. ತನ್ನನ್ನು ಈರೀತಿ ಮುಗ್ಧನಾಗಿ ಮಾಡಿಬಿಟ್ಟ ಸಂದೇಶಗಳನ್ನು ಪ್ರಪಂಚಕ್ಕೆ ಸಾರಬೇಕೆಂದು ಹಾತೊರೆಯುತ್ತಿದ್ದನು. ಯಾವ ಧರ್ಮದ ರಹಸ್ಯವಾದರೂ ಸರ್ವ ಸಾಮಾನ್ಯ ಜನಮಾನ್ಯವಾಗಬೇಕಾದರೆ ಅದು ಸುಲಭವಾದ ಸರ್ವ ಸುಬೋಧಕರ ಶೈಲಿಯಲ್ಲಿ ಪ್ರತಿಪಾದಿಸಲ್ಪಡುವುದು ಪರಮಾವಶ್ಯಕವು." ಯಾರಿಗೂ ಅರ್ಥವಾಗದಂತೆ ಮಾತಾಡು

ವುದಕ್ಕಿಂತಲೂ ಮೂಕನಾಗಿರುವುದೇ ಲೇಸೆಂದು" ಓರ್ವ ಆಂಗ್ಲಕವಿಯು ನುಡಿದಿರುವನು. ಕ್ರಿಸ್ತೀ, ಬೌದ್ಧ ಜೈನಮತಗಳು ಈ ಸಾಧನೆಯಿಂದಲೇ ಪ್ರಸಾರವಾಗಿದ್ದು ನವಯುಗ ಕಾರಕರಾದ ಬಸವೇಶ್ವರಾದಿಗಳು ಈ ತತ್ವವನ್ನು ಮನಗಂಡವರಾಗಿ ವಚನಗಳ ಮೂಲಕ ತಮ್ಮ ಸಿದ್ಧಾಂತವನ್ನು ಪ್ರಕಟಗೊಳಿಸಿದರು. ಮತ್ತು ಸೋಮನಾರಾಧ್ಯನು ಸಹಾ ತನ್ನ ಶೈಲಿಯು ವಿಷಯವಾಗಿ ನಿಜಾಭಿಪ್ರಾಯವನ್ನು ಈ ರೀತಿ ವ್ಯಕ್ತಗೊಳಿಸಿರುವನು.

ಆರೂಢ ಗದ್ಯ ಪದ್ಯಾದಿ ಪ್ರಬಂಧಪೂರಿತ ಸಂಸ್ಕೃತ ಭೂಇಷ್ಟ
ರಚನ ಮಾನುಗಾ ಸರ್ವ ಸಾಮಾನ್ಯಂಬುಗಾಮಿ ಜಾನುತೆನುಗು
ವಿಶೇಷ ಪ್ರಸನ್ನ ತತುನು ನಟ್ಟಿಲುಗಾಕ ಕಾವ್ಯಪ್ರೌಢಿ ಪೇರ್ಮ
ನೆಟ್ಟನ ರಚಿಯಿಂಪನೇರ್ಚಿನ ಜಾಲುನುಪಮಿಂಪ ಗದ್ಯ ಪದ್ಯೋ
ದಾತ್ತ ಕೃತುಲು ದ್ವಿಪದಯುಸಮುಕ್ಷು ಭಾವಿಂಪನೆಲ್ಲನಿನ ಸರ
ಳತಸರಣಿ ಪ್ರಸನ್ನತ ಜೆನ್ನು॥

(ಪಂಡಿತಾರಾಧ್ಯ ಚರಿತ್ರ)

ಸೋಮನಾಥನ ನೈಸರ್ಗಿಕ ಕವಿತಾ ಪ್ರವಾಹವು ಸ್ವಚ್ಛವಾದ ಸಲಿಲದಂತೆ ಮೃದು ಮಧುರ ಮಂಜುಳ ರವದಿಂದ ಪ್ರವಹಿಸುತ್ತಾ ದೇಶೀಯರನ್ನಲ್ಲದೇ ಪಾಶ್ಚಾದ್ದೇಶೀಯರನ್ನು ಸಹಾ ತಲೆದೂಗಿಸಿರುವುದು. ಮೆ॥ ಸಿ. ಸಿ. ಬ್ರೌನ್ ಸಾಹೇಬರು ಈತನ ಕವಿತಾಲಾಲಿತ್ಯವನ್ನು ಅನೇಕ ವಿಧವಾಗಿ ಹೊಗಳುತ್ತಾ ಈತನನ್ನು ಐರೋಪಾಖಂಡದ ಪ್ರಸಿದ್ಧ ಕವಿಗಳಾದ ಥೀಯಾಕ್ರಟೀಸು ಮತ್ತು ಸ್ಕಾಟ್ಟು ಇವರಿಗೆ ಹೋಲಿಸಿರುವನು. (Vide his article on the Jangams in the Madras Journal of Literature and Saiva Prabhulingaleela is far more attractive to an English reader than Dwipada Ramayana. It is not more difficult in style than the Lady of the Lake, in sweetness and purity of diction it equals Theocritus etc.)

ಈ ವಿಷಯವು ಆಂಧ್ರ ಬಸವಪುರಾಣ ಪ್ರಭುಲಿಂಗಲೀಲೆ ಮತ್ತು ಪಂಡಿತಾರಾಧ್ಯ ಚರಿತ್ರ ಮುಂತಾದವುಗಳಲ್ಲಿ ಲೋಕಮೋಹನಕರವಾಗಿಯೂ ನಿರರ್ಗಳವಾಗಿಯೂ, ಪ್ರವಹಿಸುತ್ತಿರುವ ದ್ವಿಪದಕಾವ್ಯಾಮೃತವನ್ನು ಮನಸಾರ ಸೇವಿಸಿದವರಿಗೇ ನಿವೇದ್ಯವಾಗುವುದು. ಈತನ ಕಾವ್ಯಗಳು ಬರೇ ಕವಿಗಳನ್ನಲ್ಲ ಸಾಧಾರಣ ಜನರನ್ನು ಮೋಹಗೊಳಿಸುವಂ

ತಿರುವವು. ಈಗಲೂ ಈತನ ದ್ವಿಪದಿಗಳನ್ನು ತೆಲುಗು ದೇಶದ ಅಯ್ಯನವರುಗಳು ಏಕನಾದದೊಡನೆ ಹಾಡುತ್ತಾ ತಿರುಗುತ್ತಿರುವಾಗ ಕೇಳುವವರಿಗೆ ಪರವಶತೆಯುಂಟಾಗದೇ ಇರಲಾರದು.

## ಸೋಮನಾಥನ ಗ್ರಂಥಗಳು.

ಈ ಕವಿ ಸಾರ್ವಭೌಮನು ಈ ಕೆಳಕಂಡ ಅಮೂಲ್ಯ ಗ್ರಂಥರತ್ನಾವಳಿಯಿಂದ ವೀರಶೈವ ವಾಙ್ಮಯ ಯೋಷಾಮಣಿಯನ್ನು ಮನೋಜ್ಞ ಭೂಷಣ ಶೋಭಾಯಮಾನಗಳನ್ನಾಗಿ ಮಾಡಿರುವನು.

೧. ಬಸವ ಪುರಾಣವು. ಆಂಧ್ರ ದ್ವಿಪದಕಾವ್ಯವು.
೨. ಪಂಡಿತಾರಾಧ್ಯ ಚರಿತ್ರೆ. ,,
೩. ಪ್ರಭುಲಿಂಗಲೀಲೆ. ,,
೪. ಅನುಭವಸಾರ. ಆಂಧ್ರ ಚಂಪೂ.
೫. ಚತುರ್ವೇದಸಾರ. (ಆಂಧ್ರ ಸೀಸಪದ್ಯಗಳು.)
೬. ಸೋಮನಾಥಭಾಷ್ಯ. ಸಂಸ್ಕೃತ.
೭. ರುದ್ರಭಾಷ್ಯ (ಲೇಖಕನಿಗೆ ದೊರೆತಿಲ್ಲ.)
೮. ಬಸವ ರಗಳೆ.
೯. ಗಂಗೋತ್ಪತ್ತಿ ರಗಳೆ
೧೦. ಸದ್ಗುರು ರಗಳೆ.
೧೧. ಚನ್ನಮಲ್ಲನ ಸೀಸಪದ್ಯಗಳು.
೧೨. ನಮಸ್ಕಾರ ಗದ್ಯ.
೧೩. ವೃಷಾಧಿಪ ಶತಕವು.
೧೪. ಚನ್ನಬಸವ ರಗಳೆ.
೧೫. ಸೋಮೇಶ್ವರ ಶತಕವು. (ವಿವಾದಾಸ್ಪದವು.)

ಪಿಡುಪರ್ತಿ ಬಸವಕವಿ, ಪಿಡುಪರ್ತಿ ಸೋಮಕವಿ. ಅತ್ತವಾರಿ ಪಾಪಕವಿ ಶ್ರೀನಾಥಕವಿ ಮುಂತಾದ ಆಂಧ್ರಕವಿಗಳಿಗೂ, ಶಿವಪ್ರಕಾಶ ಸ್ವಾಮಿಗಳೇ ಮುಂತಾದ ತಮಿಳು ಕವಿಗಳಿಗೂ, ಶಂಕರಕವಿ, ಗುರುರಾಜಕವಿ ಮೊದಲಾದ ಸಂಸ್ಕೃತ ಕವಿಗಳಿಗೂ, ಭೀಮಕವಿ, ಷಡಕ್ಷರಿದೇವ, ವಿರೂಪಾಕ್ಷ, ಚಾಮರಸಾದಿ ಕರ್ಣಾಟಕ ಕವಿಗಳಿಗೂ, ಸೋಮ

ನಾಥನ "ಆಂಧ್ರ ಬಸವಪುರಾಣ" ಪಂಡಿತಾರಾಧ್ಯ ಚರಿತ್ರೆ, ಪ್ರಭು ಲಿಂಗಲೀಲೆಗಳೇ ಆಧಾರವಾಗಿದ್ದವೆಂಬುದು ಬೇರೆ ಹೇಳಬೇಕಾಗಿಲ್ಲ. ಸಿಂಗಿ ರಾಜಪುರಾಣ ಸೋಮನಾಥನ ಬಸವಪುರಾಣದಿಂದಿತ್ತೀಚೆಗೆ ಬರೆಯಲ್ಪ ಟ್ಟಿದ್ದೆಂದೇಲೇಖಕನ ಅಭಿಪ್ರಾಯವು. ಬಸವ ಚರಿತ್ರೆಯಬಗ್ಗೆ ಸಿಂಗರಾ ಜಪುರಾಣಕ್ಕೂ ಸೋಮನಾಥನ ಪುರಾಣಕ್ಕೂ ಕಂಡು ಬರುವ ವ್ಯತ್ಯಾಸಗಳ ಬಗ್ಗೆ ಸಮಾಧಾನಗಳನ್ನು ಕಂಡು ಹಿಡಿಯುವದು ಪರಮಾವಶ್ಯಕವು. ಗ್ರಂಥ ಶೋಧಕರಿಗೂ ಚರಿತ್ರೆಕಾರರಿಗೂ ಇದೊಂದು ಉಪಯುಕ್ತವಿಷ ಯವಾಗಿರುವುದು. ಸೋಮನಾಥನ ಗ್ರಂಥಗಳು ಆಂಧ್ರ ಪ್ರಪಂಚದಲ್ಲಿ ಎಷ್ಟೊಂದು ಮಾನ್ಯವಾಗಿದ್ದವೆಂಬುದಕ್ಕೆ ಅನೇಕ ಆಂಧ್ರ ಕವಿಗಳು ಈತನ ಶೈಲಿಯನ್ನೂ, ಛಂದಸ್ಸನ್ನೂ ಅನುಕರಣ ಮಾಡಿರುವುದೇ ಸಾಕ್ಷಿ. ಆಂಧ್ರ ಹರ್ಷನೆಂದೂ, ಕವಿ ಸಾರ್ವಭೌಮನೆಂದೂ ಸುಪ್ರಸಿದ್ಧನಾದ ಶ್ರೀನಾಥನೆಂಬ ಬ್ರಾಹ್ಮಣಕವಿಯು ತನ್ನ ಗ್ರಂಥಗಳಲ್ಲಿಯೂ ತನ್ನನ್ನು ಸಂಸ್ತವಿಸಿರುವು ದಲ್ಲದೇ ಈತನ ದ್ವಿಪದ ಪಂಡಿತಾರಾಧ್ಯ ಚರಿತ್ರೆಯನ್ನು ಚಂಪೂಕಾವ್ಯ ದಲ್ಲಿ ಬರೆದಿರುವನು. ಪಿಡುಪರ್ತಿ ಬಸವಕವಿ ಮತ್ತು ಪಿಡುಪರ್ತಿಸೋ ಮಕವಿಯೆಂಬೀರ್ವರು ಈತನ "ಪ್ರಭುಲಿಂಗಲೀಲೆ" ಮತ್ತು ಬಸವಪು ರಾಣಗಳನ್ನು ಚಂಪೂಕಾವ್ಯಗಳಲ್ಲಿ ಬರೆದಿರುವರು. ಅತ್ತ ವಾರಿ ಪಾಪಕ ವಿಯೆಂಬ ಬ್ರಾಹ್ಮಣಕವಿಯು ತನ್ನ ಚನ್ನಬಸವಪುರಾಣದಲ್ಲಿ ಸೋಮ ನಾಥನ ಗ್ರಂಥಗಳಿಂದ ವಿಷಯಗಳನ್ನು ಸಂಗ್ರಹಿಸಿರುವನು. ವೃಷಾಧಿ ಪಶತಕವು ಆಂಧ್ರ ಶತಕಕಾರರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿರು ವುದು.

ಈ ರೀತಿ ನಾನಾ ಭಾಷೆಗಳಲ್ಲಿ ನಾನಾ ಗ್ರಂಥಗಳನ್ನು ಬರೆದು ಈತನು ವೀರಶೈವ ಜಗತ್ತಿಗೆ ಮಹದುಪಕಾರವನ್ನು ಮಾಡಿರುವನು. ಹದಿನೆಂಟು ಪುರಾಣಗಳನ್ನೂ, ಭಾರತಾದಿಗಳನ್ನೂ, ಮೀಮಾಂಸ ಸೂತ್ರಗಳನ್ನೂ ವೇದವ್ಯಾಸನೊಬ್ಬನೇ ಬರೆದಿರುವನೆಂಬುದು ನಂಬಿದಲ್ಲಿ ವೀರಶೈವ ಪಂಚಾ ಚಾರ್ಯ ಜಗದ್ಗುರುಗಳಲ್ಲೊಬ್ಬರಾದ ಪಂಡಿತಾರಾಧ್ಯರ ಚರಿತ್ರೆಯನ್ನೂ, ವೀರಶೈವ ಸಮಯೋದ್ಧಾರಣ ಕಾರಣರಾದ ಪ್ರಭುದೇವ, ಬಸವೇಶ್ವರ, ಚನ್ನಬಸವೇಶ್ವರರ ಚರಿತ್ರೆಗಳನ್ನೂ, ವೀರಶೈವ ಸಿದ್ಧಾಂತವಾದ ಶಕ್ತಿ ವಿಶಿ ಷ್ಟಾದ್ವೈತವನ್ನು ಪ್ರತಿಪಾದಿಸುವ ಭಾಷ್ಯಗಳನ್ನೂ, ಶಿವಾಧಿಕ್ಯ ಶಿವಮ ತೋತ್ಕರ್ಷತೆಯನ್ನು ಢಣಾಡಂಗುರವಾಗಿ ಸಾರುವ ತದಿತರ ಗ್ರಂಥಗಳನ್ನೂ

ರಚಿಸಿ ಪ್ರಸಿದ್ಧನಾದ ಶ್ರೀ ಪಾಲ್ಕುರಿಕೆ ಸೋಮಾರಾಧ್ಯನು ವೀರಶೈವ ವೇದವ್ಯಾಸನೆಂಬುದರಲ್ಲಿ ತಿಲಾಂಶವಾದರೂ ಸಂದೇಹವಿಲ್ಲ.

ಸೋಮನಾಥನು ಬರೀ ಕವಿಯೂ, ಪಂಡಿತನೂ ಮಾತ್ರನೇ ಅಲ್ಲ; ಈತನ ನಿಜವಾದ ವೀರಶೈವತ್ತ್ವದ ಮೂರ್ತೀಭಾವನಾಗಿದ್ದನು. ಬಸವಾದಿ ಪ್ರಮಥರ ಬಗ್ಗೆ ನಿಸ್ಸೀಮ ಭಕ್ತಿಯುಳ್ಳವನಾಗಿದ್ದನು. ಬಸವೇಶ್ವರನೇ ಈತನ ಆರಾಧ್ಯ ದೇವತೆಯೂ, ಮಾರ್ಗದರ್ಶಿಯೂ. ಈತನ ಕವಿತಾಸಾಗರವು ಮೇರೆ ಮೀರಿ ಘೋಷಿಸುವುದಕ್ಕೆ ಶ್ರೀ ಬಸವೇಶ್ವರನೇ ಕಾರಣನಾಗಿದ್ದನು. ಉದಾತ್ತಭಾವನಾ ತರಂಗಗಳುಕ್ಕೇರುವುದಕ್ಕೆ ಬಸವೇಶ್ವರನೇ ಕಾರಣನಾಗಿದ್ದನು. ಅದು ಕಾರಣವೇ ಈತನು ಬಸವೇಶ್ವರನನ್ನು ಮನಸಾರ ಸ್ತುತಿಸಿ ಪುನೀತನಾಗಿರುವನು. ಬಸವ ನಾಮಾಕ್ಷರಗಳು ಈತನ ದೇಹಾದ್ಯಂತದಲ್ಲಿ ದಿವ್ಯಾಕ್ಷರಗಳಿಂದ ಬರೆಯಲ್ಪಟ್ಟಿದ್ದಂತೆ ತೋರುತ್ತದೆ. ಬಸವ ತತ್ತ್ವವು ಕಲ್ಯಾಣಕ್ಕೆ ಅತಿ ದೂರದಲ್ಲಿರುವ ಆಂಧ್ರಮಂಡಲದಲ್ಲಿ ಎಲ್ಲಾ ಸಮಾಜಗಳಲ್ಲಿಯೂ ವ್ಯಾಪಕವಾಗಿರುವುದೆಂದರೆ ಈತನೇ ಕಾರಣನೆಂದು ಹೇಳಬಹುದು. ನಂದೀಶ್ವರಾವತಾರಿಯೆನಿಸಿದ ಬಸವೇಶ್ವರನಂತೆ ಈತನೂ ಸಹಾ ತನ್ನಕ್ರಿಯದಿಂದಲೂ, ಬೋಧಾಮೃತದಿಂದಲೂ, ಬರವಣಿಗೆಗಳಿಂದಲೂ ವೀರಶೈವ ಮತವನ್ನುದ್ಧರಿಸಿರುವುದರಿಂದ ಈತನು ಸಾಕ್ಷಾದ್ಭೃಂಗೀಶ್ವರನ ಅವತಾರವೇ ಆಗಿದ್ದನೆಂದು ಶ್ರೀ ತೋಂಟದಾರ್ಯರು ವರ್ಣಿಸಿರುವುದು ಅತಿಶಯೋಕ್ತಿಯಲ್ಲ.

"ನುಡಿಯಲ್ಲಿ ಎಚ್ಚರ್ದು ನಡೆಯಲ್ಲಿತಪ್ಪಿದರೆ ಹಿಡಿದಿರ್ದಲಿಂಗವು ಘಟಸರ್ಪನೋಡಯ್ಯ" ಎಂಬೀ ಶರಣರವಾಕ್ಯದ ನಿಜತ್ತ್ವವನ್ನು ಸೋಮನಾಥನು ಚನ್ನಾಗಿ ಮನಗಂಡಿದ್ದನು. ತನ್ನ ಬರವಣಿಗೆಯಲ್ಲಿಲ್ಲದೇ ಆಚರಣೆಯಿಂದ ಸಹಾ ವೀರಶೈವ ಧರ್ಮಾಚರಣೆಯನ್ನು ಲೋಕಕ್ಕೆ ಒಡೆದು ತೋರಿಸಿದನು. ಆಗಮೋಕ್ತವಾದ ಮತ್ತು ಶರಣರು ಪಾಲಿಸುತ್ತಿದ್ದ ಸಕಳ ವೀರಶೈವ ಶೀಲಗಳನ್ನು ನಿಶಿತವಾದ ನಿಷ್ಠೆಯಿಂದ ಸಾಂಗವಾಗಿ ಆಚರಿಸಿ ತೋರಿಸಿದವನೀತನೇ ಪಾಂಡಿತ್ಯದಲ್ಲೂ ಕವಿತಾಪ್ರೌಢಿಮೆಯಲ್ಲೂ, ವಂಶೀಯಗುರುತ್ವದಲ್ಲೂ ಈತನು ಪ್ರಸಿದ್ಧಪಡದಂತೆ ಮಹಾ ಕ್ರಿಯಾಸಿದ್ಧಿಯಿಂದ ಜಗದ್ವಂದ್ಯತ್ವವನ್ನೂ ಈಶ್ವರ ಪ್ರತ್ಯಕ್ಷತೆಯನ್ನೂ ಸಹಾ ಪಡೆದುಕೊಂಡ ಮಹಾ ಮಹಿಮನೂ ಆಗಿದ್ದನು. ಶ್ರೀ ತೋಂಟದಾರ್ಯರು "ಗುರುತಿಲಕ" ನಾದ ಈತನನ್ನು ಈರೀತಿ ವರ್ಣಿಸಿರುವರು.

ವ॥ ಮಿನುಗುವ ಚತುಷ್ಷಷ್ಟಿ ಶೀಲಂಗಳಲ್ಲಿ ಯತಿ।
ಯುನತೆಯಿಂ ವರ್ತಿಸುತ್ತಿತರ ಸಮಯಂಗಳನ।
ವನಿಯುರಿಯ ಕೆಡೆಮೆಟ್ಟ ವೀರಶೈವಾಚಾರ ಮಾರ್ಗವಂನೆರೆಪಸರಿಸಿ ||
ಅನುಪಮ ಮಹಾ ಮಹಿಮನೆನಿಸಿ ರಾಜಿಸುವಸ
ದ್ವಿನುತ ಪಾಲ್ಕುರಿಕೆ ಸೋಮ" (೧ ಸಂ॥ ೧೮)

ಹಿಂದೂ ಧರ್ಮದಲ್ಲಿರುವ ಕೇವಲ ಸತ್ತ ನೊಣಗಳನ್ನೇ ಆರಿಸುವುದರಲ್ಲಿ ಅತಿ ದಕ್ಷರಾಗಿರುವ ಕ್ರೈಸ್ತರು ಸಹಾ ಸೋಮನಾಥಕೃತ ಗ್ರಂಥಗಳಲ್ಲಿ ಅಡಕವಾಗಿರುವ ನೈತಿಕ ವಿಷಯವನ್ನು ಹೊಗಳಿರುವರು. ಸಿ. ಪಿ. ಬ್ರೌನನು ಪ್ರಭುಲಿಂಗ ಲೀಲೆಯ ವಿಷಯವಾಗಿ ಬರೆಯುತ್ತಾ "ನೀತಿ ವಿಷಯದಲ್ಲಿ ಯಾವ ಪುಸ್ತಕಗಳನ್ನು ಬ್ರಾಹ್ಮಣಾದಿಗಳು ಪವಿತ್ರವಾಗಿ ಕಾಣುತ್ತಾರೋ ಅವಕ್ಕಿಂತಲೂ ಎಷ್ಟೋ ಅಂತರದ ಮೇಲೆ ಪರಿಶುದ್ಧತೆಯಲ್ಲಿ ಮೇಲಾಗಿರುತ್ತದೆ. ಇಂಥಾ ಮನೋಜ್ಞವಾದ ಪುಸ್ತಕವು ತೆಲುಗು ಭಾಷೆಯಲ್ಲಿ ಮತ್ತಾವ ಗ್ರಂಥವಿರುವದಿಲ್ಲ." ಪ್ರಭುಲಿಂಗಲೀಲೆಯ ಮೇಲೆ ಇಲ್ಲ ಸಲ್ಲದ ಕುತ್ಸಿತಾರೋಪಗಳನ್ನು ಮಾಡುತ್ತಿರುವ ದಿವಾಂಧರು ಬ್ರೌನ್‌ಸಾಹೇಬರಿಂದಾದರೂ ಬುದ್ಧಿಗಲಿತುಕೊಂಡು ಕಣ್ದೆರೆಯಲಿ! ಇನ್ನು ಸೋಮನಾಥನ ಗ್ರಂಥಗಳಲ್ಲಿ ಕೆಲವನ್ನು ಮಾತ್ರ ಕನ್ನಡ ಬಾಂಧವರಿಗೆ ಪರಿಚಯವನ್ನು ಮಾಡಿಕೊಟ್ಟು ಮುಂದೆ ಸಾಗುವೆನುಃ—

## ಸೋಮನಾಥ ಭಾಷ್ಯವು.

ಹಿಂದೂ ಧರ್ಮದಲ್ಲಿ ಪ್ರಚಲಿತವಾದ ಮುಖ್ಯ ಮತಗಳು (Schools of thought) ಸರ್ವಸಾಧಾರಣವಾಗಿ ವೇದವ್ಯಾಸನಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸ ಸೂತ್ರಗಳಿಗೇನೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿರುವುದರಿಂದ ಆಯಾ ಮತ ಪ್ರತಿಪಾದಕರು ಆ ಸೂತ್ರಗಳ ಮೇಲೆ ತಮ್ಮ ತತ್ತ್ವವನ್ನನುಸರಿಸಿ ವ್ಯಾಖ್ಯಾನವನ್ನು ಬರೆಯಲಾರಂಭಿಸಿದರು. ಆ ವ್ಯಾಖ್ಯಾನ ಮಾಲೆಯೇ ಭಾಷ್ಯವೆಂದು ಕರೆಯಲ್ಪಟ್ಟು ತತ್ತ್ವಜನುಯಾಯಿಗಳಿಗೆ ಪ್ರಧಾನಗ್ರಂಥವಾಗುತ್ತಿತ್ತು. ಈ ರೀತಿ ವೀರಶೈವ ಮತ ಸ್ಥಾಪಕರಲ್ಲಿ ಶ್ರೀರೇಣುಕ, ದಾರುಕ, ಮತ್ತು ಏಕೋರಾಮಾರಾಧ್ಯರು ಸಹಾ ಶಕ್ತಿವಿಶಿಷ್ಟಾದ್ವೈತದ ಪರವಾಗಿ ಭಾಷ್ಯಗಳನ್ನು ಬರೆದಿರುವರೆಂದು ಪ್ರತೀತಿಯಿರುವುದಾಗಲಿ ಅವು ಇನ್ನು ಹೊರಬಿದ್ದಿಲ್ಲ. ಅವುಗಳ ಶೋಧದ

ಬಗ್ಗೆ ಪ್ರಯತ್ನಗಳು ನಡೆದಿವೆ. ಅದಾವುದೋ ಒಂದು ಸ್ಥಳದಲ್ಲಿ “ರೇಣುಕ ಭಾಷ್ಯ”ವು ಸಿಕ್ಕಿರುತ್ತದೆಂದು ಕೂಡ ಸುದ್ದಿಯು ಹುಟ್ಟಿದೆ. ಆ ಪಂಚಾಚಾರ್ಯರ ಅನುಗ್ರಹದಿಂದ ಹುಲಿಯ ಚರ್ಮವನ್ನು ಹೊದ್ದುಕೊಂಡಿರುವ ಗಾರ್ದಭವು ಮಾತ್ರ ಹೊರಬೀಳಬಾರದಾಗಿ ಲೇಖಕನ ಆಶಯವು. ಈಗ ನಮಗೆ ಲಬ್ಧವಾಗಿರುವ ಭಾಷ್ಯಗಳ ಪೈಕಿ ನೀಲಕಂಠಶಿವಾಚಾರ್ಯರ ಭಾಷ್ಯವೇ! ಮೊಟ್ಟಮೊದಲು ಹುಟ್ಟಿದ್ದೆಂದು ಸಂಕೋಚವಿಲ್ಲದೇ ಹೇಳಬಹುದು. ಈ ಮಹಾ ಗ್ರಂಥವು ಇದುವರಿವಿಗೆ ಹೊರಬೀಳದೇ ಇದ್ದುದರಿಂದ ಮ್ಯಾಕ್ಸಮುಲ್ಲರ್ ಡ್ಯೂಸನ್ ಮುಂತಾದ ಪಾಶ್ಚಾದ್ದೇಶೀಯರು ಶ್ರೀ ಶಂಕರಾಚಾರ್ಯರ ಮೀಮಾಂಸ ಭಾಷ್ಯವೇನೇ ವೈದಿಕ ಹಿಂದೂ ಧರ್ಮದ ಸ್ವರೂಪವನ್ನು ವ್ಯಕ್ತಗೊಳಿಸುವದೆಂದು ಅಭಿಪ್ರಾಯಪಟ್ಟಿದ್ದರು. ಈ ಅಭಿಪ್ರಾಯವು ತಪ್ಪೆಂದು ಪ್ರೊ॥ ಥಿಬಾಲ್ಟರವರು ತೋರಿಸಿಕೊಟ್ಟರು. ಇತ್ತೀಚಿಗೆ ತಮಿಳರ ಪ್ರಯತ್ನದ ಕಾರಣದಿಂದ ಹೊರಬಿದ್ದಿರುವ ನೀಲಕಂಠ ಭಾಷ್ಯವು ಥಿಬಾಲ್ಟರವರ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ. ನೀಲಕಂಠ ಶಿವಾಚಾರ್ಯರ ಅನಂತರ ಶ್ರೀ ಶಂಕರಾಚಾರ್ಯರು ಸುಮಾರು ಕ್ರಿ॥ ಪೂ॥ ೭ನೇ ಶತಮಾನದಲ್ಲಿಯೂ, ಶ್ರೀ ರಾಮಾನುಜಾಚಾರ್ಯರು ಕಿ॥ ಶ॥ ೧೧ನೇ ಶತಮಾನದಲ್ಲಿಯೂ, ಶ್ರೀ ಮಧ್ವಾಚಾರ್ಯರೂ ೧೩ನೇಶತಮಾನದ ಅಂತ್ಯಭಾಗದಲ್ಲೂ ಅದ್ವೈತ, ವಿಶಿಷ್ಟಾದ್ವೈತ ದ್ವೈತಮತಗಳಿಗನುಗುಣವಾಗಿ ಭಾಷ್ಯಗಳನ್ನು ಬರೆದರು. ಆ ಮೇಲೆ ಶ್ರೀಪತಿಪಂಡಿತರು ಶಕ್ತಿವಿಶಿಷ್ಟಾದ್ವೈತ ಪ್ರತಿಪಾದಕವಾಗಿ ಶ್ರೀಕರ ಭಾಷ್ಯವನ್ನು ಬರೆದರು.

ಶ್ರೀ ಶೈವಸಿದ್ಧಾಂತ ಧಾರೆಯುರಾದ ಅಪ್ಪಯ್ಯದೀಕ್ಷಿತರು ನೀಲಕಂಠಭಾಷ್ಯಗೆ “ಶಿವಾರ್ಕಮಣಿ ದೀಪಿಕ” ವೆಂಬುವ ಮಹಾಗ್ರಂಥವನ್ನೂ ಶಿವೋತ್ಕರ್ಷಣ ಪ್ರತಿಪಾದಕವಾದ “ಬ್ರಹ್ಮತರ್ಕಸ್ತವವೂ ರಾಮಾಯಣಸಾರ ಸಂಗ್ರಹವೂ ತಾಂತ್ರಿಕ ಮೀಮಾಂಸಾಂಧಚಂಡ ಭಾಸ್ಕರವೂ” ಮೊದಲಾದ ಅನೇಕ ಶೈವಗ್ರಂಥಗಳನ್ನು ವಿರಚಿಸಿ ಪ್ರಸಿದ್ಧರಾದರು. ಹೀಗೆ ಸಾಧಾರಣವಾಗಿ ಬ್ರಹ್ಮಸೂತ್ರಗಳನ್ನಾಗಲೀ, ಉಪನಿಷತ್ತನ್ನಾಗಲೀ, ದಶೋಪನಿಷತ್ತುಗಳನ್ನಾಗಲಿ ಆಧಾರವಾಗಿಟ್ಟುಕೊಂಡು ಬರೆಯಲ್ಪಡುವ ವ್ಯಾಖ್ಯಾನಗಳೇ ಭಾಷ್ಯಗಳೆಂದು ಪ್ರಸಿದ್ಧವಾದವು. ಅವರೆ ಸೋಮನಾಥನು ಎಲ್ಲರಂತೆ ತಾನು ಪ್ರಸ್ಥಾನ ತ್ರಯವನ್ನೇ ಬರೆದರೆ

ಚರ್ವಿತ ಚರ್ವಣವಾಗುವದೆಂದರಿತು ಭಾಷ್ಯವಾಙ್ಮಯದಲ್ಲಿ ಸಹಾ ತನ್ನದೇ ಒಂದು ಹೊಸಮಾರ್ಗವನ್ನು ತುಳಿದನು. ಶೃತಿ, ಸ್ಮೃತಿ, ಆಗಮ, ಪುರಾಣೇತಿಹಾಸಗಳನ್ನಿಟ್ಟುಕೊಂಡು ತನ್ಮೂಲಕ ಶಿವೋತ್ಕರ್ಷತೆಯನ್ನೂ, ಶಿವಮತೋತ್ಕರ್ಷತೆಯನ್ನು, ಅಷ್ಟಾವರಣಗಳ ಮಹಾತ್ಮೆಯನ್ನು ಪ್ರತಿಪಾದಿಸುತ್ತ ನಡೆದು ಅಲ್ಲಲ್ಲಿ ಏಕಾತ್ಮ ನಿರಸನವಾದ, ಕರ್ಮವಾದನಿರಸನ, ಮಾಯಾವಾದ ನಿರಸನ ಮುಂತಾದ ವೀರಶೈವ ಸಿದ್ಧಾಂತದ ಹೆಗ್ಗುರುತುಗಳಾದ ತತ್ತ್ವಗಳನ್ನು ಆಧಾರಯುಕ್ತವಾಗಿ ವಿವೇಚಿಸಿರುವನು.

ವೀರಶೈವ ವಾಙ್ಮಯಾಂಬೋಧಿಯಲ್ಲಿ ಥಳಥಳಿಸುತ್ತಲಿದ್ದ ಈ ಗ್ರಂಥರತ್ನವನ್ನು ಆಂಧ್ರದೇಶೀಯರು ಬಹು ಶ್ರಮದಿಂದ ಹುಡುಕಿ ತೆಗೆದು ಸರ್ವಜನಾಭಿನಂದನ ಪಾತ್ರರಾಗಿರುತ್ತಾರೆ. ತೆನುಗು ಲಿಪಿಗಳಲ್ಲಿ ಮುದ್ರಣವಾಗಿದ್ದ ಒಂದಾನೊಂದು ಪೂರ್ವ ಪ್ರತಿಯು ಈ ಲೇಖಕನಿಗೆ ದೊರೆತಿದ್ದು ಅದು ಅಪೂರ್ಣ ಗ್ರಂಥವೆಂದು ಕಂಡು ಬರುತ್ತದೆ. ಗ್ರಂಥಾಂತ್ಯದಲ್ಲಿ "ಶ್ರೀ ವೀರಮಾಹೇಶ್ವರಾಚಾರ ಸಾರೋದ್ಧಾರೇ ಶ್ರೀ ಸೋಮನಾಥ ಭಾಷ್ಯೆ ಮಹಾದೇವ ಶಬ್ದನಿರ್ವಚನಂ ನಾಮಪಂಚವಿಂಶತಿ ಪ್ರಕರಣ ಸಂಪೂರ್ಣಂ" ಎಂದು ಬರೆಯಲ್ಪಟ್ಟಿದೆ. ಮತ್ತು ನೊನ್ನೆತಾನೇ ಸೋಮನಾಥ ಭಾಷ್ಯದ ತಾಡವಾಲೆಯ ಪ್ರತಿಯೊಂದು ಲೇಖಕನಿಗೆ ದೊರೆತದ್ದು ಅದನ್ನು ಸಮಗ್ರವಾಗಿ ಪರಿಶೀಲಿಸಿದಮೇಲೆ ಈ ಗ್ರಂಥದವಿಷಯವಾಗಿ ಸಮುದ್ಧರಿಸಿ ಬರೆಯಲಾಗುವುದು. ಈ ಗ್ರಂಥದಲ್ಲಿ ವೃಷಭೇಂದ್ರ ಮಹಿಮೆ, ವಿಭೂತಿಮಹಿಮೆ, ರುದ್ರಾಕ್ಷಿಮಹಿಮೆ, ಶಿವಲಿಂಗಧಾರಣಮಹಿಮೆ, ಲಿಂಗಾರ್ಚನವಿಧಿ, ಲಿಂಗಾರ್ಚನಮಹಿಮೆ, ಪಾದೋದಕಮಹಿಮೆ, ಪ್ರಸಾದಸ್ಥಲಮಹಿಮೆ, ಶ್ರೀ ವೀರಶೈವ ಮಹಿಮೆ, ನಮಸ್ಕಾರಾಧಿಪತಿತ್ವವು ಸರ್ವದೇವತಾ ಜನಕತ್ವವು, ಏಕಾತ್ಮನಿರಸನವು, ದ್ವಿಮೂರ್ತಿವಾದ ನಿರಸನವು, ಅಷ್ಟಮೂರ್ತಿವಾದ ನಿರಸನವು, ಕರ್ಮವಾದ ನಿರಸನವು, ಭಗವಚ್ಛಬ್ದ ನಿರ್ವಚನವು, ಭರ್ಗಶಬ್ದನಿರ್ವಚನವು, ಮಹಾದೇವ ನಿರ್ವಚನವು, ಇತ್ಯಾದಿ ವಿಷಯಗಳು ವಿಶದವಾಗಿ ಬರೆಯಲ್ಪಟ್ಟು ಆಧಾರಗಳಾಗಿ ವೇದಾಗಮೋಪನಿಷತ್ತುಗಳ ಪ್ರಮಾಣಗಳುದಹರಿಸಲ್ಪಟ್ಟಿವೆ.

**ರುದ್ರಭಾಷ್ಯವು**:— ಇದು ಸಹಾ ಸೋಮನಾಥಕೃತವೆಂದು ಭೀಮಕವಿಯು ನುಡಿದಿರುತ್ತಾನೆ. ಇದರ ಪ್ರತಿಯು ಲೇಖಕನಿಗೆ ದೊರೆತಿಲ್ಲ.

**ಚತುರ್ವೇದಸಾರವು:—** ವೇದ ಸೂತ್ರಗಳನ್ನೂ ಅವುಗಳ ಮೇಲಿನ ವ್ಯಾಖ್ಯಾನವನ್ನೂ, ಪದ್ಯರೂಪದಲ್ಲಿಡುವದು ಬಹು ಕಠಿಣವು. ಸೋಮನಾಥನು ಮಾತ್ರ ದೈವದತ್ತವಾದ ತನ್ನ ಕವಿತಾಶಕ್ತಿಯನ್ನು ಯಾವ ರೀತಿಯಲ್ಲಾದರೂ ಪ್ರಯೋಗಿಸಬಲ್ಲನು. ಪದಗಳ ಜೋಡಣೆಯಲ್ಲಿ ಆತನ ಶಕ್ತಿಯು ಅದ್ಭುತವಾದುದೆಂಬುದಕ್ಕೆ ಚತುರ್ವೇದ ಸಾರವಸೀಸಮಾಲಿಕೆಯೇ ಸಾಕ್ಷಿ. ತೆಲುಗು ಸೀಸಪದ್ಯದಲ್ಲಿ ಪ್ರತಿಯೊಂದು ಪಾದಕ್ಕೂ ಆರು ಇಂದ್ರಗಣಗಳೂ, ಎರಡು ಸೂರ್ಯಗಣಗಳೂ, ಇರಬೇಕಲ್ಲದೇ ಎರಡು ಸ್ಥಾನಗಳಲ್ಲಿ ಯತಿಯಾಗಲಿ, ಪ್ರಾಸಯತಿಯಾಗಲಿ, ಇರಲಿಕ್ಕೇ ಬೇಕು. ಇಂಥಾ ಕ್ಲಿಷ್ಟ ಛಂದೋಬಂಧನಕ್ಕೊಳಗಾದ ಪಾದಗಳಲ್ಲಲ್ಲಿ ವೇದಸೂತ್ರಗಳನ್ನು ಸೇರಿಸಿ, ಅವುಗಳು ಶಿವಮತೋತ್ಕರ್ಷತೆಯನ್ನು ಯಾವ ರೀತಿ ಪ್ರತಿಪಾದಿಸುತ್ತಿರುವುದೆಂಬುದನ್ನು ವ್ಯಕ್ತಗೊಳಿಸಿರುವನು. ಪ್ರತಿಯೊಂದು ಪದ್ಯವನ್ನು ಬಸವಲಿಂಗಕ್ಕೆ ಅಂಕಿತ ಮಾಡಿರುವಂತೆ ಬರೆದಿರುವನು. ಈ ರೀತಿ ವೀರಶೈವ ಧರ್ಮದ ವೈದಿಕತ್ವವನ್ನು ಅಧಿಕಾರವಾಣಿಯಿಂದ ಸ್ಥಾಪಿಸಿರುವನು. ವರ್ಣಾಶ್ರಮ ಶೃಂಖಲಗಳನ್ನು ಕಡಿದು ಬಿಸುಟಿದ ಬಸವಪಂಥವು ಅವೈದಿಕವೆಂದು ನಾವು ವೈದಿಕರೆಂದು ಹೇಳಿಕೊಳ್ಳಬೇಕಾದರೆ ವರ್ಣಭೇದಗಳನ್ನು ಪಾಲಿಸಬೇಕೆಂದು ಇಲ್ಲಸಲ್ಲದ ತತ್ವಗಳನ್ನು ಪ್ರತಿಪಾದಿಸುತ್ತಾ ವೀರಶೈವ ಧರ್ಮವನ್ನಧೋಗತಿಗೆ ಒಯ್ಯಬೇಕೆಂದಿರುವ ಕೆಲ ಆಧುನಿಕ ಪಂಡಿತರು ಸೋಮನಾಥಕೃತ ಚತುರ್ವೇದ ಸಾರವನ್ನಿಷ್ಟು ಓದಲಿ. ಸೋಮನಾಥನು ವೇದಾಗಮೋಪನಿಷತ್ತುಗಳನ್ನು ಚನ್ನಾಗಿ ಮನನ ಮಾಡಿಕೊಂಡಿದ್ದು ಬಸವೇಶ್ವರನ ತತ್ವವು ಅವುಗಳ ಸಾರವೇ ಎಂದು ಘಂಟಾಘೋಷವಾಗಿ ಸಿದ್ಧಾಂತೀಕರಿಸಿರುವನು. ಬಸವಯುಗದ ಬಸವಾನುಯಾಯಿಗಳು ವೇದಾಗಮಗಳನ್ನು ಮನ್ನಿಸುತ್ತಿದ್ದಿಲ್ಲವೆಂದೂ, ತಮ್ಮದೇ ಒಂದು ಹೊಸ ಪಂಥವನ್ನು ಸ್ಥಾಪಿಸಿದರೆಂದೂ ಬಡಬಡಿಸುತ್ತಿರುವವರ ವಾದವು ಶುಷ್ಕವಾದುದೇ ಸರಿ. ಇವರು ಇದುವರೆಗೂ ಯಾರೂ ಕೇಳಿ ಅರಿಯದ ಬಸವಪಂಥವು ಆಚಾರ್ಯರ ಪಂಥವೆಂದು ವೀರಶೈವ ಧರ್ಮದಲ್ಲೇ ಇಬ್ಭಾಗವನ್ನು ಮಾಡಲೆಣಿಸಿರುವರು. ಬಸವ ಪಂಥವು ಅವೈದಿಕವೆಂದೂ, ಆಚಾರ್ಯ ಪಂಥವು ಪರಮವೈದಿಕವೆಂದೂ, ಸಾಧಿಸುವ ಇವರು ವೀರಶೈವಧರ್ಮದ ತಿರುಳನ್ನೇ ಅರಿಯರೆಂದು ಹೇಳಬೇಕಾಗಿದೆ. ಅಚ್ಚಗನ್ನಡ, ಅಥವಾ ಅಚ್ಚ ತೆನುಗಿನಲ್ಲಿರುವ

ತತ್ವಗಳಿಲ್ಲವೂ ಅವೈದಿಕವೆಂದು ಯಾವ ಶುಷ್ಕ ತತ್ವಕ್ಕಾದರೂ ಸಂಸ್ಕೃತ ಭಾಷೆಯ ಅಂಗಿಯನ್ನು ತೊಡಿಸಿ ಬಿಟ್ಟಿದ್ದರೆ ಅದು ವೈದಿಕವೆಂದು ಇವರು ತಿಳಿದುಕೊಂಡಿರಬಹುದು.

ಸೋಮನಾಥನು ತನ್ನ ಪೀಠಿಕಾಭಾಗದಲ್ಲಿ ಬಸವಶಬ್ದವು ಶಿವಾತ್ಮಕ, ಗುರ್ವಾತ್ಮಕ, ಮಂತ್ರಾತ್ಮಕ, ಲಿಂಗಾತ್ಮಕವಿದ್ದು ಬಸವಲಿಂಗಾಚಾರವು ಅನಾದಿ ಸಂಸಿದ್ಧವಾದುದು. ಆ ಪರಮ ಪವಿತ್ರವಾದ ಆಚಾರವೇ ಗುರುಮಂತ್ರೋಚ್ಚಾರಣೆಯ ಫಲವನ್ನು ಕೊಡುವುದು. ಆದ ಪ್ರಯುಕ್ತ "ಬಸವಲಿಂಗಾಂಕಿತ ಖ್ಯಾತಿ ಶೃತಿಗಳನ್ನು ಭಕ್ತಿಪೂರ್ವಕವಾಗಿ ಈ ಧರಣಿಯೊಳ್ ಪ್ರಸಿದ್ಧವಾಗಿ ರಚಿಸುವೆನು. ಬಸವಲಿಂಗಮುಕ್ತಿಯೋ ಅವಧರಿಸೆಂ" ದು ಈ ರೀತಿ ಬರೆದಿರುವನು.

ಸೀ || ಬಾಭರ್ಗ್ಗನ ವಿರಳ§ಬ್ರಹ್ಮಂಬುಗಾವ್ವನ। ನಾಬಕಾರಂ ಬುಂರೆಶವಾತ್ಮಕಂಬು
ಸಾಶಂಭುನಾಕಾರ§ಸಂಪದ ಗಾವ್ವನ। ನಾಸಕಾರಂಬು ಗು§ ರ್ವಾತ್ಮಕಂಬು ||
ವಾವರ ದುನಿ ವಚೋ § ವಾಸನ ಗಾವುನ। ನಾವಕಾರಂಬುಮಂ§ ತ್ರಾತ್ಮಕಂ ಬು||
ನಟುಗೂಡ ತ್ರಿತಯ ಸಂ § ಪುಟಮುಗಾವುನ ಬಸ। ವಾಕ್ಷರತ್ರಯ ಮುಲಿಂ§ ಗಾತ್ಮಕಂಬು

ಗೀ || ನಟ್ಟಿ ಬಸವಲಿಂಗಾಚಾರ§ಮಾದಿನೆನ್ನ।
ಬಡನುಗುರು ಮಂತ್ರೋಚ್ಚಾರಣ § ಫಲಮುನೂನಗು
ಗಾನ ಬಸವಲಿಂಗಾಂಕಿತ § ಖ್ಯಾತಿಶ್ರುತುಲ
ವಸುಧರಚಿಯಿ.ಂತು ನತಿ ಭಕ್ತಿ§ ಬಸವಲಿಂಗ

ಮತ್ತೊಂದು ಪದ್ಯದಲ್ಲಿ ಭವವಾರ್ಧಿಯನ್ನು ದಾಂಟಿಸುವ ತೆಪ್ಪಗಳೂ, ಪಾಪಾಂಧಕಾರವನ್ನು ಹರಿಸುವ ದೀಪಗಳೂ, ಮುಕ್ತಿಸುರಭೂಜಗಳೂ, ಕಲ್ಪಭೂಜದ ಪ್ರಥಮ ಬೀಜಗಳೂ ಆದ ಶ್ರೀ ಬಸವಣ್ಣನ ಪಾದ ಪದ್ಮಗಳನ್ನು ಭಕ್ತಿಯಿಂದ ಮನಸ್ಸಿನಲ್ಲಿರಿಸಿ, ನಿರ್ವಿಕಲ್ಪರತಿಯಿಂದ ಚತುರ್ವೇದಸಾರವನ್ನು ಪದ್ಯಗಳ ರೂಪವಾಗಿ ರಚಿಸುವೆನೆಂದು ಹೇಳಿಕೊಂಡಿರುತ್ತಾನೆ.

ಸೀ.॥ ಬಸವನ್ನ ಶ್ರೀಪಾದ §ಪದ್ಮ ಮುಲ್ ಭವವಾರ್ಧಿ। ಪಾರ
ಮಂದಿಂಚುತ § ಪ್ಪಲನಿದಲಚಿ ॥
ಬಸವನ್ನ ಶ್ರೀಪಾದ § ಪದ್ಮ ಮುಲ್ ಭವಚಯ। ಧ್ವಾಂತಮುಡಂಚು
ದೀ § ಪಂಬುಲನಿಯು॥
ಬಸವನ್ನ ಶ್ರೀಪಾದ § ಪದ್ಮಮುಂರಿ ಜಿಲ್ಲು। ಭುಕ್ತಿ ಮುಕ್ತಿಕಿಸುರ §
ಭೂಜಮುನಿಯು ॥
ಬಸವನ್ನ ಶ್ರೀಪಾದ § ಪದ್ಮ ಮುಲ್ ಕಲ್ಪಭೂ ಜಂಬುಲ ಪ್ರಥಮು
ಬೀ § ಜಂಬುಲನಿಯು

ಗೀ॥ ಪ್ರಸ್ತುತಿಂಪನೊಪ್ಪು § ಬಸವನಾಥುನಿ ಪಾದ।
ಸರಸಿಜ ಮುಲಭಕ್ತಿ ಸರಣಿ ದಾಲ್ಚಿ॥
ನಿರ್ವಿಕಲ್ಪರತಿ ಚತುರ್ವೇದ ಸಾರಮುನ್।
ಪದ್ಯ ಮುಲ್ ರಚಿಂತು ಬಸವಲಿಂಗ॥



# ಶ್ರೀ. ಘಂಟಾಕರ್ಣ ಪಂಚಕಂ.

(ಲೇಖಕ:—ಪಂ॥ ಅಮರನಾಥಶಾಸ್ತ್ರೀ ಹಿರೇಮಠ ಬನ್ನಿಗೋಳ ಸಿರಗುಪ್ಪಿ
ಜಿ॥ ಬಳ್ಳಾರಿಪಂಚಾಚಾರ್ಯ ಸಂಸ್ಕೃತ ಪಾಠಶಾಲಾಧ್ಯಾಪಕ.)

---

## ನಕಾರವಲ್ಲೀಸ್ತುತಿಃ

ನಯುದಮರ ಮಹೀಜಂ। ನಾರದಾದ್ಯಾತ್ತಪೂಜಂ। ನಿಜಶಿವಮತಬೀಜಂ। ನಿತ್ಯಕೈಲಾಸ ಭಾಜಂ॥ ನುತಗಣಪ ಸಮಾಜಂ। ನುತ್ಯಶಂಭೋಸ್ತನೂಜಂ। ಭಜ ಗುರುವರ ಘಂಟಾಗರ್ಣಮೋಂ ಹ್ರೀಂ ವಿರಾಜಂ॥೧॥

## ಮಕಾರವಲ್ಲೀಸ್ತುತಿಃ

ಮಹಿತ ಚರಿತ ಪೂತಂ। ಮಾನ್ಯ ಮಾಂಧಾತೃ ಗೀತಂ। ಮಿಹಿರಸುತವಿಘಾತಂ। ಮೀನಕೇತ್ವಬ್ಜವಾತಂ॥ ಮುದಿತ ಚಿದವಧೂತಂ। ಮೂಲಸಲ್ಲಿಂಗಜಾತಂ। ಭಜ ಕೃತಯುಗರಾಜ ತ್ರ್ಯಕ್ಷರಾಚಾರ್ಯ ತಾತಂ॥೨॥

## ಶಕಾರವಲ್ಲೀಸ್ತುತಿಃ

ಶಮಿತ ಷಡರಿಚರ್ಯಂ। ಶಾಂಭವಾಚಾರ್ಯ ವರ್ಯಂ। ಶಿಮನುಕಲಶಧಾರ್ಯಂ। ಶೀಲವದ್ರಾಘವಾರ್ಯಂ॥ ಶುಭಸಿಗಮ ವಿಚಾರ್ಯಂ। ಶೋಭಿತಾ ಪ್ರಾಕೃತಾರ್ಯಂ। ಭಜ ನಿರವಧಿಶೌರ್ಯಂ ಶ್ರೀ ತ್ರಿವಕ್ತ್ರಾರ್ಯವರ್ಯಂ॥೩॥

## ವಕಾರವಲ್ಲೀಸ್ತುತಿಃ

ವರರವಿಮದನಾಶಂ। ವಾರಿತನ್ಯಾಸಪಾಶಂ। ವಿರತಗುರುಚರೇಶಂ। ವಿಶ್ರುತೋಷಾಮಹೇಶಂ॥ ವೃತಸುಮಹಿಮಕೋಶಂ। ವೇಣುದಂಡಪ್ರಕಾಶಂ। ಭಜ ಗುರುವರ ಘಂಟಾಕರ್ಣ ಸದ್ಭಾವಪರೇಶಂ॥೪॥

## ಯಕಾರವಲ್ಲೀಸ್ತುತಿಃ

ಯತಿ ತತಿನುತಿಪಾತ್ರಂ। ಯಾತ ಸದ್ಭೃಂಗಿಗೋತ್ರಂ। ಯುತಹಿಮನಗ ಸತ್ರಂ। ಯುಕ್ತಲಂಬಾಖ್ಯಸೂತ್ರಂ॥ ಯುಗವಿತತ ಚರಿತ್ರಂ।

ಯೋಗಭೃತ್ಸೂಕ್ಷ್ಮಸೂತ್ರಂ। ಭಜ ಕಲಿಹರಮೇಕೋರಾಮಪಿಾಶಾನ ಪುತ್ರಂ॥೫॥

ಪ್ರಾಂಚತ್ಸೂಕ್ಷ್ಮಸುಪಂಚವರ್ಣ ಗುರು ಘಂಟಾಕರ್ಣ ಸತ್ಪಂಚಕಂ। ಶ್ರೀ ಪಂಚಾಕ್ಷರ ಪಂಚವಲ್ಲೀ ವಿಲಸತ್ಸ್ವಭೂರ್ಜ ಪಂಚಾಯಿತಂ|| ಪಂಚ ಕ್ಲೇಶವಿಮುಂಚಕಂ ಸದಮರೇಶೋಕ್ತಂ ಭಜತ್ಕಂಚುಕಂ। ವಾಂಛಾಸಂಚ ಯಮಾಪ್ನುತೇ ಪಠತಿ ಯೋ ಭಕ್ತ್ಯಾಸ ಮುಕ್ತೋಭವೇತ್ ।೬॥

---

# ಲಿಂಗದ ಸ್ವರೂಪು ಮತ್ತು ಅದರ ಕಪ್ಪು ಕಂಥೆ.

ಲೇಖಕ:— ವೇ|| ಪಂ|| ಅಮರನಾಥ ಶಾಸ್ತ್ರಿ ಹಿರೇಮಠ ಬನ್ನಿಗೋಳ
ಪಂಚಾಚಾರ್ಯ ಸಂಸ್ಕೃತ ಪಾಠಶಾಲಾಧ್ಯಾಪಕ ಮು॥ ಸಿರಗುಪ್ಪಿ ಜಿ. ಬಳ್ಳಾರಿ

ಶ್ರೀ ಜಗದ್ಗುರು ಪಂಚಾಚಾರ್ಯರಿಂದ ಸ್ಥಾಪಿಸಲ್ಪಟ್ಟ ವೀರಶೈವ ಧರ್ಮದ ಮರ್ಮವನ್ನರಿತು ಅದರಂತೆಯೇ ಆಚರಿಸಿದ ಪುರಾತನರ ಅನುಭವ ಸಿದ್ಧಗಳಾದ ಆಚರಣೆಗಳನ್ನು ಶೋಧಕ ದೃಷ್ಟಿಯಿಂದ ವಿಚಾರಿಸಲು ಅವು ವೇದ ರಹಸ್ಯಾರ್ಥ ಬೋಧಕಗಳೂ, ಆಧುನಿಕರು ಟೀಕಲಿಕ್ಕೆ ಹಾಕಿಕೊಟ್ಟ ಕಿತ್ತಿಗಳೂ, ಎಂಬುದು ತೋರಿರಲಾರವು. ಆದರೆ ಲಿಂಗಕ್ಕೆ ಸನಾತನ ಕಾಲದಿಂದಲೂ, ಕಪ್ಪು ಬಣ್ಣದ ಕಂಥೆಯನ್ನು ಧರಿಸುವ ಸಂಪ್ರದಾಯವು ರೂಢವಾಗಿರುವದಷ್ಟೇ? ಈ ಲಿಂಗವೂ, ಕಪ್ಪು ಕಂಥೆಯೂ, ಯಾವ ರೀತಿಯಿಂದ ಪರಸ್ಪರ ಸಂಬಂಧವುಳ್ಳವೆಂಬದರ ವಿಚಾರವನ್ನು ನಮ್ಮ ಶಿವಾನುಭವ ವಾಚಕರ ಮುಂದಿಡಲು ಪ್ರಯತಿಸುವೆವು.

ಲಿಂಗದ ಮೇಲಿನ ಕಂಥೆಯು ಶಿವತತ್ವವನ್ನು ಗುರ್ತಿಸಿಕೊಡುವಂಥದಿರುತ್ತದೆ. ಇದು ಯಾವ ಪ್ರಕಾರವೆಂಬದನ್ನು ತಿಳಿಯುವ ಮೊದಲು ಶಿವತತ್ವದ ಸ್ವರೂಪವನ್ನು ಅರಿಯುವದು ಅವಶ್ಯವದೆ. ಈ ಬಗ್ಗೆ ವೇದಾಗಮೋಪನಿಷತ್ತುಗಳಲ್ಲಿ ಅನೇಕ ವಾಕ್ಯಗಳು ಇದ್ದು ಅವುಗಳಲ್ಲಿ ಕೆಲವುಗಳನ್ನು ನಾವು ಇಲ್ಲಿ ಕೊಡುತ್ತೇವೆ.

" ವಿಶ್ವಾ ಭುವನಾನಿ ಜುಹ್ವತ್ " ತನ್ನ ಪ್ರಕಾಶವೆಂಬ ವಹ್ನಿಯಲ್ಲಿ ಸಮಸ್ತ ಚರಾಚರವಾದ ಪ್ರಪಂಚವನ್ನು ಹವನ ಮಾಡುವನು. " ಯಸ್ಯಬ್ರಹ್ಮ ಚಕ್ಷತ್ರಂಚ ಉಭೇ ಭವತ ಓದನಃ ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾವೇದ ಯತ್ರ ಸಃ " ಯಾವಾತನಿಗೆ ಬ್ರಹ್ಮ ವಿಷ್ಣುಗಳಿಬ್ಬರು (ಇವರಿಂದುಪಲಕ್ಷಿತವಾದ ಜಗತ್ತು) ಅನ್ನವಾಗಿದೆಯೋ, ಮೃತ್ಯುವು ಉಪದಂಶನ ಪದಾರ್ಥವಾಗಿವೆಯೋ, ಆತನೇ ಪರಬ್ರಹ್ಮವು. " ಮಹಾಗ್ರಾಸಾಯ ವೈ ನಮಃ " ಮಹಾ ಕಬಳವುಳ್ಳಾತನಿಗೋಸ್ಕರ ನಮಸ್ಕಾರಗಳು " ತತ್ಪರ ಬ್ರಹ್ಮ ಸ ಏಕೋ ರುದ್ರಃ" ಆತನೇ ಪರಬ್ರಹ್ಮವು. ಆತನೊಬ್ಬನೇ ರುದ್ರನು. ಇದೇ ಅಥರ್ವ ಶಿರಸ್ಸು ಮುಂತಾದ ವೇದೋಕ್ತಿಗಳಿಂದ ಪರಬ್ರಹ್ಮವಾದ ಶಿವನಿಗೆ ಸರ್ವ ಸಂಹಾರ ಕರ್ತೃತ್ವವು ಪ್ರಸಿದ್ಧವಾಗಿರುವದು.

ಶಿವತತ್ತ್ವ ಸ್ವರೂಪ

" ಯದಾ ತಮಸ್ತನ್ನ ದಿವಾ ನ ರಾತ್ರಿರ್ನ ಸನ್ನಚಾ ಸಂಚ್ಛಿವಏವಕೇವಲಂ " ಯಾವ ಕಾಲದಲ್ಲಿ ಸೂರ್ಯ ಚಂದ್ರಾದಿ ತೇಜಸ್ಸಿಲ್ಲದಾಗಿಯೂ, ದಿವಾರಾತ್ರಿಗಳಿಲ್ಲದಾಗಿಯೂ, ಇದು ಸತ್ತು ಇದು ಅಸತ್ತು ಎಂಬ ವ್ಯವಸ್ಥೆ ಇಲ್ಲದೆಯೂ, ಕೇವಲ ತಮೋಮಯವಾಗಿತ್ತೋ ಆ ಕಾಲದಲ್ಲಿ ಕೇವಲ ಸ್ವಪ್ರಕಾಶಕನೂ, ತನ್ನಲ್ಲಿಯೇ ಚಿದ ಚಿಚ್ಛಕ್ತಿಯುಳ್ಳವನೂ, ಆದ ಶಿವನೊಬ್ಬನೇ ಇದ್ದನು ಎಂಬ ಶೃತಿಯಿಂದಲೂ " ತಮೋವಾ ಇದಮೇಕ ಆಸ" ಆ ಕಾಲದಲ್ಲಿ ಈ ತಮವು ಒಂದೇ ಇತ್ತು ಎಂಬ ಮೈತ್ರೇಯೋಪನಿಷತ್ತಿನಿಂದಲೂ "ಆಸೀದಿದಂ ತಮೋಭೂತ ಮಪ್ರಜ್ಞಾತಮ ಲಕ್ಷಣಂ" ಪ್ರಳಯಾನಂತರದಲ್ಲಿ ನಷ್ಟವಾದ ಸೂರ್ಯಚಂದ್ರಾದಿ ಪ್ರಕಾಶವುಳ್ಳಂಥ ಈ ಜಗತ್ತು ದಿವಾರಾತ್ರಿ ನಾಮರೂಪ ಸ್ಥೂಲ ಸೂಕ್ಷ್ಮ ದೇವಮನುಷ್ಯಾದಿ ವ್ಯವಹಾರವುಳ್ಳಂಥದ್ದಾಗಿ ಏನೊಂದು ತಿಳಿಯಲ್ಪಡದ ಪರಮ ಸುಷುಪ್ತಿಯ ಮಹಾವಸ್ಥಾರೂಪವಾದ ತಮೋಮಯವಿತ್ತೆಂಬ ಸ್ಮೃತಿಯಿಂದಲೂ ' ಲಿಂಗೇನು ಷುಪ್ತಿಃ " ಲಿಂಗದಲ್ಲಿ ಸುಷುಪ್ತಿಯೆಂಬ ಶಿವಾಗಮೋಕ್ತಿಯಿಂದಲೂ ಪ್ರಳಯಾನಂತರದಲ್ಲಿ ಉಳಿಯುವನು. ಒಟ್ಟಿಗೆ ಈ ಎಲ್ಲ ಉಕ್ತಿಗಳು ಪರಮಾತ್ಮನ ಮೂಲ ಸ್ವರೂಪವನ್ನು ತೋರಿಸಿಕೊಡುತ್ತವೆ. ಆತನು ಒಬ್ಬನೇ ಇದ್ದಾನೆ. ಸುಷುಪ್ತ್ಯವಸ್ಥೆಯಲ್ಲಿದ್ದು ತಮದಿಂದ ಆವರಿಸಲ್ಪಟ್ಟಿದ್ದಾನೆ. ಆದರೂ ಆತನು ಸ್ವಯಂ ಪ್ರಕಾಶನಾಗಿದ್ದಾನೆ ಎಂದು

ಈ ಉಕ್ತಿಗಳು ಹೇಳುತ್ತವೆ. ಈ ವಿಚಾರಗಳನ್ನೇ ಇಷ್ಟಲಿಂಗವೂ ಅದರ ಮೇಲಿನ ಕಪ್ಪು ಕಂಥೆಯೂ, ತೋರಿಸಿಕೊಡುತ್ತವೆ. ಈ ಕಪ್ಪು ಕಂಥೆಯು ಪರಮಾತ್ಮನ ಮೂಲ ಪ್ರಕೃತಿಯನ್ನು ತೋರಿಸಿಕೊಡುತ್ತದೆ. ಇಲ್ಲಿ ಶಿವಜ್ಯೋತಿಗೆ ಈ ತಮವು ಕುಂದಕವಲ್ಲ. ಮಲದಿಂದ ಅಚ್ಛಾದಿತವಾದ ಜ್ಞಾನವುಳ್ಳೋಣದರಿಂದ ಸ್ವಪ್ರಕಾಶ ರೂಪಿನಿಂದ ಶಿವನಿಗಾದರೂ ಪೂರ್ವದಂತೆ ದರ್ಶನವಿಲ್ಲ. ಆಕಾಶಗತಗಳಾದ ಮೇಘ ಧೂಳಿಗಳಿಂದ ಆಕಾಶವು ಹ್ಯಾಗೆ ಮಲಿನವಾಗುವದಿಲ್ಲವೋ, ಹ್ಯಾಗೆ ಅಗ್ನಿಯಿಂದ ಹುಟ್ಟಿದ ಧೂಮವು ಅಗ್ನಿಯನ್ನು ಸ್ಪರ್ಶ ಮಾಡದಂತೆ ಇರುತ್ತದೋ, ಹಾಗೆ "ಸಮಸ್ತ ಸಾಕ್ಷಿಂ ತಮಸಃ ಪರಸ್ತಾತ್" ಎಂಬ ವೇದೋಕ್ತಿಯಂತೆ ತಮಕ್ಕಿಂತ ಪರವಾದ ಶಿವತತ್ವವನ್ನು ತಮೋರೂಪ ಮಾಯೆಯು ಸ್ಪರ್ಶ ಮಾಡುವದೇ ಇಲ್ಲವು. ಕಪ್ಪು ಕಾಂತಿಯುಳ್ಳ ಲಿಂಗವು ಈ ಭಾವವನ್ನೇ ತೋರಿಸುತ್ತದೆ.

ಕಪ್ಪು ಕಂಥೆ

ಅಗ್ನಿಯಿಂದ ಧೂಮವು ಹುಟ್ಟಿದನಂತರ ಜ್ವಾಲೆಯು ಹುಟ್ಟುವಂತೆ "ತದಕ್ಷರಂ ತತ್ಸವಿತುರ್ವರೇಣ್ಯಾಂ ಪ್ರಜ್ಞಾತ ತಸ್ಮಾತ್ಪ್ರಸೃತಾ ಪುರಾಣೀ" ಮಹಾಪ್ರಳಯದಲ್ಲಿ ಮಯೂರಾಂಡರಸ ನ್ಯಾಯದಿಂದ ಸೂಕ್ಷ್ಮವಾಗಿರುವ ಜಗತ್ತು ತಮೋಮಯವೆನಿಸಿತ್ತು. ಅನಂತರದಲ್ಲಿಯಾದರೂ ನಿತ್ಯ ಸಿದ್ಧವಾಗಿರುವ ಸೂರ್ಯಾಂತರ್ಗತವಾದ ಪರಶಿವ ವಸ್ತುವಿನಿಂದ ಆಗಿನ ತಮಸ್ಸನ್ನು ನಾಶ ಮಾಡಲು ಸಮರ್ಥವಾಗಿಯೂ, ನಿತ್ಯ ಸಿದ್ಧವಾಗಿಯೂ, ಇರುವ ಜ್ಞಾನಶಕ್ತಿಯು ಆವಿರ್ಭವಿಸಿತು. ಆ ಮೇಲೆ "ಸೋಕಾಮಯತ್ ಬಹುಸ್ಯಾಂ ಪ್ರಜಾಯೇಯ" ಆ ಪರಶಿವ ಬ್ರಹ್ಮವು ಬಹುವಿಧವಾದ ಪ್ರಪಂಚವನ್ನು ಹುಟ್ಟಿಸಿತು. ಮತ್ತೆ "ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್" ಮಣಿ ಮಾಲಿಕೆಯ ಸೂತ್ರದಂತೆ ಪ್ರಪಂಚದಲ್ಲಿ ಸೇರಿಕೊಂಡಿತು. ತನ್ನಿಂದಾದ ಪ್ರಪಂಚದಲ್ಲಿ ತಾನೇ ಪ್ರವೇಶಿಸಿ "ಸಚ್ಚತ್ಯಚ್ಚಾ ಭವತ್" ಸದಸತ್ಪ್ರಪಂಚ ರೂಪದಿಂದ ಬಹಳ ಪ್ರಕಾರವಾಗಿ ಪರಿಣತವಾಯಿತು. "ಯಥೋರ್ಣ ನಾಭಿಃ ಸೃಜತೇ ಗ್ರಸತೇ" ಜೇಡರ ಹುಳವು ತನ್ನ ಶರೀರದಲ್ಲಿದ್ದ ಸಂಕುಚಿತವಾದ ತಂತುವನ್ನು ಬಾಹ್ಯದಲ್ಲಿ ಜಾಲಾಕಾರವಾಗಿ ರಚಿಸುವಂತೆಯೂ, ಮತ್ತು ತಂತುವನ್ನು ನುಂಗುವಂತೆಯೂ, ಶಿವನು ತನ್ನ ಶಕ್ತಿ ಶರೀರದಲ್ಲಿದ್ದ ಅವ್ಯಕ್ತ ಜಗ

ಸಗತ್ಸೃಷ್ಟಿ ಮತ್ತು ಲಿಂಗ

ತ್ತನ್ನೇ ಇಚ್ಛಾಮಾತ್ರದಿಂದ ಪ್ರಕಾಶಗೊಳಿಸುತ್ತಾನೆ. " ಯತೋ ವಾ ಇಮಾನಿ ಭೂತಾನಿ ಜಾಯಂತೇ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿ ಸನ್ನಿಶಂತಿತದ್ವಿ ಜಿಜ್ಞಾಸಸ್ವ ಬ್ರಹ್ಮೇತಿ " ಯಾವ ವಸ್ತುವಿನಿಂದ ಈ ಪ್ರಾಣಿಗಳು ಹುಟ್ಟುತ್ತವೆಯೋ ಮತ್ತು ಬಾಳುತ್ತವೆಯೋ ಲಯವಾಗಿ ಆ ವಸ್ತುವನ್ನೇ ಹೊಂದುತ್ತವೆಯೋ ಅದನ್ನೇ ಬ್ರಹ್ಮವೆಂದು ತಿಳಿ. " ಹೃದಬ್ಜ ಮಧ್ಯೇ ಮುನಯೋ ಲಿಂಗಂ ಧೃತ್ವಾ ಜ್ಯೋತಿಷಿ ಸಂವಿಶಂತಿ " ಶ್ರೀ ಜಗದ್ಗುರು ಪಂಚಾಚಾರ್ಯರಿಂದ ಉಪದಿಷ್ಟರಾದ ಅಗಸ್ತ್ಯಾದಿ ಮಹರ್ಷಿಗಳು ಹೃತ್ಕಮಲ ಮಧ್ಯದಲ್ಲಿ ಲಿಂಗವನ್ನು ಧರಿಸಿ ಪರಂಧಾಮದಲ್ಲಿ ಪ್ರವೇಶಿಸುತ್ತಾರೆ. " ಲಿಂಗಮೇಕಮ ವ್ಯಕ್ತಂ ಲಿಂಗಂ ಬ್ರಹ್ಮೇತಿ ಶಾಶ್ವತಂ " ಸೃಷ್ಟಿಯ ಪೂರ್ವದಲ್ಲಿ ನಿಷ್ಕಲವೂ, ಅವ್ಯಕ್ತವೂ, ಶಾಶ್ವತವೂ, ಆದ ಬ್ರಹ್ಮ ಒಂದೇ ಇತ್ತು. ಅದೇ ಲಿಂಗವು ಹೀಗೆ ಈ ಲಿಂಗ ಪುರಾಣ ಮುಂತಾಗಿ ಛಾಂದೋಗ್ಯೋಪನಿಷತ್ತು ಸೂತ ಸಂಹಿತಾ ವಾಯು ಸಂಹಿತಾದಿಗಳಲ್ಲಿಯೂ, " ಜ್ಯೋತಿ ರೂಪೇ ಪರೋಕ್ಷೇ ಲಿಂಗಾಖ್ಯೇ ಬ್ರಹ್ಮ ರೂಪೇ " ಎಂಬ ಅಪರಾಧ ಸ್ತೋತ್ರದಲ್ಲಿಯ ಶಂಕರಾಚಾರ್ಯರ ವಾಕ್ಯದಲ್ಲಿಯೂ, " ನೀವಾರಾಂಕುರವತ್ ಸೂಕ್ಷ್ಮೋ ಹೇಮ ದೀಪಸ್ತ್ವಣೂಪಮಃ । ತಸ್ಯಾತ್ಮನ: ಶಿರೋಗ್ರೇಚ ಶಕ್ತಿಂ ಪ್ರಣವ ರೂಪಿಣೀಂ । ನಾದ ಬಿಂದು ಕಲಾಯುಕ್ತಾಂ ತಾರಾಕಾಕಾರ ರೂಪಿಣೀಂ। ವಿಂದ್ಯಾಚ್ಛಕ್ತ್ಯೂರ್ಧ್ವ ಭಾಗೇತು ಲಿಂಗೇ ಕಾಲಾಗ್ನಿರೂಪಕಂ। ಕಥಿತಂ ತಾರಕ ಬ್ರಹ್ಮೇತೀದಂ ಲಿಂಗಂ ಮುನೀಶ್ವರೈ: " ಹೃದಯದಲ್ಲಿ ಆತ್ಮವು ಹುಲ್ಲಿನ ಅಂಕುರದಂತೆ ಸೂಕ್ಷ್ಮವಿದ್ದು ಸುವರ್ಣದಂತೆ ಪ್ರಕಾಶಿಸುತ್ತದೆ. ಆ ಆತ್ಮನ ಮಸ್ತಕದ ತುದಿಯಲ್ಲಿ ಪ್ರಣವ ಸ್ವರೂಪ ಶಕ್ತಿ ಇರುವದು. ಶಕ್ತಿಯು ನಾದ ಬಿಂದು ಕಲೆಗಳಿಂದ ಕೂಡಿದೆ. ಮತ್ತು ನಕ್ಷತ್ರದಂತೆ ಪ್ರಕಾಶಿಸುವದು. ಶಕ್ತಿಯ ಮೇಲ್ಭಾಗದಲ್ಲಿ ಕಾಲಾಗ್ನಿ ಸ್ವರೂಪ ಲಿಂಗವಿದೆ. ಆ ಕೋಟಿ ಸೂರ್ಯಪ್ರಕಾಶವುಳ್ಳ ಲಿಂಗಕ್ಕೆ ಶಿವಯೋಗಿ ಪುಂಗವರು ತಾರಕ ಬ್ರಹ್ಮವೆಂದು ಹೇಳುತ್ತಾರೆ, ಎಂದು ಯೋಗಮಣಿ ದರ್ಪಣದಲ್ಲಿಯೂ, ಹೀಗೆಯೇ ವೇದಾಗಮಾದಿಗಳಲ್ಲಿ ಹೇಳಿರುವ ಅರ್ಥಸಾರವನ್ನೇ ಜಗದ್ಗುರು ರೇಣುಕ ಭಗವತ್ಪಾದರು " ಲಯಂಗಚ್ಛತಿ ಯತ್ರೈವ ಜಗದೇತಚ್ಚರಾಚರಂ । ಪುನಃ ಪುನಸ್ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮಶಾಶ್ವತಂ " ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವು ಯಾವದರಲ್ಲಿ ಲೀನವನ್ನು

ಹೊಂದುತ್ತದೆಯೋ ಮರಳಿ ಮರಳಿ ಉತ್ಪತ್ತಿಯನ್ನು ಹೊಂದುತ್ತದೆಯೋ ಅದೇ ಲಿಂಗವು ಅದೇ ಬ್ರಹ್ಮವು ಎಂದು ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿರುವರು.

ಇಷ್ಟಪ್ರಾಣ ಭಾವಲಿಂಗಗಳು

“ಜೀವ ಮುಖ್ಯಪ್ರಾಣಲಿಂಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿ ಹತದ್ಯೋಗಾತ್” ಈ ಬ್ರಹ್ಮ ಸೂತ್ರದಮೇಲೆ ಬರೆದಿರುವ ಭಾಷ್ಯದಲ್ಲಿ “ತಸ್ಯಾಭಿಧ್ಯಾನಾದ್ಯೋ ಜನಾತ್ತತ್ವ ಭಾವಾದ್ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ” ಇತ್ಯಾದಿಯಾಗಿ ಅಭಿಧ್ಯಾನಾತ್ ಎಂಬದರಿಂದ ಪ್ರಾಣಲಿಂಗೋಪಾಸನೆಯು, ಯೋಜನಾತ್ ಎಂಬದರಿಂದ ಇಷ್ಟಲಿಂಗೋಪಾಸನೆಯು, ತತ್ವಭಾವಾತ್ ಎಂಬದರಿಂದ ಭಾವಲಿಂಗೋಪಾಸನೆಯು ಸ್ಪಷ್ಟವಾಗಿ ಹೇಳಲ್ಪಟ್ಟಿರುವದು. “ತನುತ್ರಯ ಗತಾನಾದಿ ಮಲತ್ರಯಮಸೌ ಗುರುಃ। ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯ ಮುಪಾದಿಶತ್” ಎಂಬ ಆಗಮವಾಕ್ಯದಂತೆ ಶ್ರೀಗುರುವಿನಿಂದ ಕ್ರಿಯಾದೀಕ್ಷಾಪೂರ್ವಕ ಕೊಡಲ್ಪಟ್ಟ ಇಷ್ಟಲಿಂಗ ಯೋಗದಿಂದ ಪ್ರಕೃತ್ಯಾದಿ ಪೃಥಿವ್ಯಂತಗಳಾದ ಇಪ್ಪತ್ತುನಾಲ್ಕು ತತ್ವಗಳು ಶುದ್ಧಗಳಾಗಲು (ತನಗೆ ವಶವರ್ತಿಗಳಾಗಲು) ಕಾರ್ಮಿಕಮಲವು ತನಗೆ ಕಾರಣವಾದ ಕ್ರಿಯಾಶಕ್ತಿರೂಪವಾಗುವದು. ಮಾಯಾ ಮೊದಲಾಗಿ ವಿದ್ಯಾಕಡೆಯಾದ ಕಂಚುಕಷಟ್ಕವೇ ಮಾಯೀಯ ಮಲವು. ಇದು ಮಂತ್ರದೀಕ್ಷಾಪೂರ್ವಕ ಉಪದೇಶಿಸಲ್ಪಟ್ಟ ಪ್ರಾಣಲಿಂಗೋಪಾಸನೆಯಿಂದ ಶುದ್ಧವಾಗಲು (ಈ ಆರು ತತ್ವಗಳು ವಶಗಳಾಗಲು) ಮಾಯೀಯ ಮಲವು ತನಗೆ ಕಾರಣವಾದ ಜ್ಞಾನಶಕ್ತಿರೂಪವಾಗುವದು. ಅಖ್ಯಾತಿ (ಅಜ್ಞಾನ) ಎಂಬ ಆಣವ ಮಲವು ವೇಧಾದೀಕ್ಷಾಪೂರ್ವಕ ಅನುಗ್ರಹಿಸಲ್ಪಟ್ಟ ಭಾವಲಿಂಗೋಪಾಸನೆಯಿಂದ ಶುದ್ಧವಾಗಲು ತನಗೆ ಕಾರಣವಾದ ಇಚ್ಛಾಶಕ್ತಿರೂಪವನ್ನು ಹೊಂದುವದು. ಈ ಅಖ್ಯಾತಿ ಎಂಬ ಆಣವ ಮಲವು ಸ್ವರ್ಣ ತಾಮ್ರಗಳಲ್ಲಿ ಕಾಲಿಕೆಯಂತೆಯೂ ಚೇತನ ಪುರುಷನಲ್ಲಿ ಲೋಮ ನಖಾದಿಗಳಂತೆಯೂ ಪರಶಿವಶಕ್ತಿಯಲ್ಲಿದ್ದು ಅದರಿಂದಾವಿರ್ಭವಿಸಿರುವದು. ಆದ್ದರಿಂದ ಆಣವ ಮಲವು ತನಗೆ ಕಾರಣವಾದ ಇಚ್ಛಾಶಕ್ತಿರೂಪವಾಗಿ ತನ್ನ ಜ್ಞಾನ ಕ್ರಿಯಾಶಕ್ತಿ ಸಮೇತವಾಗಿ ಪರಶಿವಲಿಂಗದಲ್ಲಿ ಸ್ವಸ್ಥವಾಗಲು ಸಕಲವಾದ ಇಷ್ಟಲಿಂಗವೂ ಸಕಲ ನಿಷ್ಕಲವಾದ ಪ್ರಾಣಲಿಂಗವೂ ನಿಷ್ಕಲವಾದ ಭಾವ

ಲಿಂಗವೂ ಆದ ಪರಶಿವಲಿಂಗದಲ್ಲಿ ತ್ಯಾಗಾಂಗ--ಭೋಗಾಂಗ--ಯೋಗಾಂಗ ರೂಪಗಳಾದ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳ ಅಭಿಮಾನಿಗಳಾದ ಜೀವರು ಸಮರಸರಾಗಿ ಮುಕ್ತಿಯಂ ಪಡೆಯುವರು. ಅವನಾನೊಬ್ಬ ಚಿತ್ರಗಾರನು ಚಿತ್ರಬರೆಯುವ ಮೊದಲು ಭಾವಕ್ಕೆ ಅತೀತವಾದ ಚಿತ್ರವನ್ನು ಭಾವದಲ್ಲಿ ಭಾವಿಸಿ ಮನಃಸಂಕಲ್ಪದಿಂದ ಸೃಷ್ಟಿಸಿ ಅಲ್ಲಿಂದ ನೇತ್ರದ್ವಾರವಾಗಿ ಹೊರಗೆ ಅವರವರ ಸ್ವರೂಪವನ್ನೇ ಹಸ್ತದಿಂದ ಬರೆದು ಕೊಡುವನು. ಹೀಗೆ ಭಾವದಿಂದ ಹುಟ್ಟಿ ಚಿತ್ರಗ್ರಾಹಿಯ ಭಾವದಲ್ಲಿ ಲೀನವಾಗುವದರಿಂದ ಈ ಚಿತ್ರ ಪಟಕ್ಕೆ ಭಾವಪಟವೆಂಬ ನಾಮವುಂಟಾಗಿದೆ. ಇನ್ನು ಶ್ರೀ ಗುರುವಾದರೂ ಶಿಷ್ಯನ ಭಾವಾತೀತವಾದ ದಿವ್ಯ ಲಿಂಗವನ್ನು ಭಾವಕ್ಕೆ ಭಾವಲಿಂಗವನ್ನಾಗಿಯೂ ಅಲ್ಲಿಂದ ಮನಸ್ಸಿಗೆ ಪ್ರಾಣಲಿಂಗವನ್ನಾಗಿಯೂ ಬರಿಸಿ (ತಂದು) ನೇತ್ರದ್ವಾರದಿಂದ ಬಹಿರ್ಭಾಗದಲ್ಲಿ ಅದನ್ನೇ ಶಿಷ್ಯನ ಹಸ್ತಪೀಠಕ್ಕೆ ಇಷ್ಟಲಿಂಗವನ್ನಾಗಿ ಮೂರ್ತ ಮಾಡಿ ಕೊಡುವನು. ಅಗ್ಗೆ " ಇಷ್ಟಲಿಂಕಮಿದಂ ಸಾಕ್ಷಾತ್ಸರ್ವಾರಿಷ್ಟ ನಿವಾರಕಂ ಧಾರಯಸ್ವ ಸದಾದೇಹೀನಷ್ಟೇ ಪ್ರಾಣಾನ್ ಪರಿತ್ಯಜೇತ್॥ ತಂಡುಲಾರ್ಧಂ ಪೀಠಮಧ್ಯೇತದರ್ಧಂ ವೃತ್ತಗೋಮುಖೇ। ತಿಲಮಾತ್ರಂ ಯೋನಿಲಿಂಗೇ ತದಾಧಿ ಕ್ಯಾತ್ತ್ಯಜೇದಸೂನ್ " " ಇಷ್ಟಮಾರ್ಜ್ಯಂ ತಸಸಾನುಯಚ್ಛತ್ " ಎಂಬ ಅಥರ್ವೇದಾನುಸಾರವಾಗಿ ತನ್ನ ಉಪಾಸನೆಯಿಂದ ಭಕ್ತರಿಗೆ ಶ್ರೇಷ್ಠವಾದ ಇಷ್ಟಾರ್ಥವನ್ನು ಕೊಡುವಂಥ ಪ್ರತ್ಯಕ್ಷವಾದ ಈ ಇಷ್ಟಲಿಂಗವು ಸಮಸ್ತ ಅರಿಷ್ಟಗಳನ್ನು ನಿವಾರಣೆಮಾಡುವಂಥಾದ್ದು. ಇದನ್ನು ಯಾವಾಗಲೂ ಪ್ರಾಣದಂತೆ ದೇಹದಲ್ಲಿ ಧರಿಸು. ನಷ್ಟವಾದರೆ ಪ್ರಾಣವನ್ನು ಬಿಡತಕ್ಕದ್ದು. ಪೀಠ ಮಧ್ಯಗಳಲ್ಲಿ ತಂಡುಲಾರ್ಧ ಪ್ರಮಾಣಕ್ಕಿಂತಲೂ ಗೋಮುಖ ಗೋಳಕಗಳಲ್ಲಿ ತಂಡುಲದ ನಾಲ್ಕು ಪ್ರಮಾಣಕ್ಕಿಂತಲೂ ಯೋನಿ ಲಿಂಗಗಳಲ್ಲಿ ತಿಲಮಾತ್ರ ಪ್ರಮಾಣಕ್ಕಿಂತಲೂ ಅಧಿಕವಾಗಿ ಭಿನ್ನವಾದರೆ ಪ್ರಾಣಗಳನ್ನು ಬಿಡತಕ್ಕದ್ದು ಇತ್ಯಾದಿ ಪಾರಮೇಶ್ವರ ಮೊದಲಾದ ಆಗಮ ವಾಕ್ಯಗಳನ್ನು ಚನ್ನಾಗಿ ಬೋಧಿಸಿ " ಅದೌವಿಧಾಯಾಷ್ಟಬಂಧಂ ಸಂಸ್ಕೃತ್ಯೈವಾಥವೀಕ್ಷಪತ್। ದೀಕ್ಷಾಮುಖೇನ ಗುರುಣಾಬದ್ಧಂ ಲಿಂಗಂಕುಲೇಶ್ವರೀ॥ ಯದಿಕ್ಷಣ ಮಲಿಂಗೀಸ್ಯಾದ್ರೌರವಂ ನರಕಂ ವ್ರಜೇತ್ ಇತ್ಯಾರಭ್ಯಸಂಪಾದ್ಯಲಿಂಗಂ ದಾರ್ಢ್ಯಾಯ ಅಷ್ಟಬಂಧಂ ಸಮಾಚರೇತ್। ಪಂಚಬಂಧಂ ತ್ರಿಬಂಧಂ ವಾ। ದೃಢಯೋದ್ಯೇನಕೇನವಾ। ದ್ರವ್ಯೇ

ಣಸ್ನೇಹ ಯುಕ್ತೇನ" ಎಂಬ ಸ್ವಾಯಂಭುವಾಗಮಾನುಸಾರವಾಗಿ ಮೊದಲಲ್ಲಿ ಲಿಂಗಕ್ಕೆ ಅಷ್ಟಬಂಧವನ್ನುಮಾಡಿ ಸಂಸ್ಕರಿಸಿ ಶಿವಕಳೆಯುಂಟಾಗುವಂತೆ ನೋಡತಕ್ಕದ್ದು. ಹೀಗೆ ದೀಕ್ಷಾಮುಖವಾಗಿ ಗುರುವಿನಿಂದ ಲಿಂಗವು ಧರಿಸಲ್ಪಟ್ಟಿತೋ ಇಂತಿಪ್ಪ ಲಿಂಗದಿಂದ ಕ್ಷಣ ಕಾಲವಾದರೂ ರಹಿತನಾದರೆ ರೌರವನರಕವನ್ನು ಹೊಂದುತ್ತಾನೆ. (ಇತ್ಯಾದಿಯಾಗಿ) ಪಂಚಸೂತ್ರ ಲಕ್ಷಣವುಳ್ಳ ಲಿಂಗವೊಂದನ್ನು ತೆಗೆದುಕೊಂಡು ಯಾವ ಪ್ರಮಾದಾದಿ ಕಾರಣದಿಂದಲೂ ಲಿಂಗಪೀಠಾದಿ ಸರ್ವ ಭಾಗವು ಭಿನ್ನವಾಗದಂತೆ

ಇಷ್ಟಲಿಂಗಕ್ಕೆ ಸ್ನೇಹಯುಕ್ತದ್ರವ್ಯದಿಂದ ಕಂಥೆಯನ್ನು ಕೂಡಿಸುವ ಕಾರಣ

ದೃಢವಾಗಿರುವದಕ್ಕೆ ಅಷ್ಟಬಂಧವನ್ನಾಗಲೀ ಪಂಚಬಂಧವನ್ನಾಗಲೀ ತ್ರಿಬಂಧವನ್ನಾಗಲೀ ಲಿಂಗಕ್ಕೆ ಚನ್ನಾಗಿ ಧರಿಸತಕ್ಕದ್ದು. ಯಾವದಾನೊಂದು ಕೇರು ಮುಂತಾದ ಸ್ನೇಹಯುಕ್ತವಾದ ದ್ರವ್ಯದಿಂದ ದೃಢವಾಗುವದೋ ಹಾಗೆ ಮಾಡತಕ್ಕದ್ದು. ಈ ಅಷ್ಟಬಂಧಾದಿ ಬಂಧವು ಲಿಂಗಕ್ಕೆ ವಜ್ರಕವಚದಂತೆ ಧೃಢವಾಗುವದು. ಇದೇ ಕಪ್ಪುಕಂಥೆಯಾಗಿರುತ್ತದೆ.

ಶಿಷ್ಯನು ಹೀಗೆ ಶ್ರೀ ಗುರುದತ್ತವಾದ ಕಪ್ಪುಕಂಥೆಯುಳ್ಳ ಸ್ವಸ್ವರೂಪವಾದ ಇಷ್ಟಲಿಂಗವನ್ನು ಸೂಜಿಗಲ್ಲು ಸೂಜಿಗಲ್ಲನ್ನು ಆಕರ್ಷಿಸುವಂತೆ ಕೃಷ್ಣತಾರಕ ದೃಷ್ಟಿ ಮೂಲಕವಾಗಿ ಅಂತರಂಗಕ್ಕೆ ಆಕರ್ಷಿಸಿಕೊಳ್ಳುವನು.

ನೇತ್ರವು ಶಿವಲಿಂಗ ಲಕ್ಷಣವುಳ್ಳದು ಹೇಗೆ?

ಈ ಸಂದರ್ಭದಲ್ಲಿ ನೇತ್ರಕ್ಕೂ ಲಿಂಗಕ್ಕೂ ಸಜಾತೀಯ ಪ್ರೇಮವುಂಟಾಗಿ ನೇತ್ರವು ಹ್ಯಾಗೆ ಶಿವಲಿಂಗ ಲಕ್ಷಣವುಳ್ಳದ್ದೆಂಬದನ್ನಿಷ್ಟು ಇಲ್ಲಿ ವಿವರಿಸುವದಾಗುತ್ತೆ. ಸುಷುಪ್ತಿಯಲ್ಲಿ ಸಕಲವ್ಯವಹಾರಕ್ಕೆ ಸ್ಥಾನವಾಗಿರುವದರಿಂದಲೂ ಜಾಗ್ರೀಯಲ್ಲಿ ಸಕಲವ್ಯವಹಾರಕ್ಕೆ ಗಮನಸ್ಥಾನವಾಗಿರುವದರಿಂದಲೂ ಲಿಂಗಪರ್ಯಾಯ ನಾಮವಾದ ನೇತ್ರವು ಮೂರು ಮಂಡಲವುಳ್ಳದಾಗಿರುವದು. ಅವುಃ—ಕೆಂಪುಬಣ್ಣದಿಂದ ಕೂಡಿದ ಬಿಳೀವರ್ಣದ ಸೂರ್ಯಮಂಡಲವು, ಕಪ್ಪಿನೊಡಗೂಡಿದ ಶುಭ್ರ ವರ್ಣದ ಚಂದ್ರ ಮಂಡಲವು ಮತ್ತು ತಾರಕ (ಗುಡ್ಡಿ) ದೊಡಗೂಡಿದ ನೀಲವರ್ಣದ ಅಗ್ನಿಮಂಡಲವು ಎಂಬು

ಮಂಡಲತ್ರಯಗಳಿಂದಲೂ ಮತ್ತು ಕಾಲ ಅವಸ್ಥಾಜೀನಾದಿ ತ್ರಿವರ್ಗಗಳಿಂದಲೂ ಕೂಡಿ ಬಿಂದು ನಾದ ಕಲಾತ್ಮಕವಾಗಿರುತ್ತದೆ. "ಅಪೋಜ್ಯೋತಿರಸೋಽಮೃತಂ ಬ್ರಹ್ಮತದ್ವಿಷ್ಣೋಃಪರಮಂಪದಂ" ಎಂದು ವೇದವು ಹೇಳುತ್ತಿರುವದರಿಂದ ಲಿಂಗವು ಮಳೆಗಾಲದ ಮೋಡದ ಮಧ್ಯದಲ್ಲಿ ಮಿಂಚಿನಂತೆ ಪ್ರಕಾಶಿಸುವ ನೇತ್ರದೊಳಗಿನ ಜಲದಲ್ಲಿಯ ಜ್ಯೋತಿಯಂತಿರುತ್ತದೆ. ಅದು ತಾರಕಬ್ರಹ್ಮವೆನಿಸಿಕೊಂಡು ನಿತ್ಯ ನಿರ್ಮಲವಾಗಿರುತ್ತದೆ. ಇಂಥ ಆ ಲಿಂಗವು ವಿಷ್ಣು ಸಂಜ್ಞೆಯುಳ್ಳ ಮೂಲ ಪ್ರಕೃತಿರೂಪವಾದ ತಮೋಗುಣದಕಿಂತಲೂ ಮೇಲಾದ ಸ್ಥಾನವುಳ್ಳದ್ದು. ಹ್ಯಾಗೆ ಅಗ್ನಿಯ ಸುತ್ತಲೂ ಹ್ಯಾಗೆ ಧೂಮವು ಇರುತ್ತದೋ, ಹ್ಯಾಗೆ ಪ್ರಳಯಾನಂತರ ಪರಶಿವನ ಬಹಿರ್ಭಾಗದಲ್ಲಿ ಮೂಲ ಪ್ರಕೃತಿರೂಪವಾದ ತಮವು ಆವರಣವಾಗಿರುತ್ತದೋ, ಹಾಗೆ ನೇತ್ರಾಂತರ್ಗತವಾದ ಜ್ಯೋತಿರ್ಮಯ ಲಿಂಗದ ಸುತ್ತಲೂ (ಕಪ್ಪು ಕಂಥೆಯುಳ್ಳ) ಲಿಂಗದಂತೆ ಕದಂ. ಬಗೋಲಕಾಕಾರವಾದ ಕಪ್ಪು ಗುಡ್ಡಿ ಇರುತ್ತದೆ. ಈ ಕೃಷ್ಣತಾರಕಾಗ್ರದಲ್ಲಿಯ ನೇತ್ರಜ್ಯೋತಿಯು ಕಪ್ಪುಕಂಥೆಯ ಲಿಂಗದಲ್ಲಿ ಸಜಾತಿ ಪ್ರೇಮಾತಿಶಯದಿಂದ ಸ್ಥಿರವಾಗುವದು.

ನೇತ್ರವುನಾದಬಿಂದು ಕಲಾತ್ಮಕವು

ಕಪ್ಪುಕಂಥೆ ಮತ್ತು ನೇತ್ರ

ಈ ಕಪ್ಪು ಬಣ್ಣದಲ್ಲಿಯೂ ಕೂಡ ವಿಶೇಷವುಂಟು. ಬಿಳಿ, ಕೆಂಪು ಮೊದಲಾದ ಯಾವತ್ತೂ ಬಣ್ಣಗಳು ಕಪ್ಪು ಬಣ್ಣದಲ್ಲಿ ಅಡಗುವವು. ಯಾವತ್ತೂ ತತ್ವಗಳು ಲಿಂಗದಲ್ಲಿ ಅಡಗುವಂತೆ ಯಾವತ್ತೂ ಬಣ್ಣಗಳ ಸಮ್ಮೇಲನವು ಕಪ್ಪು ಬಣ್ಣದಲ್ಲಿ ಪರಿಣಮಿಸುತ್ತದೆ. ಈ ಕಪ್ಪು ಬಣ್ಣದ ಸಹಾಯದಿಂದ ಪೂಜಕರು ಲಿಂಗವು ನಿರ್ಗುಣವು ನಿರಾಕಾರವೆಂದು ಭಾವಿಸಲು ಸುಲಭವಾಗಿರುವದು. ಜಲವು ಪ್ರವಾಹಮೂಲಕವಾಗಿ ಭತ್ತದ ಮಡಿಗಳಲ್ಲಿ ವರ್ತುಲ ಚತುರಸ್ರ ಮುಂತಾಗಿ ಅವುಗಳ ಆಕಾರವಾಗಿ ನಿಲ್ಲುವಂತೆ ದೃಷ್ಟಿಝರಿಯು ಯಾವ ಕಡೆಗೆ ಹರಿಯುವದೋ ಮನಸ್ಸು ಅಲ್ಲಿಯೇ ದ್ರವಸಿ (ಪ್ರವೇಶಿಸಿ) ತದ್ವಿಷಯಾಕಾರವಾಗುವದು. ಅದೇ ಭಾವದಲ್ಲಿ ದೃಢವಾಗುವದು. ಮತ್ತು ಜಾಗರ್ತಿಯಲ್ಲಿಯ ವ್ಯವ

ಕಂಥೆ ಕಪ್ಪುಬಣ್ಣವೇಕೆ?

ಹಾಗೆವು ಅಂತರಂಗಿಕವಾದ ಸ್ವಪ್ನಾವಸ್ಥೆಯಲ್ಲಿ ಹ್ಯಾಗೆ ತೋರುವದೋ ಫ್ರೋಟೋ ತೆಗೆಯುವ ಯಂತ್ರವು ಹೊರಗಿನ ಸ್ಥೂಲಾಕಾರವನ್ನು ಅಂತ ರಂಗಕ್ಕೆ ಆಕರ್ಷಿಸಿಕೊಳ್ಳಲು ಅದೇ ಒಳಗೆ ಬ್ಲಾಕಿನಲ್ಲಿ ಮೂಡುವದೋ ಹಾಗೆಯೇ ಶಿಷ್ಯನ ಕೃಷ್ಣತಾರಾಗ್ರ ದೃಷ್ಟಿಯು ಸ್ವಸ್ವರೂಪವಾದ (ಕಪ್ಪು ಕಂಥೆಯುಳ್ಳ) ಇಷ್ಟಲಿಂಗವನ್ನು ನೋಡುತ್ತಿರುವಲ್ಲಿ ತತ್ಸ್ವರೂಪವೇ ಮನ ಸ್ಸಿನಲ್ಲಿ ನೆಲೆಗೊಂಡು ಪ್ರಾಣಲಿಂಗವಾಗಿಯೂ ಅದೇ ಭಾವದಲ್ಲಿ ದೃಢ ವಾಗಿ ಭಾವಲಿಂಗವಾಗಿಯೂ ಅಂತು ಸರ್ವಾಂಗಗಳಲ್ಲಿಯೂ ಲಿಂಗ ಮಯವೇ ಆಗಿಬಿಡುವನು.

ಸಾರಾಂಶವೇನಂದರೆ ಬ್ರಹ್ಮಾಂಡಗಳ ಸೃಷ್ಟಿಲಯಗಳಿಗೆ ಕಾರಣವಾ ದದ್ದು ಶಕ್ತಿವಿಶಿಷ್ಟವಾದ ಪರಶಿವಬ್ರಹ್ಮವು. ಆ ಬ್ರಹ್ಮವೇ ಲಿಂಗವು. ಈ ಲಿಂಗವು ಶ್ರೀಗುರುವಿನಿಂದ ಕೊಡಲ್ಪಟ್ಟದ್ದಾಗಿ ಶಿಷ್ಯನ ಸರ್ವಾಂಗವೂ ಲಿಂಗಮಯವಾಗಲು ಮೂಲಭೂತವಾದ ಇಷ್ಟಲಿಂಗವೆ ನಿಸಿತು. ಅಗ್ನಿಯ ಬಹಿರ್ಭಾಗದಲ್ಲಿ ವ್ಯಾಪಕವಾದ ಧೂಮದ ಆಕಾರವಾಗಿ ಮಹಾಪ್ರಳಯದಲ್ಲಿ ಪರಶಿವನ ಬಹಿರ್ಭಾಗದಲ್ಲಿ ಉಳಿಯುವ ಮೂಲಪ್ರಕೃತಿ ರೂಪ ತಮದಂತೆಯೂ ಪರಶಿವಶಕ್ತಿಯಲ್ಲಿ ಆಣವಮಲವಿರುವಂತೆಯೂ ಸ್ವರ್ಣ ತಾಮ್ರಗಳಲ್ಲಿ ಕಾಳಿಕೆ ಇರುವಂತೆಯೂ ಚೇತನ ಪುರುಷನಲ್ಲಿ ಲೋಮನ ಖಾದಿಗಳಿರುವಂತೆಯೂ ಈ ಇಷ್ಟಲಿಂಗಕ್ಕೆ ಕಪ್ಪುಕಂಥೆ ಇರುತ್ತದೆ. ಈ ಕಪ್ಪುಕಂಥೆಯಿಂದ ಲಿಂಗವು ಭಿನ್ನವಾಗದಂತೆ ದೃಢವಾಗುವದು. ಲಿಂಗ ದಲ್ಲಿ ಸರ್ವತತ್ವಗಳು ಅಡಗುವಂತೆ ಈ ಕಪ್ಪುಬಣ್ಣದಲ್ಲಿ ಸರ್ವವರ್ಣಗಳ ಸಮ್ಮೇಲನವಾಗುತ್ತದೆ. ಶಿವಲಿಂಗ ರೂಪವಾದ ಕೃಷ್ಣತಾರಕಾಗ್ರನೇತ್ರಕ್ಕೆ ಅನುರಾಗವುಂಟಾಗುವದಕ್ಕಾಗಿಯೂ ಮುಂದೆ ಅನಿಮಿಷ ದೃಷ್ಟಿಯಿಂದ ಪೂಜಕರಿಗೆ ನಿರಾಕಾರ ವಸ್ತು (ನಿಷ್ಕಳಲಿಂಗ) ವು ಗುರ್ತಿಸುವದಕ್ಕಾ ಗಿಯೂ ಲಿಂಗಕ್ಕೆ ಕಪ್ಪುಕಂಥೆಯನ್ನು ಧರಿಸುವ ಸನಾತನ ಸಂಪ್ರದಾಯ ವುಂಟಾಗಿರುತ್ತದೆ. ಈ ಮೇರೆಗೆ ವೇದಾಗಮಾದಿ ಪ್ರಮಾಣಗಳಿಂದ ಮೇಲ್ಕಾಣಿಸಿದ ತತ್ವಕ್ಕನುಸರಿಸಿ ಲಿಂಗವು ಕಪ್ಪುಕಂಥೆಯಾಗಿರುತ್ತದೆಂಬ ವಿಷಯವನ್ನು ವಿವರಿಸಿ ಇನ್ನು ಕೋಮಲ ಹೃದಯ ವಾಚಕರಿಗೆ ವಿಸ್ತಾ ರವಾದೀತೆಂದು ಇಲ್ಲಿಗೆ ನಮ್ಮ ಲೇಖನೆಗೆ ವಿಶ್ರಾಂತಿಯನ್ನು ಕೊಡು ವೆವು.

ಕಪ್ಪುಕಂಥೆಯ ಅವಶ್ಯಕತೆ.

---

# ಮಂಗಳ ಪದ.

ಲೇಖಕ:- ಶ್ರೀ. ಕೆ. ಚನಮಲ್ಲಪ್ಪ ಶಿರಾಳಕೊಪ್ಪ ಜಿ. ಶಿವಮೊಗ್ಗೆ



ಲಿಂಗವೆ ನಿನ್ನಯ ಪಾದವನು।
ಮಂಗಳದಿಂ ಪೂಜಿಪೆ ನಾನು ॥ಪಲ್ಲವಿ॥
ಜಂಗಮ ರೂಪವ ಧರಿಸಿರುವೆ।
ಭಂಗವ ಪಿಂಗಿಸಿ ಪಾಲಿಸುವೆ ॥೧॥
ಪರ ಗುರು ರೂಪವ ತಾಳಿರುವೆ।
ಪರತರ ಮುಕ್ತಿಯ ಕೊಡುತಿರುವೆ ॥೨॥
ಜಗದುತ್ಪತ್ತಿಯ ಮಾಡಿರುವೆ।
ಸುಗಮದಿ ಪಾಲಿಸಿ ಪುಳುಗಿಸುವೆ ॥೩॥
ಸಗುಣದ ನೆಲೆಯನು ಪಿಡಿದಿರುವೆ।
ನಿರ್ಗುಣ ತತ್ವವ ಬಿಡದಿರುವೆ ॥೪॥
ಶರಣರ ರಕ್ಷಕನಾಗಿರುವೆ।
ವರಸಿದ್ಧೇಶ್ವರ ನೆನಿಸಿರುವೆ ॥೫॥

## ಪುಷ್ಪಾಂಜಲಿ.

### ಶರಷಟ್ಪದಿ.

ಪರತರ ಸುಖವನು। ಗುರುಚರ ರೂಪದಿ। ನಿರುತದಿ ಕೊಡುತಿಹ ಶಂಭುವನು ॥ ಕರದಿಂ ಪೂಜಿಸಿ। ಪರಿ ಪರಿ ಧ್ಯಾನಿಸಿ। ಉರುತರ ಗಾನದಿ ಪಾಡುತಲೀ ॥೧॥

ಮಂಗಳ ಜ್ಯೋತಿಯ। ಪಿಂಗದೆ ಬೆಳಗುತ। ಲಿಂಗದ ನಾಮವ ಕೀರ್ತಿಸುತಂ। ಅಂಗದ ಭಾವವ ಪಿಂಗಿಸಿ ಸಲಹುವ ಮಂಗಳ ಮಂತ್ರವ ಜಪಿಸುತಲೀ ॥೨॥

ಮಿಗೆ ನೈವೇದ್ಯವ। ಮಗುಳೆ ಸುವೀಳ್ಯವ। ಬಗೆಗೂಡುತ ಸಿದ್ಧೇಶನಿಗೆ॥ ಬಗೆ ಬಗೆ ಪುಷ್ಪವ ಮಿಗಿಲಹ ಪತ್ರಿಯ ಬೋಗಸೆಯ ಭಕ್ತಿಯೊಳರ್ಪಿಸುವೆಂ॥೩॥

# ಮಹಿಮಾಶಾಲಿಯಾದ ಬಸವೇಶ್ವರನು.

ಲೇಖಕ:— ವೀರಪ್ಪ ಚನ್ನಬಸಪ್ಪ ಯುಗಟಿ. ಬಿ. ಎ. ಎಲ್. ಎಲ್. ಬಿ.
ವಕೀಲ. ಹಾವೇರಿ.



## ೧ ನೆಯ ಕಿರಣ

## ಬಸವೇಶ್ವರನ ಇತಿಹಾಸದ ಸಿಂಹಾವಲೋಕನ.

ಇಂದುಧರನನುಮತದೊಳಾದಿದು ನಂದಿನಾಥನು ಬಸವನಾಮದಿ।
ಬಂದಪಂ ಶಿವಭಕ್ತಿಯಂ ವಸುಮತಿಗೆ ಪಸರಿಸಲು॥

೨ನೇ ಸಂಧಿ(ಭೀಮ ಕವಿಯ ಬಸವ ಪುರಾಣ.)

ಜಗತ್ತಿನ ಜೀವಜ್ಯೋತಿಗಳ ಮಣಿಮಾಲಿಕೆಯಲ್ಲಿ ಬಸವೇಶ್ವರನು ಮಧ್ಯದಲ್ಲಿರುವ ದಿವ್ಯ ರತ್ನದಂತೆ ಉಜ್ವಲಸುತ್ತಿರುವನು. ಪ್ರಸಿದ್ಧ ಧರ್ಮ ಪ್ರಸಾರಕರಾದ ಯೇಸುಕ್ರಿಸ್ತ, ಬುದ್ಧ, ಮಹಮ್ಮದ ಪೈಗಂಬರ, ಝೊರೋಸ್ಟರ, ಶಂಕರ, ಮಧ್ವ, ರಾಮಾನುಜ ಮೊದಲಾದವರ ಪಂಕ್ತಿಯಲ್ಲಿಯೇ ಬಸವೇಶ್ವರನು ಬರುವನು. ಆದರೆ ಬಸವೇಶ್ವರನ **ವಿಶಿಷ್ಟತ್ವವೇನಂದರೆ, ಈತನು ಧರ್ಮ ಪ್ರಸಾರಕನಾಗಿದ್ದಂತೆಯೇ ಸಮಾಜ ಸುಧಾರಕನೂ, ಅಂತ್ಯ ಜೋದ್ಧಾರಕನೂ,** ನೀತಿಯನ್ನು ನೆಲೆಗೊಳಿಸಿದವನೂ, ಶೀಲಾಚಾರಗಳನ್ನು ಬಿತ್ತಿ ಬೀರಿದವನೂ, ಅಸತ್ಯವನ್ನು ನಿರ್ಬಂಧನೆಯಿಂದ ಖಂಡಿಸಿದವನೂ, ಸತ್ಯವನ್ನು ಎತ್ತಿ ಹಿಡಿದವನೂ, ಸ್ತ್ರೀಯರಿಗೆ ಸಮಾನತ್ವವನ್ನು ಕಲ್ಪಿಸಿದವನೂ, ನಿಷ್ಕಲ ಹೃದಯಿಯೂ, ನಿಸ್ವಾರ್ಥಿಯೂ, ಅನಾಥರಕ್ಷಕನೂ, ಸಾಧು ಜನರ ಸಹಕಾರಿಯೂ, ಶಿವಶರಣರ ಸೇವಕನೂ, ಗುರು ಲಿಂಗ ಜಂಗಮದಲ್ಲಿ ನಿಶ್ಚಲವಾದ ನಿಷ್ಠೆಯುಳ್ಳವನೂ, ಶಿವಭಕ್ತರ ಸಲುವಾಗಿ ಪ್ರಾಣವನ್ನು ಸಹ ತೊರೆಯಲು ಸಿದ್ಧನಾದವನೂ, ಅನನ್ಯವಾದ ಭಕ್ತಿಯಲ್ಲಿ ಬಲಾಢ್ಯನೂ, ಕರ್ತೃತ್ವಶಾಲಿಯೂ, ಮಹಾಮಹಿಮನೂ, ಕೈಗಾರಿಕೆ, ಉದ್ಯೋಗ ಮೊದಲಾದ ಕಾಯಕಗಳಿಗೆ ಯೋಗ್ಯವಾದ ಮರ್ಯಾದೆ ಕೊಟ್ಟವನೂ, **ಅತ್ಯಂತ ಕುಶಲನಾದ ರಾಜಕಾರಣಪಟುವೂ ಆಗಿದ್ದನು.** ಬಸವೇಶ್ವರನು ವೀರಶೈವ ಮತೋ

ದ್ಧಾರ ಮಾಡಿದನೆಂಬ ಅಭಿಮಾನದಿಂದ ಇಂಥ ವಿಶಿಷ್ಟ ಗುಣಗಳನ್ನು ಆತನಿಗೆ ಆರೋಪಿಸಬಹುದೆಂದು ವಾಚಕರು ತಿಳಿಯಬೇಕಾದುದಿಲ್ಲ. ಬಸವೇಶ್ವರನ ವಚನ ಗ್ರಂಥವನ್ನು ಓದುವವರು ಪರಮತೀಯರಾದರೂ ಶಿಡಿಲಿನಂತೆ ಘುಡುಘುಡಿಸುತ್ತಿರುವ ಆತನ ವಚನಗಳಿಂದ ಆತನ ಮಹಿಮೆಯನ್ನು ಸಹಜವಾಗಿ ನಿರ್ಧರಿಸಬಹುದು. ಆತನ ಘನತೆಗೆ ಆತನ ವಚನಗಳೇ ಸಾಕ್ಷಿ. ಇನ್ನುಳಿದ ಶಿವಶರಣರು ಬಸವನನ್ನು ತಮ್ಮ ವಚನಗಳಲ್ಲಿ ಹಾಡಿ ಹರಿಸಿರುವರು. ಬಸವನ ನಾಮವು ವಸುಧೆಗೆ ಪ್ರೇಮವಾಗಿರುವದು ಬಸವನು ವೀರಶೈವರಿಗೆ ಮುದ್ದಿನ ಕಣಿಯಾಗಿರುವನು. ಭಕ್ತಿ ಯೋಗಿಗಳಿಗೆ ಭಾಗ್ಯದೇವತೆ ಯಾಗಿರುವನು. ನೀತಿಯ ನುಡಿಯನ್ನು ಬಯಸುವವರಿಗೆ ಕಬ್ಬಿನ ಕಣಿಯಾಗಿರುವನು. ಸಮಾಜ ಸುಧಾರಕರಿಗೆ ಸಲಹೆಗಾರನಾಗಿರುವನು. ಸತ್ವಸಾಧಕರಿಗೆ ಕಲ್ಪವೃಕ್ಷ ನಾಗಿರುವನು.

ಕರ್ನಾಟಕದ ಇತಿಹಾಸದಲ್ಲಿ ಬಸವೇಶ್ವರನ ಸ್ಥಾನವು ಬಹು ಪ್ರಧಾನ್ಯವಾಗಿದೆ. ಆತನ ರಾಜ್ಯಕಾರಭಾರದಿಂದ ಕಲ್ಯಾಣದ ಕಳೆಯು ಪಸರಿಸಿತು. ಸುಖ ಶಾಂತಿಗಳು ನೆಲೆಗೊಂಡವು. ಸಮಾಜವನ್ನು ಸ್ಥಿರವಾಗಿ ವ್ಯವಸ್ಥೆಗೊಳಿಸಿದನು. ವಚನವೆಂಬ ಕನ್ನಡ ಶೈಲಿಯೊಂದನ್ನು ಹೊಸದಾಗಿ ಹುಟ್ಟಿಸಿ ಪಂಡಿತರಿಗೂ ಪಾಮರರಿಗೂ ಗೂಢ ತತ್ವಗಳು ಸುಲಭವಾಗಿ ತಿಳಿಯುವಂತೆ ಮಾಡಿದನು. ಈತನಿಂದ ಪ್ರೇರಣೆಯನ್ನು ಹೊಂದಿ ಅನೇಕ ವಚನಕಾರರ ಊಳಿಗವೇ ಉತ್ಪನ್ನವಾಯಿತು. ಧಾರ್ಮಿಕ ವಾಙ್ಮಯವು ಬೆಳೆಯಿತು. ಕರ್ನಾಟಕದಲ್ಲಿ ಬಸವನಿಂದ ಒಂದು ಬಗೆಯ ವಿಚಾರ ಕ್ರಾಂತಿಯೇ ಉಂಟಾಯಿತು. ಧಾರ್ಮಿಕ ಕ್ರಾಂತಿಯೆಂಬ ಭಯಂಕರವಾದ ಬಿರುಗಾಳಿಯೆದ್ದಿತು. ನಯ ನೀತಿಗಳ ನೀರಿನ ಪ್ರವಾಹವು ಹರಿಯಿತು. ಭಕ್ತಿಯೆಂಬ ಸಮುದ್ರವು ಮೇರೆದಪ್ಪಿ ಹರಿಯಿತು. ಬಸವನು ಜನಿಸದಿದ್ದರೆ ಇವೆಲ್ಲ ಸುಧಾರಣೆಗಳು ಆಗುತ್ತಿರಲಿಲ್ಲ, ಇಷ್ಟೇ ಅಲ್ಲ. ವೀರಶೈವ ಸಮಾಜವು ಯಾವ ಹೀನಸ್ಥಿತಿಗೆ ಬರುತ್ತಿತ್ತೋ ಹೇಳಲು ಸಾಧ್ಯವಿಲ್ಲ. ಕರ್ನಾಟಕದ ಇತಿಹಾಸಕಾರರು ಬಸವೇಶ್ವರನ ಮಹತ್ವವನ್ನು ಶೋಧಿಸದೆ ಮತದ್ವೇಷದಿಂದ ಬರೆದ ಬರಹಗಾರರ ಗ್ರಂಥಗಳ ಆಧಾರದಿಂದ ಆತನ ನಿಜವಾದ ಪ್ರಕಾಶವನ್ನು ಅಡಗಿಸಿಬಿಟ್ಟಿರುವನು. ಆದರೆ ಕನ್ನಡಿಯ ಮೇಲೆ ಕಸವು ಬಿದ್ದರೆ ಅದರ ಪ್ರಕಾಶವೇನು ಅಳಿಸಿ ಹೋದೀತೇ? ಕಸವನ್ನು ಓರೆಮಾಡಿದಾಗ ಕನ್ನಡಿಯು ಪ್ರತಿಬಿಂಬವನ್ನು ಸಹಜವಾಗಿ ಹೊರ

ಪಡಿಸಿಯೇ ತೀರುವದು. ಯಾವ ವರೆಗೆ ಧಾರ್ಮಿಕ ದ್ವೇಷವು ನೆಲೆಗೊಂಡಿತ್ತೋ, ಯಾವ ವರೆಗೆ ಧರ್ಮದ ಹುಚ್ಚು ಪರಮತೀಯರಲ್ಲಿ ಬೇರೂರಿತ್ತೋ, ಯಾವ ವರೆಗೆ ಎರಡನೆಯವರ ಅಭಿವೃದ್ಧಿಯ ವಿಷಯದಲ್ಲಿ ಅಸೂಯೆಯು ಜನರ ಮನಸ್ಸಿನಲ್ಲಿ ಮನೆಮಾಡಿಕೊಂಡಿತ್ತೋ, ಆ ವರೆಗೆ ಬಸವನ ಬೆಳಕು ಮರೆಯಾಗಿತ್ತು. ಇಂಥ ಕಾರ್ಮುಗಿಲು ಈಗ ಅಡಗುವುದಕ್ಕೆ ಪ್ರಾರಂಭವಾಗಿದೆ. ನಮ್ಮ ಸಹೋದರ ಧರ್ಮಾನುಯಾಯಿಗಳು ಸಹ ಈಗ ಬಸವನ ಮಹಿಮೆಯನ್ನು ಒಪ್ಪಿಕೊಳ್ಳಹತ್ತಿರುವರು. ಕನ್ನಡದಲ್ಲಿ ಪ್ರಸಿದ್ಧ ಲೇಖಕರಾದ ಶ್ರೀಯುತ, ಆಲೂರು ವೆಂಕಟರಾಯರು ಬಸವನ ವಿಷಯದಲ್ಲಿ ಹೀಗೆ ಬರೆದಿದ್ದಾರೆ.—

" ಬಸವಣ್ಣನವರು ಮಹಾಪುರುಷರೆಂಬುದಕ್ಕೆ ಯಾರ ಸಾಕ್ಷಿಯೂ ಬೇಡ. ಅವರ ಚರಿತ್ರೆಯೇ ಅದಕ್ಕೆ ಸಾಕ್ಷಿ. ಎಂಟು ವರ್ಷದ ಬಾಲಕನು ತನ್ನ ಮನಸ್ಸಿನಲ್ಲಿ ಗಹನ ಸಿದ್ಧಾಂತಗಳನ್ನು ಗಂಟು ಹಾಕಿಕೊಂಡಿರುವದೇನು ಸಾಮಾನ್ಯ ಮನುಷ್ಯರ ಲಕ್ಷಣವೇ? ತನಗೆ ಸರಿದೋರಿದ ಆ ತತ್ವಗಳಿಗೋಸ್ಕರ ತಂದೆ ತಾಯಿ ಮನೆ ಮಾರುಗಳನ್ನು ತ್ಯಜಿಸುವ ಎದೆಗಾರಿಕೆಯನ್ನು ತೋರಿಸುವದೇನು ಪಾಮರರ ತುತ್ತೇ? ಅವರು ಮಹಾಪುರುಷರೆಂಬುದಕ್ಕೆ ಇದೊಂದೇ ಸಂಗತಿಯು ಸಾಕಲ್ಲವೇ? ಮುಂದಿನ ಅವರ ಚರಿತೆಯೂ ಈ ಅವರ ವೀರವೃತ್ತಿಗೆ ಅನುಗುಣವಾಗಿಯೇ ಇದೆ. ಅವರು ತಮಗೆ ತೋರಿದ ಸತ್ಯಕ್ಕಾಗಿ ಸಮಾಜ ಸಂಕೊಲೆಗಳನ್ನು ಕತ್ತರಿಸಿ ಚಲ್ಲಿದರು; ಜಗತ್ತಿನ ಉದ್ಧಾರಕ್ಕಾಗಿ ಅನೇಕ ಸಂಕಟಗಳನ್ನು ಸಹಿಸಿದರು. ಅಲ್ಪಾವಧಿಯಲ್ಲಿ ಇದ್ದ ಸೃಷ್ಟಿಯನ್ನು ಸಂಹಾರ ಮಾಡಿ ಹೊಸ ಸೃಷ್ಟಿಯನ್ನು ನಿರ್ಮಿಸಿದರು. ಅಂದರೆ ಇದ್ದ ಸಮಾಜ ಸ್ಥಿತಿಯನ್ನು ಬೇರು ಸಹಿತವಾಗಿ ಅಲ್ಲಾಡಿಸಿ ಬೇರೊಂದು ಹೊಸ ಸಮಾಜ ಪದ್ಧತಿಯನ್ನು ಬೇರೂರಿದರು. ಇಂಥವರು ಸಾಮಾನ್ಯ ಪುರುಷರೇ?

ಬಸವಣ್ಣನವರ ಧರ್ಮ ತತ್ವಗಳ ಬಗ್ಗೆ ಎಷ್ಟೋ ಮತಭೇದವಿದ್ದರೂ ಅವರ ಪರಮಾತ್ಮನಿಷ್ಠೆ, ನಿರ್ಮಲಸದಾಚಾರ, ಹೃದಯಕೋಮಲತೆ, ಉದಾತ್ತ ಉದ್ದೇಶ ಇನ್ನೇ ಮುಂತಾದ ಅಸಂಖ್ಯಾತ ಗುಣಗಳನ್ನು ಯಾರೂ ಅಲ್ಲಗಳೆಯಲಾರರು. ಬಸವನು ಬಡವರ ಬೆಂಬಲಿಗನು ಬಿದ್ದವರ ಎತ್ತಿಗನು; ಶಿವನ ಶರಣನು. ............ ರಾಜ್ಯವನ್ನು ವಹಿಸಿದ್ದರೂ ರಾಜಭೋಗದಿಂದ ಅಲಿಪ್ತನು. ಇವರ ಉಪದೇಶದಿಂದ ಕರ್ಣಾ

ಟಕದ ಬಹು ಜನ ಸಮಾಜವು ಸದಾಚಾರ ಸಂಪನ್ನವಾಯಿತು. ಬಸವಣ್ಣನವರ ಪುಣ್ಯದಿಂದಲೇ ಕರ್ಣಾಟಕದ ಬಹು ಜನ ಸಮಾಜವು ಮಿಕ್ಕ ಪ್ರಾಂತಗಳಂತೆ ಮದ್ಯ ಮಾಂಸಾದಿ ದುರ್ವ್ಯಸನಗಳಿಗೀಡಾಗದೆ ಇಂದಿಗೂ ಶುಚಿರ್ಭೂತವಾಗಿಯೇ ಉಳಿದಿದೆ. ಈ ಅವರ ಉಪಕಾರವನ್ನು ಕರ್ಣಾಟಕವು ಎಂದಿಗೂ ಮರೆಯಲಾರದು.

ಬಸವಣ್ಣನವರು ಭಾಷಾಪಂಡಿತರಲ್ಲ; ಭಾಷಾಜನಕರು. ಅವರ ವಚನಗಳು ಕನ್ನಡ ನುಡಿಯು ಎಷ್ಟು ವೀರ್ಯವತ್ತಾಗಬಹುದೆಂಬದನ್ನು ತೋರಿಸುತ್ತವೆ. ಅವರ ಹೃದಯವು ಕರಗಿ ನೀರಾಗಿ ಅದು ವಚನಗಳ ರೂಪದಲ್ಲಿ ಹರಿದಿದೆ- ಆ ಪ್ರವಾಹದಲ್ಲಿ ಅವರ ವಿಚಾರಗಳು ಬೋರ್ಗರೆಯುತ್ತವೆ. ಅಲ್ಲಿ ಅವರ ಅಂತರಂಗದ ಅಲೆಗಳು ನಲಿಯುತ್ತಿವೆ. ತತ್ವ ರತ್ನಗಳು ಥಳಥಳಿಸುತ್ತಿವೆ. ಆ ವಚನಗಳಲ್ಲಿ ನವೀನ್ಯವು ಮಿನುಗುತ್ತಿದೆ. ತೇಜವು ತುಳುಕುತ್ತಿದೆ. ಅವು ಅವರ ಮಿದುವಾದ ಒಳಎದೆಯ ಒಡನುಡಿಗಳು. ನಂಜಿನ ನಾಲಿಗೆಯ ಬಿರು ನುಡಿಗಳಲ್ಲ. ಈ ವಚನಗಳಲ್ಲಿ ಅವರ ಅಂತಃಕರಣವು ಹೆಪ್ಪುಗಟ್ಟಿರುತ್ತದೆ. ಸಾಧುವೃತ್ತಿಯ ಸೊನೆಯು ಸುರಿಯುತ್ತಿದೆ. ಅನುಭವದ ಕಾಠಿಣ್ಯವು ಕಂಗೊಳಿಸುತ್ತದೆ. ಅವರ ಆಚಾರದ ಕೆಚ್ಚು ಅಲ್ಲಿ ಕಾಣುತ್ತಿದೆ. ವಿಚಾರದ ಅಚ್ಚು ಅಲ್ಲಿ ಅಚಲವಾಗಿದೆ. ”

‘ ಭರತ ಖಂಡದ ಜೀವಜ್ಯೋತಿಗಳು ’ ಎಂಬ ಪುಸ್ತಕದಲ್ಲಿ ಮತ್ತೋರ್ವ ಪ್ರಸಿದ್ಧ ಲೇಖಕರಾದ ಮತ್ತು ಬ್ರಾಹ್ಮಣ ಸಹೋದರರಾದ ಶ್ರೀ. ಎಚ್. ಚಿದಂಬರಯ್ಯನವರು ಬಸವೇಶ್ವರನ ಜೀವಿತ ಚರಿತ್ರೆಯನ್ನು ಜೋಡಿಸಿದ್ದಾರೆ. ರಾಷ್ಟ್ರಗೀತೆಯಲ್ಲಿ ಬಸವನ ನಾಮವೂ ಸೇರಿಸಲ್ಪಟ್ಟಿದೆ. ಈ ರೀತಿಯಾಗಿ ಅತನ ನಿಜಾಂಶವು ಅನ್ಯಮತಸ್ಥರಲ್ಲಿಯೂ ಬಿಂಬಿಸಲಾರಂಭಿಸಿರುವದು- ಬಸವೇಶ್ವರನು ವೀರಶೈವ ಸಮಾಜದೊಂದರ ಹಿತವನ್ನಷ್ಟೇ ಸಾಧಿಸಿದನೆಂತಲ್ಲ, ಯಾವತ್ತೂ ಕರ್ನಾಟಕದ ಏಳಿಗೆಯೇ ಅವನ ಮುಖ್ಯಧ್ಯೇಯವಾಗಿತ್ತು. ಅವನು ತನ್ನ ಜೀವಿತ ಕಾಲವೆಲ್ಲ ದೇಶೋದ್ಧಾರಕ್ಕಾಗಿಯೇ ವಿನಿಯೋಗಿಸಿದನು. ಧಾರ್ಮಿಕ ವೃದ್ಧಿಯೊಂದೆ ಅವನ ಕಾರ್ಯಕ್ಷೇತ್ರವಾಗಿರದೆ ಅವನ ಕುಶಲವಾದ ಬುದ್ಧಿಯೂ, ಅಸಾಧಾರಣವಾದ ಚಟುವಟಿಕೆಯೂ, ಅಗಾಧವಾದ ಸಾಹಸವೂ, ಅನೇಕ ಕಾರ್ಯ

ಕ್ಷೇತ್ರಗಳನ್ನು ಆಕ್ರಮಿಸಿದ್ದವು. ಅವನ ವಿಚಾರದಿಂದ ಪರಿಪಕ್ವವಾಗಿ ಹೊರಟ ತತ್ವಗಳು, ಅವನು ನುಡಿದ ನೀತಿಯ ನುಡಿಗಳು, ಮತ್ತು ಅವನು ಮಾಡಿದ ಕಾರ್ಯಗಳು, ಇತಿಹಾಸದ ಪುಟಗಳಲ್ಲಿ ಕರಿಯ ಅಕ್ಷರಗಳಿಂದ ಬರೆಯಲ್ಪಡುವವಾಗಿವೆ. ಇಂಥ ಮಹಾಪುರುಷನ ಮಹಿಮೆಯನ್ನು ಮುಸುಕುಗೊಳಿಸಿದ ಚರಿತ್ರೆಕಾರರು ಕರ್ನಾಟಕದ ಇತಿಹಾಸವನ್ನು ಮರಳಿ ಬರೆಯಲೇಬೇಕು.

ಬಸವೇಶ್ವರನು ನಿಶ್ಚಲವಾದ ಸತ್ಯಾಗ್ರಹಿಯಾಗಿದ್ದನು. ಸತ್ಯವನ್ನು ಎತ್ತಿಹಿಡಿಯುವದರಲ್ಲಿ ಪ್ರಾಣ ಹೋಗುವ ಪ್ರಸಂಗ ಬಂದರೂ ಬಿಡುವವನಲ್ಲ. ಬಸವನು ಅರಸನಲ್ಲಿ ಮಂತ್ರಿಯಾಗಿರಲು ಚಾಡಿಕಾರರು ಬಸವನು ಬೊಕ್ಕಸದ ಹಣವನ್ನು ಜಂಗಮರಿಗೆ ಕೊಟ್ಟು ಸೂರೆ ಮಾಡಿದನೆಂತಲೂ ನೀಚ ಕುಲದವರೊಡನೆ ಬೆರೆತು ಊಟಮಾಡುತ್ತಾನೆಂತಲೂ, ಶಿವ ಮತದ ಪಕ್ಷಪಾತಿಯೆಂತಲೂ ಅನೇಕ ಬಾರಿ ಅರಸನಿಗೆ ಚಾಡಿ ಹೇಳಿದರು. ಆದರೆ ಬಸವನು ಪ್ರತಿಯೊಂದು ಪ್ರಸಂಗದಲ್ಲಿಯೂ ರೋಷಗೊಂಡ ಅರಸನಿಗೆ ಸತ್ಯ ಸಂಗತಿಯನ್ನು ಮನಗಾಣಿಸಿ ಕೊಟ್ಟನು. ಬಸವನು ಶಾಂತಚಿತ್ತನೂ, ಸಮತೋಲನವಾದ ಬುದ್ಧಿಯುಳ್ಳವನೂ, ದೃಢವಾದಮನಸ್ಸಿನವನೂ ಇದ್ದುದರಿಂದ ಆವೇಶದ ಭರಕ್ಕೆ ಬಿದ್ದು ರಾಜನೊಡನೆ ವಿರೋಧವನ್ನು ಬೆಳಸಿಕೊಳ್ಳಲಿಲ್ಲ. ಆದರೆ ರಾಜನ ಪ್ರೇಮವು ಬಸವನಲ್ಲಿ ಹೆಚ್ಚುತ್ತ ಹೋಯಿತು. ಬಸವನ ಮಹಿಮೆಯನ್ನು ನೋಡಿ ರಾಜನಲ್ಲಿ ಅಗಾಧವು ಅಂಕುರಿಸಿತು. ಇದಲ್ಲವೇ ಸತ್ಯಾಗ್ರಹದ ಬಲವು? ಇನ್ನುಳಿದವರಾಗಿದ್ದರೆ ಮಂತ್ರಿತ್ವವನ್ನು ಬಿಟ್ಟುಕೊಟ್ಟು ರಾಜನ ತೊಡಕನ್ನು ಪರಿಹರಿಸಿಕೊಳ್ಳುತ್ತಿದ್ದರು. ಬಸವೇಶ್ವರನು ಈಗಿನ ಮನ್ವಂತರದಲ್ಲಿದ್ದರೆ ಸಾಧುವೃತ್ತಿಯ ಸಾಧನದಿಂದಲೂ, ಕೇವಲ ಅಹಿಂಸಾ ಮಾರ್ಗದಿಂದಲೂ ಸ್ವರಾಜ್ಯವನ್ನಾಗಲಿ ಇಲ್ಲವೆ ಸುರಾಜ್ಯವನ್ನಾಗಲಿ ಅಥವಾ ಪ್ರಜಾ ರಾಜ್ಯವನ್ನಾಗಲಿ ದೊರಕಿಸುತ್ತಿದ್ದನು. ಸತ್ಯಾಗ್ರಹವನ್ನು ಪ್ರಾರಂಭಿಸಿದವನು ಬಸವನೇ ಮೊದಲನೆಯವನು. ಮಹಾತ್ಮಾ ಗಾಂಧಿಯವರ ಸತ್ಯಾಗ್ರಹವು ಹೊಸದಲ್ಲ. [ಬಸವೇಶ್ವರನ ಕಾಲವು ಕ್ರಿ. ಶ. ೧೨ನೇ ಶತಮಾನವು. ಆಗ ರೈಲುಬಂಡಿಗಳೂ, ತಂತೀವಾರ್ತೆಯೂ, ಮುದ್ರಣಯಂತ್ರಗಳೂ, ವೃತ್ತಪತ್ರಿಕೆಗಳೂ, ಇರಲಿಲ್ಲ. ಈಗ ಒಂದು ದೇಶದಲ್ಲಿ ನಡೆದ ಸಂಗತಿಯು ವಿಶ್ವ ಪ್ರಪಂಚದಲ್ಲೆಲ್ಲ ಗಾಳಿಯ ಮುಖಾಂತರ ೪—೫ ತಾಸುಗಳಲ್ಲಿ ಗೊತ್ತಾಗುವದು.

ಬಸವನ ಕಾಲದಲ್ಲಿ (Wireless telegraphy) ಗಾಳಿಯ ಮೂಲಕ ವಾರ್ತೆ ಮೊದಲಾದ ಸೌಕರ್ಯಗಳಿದ್ದಿದ್ದರೆ ಬಸವನ ನಾಮವು ಜಗತ್ತಿನ ಮೂಲೆ ಮೂಲೆಗಳಲ್ಲಿ ನಾದಗೊಳ್ಳುತ್ತಿತ್ತು. ಆಗ ಈ ಸೌಕರ್ಯಗಳಿದ್ದಿಲ್ಲವ ರಿಂದಲೇ ಬಸವನ ನಿಜವಾದ ಪ್ರಭಾವವು ಹರಡದಿರುವದಕ್ಕೆ ಬಹು ಮಟ್ಟಿಗೆ ಕಾರಣವಾಯಿತು.]

ವೀರಶೈವ ಧರ್ಮಾನುಯಾಯಿಗಳೂ, ಕವಿಗಳೂ, ೧೨ ನೇ ಶತ ಮಾನದಿಂದ ಈ ವರೆಗೂ ಬಸವನನ್ನು ನಿತ್ಯವೂ ಭಜಿಸುತ್ತಲೂ ಗ್ರಂಥ ಗಳಲ್ಲಿ ಆತನ ಸ್ತೋತ್ರವನ್ನು ಮಾಡುತ್ತಲೂ, ಬಂದಿರುವದನ್ನು ನೋಡಿ ದರೆ ಆತನು ಎಂಥ ಮಹಾಕಾರ್ಯವನ್ನು ಮಾಡಿರುವನೆಂಬದು ಸಹ ಜವಾಗಿ ಮನಸ್ಸಿನಲ್ಲಿ ಮಿಂಚದೆ ಇರದು. ಜಗತ್ತನ್ನು ಉದ್ಧಾರ ಮಾ ಡಲು ಶಿವನು ತನ್ನ ವಾಹನವಾದ ನಂದಿಯನ್ನು ಬಸವನೆಂಬ ಹೆಸ ರಿಟ್ಟು ಭೂಲೋಕಕ್ಕೆ ಕಳಿಸಿದ್ದನು. ಬಸವನು ಅವತಾರೀ ಪುರುಷ ನೆಂದು ವೀರಶೈವರು ಅಂದಿನಿಂದಲೂ ನಂಬುತ್ತ ಬಂದಿರುವರು. ಆಂಗ್ಲ ಗ್ರಂಥಕಾರನಾದ ಕಾರ್ಲಾಯಿಲನು ತನ್ನ "ವೀರಾಳುಗಳೂ ಅವರ ಪೂಜೆಯೂ (Heroes and Heroworship) ಎಂಬ ಗ್ರಂಥದಲ್ಲಿ ವೀರ ಪುರುಷರು ದೇವಾಂಶಿಕರೆಂದು ಹೇಳಿರುವನು. ಅವರಲ್ಲಿ ಸಾಮಾನ್ಯ ಜನರಿಗಿಂತ ಹೆಚ್ಚಿನ ಸಾಮರ್ಥ್ಯವೂ, ಧೈರ್ಯವೂ, ಬುದ್ಧಿಯೂ, ಸರ ಳ ಹೃದಯವೂ, ಇರುವದರಿಂದ ಅವರು ದೇವತಾ ಪುರುಷರೆಂಬ ಭಾವ ನೆಯುಳ್ಳವರಾಗಿ ಜನರು ಅವರ ಪೂಜೆಯನ್ನು ಮಾಡುವರೆಂದು ಕಾರ್ಲಾ ಯಿಲನ ಮತವು. ಎಲ್ಲ ಧರ್ಮಗಳಲ್ಲಿಯೂ ಈ ನಂಬಿಗೆಯುಂಟೆಂದು ಅವನು ತೋರಿಸಿರುವನು. ಅವನು ಕೊಟ್ಟಿರುವ ದೃಷ್ಟಾಂತಗಳಾವ ವೆಂದರೆ— ನಾರ್ವೆ ದೇಶದಲ್ಲಿ ಎಷ್ಟೋ ವರ್ಷಗಳ ಹಿಂದೆಯೇ ಜನರು "ಓಡಿನ್" ಎಂಬ ಮಹಾ ವೀರನನ್ನು ದೇವಾಂಶನೆಂತಲೂ, ಟಿಬೇಟ ದೇಶದವರು ಲಾಮಾ ಎಂಬವನನ್ನು ದೇವರೆಂತಲೂ, ನಂಬಿದುದಾಗಿ ಹೇಳುತ್ತಾನೆ. ಇದೂ ಅಲ್ಲದೆ ಮಹಮ್ಮದನಾದರೂ ದೇವಾಂಶನೇ ಎಂದು ಹೇಳಿದ್ದಾನೆ. ಹೀಗೆಯೇ ಕ್ರೈಸ್ತನಾದರೂ ದೇವಪುತ್ರನೆಂದು ಬೈಬಲಿ ನಲ್ಲಿ ಹೇಳಿದೆ. ಕಾರ್ಲಾಯಿಲನು ತನ್ನ ವೀರಪುರುಷರಿಗೆ ಎಷ್ಟು ಮಹ ತ್ವವನ್ನು ಕೊಟ್ಟಿರುವನೆಂದರೆ ಅವರು ಹೊಸ ಯುಗವನ್ನು ಹುಟ್ಟಿಸುವ ವರೂ, ಅಥವಾ ಅನೇಕ ಶತಮಾನಗಳ ಚರಿತ್ರೆಯ ಸಾರವನ್ನು ತೆಗೆ

ಯುವವರಾಗಲೀ ಇರುತ್ತಾರೆಂಬದು ಮಹಾವೀರನಿದ್ದ ಕಾಲದ ಪರಿಸ್ಥಿತಿಗಳು ಅವನನ್ನು ಮಹಾಪುರುಷನನ್ನಾಗಿ ಮಾಡಲು ಸಹಕಾರಿಯಾಗದೇ ಮಹಾಪುರುಷನೇ ಪರಿಸ್ಥಿತಿಗಳನ್ನು ಕಲ್ಪಿಸುತ್ತಾನೆಂದು ಕಾರ್ಲಾಯಿಲನ ಮತವು. ಸಾಮಾನ್ಯ ಜನರು ಹುಲ್ಲಿನಂತೆಯೂ, ಮಹಾಪುರುಷನು ಆಕಾಶದಿಂದ ಬೀಳುವ ಸಿಡಿಲಿನಂತೆಯೂ, ಇರುವರು. ಹೇಗೆ ಸಿಡಿಲಿನ ಜ್ವಾಲೆಯು ಹುಲ್ಲಿನಲ್ಲಿ ಬಿದ್ದಾಗ ಅದೂ ಜ್ವಾಲೆಯಾಕಾರವನ್ನು ಹೊಂದುವದೋ ಹಾಗೆಯೇ ಮಹಾಪುರುಷರ ಪ್ರಭಾವವು ಸಾಮಾನ್ಯ ಜನರಲ್ಲಿ ಬಿದ್ದೊಡನೆ ಅದರಿಂದ ಅವರು ಪ್ರೇರಣೆ ಹೊಂದುವರು. ಚರಿತ್ರೆಯು ಸಾರವನ್ನು ಹೇಳುವ ಮಹಾಪುರುಷರ ವರ್ಗದಲ್ಲಿ ಮಹಾ ಕವಿಗಳು ಬರುತ್ತಾರೆ. ಹೊಸ ಯುಗವನ್ನು ಕಲ್ಪಿಸುವವರಲ್ಲಿ ಬಸವ, ಕ್ರೈಸ್ತ ಮೊದಲಾದ ವೀರಪುರುಷರು ಬರುತ್ತಾರೆ. ಕಾರ್ಲಾಯಿಲನು ಬಸವನ ವೃತ್ತಾಂತವನ್ನು ಅರಿತಿದ್ದರೆ ತನ್ನ " ವೀರಪುರುಷರಲ್ಲಿ " ಈತನನ್ನು ಸೇರಿಸದೆ ಬಿಡುತ್ತಿರಲಿಲ್ಲ.

ಸಮಾಜ ಸುಧಾರಣೆಯ ಕಾರ್ಯದಲ್ಲಿ ಬಸವೇಶ್ವರನು ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿರುವನು. ಗೌತಮಬುದ್ಧನು ಜಾತಿ ಭೇದವನ್ನು ಕಿತ್ತು ಹಾಕಿ ಎಲ್ಲರೂ ಸಮಾನರೆಂದು ಬೋಧಿಸಿದ್ದನು. ಬಸವನಾದರೋ ಅದನ್ನು ಕೇವಲ ಆಚರಣೆಯಲ್ಲಿ ತಂದನು. ಹೆಣ್ಣುಮಕ್ಕಳಿಗೆ ಸರಿಯಾದ ಗೌರವವನ್ನು ಕೊಟ್ಟನು. ಬಾಲ್ಯವಿವಾಹವನ್ನು ನಿಲ್ಲಿಸಿದನು. ಧರ್ಮ ಪ್ರಸಾರಕ್ಕೆ ಬೋಧಕರ ಸಂಘವನ್ನು ನಿರ್ಮಿಸಿದನು. ಉದ್ಯೋಗಕ್ಕೆ ಮರ್ಯಾದೆ ಕೊಟ್ಟು ಸಮಾಜದ ಸಾಂಪತ್ತಿಕ ಸ್ಥಿತಿಯನ್ನು ಬೆಳಿಸಿದನು. ಸಮಾಜದಲ್ಲಿ ಐಕ್ಯಮತ್ಯವನ್ನು ಹುಟ್ಟಿಸಿ ಒಂದು ಬಲವಾದ ಜನಾಂಗವನ್ನೇ ನಿರ್ಮಾಣ ಮಾಡಿದನು. ಈತನ ಸಮಾಜಸುಧಾರಣೆಯ ವಿಷಯಕ್ಕೆ ' ಟಾಯಿಮ್ಸ ಆಫ್ ಇಂಡಿಯಾ ' ಎಂಬ ಆಂಗ್ಲ ಪತ್ರಕಾರರು ತಾ. ೧೭—೫—೧೯೧೮ ನೇ ಸಂಚಿಕೆಯಲ್ಲಿ ಹೇಳಿರುವದೇನಂದರೆ- " ಹಿಂದೂ ದೇಶದಲ್ಲಿ ಪ್ರಖ್ಯಾತರಾದ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಕರು ಬಸವನಿಗಿಂತ ಪೂರ್ವದಲ್ಲಿ ಧರ್ಮದ ಮತ್ತು ಸಮಾಜ ಸುಧಾರಣೆಯ ವಿಷಯದಲ್ಲಿ ಯಾವದಾದರೊಂದನ್ನೇ ಬಲವಾಗಿ ಪ್ರತಿಪಾದಿಸಿ ಉಳಿದ ವಿಷಯಗಳನ್ನು ಅಪ್ರಾಧಾನ್ಯವಾದವುಗಳೆಂದು ಗಣಿಸಿರಲಿಲ್ಲ; ಇಲ್ಲವೆ ಅವುಗಳನ್ನು ನಿರಾಕರಿಸಿಯೇ ಬಿಟ್ಟಿದ್ದರು. ಬಸವನಾ

ದರೋ ಸ್ತ್ರೀಯರ ಉತ್ತೀರ್ಣವನ್ನೂ, ಸ್ವಾತಂತ್ರ್ಯವನ್ನೂ, ಹೇತುವಾಗಿ ನಿರ್ಧರಿಸಿಕೊಂಡು ಅತಿ ವಿಶಾಲ್ಯವಾದ ಸಾಮಾಜಿಕ ಸಂಸ್ಕರಣದ ಕಾರ್ಯಭಾಗವನ್ನು ಒಳ್ಳೇ ಸಾಹಸದಿಂದ ನೆರವೇರಿಸಲೆತ್ನಿಸಿದನು.

ಈಗ ಹಿಂದೂ ದೇಶದಲ್ಲಿ ಪ್ರತಿವರ್ಷವೂ ಸೇರುತ್ತಿರುವ ಸಾಮಾಜಿಕ ಸಭೆಗಳೂ, ಹಿಂದೂ ಸಮಾಜದ ಸುಧಾರಕರೂ, ಬಸವನು ಮಾಡಿರುವ ಸುಧಾರಣೆಗಳಿಗಿಂತ ಹೆಚ್ಚಿನ ಕಾರ್ಯವನ್ನು ಮಾಡಲಾರರು. ಹಿಂದೂದೇಶದ ಇತಿಹಾಸ, ಹಿಂದುಗಳ ನಡಾವಳಿ, ಅವರ ಸಂಸ್ಕಾರ ಮೊದಲಾದವುಗಳಲ್ಲಿ ಬಹು ಪರಿಚಯವುಳ್ಳ ಜೇಮ್ಸ ಕ್ಯಾಂಬೆಲ್ಲರು ಹೇಳಿರುವ ಹಾಗೆ ಹಿಂದೂ ದೇಶದಲ್ಲಿ ಸದ್ಯದ ಸಮಾಜ ಸುಧಾರಕರು ಬಸವನು ಹೇಳಿರುವದನ್ನೇ ಪುನಃ ಹೇಳುತ್ತಲೂ ಮತ್ತು ಬಸವನ ವಿಚಾರವನ್ನೇ ಬೀರುತ್ತಲೂ ಇರುವರು." *

---

* It was the distinctive feature of his mission that while illustrious religious and social reformers in India before him had each laid his emphasis on one or other items of religious and social reform either subordinating more or less other items to it, or ignoring them altogetherBasava sketched and boldly tried to work out a large and comprehensive programme of social reform with elevation and independence of womanhood as its guiding point.

Neither social conferances which are annually held in these days in several parts of India, nor Indian social reformers can improve as to the essentials. As was in substance remarked by late Sir James Campbell, whose knowledge of Indian history, customs and manners was almost phenomenal, the present day social reformer in India is but speaking the language and seeking to enforce the mind of Basava.

(Times of India) 17th May 1918

# ನಿರಾಳ ಗುರು ಸ್ತೋತ್ರ.

ಶ್ರೀ॥ ಎಚ್. ಜಿ. ಸಿದ್ಧಲಿಂಗಯ್ಯನವರು ಹಾರೋಹಳ್ಳಿ ಡಿ. ಬೆಂಗಳೂರ
ಇವರು ಬರೆದು ಕಳಿಸಿದ್ದು.



ಶ್ರೀ ಮುದಮುಲಾನಂದ ನತಜನ। ಪ್ರೇಮ ಶಾಶ್ವತ ಶಾಂತ ರವಿ ಶಶಿ। ಧಾಮ ನಿರ್ಜರ ನಿತ್ಯ ನಿಗಮಸ್ತೋಮನುತಚರಣಾ॥ ಕಾಮ ಸಂಹರ ವರ ಕೃಪಾಕರ। ನಾಮ ಸೀಮೆಗಳಿಲ್ಲದಚಲಿತ। ಸ್ವಾಮಿ ಘನ ತರ ಪರಮ ಶ್ರೀ ಗುರುದೇವ ಶರಣಾರ್ಥಿ ॥೧॥

ಒಡವ ನಡೆ ನಡೆವುತ್ತ ಭಾಗ್ಯವ। ನೆಡಹಿ ಕಂಡಂತೆ ರೋಗಿಯು ಕಡು। ಕಾತಿದೌಷಧಿಯು ಲತೆ ಕಾಲ್ತೊಡರಿ ಕಾಂಬಂತೆ॥ ಒಡಲ ಕ್ಷುಧೆಯಿಂದಿರುವವನಿಗೆ ಪಾ। ಲ್ಗಡಲನಿದಿರಲಿ ಕಂಡ ತೆರದೆ। ನ್ನೊಡೆಯ ಶ್ರೀ ಗುರುದೇವನಂಘ್ರಿಯ ಕಂಡು ಬದುಕಿದೆನೂ ॥೨॥

ಗುರುವೆ ಪರತರ ನಿತ್ಯ ನಿರುಪಮ। ಗುರುವೆ ಪರಶಿವ ತತ್ವನ ದ್ವಯ। ಗುರುವೆ ಪರಬ್ರಹ್ಮಸ್ವರೂಪ ಸ್ವತಂತ್ರ ಘನಮಹಿಮಾ॥ ಗುರುವೆ ಮುಕ್ತಿಯ ಮೂಲ ನಿಶ್ಚಯ। ಗುರುವೆ ಸುರುಚಿರ ಭೇದ್ಯ ನಿರ್ಮಲ। ಗುರುವಿನಿನ್ನೊಂದಧಿಕವಿಲ್ಲೆನುತಿಹವು ಶೃತಿ ತತಿಯೂ ॥೩॥

ಕಂಡೆನಿದಿರಲಿ ಭಾವಭರಿತನ। ಕಂಡೆನಿದಿರಲಿ ಸತ್ಯಚಿಂತನ। ಕಂಡೆ ನಿದಿರಲಿ ಶಾಂತಕಾಂತನ ನಿತ್ಯ ನಿರ್ಗುಣನಾ॥ ಕಂಡೆನಿದಿರಲಿ ಕರ್ಮ ರಹಿತನ। ಕಂಡೆನಿದಿರಲಿ ಧರ್ಮಸಹಿತನ। ಕಂಡೆನಿದಿರಲಿ ಪರಮ ಶ್ರೀ ಗುರುದೇವನಂಘ್ರಿಯನೂ ॥೪॥

ಹರ ಹರಾ ನಾನೇ ಕೃತಾರ್ಥನು। ದುರಿತ ದುರ್ಗುಣ ಮೋಹ ದುಃಖದ। ಪರಿಭವವ ಕಡೆಗಟ್ಟಿ ಮಾಯೆಯ ಸುಟ್ಟು ಮುದದಿಂದಾ॥ ಪರಮ ಶ್ರೀ ಗುರು ಪದವಿ ಎನ್ನೊಳು। ಕರುಣದಿಂದಲಿ ತೋರಿ ಸಲಹಿದ। ತುರಿಯತೀತಾನಂದ ಶ್ರೀ ಗುರುದೇವ ಶರಣಾರ್ಥಿ ॥೫॥

ಒಮ್ಮೆ ಶ್ರೀ ಗುರುದೇವನೆನುತಲಿ। ಒಮ್ಮೆ ಶ್ರೀಗುರು ಚಹವನೆನು ತಲಿ। ಒಮ್ಮೆ ಶ್ರೀರುದ್ರೇಶನೆನುತಲಿ ಬಂದು ಜಗದೊಳಗೇ॥ ಹಮ್ಮು ಬಿಮ್ಮುಗಳಿಲ್ಲದಚಲಿತ। ಬ್ರಹ್ಮದಾದಿ ಅಖಂಡ ಬೆಳಗನು। ಒಮ್ಮನದಿ ನೋಡೆಂದು ತೋರಿದ ಗುರುವೆ ಶರಣಾರ್ಥಿ ॥೬॥

ಶರಿರ ಮಲಿನವಿದೆಂದು ಖಂಡಿಸಿ। ಪರಮ ನಿರ್ಮಲನೆಂದು ಪೂಜಿಸಿ। ಮರಣ ಬಾಧೆಯೊಳಿಪ್ಪ ಸಿದ್ಧಾಂತಿಗಳ ಮತ ಹೊಗದಾ॥ ದುರುಳ ವೇದಾಂತಿಗಳ ಮಾತಿನ। ಬರಿಯ ಬೊಮ್ಮದ ಬೋಧೆಯೊಲ್ಲದೆ। ಹರನೊಳಗೆ ಸಮರಸವ ತೋರಿದ ಗುರುವೆ ಶರಣಾರ್ಥಿ ॥೭॥

ಅಂಗದ ಜ್ಞಾನವನು ದಹಿಸಿ। ಚಿದಂಗ ನಿರ್ಮಲ ಮಾಡಿ ಶಿವಕಳೆ। ತುಂಗ ಭಸಿತವಿದೆಂದು ಫಣೆಯೊಳಗಿಟ್ಟು ಮುದದಿಂದಾ॥ ಹಿಂಗದಿರುತಿಹ ಪಕ್ಷಿಮುದ ಘನ। ಲಿಂಗವನು ಕರದೊಳಗಿರಿಸಿ ನೀ। ನಿಜ ಮಂಗಳಾತ್ಮಕನೆನಿಸಿ। ಸಲಹಿದ ಗುರುವೆ ಶರಣಾರ್ಥಿ ॥೮॥

ಲಿಂಗಮೆನೆ ಪರಮಾತ್ಮ ಪಾವನ। ಲಿಂಗಮೆನೆ ಪರತತ್ವ ಪರಶಿವ। ಲಿಂಗಮೆನೆ ಪರಬ್ರಹ್ಮ ಪರತರ ಘನಕೆ ಘನಮಹಿಮಾ॥ ಲಿಂಗಮೆನೆ ಪರಮಂತ್ರರೂಪವು। ಲಿಂಗಮೆನೆ ಸ್ವಾತಂತ್ರ್ಯರೂಪವು। ಲಿಂಗಮೆನೆ ನಿರವಯುವೆನುತ್ತದರಿಂಗಿತವನೆನ್ನೊಳಗೆ ತೋರಿದ ಗುರುವೆ ಶರಣಾರ್ಥಿ ॥೯॥

ಲಿಂಗ ಮಧ್ಯದೊಳಖಿಳ ಮಂತ್ರವು। ಲಿಂಗಮಧ್ಯದೊಳಖಿಳ ತಂತ್ರವು। ಲಿಂಗಮಧ್ಯದೊಳಖಿಲ ಕೋಟಿ ಬ್ರಹ್ಮಾಂಡವಿರುತಿಹವೂ॥ ಲಿಂಗಮಧ್ಯದೊಳಖಿಲ ತತ್ವವು। ಲಿಂಗಮಧ್ಯದೊಳಖಿಲ ತೋರಿಕೆ। ಲಿಂಗದೊಳು ಸಮರಸವ ತೋರಿದ ಗುರುವೆ ಶರಣಾರ್ಥಿ ॥೧೦॥

ಪರಮ ಗುರುಚರಲಿಂಗ ಶೇಷವು। ಚರಣಜಲ ರುದ್ರಾಕ್ಷಿ ಭೂತಿಯು। ವರ ಷಡಕ್ಷರಿ ಮಂತ್ರ ಘನತರದಷ್ಟಾವರಣಗಳೂ। ಪರಶಿವನೆ ತಾನಾಹನೆನುತಲಿ। ಶರೀರ ಮನಭವೇಂದ್ರಿಯಾತ್ಮಸು। ಕರಣವೊಳಗಳವಡಿಸಿ ತೋರಿದ ಗುರುವೆ ಶರಣಾರ್ಥಿ ॥೧೧॥

ಲಿಂಗದೊಳು ನಡೆ ಲಿಂಗದೊಳು ನುಡಿ । ಲಿಂಗದೊಳು ಸಕಲೇಂದ್ರಿ ಸಮರಸ । ಲಿಂಗದೊಳು ತನುಭಾವ ಕರಣಗಳೊಂದುಗೂಡೀ ॥ ಲಿಂಗ ದೊಳು ಕೀಲಿಸಿದ ಕಂಗಳು । ಹಿಂಗಿದರು ನಿಜಮುಕುತಿಯೆನುತಲಿ । ಲಿಂಗದೊಳು ಸಮರಸವ ತೋರಿದ ಗುರುವೆ ಶರಣಾರ್ಥಿ ॥೧೨॥

ನೇತ್ರಲಿಂಗದ ಜನನಸ್ಥಳ ನಿಜ । ನೇತ್ರಲಿಂಗದ ಸ್ನೇಹ ಸಮರಸ। ನೇತ್ರಲಿಂಗದ ಪುಷ್ಪಮಜ್ಜನ ಕಲಶ ಚಿನ್ಮಯವೂ ॥ ನೇತ್ರಲಿಂಗದ ದೇಹ ಮಂದಿರ । ನೇತ್ರ ಪರಶಿವಬ್ರಹ್ಮಯೆನುತಲಿ । ನೇತ್ರದ ಮಹಿಮೆಯು ತೋರಿ ಸಲಹಿದ ಗುರುವೆ ಶರಣಾರ್ಥಿ ॥೧೩॥

ಆರು ಭೂತಗಳಾರು ಲಿಂಗಗ । ಳಾರು ಅಂಗಗಳಾರು ಮುಖಕರ। ವಾರು ಶಕ್ತಿಗಳಾರು ಭಕ್ತಿಗಳಾರು ದ್ರವ್ಯಗಳೂ ॥ ಆರು ಶೇಷಗಳಾರು ಮಂತ್ರಗ । ಳಾರು ಕಳೆಗಳ ಬೆಳಗಿಸಿರವನು । ತೋರಿ ಸಲಹಿದ ಪರಮ ಶ್ರೀ ಗುರುದೇವ ಶರಣಾರ್ಥಿ ॥೧೪॥

ಆರು ಸ್ಥಳದಗ್ರದಿ ವಿರಾಜಿಪ । ಮೂರು ಮಂಡಲ ಬಳಸಿಕೊಂಡಿಹ। ಧೀರಗಣರುದ್ರಾದಿ ಪಶುಶಕ್ತಿಗಳ ಮಧ್ಯದೊಳೂ ॥ ಆರು ಚಕ್ರದ ಮಧ್ಯ ಪೀಠದಿ । ಪೂರವಿಸಿ ಥಳಥಳಿಸಿ ಬೆಳಗುವ । ಸಾರ ನಿಷ್ಕಳಘನವ ತೋರಿದ ಗುರುವೆ ಶರಣಾರ್ಥಿ ॥೧೫॥

ಮನದ ಕೊನೆಯೊಳಗಿರ್ಪ ಲಿಂಗಕೆ। ಮನವೆ ಮಜ್ಜನ ಮನವೆ ಗಂಧವು । ಮನವೆ ಅಕ್ಷತೆ ಮನವೆ ಪುಷ್ಪವು ಘನಕೆ ಘನ ಧೂಪಾ ॥ ಮನವೆ ದೀಪವು ಮನವೆ ಅರ್ಪಣ॥ ಮನವೆ ತಂಬುಲವಾಗಿ ಸಂತತ। ಮನವೆ ಮಹ ಘನವೆಂದು ತೋರಿದ ಗುರುವೆ ಶರಣಾರ್ಥಿ ॥೧೬॥

ಒಮ್ಮೆ ಘ್ರಾಣದೊಳೊಮ್ಮೆ ಜಿಹ್ವೆಯೊ । ಳೊಮ್ಮೆ ನೇತ್ರದೊಳೊಮ್ಮೆ ತ್ವಕ್ಕಿನೊ । ಳೊಮ್ಮೆ ಶ್ರೋತ್ರದೊಳೊಮ್ಮೆ ಹೃದಯದಳೊಮ್ಮೆ ಭಾವದೊಳೂ ॥ ಒಮ್ಮೆ ಕರಣದೊಳೊಮ್ಮೆ ಮನದೊಳ । ಗೊಮ್ಮೆ ಹೊರ ವಳಗಡಗಿದಿರವನು । ಬ್ರಹ್ಮದಾಟವಿದೆಂದು ತೋರಿದ ಗುರುವೆ ಶರಣಾರ್ಥಿ ॥೧೭॥

ಬಯಲ ರೂಪಾಗಿರ್ದ ಲಿಂಗವ। ಬಯಲ ಹಸ್ತದೊಳಿರಿಸಿ ಸಂತತ। ಬಯಲ ಪೂಜೆಯ ಮಾಡಿ ಮನ ಮುಳುಗಾಡಿ ಮುದದಿಂದಾ॥ ಬಯಲ ದ್ರವ್ಯಗಳರ್ಪಿಸುತ ಚಿ। ದ್ಬಯಲ ಶೇಷವನುಂಡು ಸುಖಿಸುವ। ಬಯಲೊಳಗೆ ನಿರ್ಬಯಲ ತೋರಿದ ಗುರುವೆ ಶರಣಾರ್ಥಿ ॥೧೮॥

ಮನವೆ ಕ್ಷಣ ಪಾತಾಳಕೈದುದು। ಮನವೆ ಕ್ಷಣದೊಳು ಗಗನ ಕೈದುದು। ಮನವೆ ಕ್ಷಣದೊಳಗಷ್ಟದಿ। ಶೆಗಳ ಬಳಸಿ ಬಂದಿಹುದೂ॥ ಮನದೊಳೊಬ್ಬುಳಿಯಾಗಿ ನಿಂದಡೆ। ಘನಕೆ ಘನ ಮಹಲಿಂಗವೆನುತ ದ। ರನವನೆನ್ನೊಳು ತೋರಿ ಸಲಹಿದ ಗುರುವೆ ಶರಣಾರ್ಥಿ॥ ॥೧೯॥

ಎಲ್ಲಿ ನೋಡಿದೊಡಲ್ಲಿ ಲಿಂಗವು। ಎಲ್ಲಿ ಮುಟ್ಟಿದೊಡಲ್ಲಿ ಲಿಂಗವು। ಎಲ್ಲಿ ಮನಕಾನಂದ ತೋರಿದೊಡಲ್ಲಿ ಘನಲಿಂಗಾ॥ ಎಲ್ಲಿ ಭಾವಿಸಲಲ್ಲಿ ಲಿಂಗವು। ಎಲ್ಲಿ ಲಿಂಗದ ರೂಪೆನುತ ತೆರ। ಪಿಲ್ಲದೆನ್ನೊಳು ತೋರಿ ಸಲಹಿದ ಗುರುವೆ ಶರಣಾರ್ಥಿ ॥೨೦॥

ತೆರಹಿಲ್ಲದಾ ನುಡಿ ತೆರಹಿಲ್ಲದಾ ನಡೆ। ತೆರಹಿಲ್ಲದಾ ಒಡನಾಟದನುಭವ। ತೆರಹಿಲ್ಲದಾ ಸಂಭಾಷಣೆಯ ಸುಖ ತೆರಹಿಲ್ಲದಾ ನೋಟಾ॥ ತೆರಹಿಲ್ಲದಾ ಧ್ಯಾನ ದರ್ಶನಾರ್ಪಣ। ನಿರುಪಮದ ಘನಲಿಂಗ ನಿಜದೊಳು। ತೆರಹಿಲ್ಲದಾ ಸಮರಸವ ತೋರಿದ ಗುರುವೆ ಶರಣಾರ್ಥಿ॥ ೨೧॥

ಶರಿರ ಗುಣಧರ್ಮಗಳು ಬಯಲವು। ಪಿರಿದು ಮರವೆಗಳೆಲ್ಲ ಬಯಲವು। ಒಳಗೆ ಹೊರಗೆ ಪರಿಪೂರ್ಣವೆಂಬುದು ನೆನಹು ತಾ ಬಯಲೂ॥ ಕರಣ ಮನ ಭಾವಗಳು ಬಯಲವು। ಕುರುಹು ಪೂಜೆಯು ಧ್ಯಾನ ಬಯಲವು। ಅರುಹು ನಿರ್ಬಯಲೆಂದು ತೋರಿದ ಗುರುವೆ ಶರಣಾರ್ಥಿ ॥ ೨೨॥

ಶರಣು ಕರುಣಾಕರನೆ ನಿಶ್ಚಲ। ಶರಣು ಮರಣವಿರಹಿತ ನಿರ್ಮಲ। ಶರಣು ರವಿ ಶಶಿಬಿಂಬ ಮಂಡಲಮೂರ್ತಿ ಘನಕೀರ್ತಿ॥ ಶರಣು ನುತ ಜನಪಾಲಪಾವನ। ಶರಣು ಪರತರ ಜ್ಞಾನಸಾಧನ। ಶರಣು ತ್ರೈಜಗದೊಡೆಯ ಶ್ರೀ ಗುರುದೇವ ಶರಣಾರ್ಥಿ ॥ ೨೩॥

ಶರಣು ನಿತ್ಯನೆ ಶರಣು ಸತ್ಯನೆ। ಶರಣು ಶಾಶ್ವತ ಶರಣು ಭಾಸ್ವತ। ಶರಣು ಕಂಧರ ಶರಣು ಬಂಧುರ ಶರಣು ಭವನಾಶಾ॥ ಶರಣು ಶೀಲ

ನೆ ಶರಣು ಲೋಲನೆ । ಶರಣು ಶಾಂತನೆ ಶರಣು ಕಾಂತನೆ ! ಶರಣು ಶಂಕರ ಶಂಭು ಶ್ರೀ ಗುರುದೇವ ಶರಣಾರ್ಥಿ ॥ ೨೪ ॥

ಈ ತೆರದ ಗುರುಸ್ತೋತ್ರ ನಾಮವ । ನೋತು ಬರದೋದಿದೊಡೆ ಮನದೊಳು । ಸೂತುಮಾಯು ಸುಜ್ಞಾನ ಸಂಜನಿಸುವುದು ದಿಟ ಬಳಿಕಾ । ಜಾತಿ ಸೂತಕ ಭವವಳಿದು । ನಿರ್ಜಾತ ನಿರುಪಮ ನಿತ್ಯ । ಘನಪರಂಜ್ಯೋತಿ ಶ್ರೀಗುರುಬಸವಲಿಂಗದೊಳೈಕ್ಯ ಸಿದ್ಧಿಪುದೂ ॥ ೨೫ ॥

॥ ಸಂಪೂರ್ಣಂ ॥ ಮಂಗಳಮಹಾ ॥

---

# ಧರ್ಮಗ್ರಂಥ ಪ್ರಕಟನಾಕಾರ್ಯ.

ಶಿ॥ ಮಾ॥ ಎಚ್. ಜಿ. ಸಿದ್ಧಲಿಂಗಯ್ಯನವರು ಹಾರೋಹಳ್ಳಿ ಡಿ॥ ಬೆಂಗಳೂರ.

ಶ್ರೇಷ್ಠವಾದ ನಮ್ಮ ವೀರಶೈವ ಮತದಲ್ಲಿ ಅನೇಕ ಮಹಿಮಾಶಾಲಿಗಳೂ, ಶ್ರೇಷ್ಠರಾದ ಕವಿವರ್ಯರೂ ಆಗಿ ಹೋದರು. ಆವರೆ ಅವರು ಮಾಡಿರತಕ್ಕ ಕೃತಿಗಳೂ ಬರೆದಿರತಕ್ಕ ಗ್ರಂಥಗಳೂ, ಅವರುಗಳಲ್ಲಿದ್ದ ಮಹಿಮಾಶಕ್ತಿಗಳೂ ವರ್ತಮಾನಕಾಲದ ಪ್ರತಿಯೊಬ್ಬ ವೀರಶೈವನಲ್ಲಿಯೂ, ನಮ್ಮ ಮತದಲ್ಲಿ ಎಂತೆಂತಹ ಮಹನೀಯರಿದ್ದರೆಂಬ ವಿಷಯದಲ್ಲಿ ಹೆಮ್ಮೆಯನ್ನುಂಟುಮಾಡದೆ ಇರದು. ಹಿಂದಿನ ಎಲ್ಲಾ ಮಹನೀಯರ ಮಹಿಮಾತಿಶಯಗಳನ್ನು ಅನೇಕ ಕವಿವರ್ಯರು ಬರೆದಿರುತ್ತಾರೆ. ಅಂತಹ ಅಸಂಖ್ಯಾತವಾದ ಗ್ರಂಥಗಳು ಮುದ್ರಣ ಮೊದಲಾದುವುಗಳಿಗವಕಾಶವಿಲ್ಲದಿದ್ದ ಪೂರ್ವದಲ್ಲಿ ತಾಡವಾಲೆಯಲ್ಲಿ ಬರೆಯಲ್ಪಟ್ಟಿವೆ. ಈ ತರಹವಾದ ಗ್ರಂಥಗಳಲ್ಲಿರುವ ಸದ್ವಿಷಯಗಳ ನಿಧಿಯನ್ನು ಶಿವಾನುಭವವೆಂಬ ತ್ರೈಮಾಸಿಕದ ಮೂಲಕ ಬೆಳಕಿಗೆ ತರಲು ಪ್ರಯತ್ನಪಟ್ಟಿರುವ ಮ॥ ರಾ॥ ರಾವಸಾಹೇಬ ಪಿ. ಜಿ. ಹಳಕಟ್ಟಿಯವರಿಗೆ ಎಷ್ಟು ಧನ್ಯವಾದಗಳನ್ನರ್ಪಿಸಿದರೂ ಕಡಿಮೆಯಾಗಿದೆ. ಈ ಮಹನೀಯರಿಗೆ ಇಡೀ ವೀರಶೈವ ಸಮಾಜವೇ ಅತ್ಯಂತ ಋಣಿಯಾಗಿರುತ್ತೆ.

ಆದರೆ ನಮ್ಮ ಮತದಲ್ಲಿರುವ ಅಸಂಖ್ಯಾತವಾದ ಗ್ರಂಥಗಳು ಹೊರಗೆ ಬರಬೇಕಾದರೆ ನಮ್ಮ ಮತದಲ್ಲಿಯ ಪ್ರತಿಯೊಬ್ಬ ವ್ಯಕ್ತಿಯೂ ಒಮ್ಮನಸ್ಸಿನಿಂದ ಇವರ ಕಾರ್ಯದಲ್ಲಿ ಸಹಕರಿಸಿದರೇ ಹೊರತು ಗ್ರಂಥಗಳು ಇರತಕ್ಕ ಸ್ಥಳಗಳಿಗೆ ಹುಡುಕಿಕೊಂಡು ಹೋಗಿ ಅಥವಾ ಅವುಗಳನ್ನು ಕಂಡು ಹಿಡಿದು ತರಿಸಿಕೊಂಡು ಪ್ರಸಿದ್ಧಿಸಲು ಮ॥ ರಾ॥ ಹಳಕಟ್ಟಿಯವರೊಬ್ಬರಿಂದಲಾಗಲಿ ಅಥವಾ ಬೇರೆ ಒಬ್ಬಿಬ್ಬರು ಪ್ರಯತ್ನ ಪಡುವದರಿಂದಲಾಗಲಿ ಎಲ್ಲಾ ಗ್ರಂಥಗಳನ್ನೂ ಬೆಳಕಿಗೆ ತರಲು ಸಾಧ್ಯವಾಗಲಾರದು.

ಈ ವಿಷಯವಾಗಿ ನನ್ನ ಬಾಲ ಬುದ್ಧಿಗೆ ಕಂಡ ಈ ಕೆಳಗಡೆ ವಿವರಿಸಿರುವ ಕೆಲವು ನಿಯಮಗಳನ್ನು ಅನುಸರಿಸಿದರೆ ಸಾಧ್ಯವಾಗಬಹುದೆಂದು ತೋರುತ್ತದೆ.

೧. ಪ್ರತಿಯೊಬ್ಬ ವೀರಶೈವ ಮಹನೀಯರೂ ತಮಗೆ ಪುರಾವಿರುವ ವೇಳೆಯಲ್ಲಿ ತಮ್ಮ ಮನೆಯಲ್ಲಿ ಯಾವ ಹಳೆಯ ಗ್ರಂಥಗಳಿವೆ, ಆದರಲ್ಲಿ ಇರುವ ವಿಷಯಗಳೇನು, ಎಂಬುದನ್ನು ನೋಡುವುದು ಮತ್ತು ತಮ್ಮ ಮಿತ್ರರ ಮನೆಗಳಲ್ಲಿರುವುದನ್ನು ವಿಚಾರಿಸುವುದು, ಅವುಗಳನ್ನು ನೋಡುವಂತೆ ಅವರನ್ನು ಪ್ರೋತ್ಸಾಹಿಸುವುದು.

೨. ಅವುಗಳಲ್ಲಿ ಇದು ವರೆಗೂ ಪ್ರಿಂಟಾಗದೆ ಇರುವ ವಿಷಯಗಳಿದ್ದರೆ ಅವುಗಳನ್ನು ಸಾಧ್ಯವಾದರೆ ತಾವೇ ಸ್ವತಂತ್ರಿಸಿ ಅಚ್ಚು ಹಾಕಿಸುವುದು. ಹಾಗೆ ಸಾಧ್ಯವಿಲ್ಲದಿದ್ದರೆ ಶಿವಾನುಭವ ಮೊದಲಾದ ಪ್ರಸಿದ್ಧಿಸಲಿಚ್ಛಿಸುವ ಕಡೆಗಳಿಗೆ ಅದನ್ನು ಬೇರೆ ಪ್ರತಿಯನ್ನೆತ್ತಿಯಾಗಲಿ ಅಥವಾ ಹಾಗೆಯೆ ಆಗಲಿ ಕಳುಹಿಸುವುದು.

(ಹಿಂದೆ ಪ್ರಿಂಟ ಆಗಿದೆಯೆ ಇಲ್ಲವೆ ಎಂಬ ಅನುಮಾನ ಬಂದರೆ ಅವರಿಗೇ ಬರೆದರೆ ತಿಳಿಸುತ್ತಾರೆ.)

೩. ವ್ಯಾಸಂಗಮಾಡುತ್ತಿರುವ ನಮ್ಮ ತರುಣ ಮಿತ್ರರು ತಮ್ಮ ರಜಾ ಕಾಲದಲ್ಲಿ ತಮ್ಮ ಸ್ವಸ್ಥಳಗಳಿಗಾಗಲಿ ಅಥವಾ ಬಂಧುಗಳ ಮನೆಗಾಗಲಿ ಹೋದಕಾಲದಲ್ಲಿ ವ್ಯಥಾ ಕಾಲಹರಣ ಮಾಡುವುದಕ್ಕೆ ಬದಲಾಗಿ ಮತಕ್ಕೆ ಉಪಕಾರವಾಗುವ ಈ ಕಾರ್ಯವನ್ನು ಕೈಕೊಳ್ಳಬೇಕು. ಕೈಕೊಳ್ಳುವಂತೆ ಇತರರನ್ನು ಪ್ರೋತ್ಸಾಹಿಸಬೇಕು.

೪. ನಮ್ಮಲ್ಲಿ ಕೆಲವರು ಶಿವಪೂಜಾಗೃಹದಲ್ಲಿ ಈ ತರದ ತಾಡೆವಾಲೆಯ ಗ್ರಂಥಗಳನ್ನು ಪೂಜಿಸುವುದಕ್ಕಾಗಿ ಇಟ್ಟಿರುತ್ತಾರೆ. ಅವುಗಳನ್ನು ಹೊರಕ್ಕೆ ತೆಗೆಯಬಾರದೆಂದು ಹೇಳುತ್ತಾರೆ. ಇದೇ ರೀತಿಯಾದ ಮೌಢ್ಯತೆಯಿಂದ ಅನೇಕ ಗ್ರಂಥಗಳು ಇಟ್ಟಿದ್ದ ಸ್ಥಳಗಳಲ್ಲಿಯೇ ಗೆದ್ದಲು ಹುಳುಗಳಿಗೆ ಭಕ್ಷಣೆಯಾಗಿ ಹೋಗಿವೆ. ಅಂತಹವರಿಗೆ ತಿಳಿದ ಮಹನೀಯರು ದಯವಿಟ್ಟು ತಿಳಿಯ ಹೇಳುವುದು.

ಈ ರೀತಿಯಾಗಿ ಪ್ರತಿಯೊಬ್ಬರೂ ಪ್ರಯತ್ನ ಮಾಡಿ ಕಡೆಯ ಪಕ್ಷ ಒಬ್ಬೊಬ್ಬರು ಒಂದೊಂದು ಗ್ರಂಥವನ್ನಾದರೂ ಬಯಲಿಗೆ ತರಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಪ್ರಯತ್ನ ಮಾಡಿದರೆ ನಮ್ಮ ಪುರಾತನ ಮಹನೀಯರಿಂದ ಬರೆಯಲ್ಪಟ್ಟ ಅನೇಕ ಸದ್ಗ್ರಂಥಗಳು ಬೆಳಕಿಗೆ ಬಂದು ನಮ್ಮೀ ವೀರಶೈವ ಮತಕ್ಕೆ ಅತ್ಯಂತ ಉಪಕಾರವಾಗುವುದೆಂಬುದರಲ್ಲಿ ಸಂದೇಹವಿಲ್ಲ.

ಮೇಲ್ಕಂಡ ವಿಷಯಗಳನ್ನೆಲ್ಲಾ ದಯವಿಟ್ಟು ಪರ್ಯಾಲೋಚಿಸಿ ಗ್ರಂಥೋದ್ಧಾರ ಕಾರ್ಯದಲ್ಲಿ ತೊಡಗಬೇಕೆಂಬುದೇ ಸರ್ವರಲ್ಲಿಯೂ ನನ್ನ ಸವಿನಯ ಪ್ರಾರ್ಥನೆ. ಇಷ್ಟು ದೊಡ್ಡ ಲೇಖವನ್ನು ಬರೆದು ಶಿವಾನುಭವದ ಅವಕಾಶ್ಯವಾದ ಸ್ಥಳವನ್ನು ಆಕ್ರಮಿಸಿ ಬೇಸರವನ್ನುಂಟುಮಾಡಿದ್ದಕ್ಕಾಗಿ ವಾಚಕರ ಕ್ಷಮೆಯನ್ನು ಬೇಡುವುದರ ಮೂಲಕ ಈ ನನ್ನ ಲೇಖವನ್ನು ಪೂರೈಸುತ್ತೇನೆ.



# ವೀರಶೈವ ಧರ್ಮಗ್ರಂಥ ಪ್ರಸಾರಕ ಸಂಘ ವಿಜಾಪುರ.

[ಲೇಖಕ:— ಸಂಪಾದಕ ಶಿವಾನುಭವ.]



ಶಿವಾನುಭವದ ವಾಚಕ ವರ್ಗದಲ್ಲಿ ಧರ್ಮಗ್ರಂಥಗಳ ಪರಿಶೋಧನಕ್ಕೋಸ್ಕರ ಅಭಿಲಾಷೆಯು ಹುಟ್ಟಹತ್ತಿರುವದು ಬಹು ಸಮಾಧಾನಕರವಾದ ಸಂಗತಿಯಾಗಿದೆ. ಯಾಕಂದರೆ ಅವರಲ್ಲನೇಕರು ತಮ್ಮ ಮನೆಯಲ್ಲಿದ್ದ ಪುರಾತನ ಗ್ರಂಥಗಳಾವವೆಂಬದನ್ನು ನೋಡತೊಡಗಿದಾ[illegible], ಇಷ್ಟೇ ಅಲ್ಲ, ಅವು ಸಿಗತಕ್ಕ ಬೇರೆ ಸ್ಥಳಗಳಲ್ಲಿಯೂ ಹೋಗಿ ಅ[illegible]ಗಳನ್ನು ಪರೀಕ್ಷಿಸಹತ್ತಿರುವರು. ಮತ್ತು ಅವರು ಬಹಳ ಪರಿಶ್ರಮ[illegible]ಕವಾಗಿ ಅವುಗಳ ಪಟ್ಟಿಯನ್ನು ಸಹ ಸಿದ್ಧಪಡಿಸಿ ನಮ್ಮ ಕಡೆಗೆ ಕಳಿಸಿದ[illegible]ತಹತ್ತಿರುವರು. ಇವರಲ್ಲಿ ಕೆಲವರಂತೂ ತಮಗೆ ಉತ್ಕೃಷ್ಟ[illegible]ೇರಿದ ಗ್ರಂಥಗಳನ್ನು ಸಹ ಬರೆದು ನಮ್ಮ ಕಡೆಗೆ ಕಳಿಸಹ[illegible]ವರಿಂದ [illegible] ಈ ಪ್ರಕಾರ ಶೋಧಕರ ಸಂಖ್ಯೆಯು ವೀರಶೈವ ಸಮಾಜದಲ್ಲಿ ಹೆಚ್ಚಹ[illegible] ಶುಭಚಿನ್ಹವೆಂದು ಯಾರು ಹೇಳದೆ ಇರಲಾರರು? ಇವರಲ್ಲಿ ಕೆಲವರು ಐತಿಹಾಸಿಕ ಸಂಗತಿಗಳ ವಿಷಯದಲ್ಲಿಯೂ ಶಿಲಾಶಾಸನಗಳ ಶೋಧದ ವಿಷಯದಲ್ಲಿಯೂ ಪ್ರೇಮವುಳ್ಳವರಾಗಿ ಆ ಬಗ್ಗೆ ಬಹು ಕಷ್ಟಪಟ್ಟು ಶೋಧಮಾಡುವದರಲ್ಲಿಯೂ ತೊಡಗಿದ್ದಾರೆ. ಇವರು ಶಿಲಾಶಾಸನಗಳ ಅಚ್ಚು ತೆಗೆದುಕೊಳ್ಳಲಿಕ್ಕೆ ಅವಶ್ಯಕವಿರುವ ಸಾಮಗ್ರಿಗಳನ್ನು ತಮ್ಮ ಕಡೆಗೆ ಕಳಿಸಿಕೊಡಲು ನಮ್ಮನ್ನು ಮೇಲಿಂದಮೇಲೆ ಕೇಳುತ್ತಲಿದ್ದಾರೆ. ಈ ಪ್ರಕಾರ ಕರ್ನಾಟಕದ ಎಲ್ಲ ಭಾಗಗಳಲ್ಲಿಯು ಅನೇಕ ಮಹನೀಯರು ಈ ಮಹತ್ವದ ವಿಷಯಗಳ ಬಗ್ಗೆ ಮನಸ್ಸು ಹಾಕುತ್ತಿರುವದು ಅತ್ಯಂತ ಅಭಿನಂದನೀಯವಾಗಿದೆ.

ಮೇಲ್ಕಂಡ ಮಹನೀಯರು ಗ್ರಂಥಗಳ ಬಗ್ಗೆ ನಮಗೆ ಕಳಿಸಿಕೊಟ್ಟ ಮಾಹಿತಿಯನ್ನು ಇಲ್ಲಿ ನಾವು ಕೊಟ್ಟಿದ್ದೇವೆ. ಅವುಗಳಲ್ಲಿ ಕಾಣಿಸಿರುವ ಗ್ರಂಥಗಳನ್ನು ಅಚ್ಚು ಹಾಕುವ ಕಾರ್ಯವನ್ನು ನಾವು ಕೈಕೊಂಡರೆ ಅವುಗಳನ್ನು ನಮ್ಮ ಕಡೆಗೆ ಕಳಿಸಿಕೊಡುವೆವೆಂತಲೂ ಅವರು ನಮಗೆ ಅಭಿವಚನವನ್ನು ಕೊಟ್ಟಿದ್ದಾರೆ. ಮತ್ತು ಆ ಪ್ರಕಾರ ಮಾಡಲು ನಮ್ಮನ್ನು

ಮೇಲಿಂದಮೇಲೆ ಒತ್ತಾಯ ಪಡಿಸಲುಹತ್ತಿದ್ದಾರೆ. ಒಂದು ವೇಳೆ ಅವು ಗಳನ್ನು ನಾವು ಹೀಗೆ ಸ್ವತಂತ್ರವಾಗಿ ಅಚ್ಚುಹಾಕಿಸಲು ಶಕ್ಯವಿರದಿದ್ದರೆ ಶಿವಾನುಭವದಲ್ಲಾದರೂ ಅಚ್ಚು ಹಾಕಬೇಕೆಂದು ನಮಗೆ ಅವರು ಸೂಚಿ ಸುತ್ತಲಿದ್ದಾರೆ. ಆದರೆ ಈಗಿನ ಪರಿಸ್ಥಿತಿಯಲ್ಲಿ ಈ ಪ್ರಕಾರ ಗ್ರಂಥಗ ಳನ್ನು ಅಚ್ಚು ಪಡಿಸುವದು ಎಷ್ಟು ದುಸ್ತರವಾಗಿರುತ್ತದೆಂಬದನ್ನು ನಾವು ಬೇರೆ ಹೇಳುವ ಕಾರಣವಿಲ್ಲ. ಅವುಗಳನ್ನು ಸ್ವತಂತ್ರವಾಗಿ ಮುದ್ರಿಸಿ ದರೆ ವಿಶೇಷ ಖರ್ಚು ಬರುವದಲ್ಲದೆ ಅವುಗಳನ್ನು ಓದುವವರ ಸಂಖ್ಯೆಯು ನಮ್ಮಲ್ಲಿ ಬಹು ಕಡಿಮೆ ಇರುವದರಿಂದ ಈ ಗ್ರಂಥಗಳು ಖರ್ಚಾಗದೆ ಉಳಿದು ನಾವು ಹಾನಿಗೆ ಪಾತ್ರರಾಗದೆ ಇರಲಾರೆವು. ಒಂದು ವೇಳೆ ನಾವು ಇಂಥ ಗ್ರಂಥಗಳನ್ನು ಶಿವಾನುಭವ ತ್ರೈಮಾಸಿಕದಲ್ಲಿ ಪ್ರಸಿದ್ಧಿಸಿದ್ದಾ ದರೆ ಅವು ಮುಗಿಯಲಿಕ್ಕೆ ಎಷ್ಟು ದಿವಸಗಳು ಬೇಕೋ ಎಂಬದನ್ನು ವಾಚಕರೇ ತರ್ಕಿಸಲಿ. ಆದ್ದರಿಂದ ನಾವು ಶಿವಾನುಭವದ ಪುಟಗಳನ್ನು ಹೆಚ್ಚಿಸಿ ಅದನ್ನು ಮಾಸಿಕವಾಗಿ ಮಾಡಬೇಕೆಂಬ ಯೋಚನೆಯಿಂದ ಪ್ರಕಾರ ಹೋದಸಾರೆ ನಾವು ಪ್ರಸಿದ್ಧಿಸಿದೆವು. ಆದರೆ ಹೀಗೆ ಪುಟಗಳ ನ್ನು ಹೆಚ್ಚಿಸಿ ಪತ್ರಿಕೆಯ ಚಂದಾಹಣವನ್ನು ಬೆಳಿಸಿದರೆ ಶಿವಾನುಭವದ ಪ್ರಸಾರಕ್ಕೆ ಧಕ್ಕೆಯು ಬರುವ ಸಂಭವವು ನಮಗೆ ತೋರಿತು. ಆದ್ದ ರಿಂದ ನಾವು ಈ ವಿಚಾರವನ್ನು ಅಲ್ಲಿಯೇ ಬಿಟ್ಟುಬಿಡಬೇಕಾಯಿತು. ಶಿವಾನುಭವದ ಈಗಿನ ಚಂದಾದಾರರ ಸಂಖ್ಯೆಯು ಧರ್ಮಗ್ರಂಥ ಪ್ರಕ ಟನಾಕಾರ್ಯಕ್ಕೆ ಉತ್ತೇಜನಕರವಾಗಿಲ್ಲ. ಆದ್ದರಿಂದ ನಮ್ಮ ಮೊದಲಿನ ಯೋಜನೆಯನ್ನು ಬಿಟ್ಟು ಬಿಡಬೇಕಾದ್ದರಿಂದ ನಾವು ವಿಷಾದಪಡು ತ್ತೇವೆ. ಜನರಲ್ಲಿ ನಿಜವಾದ ಧರ್ಮಜಾಗ್ರತಿ ಮತ್ತು ವಾಙ್ಮಯಪ್ರೇಮ ಉಂಟಾದ ಬಳಿಕ ಈ ಕಾರ್ಯವನ್ನು ಒತ್ತರದಿಂದ ಸಾಗಿಸುವ ಪರಿಸ್ಥಿತಿಯು ಬರಬಹುದು. ಆ ವರೆಗೆ ನಾವು ನಮ್ಮ ಈಗಿನ ಪ್ರಯತ್ನವನ್ನು ಹಾಗೆಯೇ ತಾಳ್ಮೆಯಿಂದ ನಡಿಸುವದು ಅವಶ್ಯವಾಗಿರುತ್ತದೆ.



# ಪುರಾತನ ಗ್ರಂಥಗಳ ಪಟ್ಟಿಗಳನ್ನು ಕಳಿಸಿ ಕೊಟ್ಟವರ ಹೆಸರುಗಳು.

---

೧. ರಾ॥ ರಾ॥ ಭೀಮಾಚಾರ್ಯ ಒಡವಿ (ಕಾವ್ಯರತ್ನ) ಶಾಲಾ ಮಾಸ್ತರ ತುಮ್ಮಿನಕಟ್ಟಿ. ಜಿ॥ ಧಾರವಾಡ ಇವರು ಗುರುಭಕ್ತಿಯಾಂಡರರ ಚರಿತ್ರೆ, ಪ್ರಾಸಭೂಷಣಕವಿಕೃತ ಇದನ್ನು ಬರೆದಿಟ್ಟಿದ್ದಾರೆ. ಮತ್ತು ಅದರ ಮೂಲ ತಾಡವಾಲೆ ಗ್ರಂಥವನ್ನು ನಮ್ಮ ಕಡೆಗೆ ಕಳಿಸಿದ್ದಾರೆ. ಅಲ್ಲದೆ ತಮ್ಮಲ್ಲಿದ್ದ ೮ ಗ್ರಂಥಗಳ ಪಟ್ಟಿಯನ್ನು ಕಳಿಸಿದ್ದಾರೆ.

೨. ರಾ॥ ರಾ॥ ಬಸಪ್ಪ ಪಾಟೀಲ ಚಿಂಚೋಳಿ ಜಿ॥ ಕಲಬುರ್ಗಾ ಇವರು ಭೋಗಲಿಂಗೇಶ್ವರ ಶತಕವನ್ನು ಬರೆದು ನಮ್ಮ ಕಡೆಗೆ ಅಚ್ಚಿಗೆ ಕಳಿಸಿದ್ದಾರೆ. ಅಲ್ಲದೆ ಬೇರೆ ೫ ಗ್ರಂಥಗಳ ಪಟ್ಟಿಯನ್ನು ಕಳಿಸಿದ್ದಾರೆ.

೩. ಶಿ॥ ಮೂ॥ ಸಿದ್ಧರಾಮ ಶಾಸ್ತ್ರಿಗಳು ಬೆಕ್ಕಿನಾಳ, ಜಿ॥ ವಿಜಾಪುರ ಇವರಿಂದ ಕಾಡಸಿದ್ಧೇಶ್ವರ ವಚನವು ನಮಗೆ ದೊರೆದಿದೆ. ಅಲ್ಲದೆ ಶ್ರೀ ಘನಮಠದಾರ್ಯಕೃತ ೬೩ ಪುರಾತನ ಪುರಾಣ, ಸಕಲಾಗಮ ಶಿಖಾಮಣಿ ಶೂನ್ಯಸಂಪಾದನೆ ಮೊದಲಾದ ಗ್ರಂಥಗಳೂ ಇವರಲ್ಲಿ ಇವೆ.

೪. ರಾ॥ ರಾ॥ ಬಸಲಿಂಗಪ್ಪ ಬಸಪ್ಪ ಅಮರಣ್ಣವರ ಮುದ್ದೇಬಿಹಾಳ ಇವರು ಅಮರೇಶ್ವರ ಕಾವ್ಯ, ಜ್ಞಾನೋದಯ ಪ್ರಬೋಧ, ವೃಷಭಾಂಕತ್ರಿವಿದಿ ಮೊದಲಾದ ಗ್ರಂಥಗಳು ತಮ್ಮಲ್ಲಿದ್ದ ಬಗ್ಗೆ ತಿಳಿಸಿರುವರು.

೫. ಕೈ. ವಾ. ಹೆಚ್ ಹೊನ್ನಪ್ಪ ಮು॥ ತರೀಕೆರೆ ಈ ಮಹನೀಯರು ಕನ್ನಡ ನಿಘಂಟನ್ನು ಬರೆದಿದ್ದಾರೆ.

೬. ಶಿ॥ ಮೂ॥ ಪಂಡಿತ ಶಾಂತವೀರಪ್ಪ ಹೆಡ್‌ಮಾಸ್ತರು ನ್ಯಾಮತಿ ಇವರ ಹತ್ತರ ಅವರ ಅಣ್ಣಂದಿರಾದ ಶಿ॥ ಮೂ॥ ಪಂಡಿತಪ್ರಭಪ್ಪ ಇವರು ಬರೆದ ಕರ್ನಾಟಕ ನಿಘಂಟು ಎಂಬ ಕೋಶವು ಇದೆ.

ಮೇಲ್ಕಂಡ ಎರಡು ನಿಘಂಟಗಳಿದ್ದ ಬಗ್ಗೆ ಶಿ॥ ಮೂ॥ ಬಿ॥ ಶಿವಮೂರ್ತಿ ಶಾಸ್ತ್ರಿಗಳು ಕೀರ್ತನ ಕೇಸರಿ ತುಮಕೂರು ಇವರು ನಮಗೆ ತಿಳಿಸಿದ್ದಾರೆ.

೭. ರಾ॥ ರಾ॥ ಮಡಿವಾಳಪ್ಪ ಸಾಸನೂರು ಹೆಡ್ಡಮಾಸ್ತರ ಕಲಕೇರಿ ಜಿ|| ವಿಜಾಪುರ ಇವರು ಕಡಕೋಳ ಮಡಿವಾಳಪ್ಪನವರ ಪದಗ

ಳನ್ನು ಬಹು ಪರಿಶ್ರಮಪೂರ್ವಕ ಶೋಧಿಸಿ ನಮ್ಮ ಕಡೆಗೆ ಕಳಿಸಿದ್ದಾರೆ. ಅಲ್ಲದೆ ಈ ಮಹಾನುಭಾವರ ಪುರಾಣವನ್ನೂ ದೊರಕಿಸಿದ್ದಾರೆ. ಮತ್ತು ಅವರು ಮಾಡಿದ ವಚನಗಳನ್ನೂ ಬರೆದು ಕಳಿಸಿದ್ದಾರೆ.

೮. ರಾ|| ರಾ|| ಶಿವಪ್ಪ ಮಾಸ್ತರ ಮಳಖೇಡ ಜಿ|| ಕಲಬುರ್ಗಿ ಇವರು ಮೇಲ್ಕಂಡ ಮಡಿವಾಳಪ್ಪನವರ ಪದಗಳನ್ನು ಬರೆದು ಕಳಿಸಿದ್ದಾರೆ. ಇವರು ಭೋಗಲಿಂಗೇಶ್ವರ ಶತಕವನ್ನೂ, ಬೇರೆ ಕೆಲವು ವಚನಗ್ರಂಥಗಳನ್ನೂ ಬರೆದು ಕಳಿಸಿದ್ದಾರೆ. ಅಲ್ಲದೆ ತಮ್ಮ ಗ್ರಾಮದಲ್ಲಿರುವ ಬೇರೆ ಗ್ರಂಥಗಳ ಪಟ್ಟಿಯನ್ನೂ ಕಳಿಸಿದ್ದಾರೆ.

೯. ಶ್ರೀ ಮಹಾನಿರಂಜನ ಶಿವಾನಂದ ಸ್ವಾಮಿಗಳು ಶ್ರೀಮದರಭಾವೀ ಪುಣ್ಯಾರಣ್ಯ ಸಿದ್ಧಮಹಾಸಂಸ್ಥಾನ ಗೋಕಾಕ ಇವರು ಪಾಶುಪತ್ಯಾಗಮವನ್ನು ಬರೆದು ಕಳಿಸಿದ್ದಾರೆ. ಅಲ್ಲದೆ ಇವರಲ್ಲಿ ೧೭೮೧ ಶ್ಲೋಕಗಳುಳ್ಳ ವೀರಾಗಮವೂ ಇದೆ. ಮತ್ತು ತಮ್ಮ ಸಂಗ್ರಹದಲ್ಲಿಯ ಗ್ರಂಥಗಳ ಪಟ್ಟಿಯನ್ನೂ ಕಳಿಸಿದ್ದಾರೆ.

೧೦. ಶಿ|| ಮೂ|| ರೇವಯ್ಯಸ್ವಾಮಿ ಗಲಗಲಿ ಜಿ|| ವಿಜಾಪುರ ಇವರು ತಮ್ಮಲ್ಲಿ ಮೋಳಗೀ ಮಾರಯ್ಯನ ಪುರಾಣ, ಜಂಗಮ ಚರಿತ್ರೆ ಮೊದಲಾದ ಗ್ರಂಥಗಳಿದ್ದದ್ದು ತಿಳಿಸಿರುತ್ತಾರೆ.

೧೧. ದೊಡ್ಡಭಾವೆಪ್ಪ ಚನಬಸಪ್ಪ ಮಾಗಿ ಬೈಲಹೊಂಗಲ ಜಿ|| ಬೆಳಗಾವ ಇವರು ತಮ್ಮ ಗ್ರಾಮದಲ್ಲಿರುವ ನಿರಂಜನ ನೀಲಕಂಠ ಸ್ವಾಮಿಗಳು, ರಾ|| ರಾ|| ಉಳವಪ್ಪ ಜವಳಿ, ಶಿ|| ಮೂ|| ಪುರಾಣಿಕಸ್ವಾಮಿಗಳು, ರಾ|| ರಾ|| ನಾಗನೂರವರು, ರಾ|| ರಾ|| ಗುರುಪಾದಪ್ಪ ಚಲವಾದಿ, ರಾ|| ರಾ|| ರಾಚಪ್ಪ ಶೇಖರೆಪ್ಪ ಕಡಕೋಳ ಈ ಸಭ್ಯಗೃಹಸ್ಥರಲ್ಲಿದ್ದ ಗ್ರಂಥಗಳನ್ನು ಶೋಧಿಸಿ ಅವುಗಳ ಪಟ್ಟಿಯನ್ನು ಕಳಿಸಿದ್ದಾರೆ. ವಿಸ್ತಾರ ಭಯಕ್ಕೆ ಅವುಗಳನ್ನು ಇಲ್ಲಿ ಕೊಟ್ಟಿಲ್ಲ.

೧೨. ಶ್ರೀ ಚನಬಸವಸ್ವಾಮಿಗಳು ವಿರಕ್ತಮಠ ಬ್ಯಾಡಿಗಿ ಇವರು ತಮ್ಮಲ್ಲಿ ಷಟ್‌ಸ್ಥಲತಿಲಕವೆಂಬ ಉದ್ಗ್ರಂಥವು ಇದ್ದುದಾಗಿ ಬರೆದಿದ್ದಾರೆ.

೧೩. ಶಿ|| ಮೂ|| ಪಂಡಿತ ಬಸವಪ್ಪ ಶಾಸ್ತ್ರಿಗಳು ಗದಗ ಇವರು ವೀರಶೈವ ಸಿದ್ಧಾಂತ ದೀಪಿಕಾ ಎಂಬ ಸಂಸ್ಕೃತ ಮಹತ್ವದ ಗ್ರಂಥವನ್ನು

ಕನ್ನಡದಲ್ಲಿ ಭಾಷಾಂತರಿಸಿ ಶಿವಾನುಭವದಲ್ಲಿ ಅಚ್ಚು ಹಾಕಲು ಕಳಿಸಿ ಕೊಟ್ಟಿದ್ದಾರೆ.

೧೪. ರಾ॥ ರಾ॥ ಮಹಾರುದ್ರಪ್ಪ ವಿರೂಪಾಕ್ಷಪ್ಪ ಅಥಣೀ ಮು॥ ಬನಹಟ್ಟಿ ಇವರು ಷಟ್‌ಸ್ಥಲನಿರ್ಣಯವೆಂಬ ಗ್ರಂಥವನ್ನು ಕಳಿಸಿರುವರು.

೧೫. ರಾ॥ ರಾ॥ ಬಸವಲಿಂಗ ಬಸವಾರ್ಯ ಕುಬಸದ ಕಟಕೋಳ ಸಂ॥ ಕೊಲ್ಹಾಪುರ ಇವರು ತಮ್ಮಲ್ಲಿ ಶಿವಾಧಿಕ್ಯರತ್ನಾವಳೀ ಎಂಬ ಸಂಸ್ಕೃತ ಗ್ರಂಥ ರಾಜೇಂದ್ರ ವಿಜಯವೆಂಬ ಕನ್ನಡ ಚಂಪುಕಾವ್ಯ ಮೊದಲಾದ ಗ್ರಂಥಗಳಿದ್ದದ್ದು ತಿಳಿಸಿರುತ್ತಾರೆ.

೧೬. ರಾ॥ ರಾ॥ ಕೊಟ್ರೆಪ್ಪ ಚನಬಸಪ್ಪ ಕುರವತ್ತಿ ಮು॥ ರಾಣೇಬಿನ್ನೂರ ಇವರು ವೈಲಾರಬಸಪ್ಪನವರು ಮಾಡಿದ ಗುರುಕರುಣ ತ್ರಿವಿಧಿಯ ಪದ್ಯಗಳನ್ನು ಸಂಗ್ರಹಿಸಿದ್ದನ್ನು ಬರೆದಿದ್ದಾರೆ.

೧೭. ಶ್ರೀ ಬಸವಲಿಂಗ ಸ್ವಾಮಿಗಳು ಪಂಚಾಕ್ಷರಿಮಠ ಮು॥ ನೀರಲಕೇರಿ ಜಿ॥ ರಾಯಚೂರು ಇವರಲ್ಲಿ ನೀರಲಕೇರಿ ಸ್ವಾಮಿಗಳವರ ಚರಿತ್ರೆ ಮತ್ತು ಅವರ ಅಸಂಖ್ಯ ಪದಗಳು ಇವೆ.

೧೮. ಮ. ರಾ॥ ರಾ॥ ದೊಡ್ಡಬಸಪ್ಪ ತಟ್ಟಿ ಸಾ ಲಕ್ಷ್ಮೇಶ್ವರ ಈ ಮಹನೀಯರು ತಮ್ಮಲ್ಲಿಯ ಮಾಮಲೇದಾರರ ಕಡೆಗೆ ಇದ್ದ ಲಕ್ಷ್ಮೇಶ್ವರದಲ್ಲಿಯ ಶಿಲಾಲೇಖಗಳ ಟಿಪ್ಪಣಿಗಳನ್ನು ಮಾಡಿಸಿ ಕಳಿಸಿದ್ದಾರೆ.

೧೯. ಶಿ॥ ಮೂ॥ ಸಿದ್ಧವೀರಯ್ಯ ಪುರಾಣಮಠ ಗುಳೇದಗುಡ್ಡ ಜಿ॥ ವಿಜಾಪುರ ಇವರು ಆದಲಕ್ಕಿ ಹೊಳೆಹುಚ್ಚೇಂದ್ರ ಮಹಾಸ್ವಾಮಿಗಳು ಕೋಟಿಕಲ್ಲು ಇವರ ಚರಿತ್ರೆಯನ್ನು ಶೋಧಿಸಿ ಒಂದು ದೊಡ್ಡ ಗ್ರಂಥವನ್ನು ಬರೆದು ನಮ್ಮ ಕಡಗ ಕಳಿಸಿದ್ದಾರೆ.

೨೦. ರಾ॥ ರಾ॥ ಚೀಣಾ ಜವಳೀ ಅಂಗಡೀ ನಂಜುಂಡಯ್ಯ ನಂಜನಗೂಡು ಇವರು ಪಾಲ್ಕುರಿಕೆ ಸೋಮಾರಾಧ್ಯ ವಿರಚಿತ ಅಕ್ಷರಾಂಕನ ಗದ್ಯವನ್ನು ಅಚ್ಚುಹಾಕಿಸಲು ನಮ್ಮ ಕಡೆಗೆ ಕಳಿಸಿದ್ದಾರೆ.

೨೧. ರಾ॥ ರಾ॥ ಚಂದ್ರಸಿದ್ಧಲಿಂಗಪ್ಪ ಸಂಸ್ಥಾನ ಗವಿಮಠ ಕಾರಭಾರಿ ಉರವಕೊಂಡೆ ಜಿ॥ ಅನಂತಪುರ ಇವರು ತಮ್ಮಲ್ಲಿ ಗುರುರಾಜಚರಿತ್ರೆ ಮತ್ತು ರಾಘವಾಂಕನಕಾವ್ಯ ಇದ್ದುದಾಗಿ ಬರೆದಿದ್ದಾರೆ.

೨೨. ರಾ|| ರಾ|| ಶಿವಲಿಂಗಪ್ಪ ರೋಡಗಿ ಗೋಕಾಕ, ಇವರು ರಾಮೇಶ್ವರ ಶತಕ ಮತ್ತು ಒಂದು ಹೊಸ ವಚನಗ್ರಂಥವನ್ನೂ ಕಳಿಸಿದ್ದಾರೆ.

೨೩. ರಾ|| ರಾ|| ರೋ. ಫ ಪಾಟೀಲ ಮು|| ಹಾವಸಭಾವಿ ಜಿ|| ಧಾರವಾಡ ಇವರು ಮೋಟೇಬಿನ್ನೂರಲ್ಲಿ ಇದ್ದ ಗ್ರಂಥಗಳ ವಿಷಯವಾಗಿ ಬರೆದಿದ್ದಾರೆ.

೨೪. ಶಿ|| ಮೂ|| ಶಿವಮೂರ್ತಿ ಶಾಸ್ತ್ರಿಗಳು ಕೀರ್ತನ ಕೇಸರಿ ತುಮಕೂರು ಇವರು ತರೀಕೆರೆ ವಿರಕ್ತಮಠದಲ್ಲಿರುವ ಗ್ರಂಥಗಳ ಪಟ್ಟಿಯನ್ನು ಕಳಿಸಿದ್ದಾರೆ.

೨೫. ಶ್ರೀ ಶಿವಯೋಗಿ ಬಸವರಾಜ ಮರಿಗಳು ಮುಕ್ತಗಿರಿಮಠ ಮ್ಯಗಮಲೆ ತಾ. ಚಿಂತಾಮಣಿ ಜಿ|| ಕೋಲಾರ ಇವರು ತಮ್ಮಲ್ಲಿಯ ಶೂನ್ಯಸಂಪಾದನೆಯ ತಾಡವಾಲೆಯ ಗ್ರಂಥವನ್ನು ನಮ್ಮ ಕಡೆಗೆ ಕಳಿಸಿದ್ದಾರೆ.

೨೬. ಶಿ|| ಮೂ|| ಮಹಾದೇವ ಸ್ವಾಮಿಗಳು ಮಮದಾಪುರ ಜಿ|| ವಿಜಾಪುರ ಇವರು ತಮ್ಮಲ್ಲಿಯ ಬೆಡಗಿನ ವಚನಗಳನ್ನು ಕಳಿಸಿದ್ದಾರೆ.

೨೭. ಶ್ರೀ ಶಿವಬಸವಸ್ವಾಮಿಗಳು ಹಾವೇರಿ ಇವರು ತಮ್ಮಲ್ಲಿಯ ಸಟೀಕ ಬಸವೇಶ್ವರ ವಚನಗಳನ್ನೂ ನಮ್ಮ ಕಡೆಗೆ ಕೊಟ್ಟಿರುವರು.

೨೮. ರಾ|| ರಾ|| ಶಿವಲಿಂಗಪ್ಪ ಮುದ್ದೇಬಿಹಾಳ ವಿಜಾಪುರ ಇವರು ಆದ್ಯರ ವಚನಗಳು ಎಂಬ ಹೊಸ ವಚನಗ್ರಂಥವನ್ನು ಕಳಿಸಿಕೊಟ್ಟಿರುವರು.

೨೯. ರಾ|| ರಾ|| ಗಂಗಾಧರಪ್ಪ ಸಾಬೋಜಿ ಬೆಳಗಾವ ಇವರು ನಿಜಾಮರಾಜ್ಯದಲ್ಲಿರುವ ಲಾತೂರಕ್ಕೆ ಹೋದಾಗ್ಗೆ ಅಲ್ಲಿ ತಮಗೆ ದೊರೆದ ಗ್ರಂಥಗಳನ್ನು ನಮ್ಮ ಕಡೆಗೆ ಕೊಟ್ಟಿರುತ್ತಾರೆ.

ಮೇಲ್ಕಂಡ ಮಹಸೀಯರು ಪುರಾತನ ಗ್ರಂಥ ಶೋಧಕ್ಕೋಸ್ಕರ ಈ ಪ್ರಕಾರ ಅತ್ಯಂತ ಶ್ರಮವಹಿಸಿ ಗ್ರಂಥಗಳ ಮಾಹಿತಿಯನ್ನು ನಮಗೆ ಕಳಿಸಿ ಕೊಟ್ಟಿದ್ದಕ್ಕೆ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ.

# ಆವುಗಿ ದೇವಯ್ಯಗಳ ಸಾಂಗತ್ಯ.

(ರಾ|| ರಾ|| ಭೀಮಾಚಾರ್ಯ ಒಡವಿ (ಕಾವ್ಯರತ್ನ) ಮಾಸ್ತರ ತುಮ್ಮಿನಕಟ್ಟಿ ತಾ|| ರಾಣೇಬಿನ್ನೂರು ಈ ಸದ್ಗೃಹಸ್ಥರು ತಮ್ಮ ಗ್ರಾಮದಲ್ಲಿ ಸಿಗುವ ಗ್ರಂಥಗಳನ್ನು ನೋಡಿ ಅವುಗಳ ಗ್ರಂಥಕಾರರು ಯಾರು, ಅವರಕಾಲ, ಗ್ರಂಥಗಳವಿಷಯ, ಅವು ಎಷ್ಟು ದೊಡ್ಡವು ಇವೇ ಮೊದಲಾದ ವಿಷಯುಗಳನ್ನು ಕಂಡುಕೊಂಡದ್ದಲ್ಲವೆ, ಅವುಗಳಲ್ಲಿಯು ಮಹತ್ವದ ಅವತರಣಗಳನ್ನು ಸಹ ಬರೆದು ನಮ್ಮ ಕಡೆಗೆಕಳಿಸಿಕೊಟ್ಟಿದ್ದಾರೆ. ಇವರ ಈ ಪ್ರಯತ್ನವು ಅನುಕರಣೀಯುವಾಗಿದೆ. ಅವರು ಆವುಗಿದೇವಯ್ಯಗಳ ವಿಷಯವಾಗಿ ಬರೆದದ್ದು ನೂತನವಾಗಿರುವದರಿಂದ, ಅದನ್ನು ನಾವು ಇಲ್ಲಿ ಕೊಡುತ್ತೇವೆ. ಸಂಪಾದಕ)

ಈ ಗ್ರಂಥವನ್ನು "ಶಿವಲಿಂಗ" ನೆಂಬ ಕವಿಯು ಬರೆದಿದ್ದಾನೆ. ಇದರಲ್ಲಿ ಆವುಗಿದೇವಯ್ಯನೆಂಬ ಶಿವಶರಣನ ಚರಿತ್ರವಿದೆ. ೭ ಸಂಧಿಗಳು ೮೪೩ ಪದ್ಯಗಳು ಉಂಟು. ಇದರಲ್ಲಿಯು ವರ್ಣನೆಗಳು ಜೈಮಿನಿಯಂತೆ ಬಹು ಸುಂದರವಾಗಿವೆ. ಇದು ಹೊಸ ಗ್ರಂಥವು. ಅವಶ್ಯವಾಗಿ ಅಚ್ಚಾಗತಕ್ಕದ್ದು. ಕಡೆಯಲ್ಲಿ ಹೀಗೆ ಬರೆದದೆ:—

ರುಧಿರೋದ್ಗಾರಿ ಸಂವತ್ಸರದ ಜ್ಯೇಷ್ಠ ಶುದ್ಧ ೧೦ರಲ್ಲು ಬಿಳೀಮಗ್ಗದ ಪೋಬಳಮಗ ನಾರಸಯ್ಯಗೆ......ಮಕ್ಕಳ ಬರಿಸುವ ಗುರುಪಾದಯ್ಯನವರು ಬರಕೊಟ್ಟ ಆವುಗಿ ದೇವಯ್ಯಗಳ ಸಾಂಗತ್ಯ. ಆಯುರಾರೋಗ್ಯಮಸ್ತು. ಐಶ್ವರ್ಯಮಸ್ತು.

ಕವಿಯು ತನ್ನ ಗುರುವನ್ನೂ ಹಿಂದಣ ಕವಿಗಳನ್ನೂ ಹೀಗೆ ಹೊಗಳಿದ್ದಾನೆ.

ನದಿಯು ಕನಕಪುರದೊಳು ಸಲೆ ಪೂಜೆಯೊ।
ಳೊದಗಿ ಎನ್ನಯ ಗುರುವಾರ್ಯ|| ಸದಮಲಾನಂದ
ಸದ್ಗುರು ನಂಜೇಶರು। ಒದಗೆನ್ನ ಹೃದಯ ಜಿಹ್ವೆಯಲಿ ||೧೩||

ಆವಕವಿ, ಇವಕವಿ, ಭವಕವಿ, ನರಕವಿ। ಶಿವಕವಿ
ಗಳಿಗೆಣೆಯಹರೆ|| ಕುವರ ಭಕ್ತರ ಶಿಶು ಶಿವಲಿಂಗ
ಪೇಳ್ದನು। ಅವಿರಳಾತ್ಮಕ ಭಕ್ತಕೃತಿಯ ||೧೫||

ಹರಿಯಣ್ಣನ ಫಾಲ್ಕುರಿಕೆಯ ಸೋಮನ। ಕೆರೆಯ ಪದ್ಮರಸ ಬಾಣಾಂಕನ॥ ವರಕೇಶಿರಾಜ ಭೋಜನ ಮಲುಹಣರೆಂಬ। ಹರ ಕವಿಗಳ ಸ್ತುತಿಸುವೆನು ॥೧೬॥

ಕಾಳಿದಾಸನ ಕಾವ್ಯದ ವಿರುಪಾಕ್ಷನ। ಚಾಳಿವಾಂಕನ ಕಲಿಗ ಣನ॥ ಪೇಳುವೆ ರಾಘವಾಂಕನ ಚೆಂದಿಮರಸರೆಂ। ಬೇಳಿಗೆಯುಳ್ಳ ಕವಿಗಳ ॥೧೭॥

ಕಿಕ್ಕೇರಿಯ ನಂಜರಾಯ ಮಾದರಸರ। ಸತ್ಕವಿ ಭೀಮರಸನ॥ ಮುಕ್ತಾಲ ಭೃಂಗೀಶ ಶಂಕರಾಚಾರ್ಯರ। ಲೆಕ್ಕವಿಲ್ಲದೆ ಬಲಗೊಂಬೆ॥೧೮॥

ಸಾರದ ಚನ್ನಬಸವ ಅಲ್ಲಮಯ್ಯನು। ದಾರಕಂಗಳ ವಿರೂ ಪಾಕ್ಷ॥ ಆರಾಧ್ಯ ಪಂಡಿತ ವೀರಣ್ಣಾಚಾರ್ಯರ। ವಾರತೆಯನು ಬಲ ಗೊಂಬೆ ॥೧೯॥

## ಕಥಾಸಾರಾಂಶವು.

೧ನೇ ಸಂಧಿಃ—'ತ್ರಿಲಿಂಗವೆಂಬ ದೇಶದಲ್ಲಿ 'ಸೊನ್ನಲಪುರ'× ಗ್ರಾಮದೊಳಗೆ ಸಿದ್ಧರಾಮನೆಂಬ ಅರಸನು ಆಳುತ್ತಿದ್ದನು. ಆತನು ಒಳ್ಳೇ ತಪಸ್ವಿಯಾಗಿ ದಿನಕ್ಕೆ ೩ ಬಾರಿ ಕೈಲಾಸಕ್ಕೆ ಹೋಗಿ ಬರುತ್ತಿದ್ದನಂತೆ. ಈತನಲ್ಲಿ ೮ ಸಾವಿರ ಆನೆ, ನೂರೆಂಟು ಕುದುರೆ, ೮ ಲಕ್ಷ ಕಾಲಾಳು ಇದ್ದರು.

೨ನೇ ಸಂಧಿಃ— ಹೀಗೆ ಸಿದ್ಧರಾಮನು ದಂಡಿನ ಬಲದಿಂದಲೂ ಶಿವಕೃಪಾ ಬಲದಿಂದಲೂ ಮುಕ್ತನಾಗಿರುವನೆಂದು ಚಾರರು ಹೇಳಲು ಲಾಳದೇಶದ ದೊರೆಯು ಅದನ್ನು ಕೇಳಿ ಇವನ ಸೊಕ್ಕುಮುರಿಯಬೇಕೆಂದು ಪಾಂಡ್ಯ ಚೋಳ ಚೇರ ಮೊದಲಾದ ಸಮಸ್ತ ದೇಶಗಳ ಅರಸರನ್ನೂ ಕೂಡಿಕೊಂಡು ಯುದ್ಧಕ್ಕೆ ಬಂದನು. ೨ಸಾರೆ ಯುದ್ಧವಾಗಿ ಸಿದ್ಧರಾಮನೇ ಗೆದ್ದನು. (ಯುದ್ಧವರ್ಣನೆ ಚನ್ನಾಗಿದೆ)

೩ನೇ ಸಂಧಿಃ—ಸಿದ್ಧರಾಮನು ತನ್ನ ಊರಲ್ಲಿ ಒಂದು ಹರದೇವಸ್ಥಾನವನ್ನು ಕಟ್ಟಿಸಬೇಕೆಂದು ಮಂತ್ರಿಗೆ ಹೇಳಲು ಆತನು ಚತುರರಾದ ಶಿಲ್ಪಿಗರನ್ನು ಆ ಕಾರ್ಯಕ್ಕೆ ನೇಮಿಸಿದರು. ಅಷ್ಟರಲ್ಲಿ ಆರಾಧ್ಯರು ಬಂದು ಅನೇಕ ನೀತಿಗಳನ್ನು ಉಪದೇಶಮಾಡಿದ್ದಾರೆ.

---

× ಸೊನ್ನಲಾಪುರವೆಂದರೆ—ಸೊಲ್ಲಾಪುರವಾಗಿರಬಹುದೆಂದು ತೋರುತ್ತದೆ. ಅಲ್ಲಿ ಸಿದ್ಧರಾಮೇಶ್ವರನ ಗುಡಿಯೂ ಇದೆ. ತ್ರಿಲಿಂಗದೇಶದ ವರ್ಣನೆಯು ಹಿಂದಕ್ಕೆ ಶಿವಾನುಭವದಲ್ಲಿ ಬಂದಿರುವದು.

**೪ನೇ ಸಂಧಿ:**—ಸೊನ್ನಲಾಪುರದಲ್ಲಿ ಅವುಗಿದೇವಯ್ಯನೆಂಬ ಶಿವಭಕ್ತ ನಿದ್ದನು. ಈತನಿಗೆ 'ರುದ್ರಾಣಿ' ಯೆಂಬ ಹೆಂಡತಿಇದ್ದಳು.

ಇಂತಪ್ಪ ಅವುಗಿದೇವನಕಾಂತೆಯು......ಚಲುವೆ ಚದುರೆ ವಿದ್ಯಾತೀತೆಯು॥ ಸಂತೋಷ ಶರಧಿ...ರುದ್ರಾಣಿಯುವ್ವನೊಪ್ಪಿದಳು ॥೩

ವರರೂಪಿನೊಳಗೆ ರತಿಯು ಸಿರಿಯೊಳು ಗೋವಿಂದನರಸಿ ಜಾಣ್ಕೆಗೆ ವಾಣಿಯು॥ ಪುರುಷ ಭಕ್ತಿಯೊಳರುಂಧತಿಯುರು ಸರಿಯಲ್ಲ। ವರ ರುದ್ರಾಣಿಯುವ್ವಸಿಗೆ॥

ಒಂದು ದಿನ ರುದ್ರಾಣಿಗೆ ಒಂದು ಸ್ವಪ್ನ ಬೀಳಲು ಅದನ್ನು ಕೇಳಿ ಅವುಗಿದೇವಯ್ಯನು ಈ ಊರನ್ನು ಬಿಟ್ಟು ಕಲ್ಯಾಣಕ್ಕೆ ಹೋಗಿ ಸುಖದಿಂದಿರೋಣವೆಂದು ಹೇಳಿದನು.

ಮುಗ್ಗವ ಬಿಟ್ಟ ನೆಯ್ಗಯ ಬಿಟ್ಟು ಮನೆಯೊಳು। ಹಗ್ಗಹಂಗಡ ನೆಲ್ಲ ವುಳದು॥ ಭರ್ಗನ ಪುರದೊಳೋಲಾಡುವ ಶಕುನದ। ಸುಗ್ಗಿಯಾದುದು ನಮಗೆನಲು॥ ॥೪೦॥

ಇತ್ತ ಸಿದ್ಧರಾಮನ ಪವಾಡಗಳು ಊರಲ್ಲಿ ಅನೇಕ ತೋರಿದವು. (ಎಲ್ಲದರ ವರ್ಣನೆ ಬಹು ಚನ್ನಾಗಿದೆ.) ಸಿದ್ಧರಾಮನು ಹರದೇವಾಲಯ ಕಟ್ಟಿಸಿ, ನಂತರ ಪುರ ಜನರುಗೆಲ್ಲ ಧಾನ್ಯದ ಕೂಟ್ಟಣವನ್ನು ಕಟ್ಟಿಸಲಿಕ್ಕೆ ಹಾಕಿಸಿದನು. ಅದರಂತೆ ಅವುಗಿದೇವಯ್ಯನ ಮನೆಗೂ ಹಾಕಿಸಲು ಈತನು ನರರ ಸೇವೆಗೆ ಈ ಶರೀರವನ್ನು ಬಳಲಿಸಲಾರೆನೆಂದು. ಹೇಳಿದನು. (ಇಲ್ಲಿ ಅನೇಕ ಶಿವಶರಣರ ಮಹಾತ್ಮ್ಯಗಳನ್ನೂ ನೀತಿಗಳನ್ನೂ ಹೆಂಡತಿಯ ಎದುರಿಗೆ ಹೇಳಿದ್ದಾನೆ.) ಒಂದೆರಡನ್ನಾದರೂ ಬರೆಯದೆ ಇರಲಾರೆವು.

ಧೊರೆತನವೆಂದೆಂಬ ಉರಿಯ ಬೆಟ್ಟದ ಮೇಲೆ। ಅರುಹೆಂಬ ಅರಗಿನ ಮರನು॥ ವರಫಲವಾಗಲಾಪವೆ ಸಿದ್ಧರಾಮನು। ಮರದನ ಯ್ಯಯ್ಯೊ ಮಾನಿನಿಯೆ ॥೪೧॥

ಅಂಗದ ಮೇಲಿನ್ನು ಲಿಂಗವಿರಲು ಪ್ರತಿ। ಲಿಂಗದ ಭಜನೆಗಳೇಕೆ॥ ಬಂಗಾರವಿದ್ದರೆ ಗುಂಜಿಗೆ ಮನವಿಡುವದು। ಹಿಂಗದು ಸಿದ್ಧರಾ ಮನಿಗೆ ॥೪೩॥

ಕೈ ಸೋರೆಕಾಯು ಕಾಸಿಯ ಹೊಳಿಯೊಳಗದ್ದೆ।.........ಅ ವೃತವಹುದೇ॥ ವೈ ತೊಳೆದಡೆ ಮಾಡಿದ ಪಾಪವಿದ್ದಂತೆ। ಕೈವ ಲ್ಯಕವ ನೈದುವನೆ ॥೪೭॥

ಅರ್ಥವ ಗಳಿಸಿಯನರ್ಥವ ಮಾಡುವ। ವ್ಯರ್ಥ ಜೀವಿಗೆ ಸುಖ ವುಂಟೆ॥ ಮರ್ತ್ಯಮಾನಿಸರು ಮಹಾತ್ಮಗೆ ಸರಿಯೆ-ನೆ। ಧೂರ್ತಕಾಲ ನಿಗೊಳಗಹರು॥

**೫ನೇ ಸಂಧಿಃ**— ಆವುಗಿದೇವಯ್ಯನು ಕಲ್ಯಾಣಕ್ಕೆ ಹೊರಟನು. ತನ್ನ ಸಾಮಾನುಗಳನ್ನೆಲ್ಲ ೩ಹೊರೆ ಮಾಡಿದನು. ೨ಹೊರೆಗಳನ್ನು ಗಂಡ ಹೆಂಡರು ತೆಗೆದುಕೊಂಡು ಹೋದರು. ಇನ್ನೊಂದನ್ನು ಶಿವನಿಂದ ತರಿಸಿಕೊಂಡನು. (ಇಲ್ಲಿ ತನ್ನ ಸಾಮಾನುಗಳನ್ನು ಕಳಕೊಂಡದ್ದನ್ನು ಮೇಲಿನ ೪ನೇ ಸಂಧಿಯ ೪ಂನೇ ಪದ್ಯವನ್ನು ನೋಡಿದರೆ ಇವನು ನೇಯಿಗೆಯ ಕಾಯಕದವನೆಂಬುದು ಸ್ಪಷ್ಟವಾಗುವದು.) ಕಲ್ಯಾಣದಲ್ಲಿ ಅನೇಕ ಶಿವಶರಣರು ಇವವನ್ನು ಸತ್ಕರಿಸಿದರು.

**೬ನೇ ಸಂಧಿಃ**— ಇತ್ತಲಾಗಿ ಈಶ್ವರನೇ ಆವುಗಿದೇವಯ್ಯನ ವೇಷದಿಂದ ಸೊನ್ನಲಪುರದಲ್ಲಿರಹತ್ತಿದನು. ಇದು ಸಿದ್ಧರಾಮನಿಗೆ ತಿಳಿದು ಈಶ್ವರನನ್ನು ಸ್ತೋತ್ರ ಮಾಡಿ ತನ್ನ ಬಲ ಸಹಿತ ಕಲ್ಯಾಣಕ್ಕೆ ಹೋದನು.

**೭ನೇಸಂಧಿಃ**—ಸಿದ್ಧರಾಮನು ಆವುಗಿದೇವಯ್ಯನನ್ನು ಕಂಡು ಶರಣಾಗತನಾಗಿ ಅವನನ್ನು ಬೇಡಿಕೊಂಡನು. ಆಗ ಆವುಗಿದೇವಯ್ಯನು ಸಿದ್ಧರಾಮನಿಗೆ ಜ್ಞಾನ ಬಂದಿತೆಂದು ಸಂತೋಷಪಟ್ಟು ಆತನಿಗೆ ಬುದ್ಧಿವಾದವನ್ನು ಹೇಳಿದನು. ಹೆಂಡತಿ ಸಹಿತವಾಗಿ ಶಿವನ ದೇಹದಲ್ಲಿ ಐಕ್ಯವಾದನು.

ಕಡೆಯಲ್ಲಿ ಈ ಕೆಳಗಿನ ಪದ್ಯಗಳಿವೆ.

ಬರೆ ಬರೆಯೆಂದೆನ್ನ ಕರಸ್ಥಲಧೀಶನು। ಪೊರೆದೊರೆದೊಂದೊಂದನುಸುರೆ॥ ಬರೆದೆನಲ್ಲದೆ ಎನ್ನ ಹಿರಿದಿನಮಾತಲ್ಲ। ಗುರುನಂಜ ಎಯತಾಬಲ್ಲ ॥೧೧೧॥

ಸುತತ್ತ್ವರ ಸಿಂಹಾಸನಧೀಶಕಪ್ಪಿನ। ಮುಕ್ತಿದಾಯಕ ನಂಜೇಶ್ವರನಾ ಹಸ್ತದಿ ಜನಿಸಿದ ಭೃತ್ಯಶಿವಾನಂದ। ವಿಸ್ತರಿಸಿದ ನಿಜ ಕಥೆಯ॥

ಕಲ್ಲೊಸರವೆ ಕಡಿದೊಣಗಿಬಿದ್ದಿಹಮರ। ಫುಲ್ಲೈಸವೆ ಕೊಯಿ ಕೊಯಿದು। ಪುಲ್ಲೆಲ್ಲ ಚಿಗುರವೆ ಶಿವಲಿಂಗಾರಾಧ್ಯನ। ಸೊಲ್ಲಿನ ಕೃತಿಯ ರಚನೆಗೆ॥

ದುಂದುಭಿ ಸಂವತ್ಸರದ ಕಾರ್ತಿಕ। ನಂದ ಬಹುಳ ಪಾಡ್ಯದ ತಿಥಿಗೆ॥ ಸಂಧಿಯೊಳಹುದೆಂಟು ನೂರಾನಾಲ್ವತ್ತುಮೂ। ರಂದದ ಪದಕೆ ಸಂಪೂರ್ಣ॥

ಈ ಓಲೆಯ ಪ್ರತಿಯಲ್ಲಿ ಹಳಗನ್ನಡ ೞ ಳ ಅಕ್ಷರಗಳು ಕಾಣಬರುವದರಿಂದ ಇದು ಪ್ರಾಚೀನವಾಗಿರಬಹುದು.

---

## ೬೬. ಶಿಕ್ಷಾಪಾದೋದಕ ಸ್ಥಲ

**ಸೂತ್ರಃ—** ಇಂತು ದೀಕ್ಷಾಗುರು ತತ್ವದಲ್ಲಿ ಇಷ್ಟಪಾದೋದಕ ಸ್ವರೂಪವನ್ನೈದಿದ ಲಿಂಗವು ಶರಣನಂಗದಲ್ಲಿ ಶಿಕ್ಷಾಗುರು ಮುಖದಿಂದ ದೃಷ್ಟಪಾದೋದಕ ಸ್ವರೂಪವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಶಿಕ್ಷಾಪಾದೋದಕ ಸ್ಥಲವಾದುದು.

**ವಚನಃ—** ಕರುಣಜಲ ವಿನಯಜಲ ಸಮತೆಜಲ ಈ ತ್ರಿವಿಧ ಜಲಂಗಳಲ್ಲಿ ಕರುಣಜಲವೇ ಗುರು ಪಾದೋದಕವೆನಿಸಿತ್ತು ನೋಡಾ. ವಿನಯಜಲವೇ ಲಿಂಗಪಾದೋದಕವೆನಿಸಿತ್ತು ನೋಡಾ. ಸಮತೆಜಲವೇ ಚರಪಾದೋದಕವೆನಿಸಿತ್ತು ನೋಡಾ. ಈ ತ್ರಿವಿಧೋದಕದಿಂದ ಸಂಚಿತ ಕರ್ಮನಾಸ್ತಿಯಾದುದು ಗುರು ಪಾದೋದಕದಿಂದ. ಪ್ರಾರಬ್ಧಕರ್ಮನಾಸ್ತಿಯಾದುದು ಲಿಂಗ ಪಾದೋದಕದಿಂದ. ಆಗಾಮಿಕರ್ಮ ನಾಸ್ತಿಯಾದುದು ಚರಪಾದೋದಕದಿಂದ. ಈ ತ್ರಿವಿಧೋದಕದಿಂದಲ್ಲಿ ಆ ತ್ರಿವಿಧಕರ್ಮನಾಸ್ತಿಯಾದುದು. ಇದು ಕಾರಣ ಈ ತ್ರಿವಿಧೋದಕವನು ಕೂಡಲಚನ್ನಸಂಗ ನಿಮ್ಮ ಶರಣನೇ ಬಲ್ಲನು ॥೨॥

**ಪದ—ರಾಗ—ನಾಟಿ.**

ಲಿಂಗೋದಕ ಪಾದೋದಕವಲ್ಲದೆ ಅಂಗವಿಸಲು ಅನ್ಯೋದಕ ಪಾತಕ ॥ಪ॥

ಶರಣುವೊಕ್ಕು ಗುರು ಲಿಂಗ ಜಂಗಮದ ಚರಣವ ತೊಳೆದು ಪಾದೋದಕವಾ। ಧರಿಸಿದಡದು ಪರಮಾಮೃತವಲ್ಲದೆ ಸ್ವೀಕರಿಸಲು ಪ್ರಳಯ ಜಲನೋಡಾ ॥೧॥

ಮನಕರಗಿ ತನುಕೊರಗಿ ಪಾದೋದಕವ ಧರಿಸದೆ ಡಂಭಕತನದಿಂದ। ಅನುಕರಿಸಿಕೊಂಡಡೆ ಭವಮಲ ಬದ್ಧಮಲ ನಿರ್ಮಲವೆಂತಪ್ಪುದೋ ॥೨॥

ಚಂದ್ರೋದಯವಾಗಲು ಚಂದ್ರಕಾಂತದ ಬಿಂದು ಕರಗಿಹರಿವಂದದಲಿ। ಸಂದಳಿದು ಲಿಂಗದೊಳು ತನುಕರಗಿ ನಿಂದಡಾತನೆ ಪಾದೋದಕ ಸಂಬಂಧೀ ।೩॥

ಆಕಾಶ ಗಂಗೆಯ ನಾಕಾಶದಿಂದ ವಿವೇಕಿಸಿ ಬೇರಿನ್ನಬಪ್ಪುದೆ। ಏಕೀಕರಿಸಿದ ಪಾದೋದಕ ಬೋಧಕರ ರೂಪವಾಗಿಪ್ಪುದು. ॥೪॥

ಮಾಯಾ ಸಂಗ್ರಹ ಮಲವ ತೊಳೆದು ನಿರ್ಮಾಯ ಸ್ವರೂಪವ ನೈದಿಸಿ ಕಾಯ್ವುದು। ಹುಲಿಗೆರೆಯ ವರದ ಸೋಮೇಶ್ವರನ ಅಕ್ಷಯ ಾನಂದ ಪಾದೋದಕ ॥೫॥

**ಮತ್ತೇಭಃ**— ಕಲುಷಾ ನೀಕವನ್ನೈದೆ ಸಂಹರಿಸುಗುಂ ಜನ್ಮಾದಿ ದೋಷಂಗಳಂ। ನೆಲೆಯೊಂದೋಡಿಸುಗುಂ ಬಳಿಕ್ಕುರೆ ಮನೋ ನೈರ್ಮಲ್ಯಮಂ ಮಾಡುಗುಂ॥ ವಿಲಸದ್ಜ್ಞಾನಮನಿಂತು ತಾಂ ಬೆಳೆಯಿಕುಂ ತಜ್ಜಂಗಮೋತ್ಕೃಷ್ಟ ಪಾ ಜ್ಜಲ ವತ್ಯಂತ ಸುಖಾಸ್ಪದಂ ನಿಜವಲಾ ಶ್ರೀ ಸಿದ್ಧಲಿಂಗೇಶ್ವರಾ ॥೮೨॥

**ಗದ್ಯಃ**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಎಂಭತ್ತೆರಡನೆಯದಾದ ಶಿಕ್ಷಾಪಾದೋದಕ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೬೭. ಜ್ಞಾನಪಾದೋದಕಸ್ಥಲ

**ಸೂತ್ರಃ**— ಇಂತು ಶಿಕ್ಷಾಗುರು ತತ್ವದಲ್ಲಿ ದೃಷ್ಟಪಾದೋದಕ ಸ್ವರೂಪವನ್ನೈದಿದ ಲಿಂಗವು ಶರಣನಂಗದಲ್ಲಿ ತ್ರಿಪುಟಿಯು ನಷ್ಟವಾದ ಮಹಾಜ್ಞಾನ ಗುರುಮುಖದಿಂದ ಪರಮಾನಂದೋದಕವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಜ್ಞಾನಪಾದೋದಕ ಸ್ಥಲವಾದುದು.

**ವಚನಃ**— ಉತ್ತರ ದಕ್ಷಿಣ ಪೂರ್ವ ಪಶ್ಚಿಮ ಬಂದ ಬಟ್ಟೆಯ ನಾಲಿಸದೆ ವಾಯು ಬಂಧನವ ಮಾಡಿ ಪಶ್ಚಿಮ ದ್ವಾರದಲ್ಲಿ ನಿವಾಸಿಯಾಗಿರ್ದ ಶರಣನು ಅಧೋನಾಳದಲ್ಲಿ ನಿರುತ ಮಧ್ಯನಾಳದಲ್ಲಿ ನಿರಾಳ ಊರ್ಧ್ವನಾಳದಲ್ಲಿ ಸುರಾಳ ವ್ಯೋಮ ಕುಸುಮ ಕೊನೆಯ ಶಶಿಕಲಾವೃತವ ಧರಿಸಿದ ಘಟಕ್ಕೆ ಕೇಡಿಲ್ಲಾಗಿ ಲಿಂಗಕ್ಕೆ ಪ್ರಾಣಕ್ಕೆ ಒಂದೆಂಬ ಕಾರಣ ಅಚಳವೆನಿಸಿತ್ತು. ಇದು ಕಾರಣ ಕೂಡಲಚನ್ನಸಂಗಯ್ಯ ಎನ್ನ ಪ್ರಾಣಕ್ಕೆ ಭವವಿಲ್ಲ ಬಂಧನವಿಲ್ಲ ॥೩॥

ಪದ—ರಾಗ—ಶ್ರೀರಾಗ

ಜ್ಞಾನಗುರುವಿನೊಳೈಕ್ಯವಾಗಿ ಸುಜ್ಞಾನಾಮೃತವ ಸೇವಿಸಿದಾತನೇ ಪರಮಸುಖಿ ॥ಪ॥

ಅಮೃತ ಅಮೃತ ಒಂದಾದಂತೆ ಕೇವಲ ಸಮರಸ ರೂಪಾಗಿ ಸಮ ಹಿತ ಜ್ಞಾನಾನಂದ ಜಲದೊಳಗೆ ವಿಮಲನಾದ ನಿರುಪಮ ಶರಣ ॥೧॥

ಕರಗಿ ತಿಳಿದು ತನ್ನೊಳು ತಾನೆ ಘೃತನೆರೆಗಟ್ಟಿಗೊಂಡು ರೂಪಾದಂತೆ ಪಾವನ ತರ ಸುಜ್ಞಾನ ರಸವೇ ತುಂಬಿ ತುಳುಕುತಿಹ ಪರಮಾನಂದ ಶರಣ ॥೨॥

ಉದಕವನುಂಡ ಕಬ್ಬಸದಲ್ಲಿ ಮತ್ತುದಕವ ಬೇರೆತೆಗೆಯಲುಂಟೆ ಕೋಮಲ। ಜ್ಞಾನಪಾದೋದಕದಲ್ಲಿ ತೃಪ್ತಿವಡೆದ ಶರಣ ನಿಜ ಭರಿತನು॥೩॥

ತಾನೆ ಗುರು ತಾನೆ ಲಿಂಗ ತಾನೆ ಜಂಗಮ ತಾನೆ ಪ್ರಸಾದ ತಾನೆ ಪಾದೋದಕ। ತಾನೆ ಪರಮಾನಂದ ಶರಣ ಸುಖಿ ತಾನೆ ನಿತ್ಯ ನಿರಂಜನನು ॥೪॥

ನಿರಾಳದ ಪರಮ ಸುಖದ ರಸದೊಳಗೆರಡರಿಯದೆ ಮಲುಗಿಪ್ಪ ಅಜಾತ ಕೂಡಲಚನ್ನಸಂಗಯ್ಯನಲ್ಲಿ ಭಕ್ತಿಯ ತವನಿಧಿ ಶ್ರೀಬಸವಣ್ಣ ॥೫॥

**ಶಾರ್ದೂಲ**:— ನೀನಾನೆಂಬೆರಡಿಲ್ಲದಿರ್ಪ ಘನವಿಶ್ವಾತೀತ ಸುಜ್ಞಾನಿಗಿಂ। ತೇನುಂ ತೋರದೆ ತನ್ನಿರಾವರಣ ರೂಪಾಗಿರ್ಪ ಸಂವಿದ್ರಸಂ॥ ತಾನಾಕೀರ್ಣಮದಾಗಿ ನಾಡೆ ಸ್ರವಿಸುತ್ತಿರ್ಕುಂ ಬಳಿಕ್ಕಾಸುಖ। ಕ್ಕೇನೊಂದಂ ಸಮಗಾಣೆನಾತನಸಮಂ ಶ್ರೀಶಿದ್ಧಲಿಂಗೇಶ್ವರಾ ।೮೩॥

**ಗದ್ಯ**:— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಎಂಬತು ಮೂರನೆಯದಾದ ಜ್ಞಾನಪಾದೋದಕ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೬೪. ಕ್ರಿಯಾನಿಷ್ಪತ್ತಿಸ್ಥಲ

**ಸೂತ್ರ**:— ಇಂತು ದೀಕ್ಷಾ ಪಾದೋದಕ ಶಿಕ್ಷಾ ಪಾದೋದಕ ಜ್ಞಾನ ಪಾದೋದಕವೆಂಬ ತ್ರಿವಿಧ ಸ್ಥಲಂಗಳೇಕವಾದ ಲಿಂಗವು ಶರಣನ

ಸತ್ಕ್ರಿಯೆಯಲ್ಲಿ ನಿಷ್ಪತ್ತಿಯ ಸ್ವರೂಪವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಕ್ರಿಯಾನಿಷ್ಪತ್ತಿಸ್ಥಲವಾದುದು.

**ವಚನಃ**— ಲಿಂಗವಿಡಿದು ಲಿಂಗಮಹೇಶ್ವರನೆನಿಸಿಕೊಂಬೆ. ಲಿಂಗ ವಿಡಿದು ಲಿಂಗ ಪ್ರಾಣಿ ಎನಿಸಿಕೊಂಬೆ.ಲಿಂಗವಿಡಿದು ಲಿಂಗವೆನಿಸಿಕೊಂಬೆ ಅರಿವರತು ಕ್ರಿಯಾನುಭಾವ ವಿಡಿದು ಮೀರಿ ಕೂಡಲ ಚನ್ನ ಸಂಗ ತಾನಾದ ॥೪॥

**ಪದ— ರಾಗ—ವರಾಳಿ**

ಬಸವನೇ ಶರಣೆನಗೆ ತನು ಮನ ಧನದಲ್ಲಿ ವಂಚನೆ ಇಲ್ಲದ ಬಸ ವನೇ ಶರಣೆನಗೆ ॥ಪ॥

ಗುಣರಹಿತನಾಗಿರ್ದ ಮಹಂತನು ಲಿಂಗ ಜಂಗಮ ಪ್ರಸಾದ ಸನ್ನಿ ಹಿತನು। ಹಿಂಗದ ತ್ರಿವಿಧ ಸ್ಥಲ ಸಂಪನ್ನಮಯನಾಗಿ ತೋರಿದ ಬಸ ವನೇ ಶರಣೆನಗೆ ॥೧॥

ಪಂಚಭೌತಿಕದ ಸಂಚುವನಳಿದನು ಪಂಚೇಂದ್ರಿಯ ಲಿಂಗ ಸಸ್ಮಿತ ಕ್ರಿಯಳಿದು। ನಿಷ್ಕ್ರಿಯದಲ್ಲಿ ನಿಂದನು ನಿಷ್ಕ್ರಿಯ್ಯ ಮೀರಿ ನಿಷ್ಪತ್ತಿ ಯಾದ ಬಸವನೇ ಶರಣೆನಗೆ ॥೨॥

ಘನಮನವೇಧಿಸಿ ಅನುಪಮ ತಾನಾಗಿ ಘನಲಿಂಗವಲ್ಲಿ ಮನತಲ್ಲೀ ಯ್ಯವಾದನು। ಅಂಗಹಿಂಗಿ ಲಿಂಗಾಂಗವಾಗಿ ಸರ್ವಾಂಗ ಲಿಂಗಮಯ ನಾಗಿ ತೋರಿದ ಬಸವನೇ ಶರಣೆನಗೆ ॥೩॥

ಗುರು ಲಿಂಗ ಜಂಗಮ ಪ್ರಸಾದದ ಇರವನೊಳಕೊಂಡು ನಿಶ್ಚಿಂತ ನಾದನು। ಪರಕೆ ಪರಾನಂದವಾದ ನಿರುಪಮಘನ ಗುರುವಾದ ಬಸವನೇ ಶರಣೆನಗೆ ॥೪॥

ಪ್ರಾಣವೇ ಲಿಂಗವೆಂಬ ಸಂದಳಿದು ಲಿಂಗವೇ ಪ್ರಾಣವೆಂದೆನಿಸಿ ಕೊಂಬ ಕೂಡಲಚನ್ನಸಂಗನೆಂಬ ಶಬ್ದವಡಗಿ ನಿಶ್ಶಬ್ದಾತೀತ ಮಹಂತ ನಾದ ಬಸವನೇ ಶರಣೆನಗೆ ॥೫॥

**ಮತ್ತೇಭಃ**— ಫಲದುತ್ಪತ್ತಿಗೆ ಕಾರಣಂ ಕುಸುಮವಂತಾಪುಷ್ಪವಂ ನೆಟ್ಟನಾ। ಫಲವೇ ನಾಶವನೈದಿಕುಂ ನಿಜವದೆಂತು ತಾ ಮಹಾಜ್ಞಾನದು

ಜ್ವಲನಂ ಕರ್ಮದಿನಾದಿ ಕಾರಣವೆನಿಪ್ಪ ಕರ್ಮವೇ ನಾಶಮಂ। ಸಲೆ ತಾಜ್ಞಾನವಿನ್ನೈದಿಗುಂ ಶಿವಶಿವಾ ಶ್ರೀಸಿದ್ಧಲಿಂಗೇಶ್ವರಾ ।೮೪॥

ಗದ್ಯ:— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಎಂಬತ್ತು ನಾಲ್ಕನೆಯದಾದ ಕ್ರಿಯಾನಿಷ್ಪತ್ತಿಯಾದ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೬೯. ಭಾವನಿಷ್ಪತ್ತಿಸ್ಥಲ

ಸೂತ್ರ:— ಇಂತು ಕ್ರಿಯಾನಿಷ್ಪತ್ತಿಯಾದ ಲಿಂಗವು ಶರಣನ ಅಂಗದಲ್ಲರತು ಪ್ರಾಣನ ಕೊನೆಯ ಮೊನೆಯ ಮೇಲೆ ತೋರುವ ಭಾವದೊಳಗೆ ಭಾವವಾಗಿ ತೋರಿ ಆ ಭಾವನಿಷ್ಪತ್ತಿ ಸ್ವರೂಪವನ್ನೈದಿದ ಭೇದವೆಂತಿರ್ದದೆಂದಡೆ ಮುಂದೆ ಭಾವನಿಷ್ಪತ್ತಿಸ್ಥಲವಾದುದು.

ವಚನ:— ಸುಳಿದು ಸುತ್ತುವ ಮನದ ವ್ಯವಹಾರವುಳ್ಳನ್ನಕ್ಕ ಶಿವಪಥವ ನಾನರಿಯೆ, ಅರಿಯೆನು! ಅರಿಯೆನು!! ಅರಿಯೆನು!!! ಗುಹೇಶ್ವರನ ನಿಜವನರಿದ ಬಳಿಕ ಲೋಕದ ಗತಿಯನು ನಾನರಿಯೆ, ಅರಿಯೆನು! ಅರಿಯೆನು!! ಅರಿಯೆನು!!! ॥೫॥

ಪದ— ರಾಗ—ರಾಮಕ್ರಿ

ಭಾವಭಾವಿಸುತ ನಿರ್ಭಾವವಾದುದೇ ಲಿಂಗೈಕ್ಯವು. ॥ಪ॥

ಗುರುಕಾರುಣ್ಯವ ಪಡೆದು ಲಿಂಗದಲನು ಗ್ರಾಹಕನಾಗಿ ಅಂಗಲಿಂಗವೇಧಿಸಿ ಕೊಳಲದು ಮಾರಗ ಕ್ರೀಯೆಂದೆನಿಸಿತ್ತು ॥೧॥

ಮಾರಗ ಕ್ರಿಯ ಸಂಪಾದಿಸಿ ಲಿಂಗಾಯತ ಸ್ವಾಯತವಾಗಿ ಒಳಹೊರಗೆನ್ನದೆ ವೇಧಿಸಿ ಅದು ಮೀರಿಕ್ರೀಯೆಂದೆನಿಸಿತ್ತು. ॥೨॥

ಮೀರಿದ ಕ್ರಿಯ ಸಂಪಾದಿಸಿ ತನು ಮನ ಲಿಂಗವೇಧಿಸಿ ಮನವು ಲಿಂಗವಾಗಿ ನಿರ್ಭಾವಿಸುವಲ್ಲಿ ಪ್ರಾಣಲಿಂಗವೆಂದೆನಿಸಿತ್ತು ॥೩॥

ಪ್ರಾಣಲಿಂಗವನು ಸಂಪಾದಿಸಿ ಲಿಂಗಪ್ರಾಣವನು ವೇಧಿಸಿ ಪ್ರಾಣಲಿಂಗವಾಗಿ ಲಿಂಗಪ್ರಾಣವಾಗಿ ಪ್ರಪಂಚುಗೆಟ್ಟುದು ತೆರಹಿಲ್ಲದೆ ॥೪॥

ಅವಿರಳ ಲಿಂಗ ಜಂಗಮ ಯಥಾಲಿಂಗ ತಥಾಶರಣ ಕೂಡಲ ಚನ್ನಸಂಗನಲ್ಲಿ ಭೇದವಿಲ್ಲದುದಚ್ಚ ಲಿಂಗೈಕ್ಯವು ॥೫॥

**ಶಾರ್ದೂಲ:**— ವೃತ್ತಿಕ್ಷೀಣವನ್ನೈದೆ ಯಂತದರಿ ನಾಚಿತ್ತಂ ಕ್ಷಯಂ ಮತ್ತಮಾ। ಚಿತ್ತಂ ಸಂಕ್ಷಯಮಾದ ನಿರ್ಮಲ ಮಹಾ ಸುಜ್ಞಾನಿಯಾ ತಚ್ಛಿವ॥ ಮತ್ತಂ ಭಾವಮದೇ ವಿಶಿಷ್ಟ ತರದಿಂದಂ ಶೋಭಿಸುತ್ತಿರ್ಪುದಿಂ। ತತ್ತಂ ಚಿತ್ತಿನ ರೂಪದಿಂ ಪಳಿಕಿಸಲ್ ಶ್ರೀಶಿದ್ಧಲಿಂಗೇಶ್ವರಾ ॥೮೫॥

**ಗದ್ಯ:**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಎಂಭತ್ತೈದನೆಯದಾದ ಭಾವನಿಷ್ಪತ್ತಿ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೭೦. ಜ್ಞಾನನಿಷ್ಪತ್ತಿಸ್ಥಲ

**ಸೂತ್ರ:**— ಇಂತು ಭಾವದಲ್ಲಿ ನಿಷ್ಪತ್ತಿಯಾದ ಲಿಂಗವು ಶರಣನ ತ್ರಿಪುಟಿನಷ್ಟವಾಗಿ ಅರಿವಿನೊಳಗೆ ತಾನೇಯಾಗಿ ನಿಂದು ಆ ಅರಿವು ನಿಷ್ಪತ್ತಿಯಾದ ಭೇದವೆಂತಿರ್ದುದೆಂದಡೆ ಮುಂದೆ ಜ್ಞಾನನಿಷ್ಪತ್ತಿ ಸ್ಥಲವಾದುದು.

**ವಚನ:**— ಹಿಡಿದ ಕೈಯ್ಯ ಮೇಲೆ ಕತ್ತಲೆಯಯ್ಯಾ! ನೋಡುವ ಕಂಗಳ ಮೇಲೆ ಕತ್ತಲೆಯಯ್ಯಾ! ನೆನೆವ ಮನೋಭಾವದ ಮೇಲೆ ಕತ್ತಲೆಯಯ್ಯಾ! ಕತ್ತಲೆ ಎಂಬುದು ಇತ್ತಲೆಯಯ್ಯಾ ಗುಹೇಶ್ವರನೆಂಬುದು ಅತ್ತಲೆಯಯ್ಯಾ ॥೬॥

ಪದ—ರಾಗ—ಧನ್ಯಾಸಿ

ನಯನಂ ಸನಯನಂ ಪರವಿಲ್ಲೆಂದುದಾಗಿ। ಜ್ಞಾನಂ ನಾನಾ ಭವ ನೋಟಂ ತಾನಲ್ಲ ॥ಪ॥

ಅರುವಿನ ಭಾವ ಪರತಂತ್ರವಿಲ್ಲದ ನಿಷ್ಪತ್ತಿ। ಮರಹಿನ ಭಾವ ಪರತಂತ್ರವಿಲ್ಲದ ನಿಷ್ಪತ್ತಿ ॥೧॥

ಅಕ್ಷಯದಿಂದರಿವು ನೆಲಸಿದ ಸುಚರಿತಂಗೆ। ಸಾಕ್ಷಯದಿಂದುರಿಸದ ನಿರ್ಣಯ ಚರಿತಂಗೆ ॥೨॥

ಅಗ್ನಿ ಸಖನ ಭ್ರಮರ ಬ್ರಹ್ಮರಂಧ್ರನಿಹಾರ ಪ್ರಾಣ। ಶ್ರೀ ಗುಹೇಶ್ವರ ಲಿಂಗಾ ಎನಲೆನ್ನ ಮನ ನಾಚಿತ್ತು ॥೩॥

**ಮತ್ತೇಭ:—** ಮಮತಾ ಲಕ್ಷಣ ವಾದಿಯಾದ ಗುಣವೆಲ್ಲಂ ಶೂನ್ಯವಾಗಿರ್ಪ ಸ। ದ್ವಿಮಳಜ್ಞಾನದ ಸಿದ್ಧ ತಾನದು ವಲಂ ಬೇರೊಂದರಿಂದಕ್ಕುಮೇ॥ ಕ್ರಮದಿಂದಂ ಪರಮಾತ್ಮ ಲಿಂಗದ ಮಹಾ ಸಂಸ್ಪರ್ಶನ ಜ್ಞಾನದಿಂ। ದಮಗುರ್ಣಂ ನಿರ್ಗುಣಾದ ಯೋಗಿಗೆ ಮಹೋ ಶ್ರೀ ಸಿದ್ಧ ಲಿಂಗೇಶ್ವರಾ ॥೮೬॥

**ಗದ್ಯ:—** ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಎಂಭತ್ತಾರನೆಯದಾದ ಜ್ಞಾನನಿಷ್ಪತ್ತಿಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೭೧. ಪಿಂಡಾಕಾಶಸ್ಥಲ

**ಸೂತ್ರ:—** ಇಂತು ಕ್ರಿಯಾನಿಷ್ಪತ್ತಿ ಭಾವನಿಷ್ಪತ್ತಿ ಜ್ಞಾನನಿಷ್ಪತ್ತಿ ಎಂಬ ತ್ರಿವಿಧ ಸ್ಥಲಂಗಳೇಕ ಲಿಂಗವು ಶರಣನ ಚಿತ್ಪಿಂಡದೊಳಗೆ ಮಹತ್ಪಿಂಡ ಸ್ವರೂಪವನೈದಿ ಆ ಪಿಂಡ ನಿರವಯವಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಪಿಂಡಾಕಾಶಸ್ಥಲವಾದುದು.

**ವಚನ:—** ಮರದೊಳಗಿನ ಮಂದಾಗ್ನಿಯ ಉರಿಯದಂತಿರಿಸಿದೆ. ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ. ಶರೀರದೊಳಗಾತ್ಮನ ನಾರು ಕಾಣದಂತಿರಿಸಿದೆ. ನೀ ಬೆರಸುವ ಭೇದಕ್ಕೆ ನಾ ಬೆರಗಾದೆನಯ್ಯಾ ರಾಮನಾಥಾ ॥೭॥

ಪದ—ರಾಗ—ವರಾಳಿ

ಪಿಂಡದೊಳಗೆ ಪರಿಪೂರ್ಣ ಪಿಂಡ ಸ್ವರೂಪವನೈದಿದ ॥ಪ॥

ಘಟದೊಳಗೆ ದಿಟವಾಗಿ ಘಟ ತದ್ರೂಪನೆ ತಾಳಿ ದಿಟವಾಗಿ ನಡೆ ನುಡಿಯುಳ್ಳ ಅಘಟಿತ ನಿರ್ವಯಲ ನಾನೇನೆಂಬೆನು ॥೧॥

ಶಿಲೆಯೊಳಗಣ ಮಂದಾಗ್ನಿ ಆ ಶಿಲೆಯು ಹೊದ್ದಿಯು ಹೊದ್ದ ದಂತೆ ಎನ್ನ ನಿಲವಿನೊಳಡಗಿದ ಬಯಲ ಹೊಲಬ ನಾನೇನೆಂದು ಹೇಳು ವೆನು ॥೨॥

ನುಡಿಯೊಳಗೆ ನುಡಿಯಾಗಿ ಎನ್ನ ನಡೆಯೊಳಗೆ ನಡೆಯಾಗಿ ಅಡ ಗಿದ ಸಾಕಾರದ ಬಯಲ ಅನುನುಡಿದು ತೋರಲಿಕೆ ತೆರಹಿಲ್ಲ ॥೩॥

ಸ್ಫಟಿಕದ ಬಿಂದುವಿನೊಳಗೆ ಪ್ರತಿಘಟದೊಳಹೊರಗೆ ಪ್ರತಿದೋರ ದಂತೆ ದಿಟಪುಟ ಸಂಶಯರಹಿತ ಸಂಘಟಿತ ಘನವ ನಾನೇನೆಂಬೆನು ॥೪॥

ಮಧ್ಯಜಡವ ಪರಿಹರಿಸಿ ತಥ್ಯವಾದ ಪಿಂಡದೊಳಗೆ ನಿತ್ಯನಿರ ವಯ ನಿಜರೂಪವನು ಸತ್ಯವಾಗಿ ನಿಮ್ಮ ಕಂಡೆನು ಕೂಡಲಸಂಗಯ್ಯ ೫॥

**ಮತ್ತೇಭಃ**— ತರದಿಂದುತ್ತರವಾಗಿ ತತ್ಪ್ರಕೃತಿಯಿಂದಂತೋರ್ಪ ಖಂಡಾತ್ಮತ। ತ್ಪರ ಮಾಕಾಶವೆನಿಪ್ಪ ಶಂಕರನನಂತಾ ದೇಹದೋಳ್ಭಾ ವಿಪಂ॥ ಶರಣಂ ತನ್ಮಯ ಭಾವಮಂ ನಿರುತದಿಂದಂ ಸಂತತಂ ನಾಡೆ ತಾಂ। ಪರಿಶುದ್ಧತ್ವವ ನೈದಿಸಲ್ ದೃಢತೆಯಿಂ ಶ್ರೀಸಿದ್ಧಲಿಂಗೇಶ್ವರಾ ||೪೭॥

**ಗದ್ಯ**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಎಂಭ ತ್ತೇಳನೆಯದಾದ ಪಿಂಡಾಕಾಶಸ್ಥಲದ ವಿಚಾರವು ಅನುವಿನಿಂ ಮುಗಿಯ ಲಾಯಿತು.

---

## ೭೨. ಬಿಂದ್ವಾಕಾಶಸ್ಥಲ

**ಸೂತ್ರ**— ಇಂತು ಪಿಂಡದಲ್ಲಿ ನಿರ್ವಯಲಾದ ಲಿಂಗವು ಶರಣನು ಪಿಂಡ ಮಧ್ಯಸ್ಥವಾದ ಚಿತ್ತಿನಲ್ಲಿ ಬಿಂದ್ವಾಕಾಶ ಸ್ವರೂಪವನೈದಿ ಬಿಂದ ನಾಮನಷ್ಟವಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಬಿಂದ್ವಾಕಾಶ ಸ್ಥಲವಾದುದು.

**ವಚನ**— ಆಡಬಾರದ ಬಯಲು ನೋಡಬಾರದ ಬಯಲು ಕಡಿ ಯಬಾರದ ಬಯಲು ಹಿಡಿಯ ಬಾರದ ಬಯಲು ಒಡಲಿಲ್ಲದ ಬಯ ಲೊಳಗಡಗಿಪ್ಪ ಭೇದವನು ಲೋಕದ ಜಡರೆತ್ತ ಬಲ್ಲರಯ್ಯ ರಾಮ ನಾಥಾ ||೧॥

ಪದ— ರಾಗ— ಅರಭ್ಬಿ

ಆದಿ ಬಿಂದುವಿನೊಳಗಭೇದ್ಯವಾದ ನಿರ್ವಯಲ ನಿರಂಜನನೆ ಶ್ರೀಗುರು ಬಸವ ॥ಪ॥

ಚಿತ್ತದೊಳಗೆ ಧಾತು ರೂಪ ನಿವೃತ್ತಿಮಾಡಿ ನಿಜದೆಚ್ಚರಲ್ಲಿ ಪ್ರತ್ಯಕ್ಷವಾದ ನಿಜರೂಪ ನಿರ್ವಯಲ ಮೂರುತಿ ಬಸವ ತಂದೆ ॥೧॥

ಮನದ ನೆನಹಿನಲ್ಲಿ ಮನರೂಪಾಗಿ ಚಿನುಮಯ ಚಿದ್ರೂಪವನ್ನೈದಿ ಮಹಾಘನರೂಪವ ನಡಗಿಸಿದ ನಿಷ್ಕಲ ನಿರವಯ ಬಸವ ತಂದೆ ॥೨॥

ಷಡುಶಕ್ತಿಗಳನು ಶಕ್ತಿ ತ್ರಯ ಮಾಡಿ ಪಿಡಿದಾ ಶಕ್ತಿತ್ರಯ ವನೇಕ ಮಾಡಿ ದಿಟ ಪರಶಕ್ತಿಯ ಬಿಂದುವಿನಲ್ಲಿ ತೇಜಾಕೃತಿ ನಿರ್ವಯಲ ಬಸವ ತಂದೆ ॥೩॥

ನಾದಬಿಂದು ಸ್ವರೂಪ ನಿರೂಪ ಆದಿ ಬಿಂದುವೆನಾದ ನಾದ ಬಿಂದು ಕಳಾತೀತ ನಿರ್ವಯಲ ನಿಜವಾದ ನಿರಂಜನ ನನಾದಿ ಬಸವ ತಂದೆ ॥೪॥

ಸಕಳ ನಿಷ್ಕಳ ತತ್ವದ ಸಂಜೀವದ ಮುಕುತಿಯ ಮೂಲಪ್ರಭಾವದ ಸಕುತಿಯವೊಳಗೆ ನಿರ್ವಯಲಾದ ಕೇವಲ ಕೂಡಲಚೆನ್ನಸಂಗನಲ್ಲಿ ಬಸವ ತಂದೆ ॥೫॥

**ಮತ್ತೇಭಃ**— ಹೃದಯಾವಸ್ಥಿತ ಬಿಂದು ಮಧ್ಯದೊಳೆ ಸೂಕ್ಷ್ಮ ಜ್ಯೋತಿ ರೂಪಾಗಿ ತೋ। ರ್ಪುದ ನಿರ್ವಾಣ ಪದಪ್ರದೀಪಕಮೆನಲ್ ತದ್ಬ್ರಹ್ಮನಾಳಂಬಳಿ॥ ಕ್ಪದರೋಳ್ವ್ಯಾಪಕಮಾದ ತಚ್ಛಿವ ನನುದ್ಯತ್ಪ್ರೇಮದಿಂ ಕಂಡು ಸಂ। ಮುದವೆತ್ತೊಪ್ಪುವನಾ ಶಿವಾತ್ಮಕನವಂ ಶ್ರೀಸಿದ್ಧಲಿಂಗೇಶ್ವರಾ ॥೫೮॥

**ಗದ್ಯಃ**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಎಂಬತ್ತೆಂಟನೆಯದಾದ ಬಿಂದ್ವಾಕಾಶಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.



## ೭೩ ಮಹದಾಕಾಶಸ್ಥಲ

**ಸೂತ್ರ:—** ಇಂತು ಬಿಂದು ನಾದ ನಷ್ಟವಾದ ನಿರ್ವಯಲ ಲಿಂಗವು ಶರಣನ ಅರುಹಿನ ಕುರುಹಿಂದೆ ಆಶ್ರಯವಾಗಿರ್ದ ಮಹಾ ಘನ ಚೈತನ್ಯದಲಿ ಅರುಹಿನ ಕುರುಹಳಿದು ನಿರವಯವಾಗಿರ್ದ ಭೇದ ವೆಂತಿರ್ದುದೆಂದಡೆ ಮುಂದೆ ಮಹದಾಕಾಶಸ್ಥಲವಾದುದು.

**ವಚನ:—** ಕಾಮರಾಶಿಗೆ ಮಾಯದ ಕೊಳಗ ಅಳುವುದು ನೆಳಲು ಹೋವುದು ಬಯಲು ತುಂಬೆನೆಂದಡೆ ತುಂಬಲು ಬಾರದು ತುಂಬಿದ ರಾಶಿಯು ಕಾಣಲು ಬಾರದು ಅಳತೆಗೆ ಬಾರದು ಹೊಲಿಗೊಳಗಾಗದು ನೋಡಾ ಶ್ರೀಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಮಿಗೆ ಬಯಲು ॥೯॥

ಪದ—ರಾಗ—ಘುರ್ಜರಿ

ಆಕಾಶವೆಂಬ ಅನಾಮಿಕನು ಶಂಕೆಯಿಲ್ಲದೆ ಜಗವ ನುಂಗಿ ನುಂಗಿದ ನಿನ್ನುಗುಳ ಮತ್ತೆ ಮರಳುವ ಗಂಡರ ಕಾಣೆ ||ಪ||

ಸಾಕಾರದಾದಿ ವಿಡಿದು ಬಂದು ಬಂದುಲೋಕವೆಂಬದೆಶೆಯ ನರಿಯದೆ ನಂಬಿ ನಂಬಿ। ಏಕೈಕವೆಂಬ ತತ್ವವ ನೆರೆಯರಿದಾತಂಗೆ। ಬೇಕು ಬೇಡೆನ್ನದ ಬಯಲೆಲ್ಲನುಬಲಾ ॥೧॥

ಇಲ್ಲದಲ್ಲಿಯೊದಗಿತ್ತಾಗಿ ಅಲ್ಲಿಗಲ್ಲಿಗೆ ಹರಿಯಲಿ ಸಲ್ಲದು ನಿನ್ನ ಮಾಟಕೂಟ। ಫಲವನಳಿವುದು ಅಲ್ಲ ಅಹುದೆಂಬೆರಡರಹೊಲ್ಲಹದಸಟೆ ದಿಟವನಳಿಯ ಯಲ್ಲದಂತಾಯಿತ್ತ ಖಂಡಿತ ಬಯಲು ॥೨॥

ಅರಿದಡೇನು ಮರೆದಡೇನು ಅರಿಯದೆಸುಮ್ಮನಿರ್ದಡೇನು ತೊರೆದ ಡೇನು ತೊರೆಯದೆಸಂಸಾರಿಯಾದಡೇನು ಕರೆಮರೆಯ ಕುರುಹು ವಿಡಿದು ಬರಿದೆ ಬರಿದೆ ಬಂದು ಕುರುಹಿನ ಮೂರ್ತಿಗೆ ತಾವಿವೆಲ್ಲ ಅಸಾಧ್ಯ ॥೩॥

ವಾದ ವಶ್ಯ ಮಂತ್ರ ತಂತ್ರ ಯಂತ್ರಕರಣವೆಂಬವು ಭೇದ ಸಮ ಯದರುಶನ ಬಹು ಕುಹಕ ಕಪಟ ಇವನೋದಿಯೋದಿ ತಾವೆ ಘನ ವೆಂದು ಕೆಲಲಕಿರಿದ ಮಾಡಿ ಹೋದರವರು ಹೊಲಬುಗೆಟ್ಟು ಮರಣ ದಾರಿಯೆನಿಪ ಬಟ್ಟೆಗೆ ||೪||

ಅಜ ಹರಿ ರುದ್ರರೆಲ್ಲರು ಭಜಿಸಿ ಭಜಿಸಿ ರೀತಿಗೆಟ್ಟರು ತ್ರಿಜಗವ ನುಂಗಿದ ಹಮ್ಮು| ಮತ್ತಿನ್ನಾರ ಬಗೆವುದು ಮಜಡ ಮಣಕವನೋದಿ ಯೋದಿ ಸುಜನರೆಲ್ಲರು ರೀತಿಗೆಟ್ಟರು ಗಜಬಜೆಯಲ್ಲಿ ಸಿಲುಕದೆನಿಂದ ನಿಜಗುಣಯೋಗಿ

**ಮತ್ತೇಭ:**— ಅರಿವಿಂಗಾಶ್ರಯಮಾಗಿ ತೋರ್ಪ ನಿಜದೊಳ್ ಜ್ಞಾನಂಲಸದೆಜ್ಞಯಮುಂ| ನೆರೆತಗ್ಗಲ್ಕದಿದೆಂಬುದೇ ನೊಳವೆ ಸರ್ವಪೂರ್ಣ ರೂಪಾಗಿ ತಾಂ|| ತರಿಸಂದೊಪ್ಪುವ ಸತ್ಸ್ವರೂಪ ಪರಿಪೂರ್ಣಾಕಾಶ ನಂತೆಯ್ದು ತಾಂ| ಮೆರೆಗುಂ ಭಾಸ್ವತಮಾಗಿಯುದ್ಧತಿಕೆಯಿಂ ಶ್ರೀಸಿದ್ಧ ಲಿಂಗೇಶ್ವರಾ ||೮೯||

**ಗದ್ಯ:**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಎಂಭತ್ತರೊಂಬತ್ತನೆಯದಾದ ಮಹದಾಕಾಶ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

ಇಂತೆಂಬಲ್ಲಿಗೆ ಏಕೋತ್ತರ ಶತಸ್ಥಲಂಗಳಲ್ಲಿ ದೀಕ್ಷಾಗುರು ಸ್ಥಲಾದಿಯಾಗಿ ಪರಜಂಗಮ ಸ್ಥಲಾಂತ್ಯಮಾದೊಂಭತ್ತು ಸ್ಥಲಂಗಳು ಒಂದನೆಯದಾದಆಚಾರ ಲಿಂಗಸ್ಥಲಕ್ಕೆ ಕ್ರಿಯಾಗಮ ಸ್ಥಲವಾದಿಯಾಗಿ ಜ್ಞಾನಾಚಾರ ಸ್ಥಲಾಂತ್ಯಮಾದೊಂಭತ್ತು ಸ್ಥಲಂಗಳು ಎರಡನೆಯದಾದ ಗುರು ಲಿಂಗಸ್ಥಲಕ್ಕೆ ಕ್ರಿಯಾನುಗ್ರಹ ಸ್ಥಲವಾದಿಯಾಗಿ ಸೇವ್ಯಸ್ಥಲಾಂತ್ಯಮಾದೊಂಭತ್ತು ಸ್ಥಲಂಗಳು ಶಿವಲಿಂಗ ಸ್ಥಲವು ಮೂರನೆಯದಾಯ್ತು. ಜೀವಾತ್ಮ ಸ್ಥಲವಾದಿಯಾಗಿ ಸೇವ್ಯಪ್ರಸಾದಿ ಸ್ಥಲಾಂತ್ಯಮಾದೊಂಭತ್ತು ಸ್ಥಲಂಗಳು ಜಂಗಮ ಲಿಂಗಸ್ಥಲವು ನಾಲ್ಕನೆಯದಾಯಿತ್ತು. ಪ್ರಸಾದ ಲಿಂಗಸ್ಥಲಕ್ಕೆ ಸೇರಿದೊಂಭತ್ತು ಸ್ಥಲಂಗಳು ದೀಕ್ಷಾಪಾದೋದಕ ಸ್ಥಲವಾದಿಯಾಗಿ ಮಹದಾಕಾಶ ಸ್ಥಲಾಂತ್ಯಮಾಪ್ಪೈದನೆಯ ಸ್ಥಲವು ಮುಗಿದುದು.

## ೭೪ ಕ್ರಿಯಾಪ್ರಕಾಶಸ್ಥಲಾತ್ಮನೇ.

**ಸೂತ್ರ:—** ಇಂತು ನವಸ್ಥಲಂಗಳೇ ತ್ರಿವಿಧ ತ್ರಿವಿಧಂಗಳಾಗೇಕವಾದ ಪ್ರಸಾದಲಿಂಗವು ಮಹಾಕಳೆಯನ್ನು ಹೊಂದಿ ಐಕ್ಯಕ್ರಿಯದಲ್ಲಿ ತಾನೇ ಆಚಾರವಾಂತನಾಮುವನುಳ್ಳ ದ್ವಾದಶ ಸ್ಥಲಂಗಳಿಂದೊಪ್ಪಿ ಮಹಾಮಹದೈಕ್ಯನಲ್ಲಿ ಶ್ರೀ ಮಹಾಲಿಂಗವಾಗಿ ಸಂಬಂಧಿಸುವಲ್ಲಿ ಮನೋಹರವಾದ ಪ್ರಕಾಶವು ಥಳಥಳನೆ ಹೊಳೆವುತ್ತಿರಲು ಮೊದಲಲ್ಲಿ ಕ್ರಿಯಾರೂಪದಿಂ ತೋರುತ್ತಿರ್ದ ಭೇದವೆಂತಿರ್ದುದೆಂದಡೆ ಮುಂದೆ ಕ್ರಿಯಾಪ್ರಕಾಶಸ್ಥಲವಾದುದು.

**ವಚನ:—** ಕಾಲ ಸಡಗರ ಕೈಯ್ಯಲ್ಲಿ ಅದೆ. ಕೈಯ್ಯ ಸಡಗರ ಕಂಗಳಲ್ಲಿ ಅದೆ. ಅದೇಕೆಂಬಡೆ ಕಂಗಳೇ ಕಾರಣವಾಗಿ. ಒಂದು ಮಾತಿನೊಳಗೆ ವಿಚಾರವು ಅದೆ. ದರ್ಪಣದೊಳಗೆ ಕಾರ್ಯವು ಅದೆ. ಇದು ಏನು ಕಾರಣ ತಿಳಿಯುವಲ್ಲದು ಗುಹೇಶ್ವರಾ ॥ ೧॥

ಪದ—ರಾಗ—ಧನ್ಯಾಸಿ

ಆಚಾರ ದುಂದುಭಿಯು ನಾನೇನೆಂದುಪಮಿಸುವೆ। ಬೇಗಿನೊಳಗೆ ತೊಳ ತೊಳಗುತಲಿರ್ದುದು ಆಚಾರ ॥ ಪ॥

ಅರಿವನಾಚರಣೆಯ ತೆರನಹೇಳುತಿರ್ದುದು ಭೇದದ ಭೇದದ ಮಹಾಘನದಾಚಾರ ॥ ೧॥

ಸ್ಫಟಿಕದ ಗಿರಿಯತಟದೊಳು ನಿಂದಿರ್ದಡೆ ಘಟ ಹೊಳೆದುದು ಒಳಹೊರಗೆನ್ನದಾಚಾರ ॥ ೨॥

ಪರುಷದ ಗಿರಿಯು ಕಡೆಯುಲೆಂದು ಹೋದರೆ ಹಿಡಿದುಳಿಕೂಡತಿ ಪರುಷವಾದ ಬಳಿಕ ಮತ್ತಾಚಾರ ॥ ೩॥

ಮಾಣಿಕ ಹಿಡಿದವನ ಕೈಸಿಕೆ ಹತ್ತದೆ ಲಿಂಗ ಜಂಗಮ ಪ್ರಸಾದವೆಂದರಿದ ಅಂಗದಾಚಾರ ॥ ೪॥

ಸಂಪಗೆಯ ಪುಷ್ಪದಲ್ಲಿ ಕಂಪುಂಡ ಭ್ರಮರನಂತೆ ಕೂಡಲಚನ್ನಸಂಗನಲ್ಲಿ ಸಂಗನಬಸವಣ್ಣಂಗಾಚಾರ ॥ ೫॥

**ಮತ್ತೇಭ:—** ಮಿಗೆಯುತ್ಕೃತ್ತಮ ಲಕ್ಷಣಾನ್ವಿತದ ಚಿತ್ತಪ್ರಾಪ್ತಿತಾನಾಗನೆ। ಟ್ಟಗೆ ಶಾಸ್ತ್ರ ಪ್ರಚಯಂಗಳೋಳ್ಪಿದಿತವಾದುದ್ಯತ್ಕ್ರಿಯಾವರ್ತನಂ॥

ಬಗೆಯಲ್ ಜ್ಞಾನದ ರೂಪದಿಂ ಬೆಳಗುಗುಂ ತಪ್ಯೋಗಿಗಂತೆಲ್ಲರೊಳ್ ॥
ನೆಗಳ್ದಿರ್ದಾ ಶಿವಭಾವ ಸಂಘನದಿಂ ಶ್ರೀ ಸಿದ್ಧಲಿಂಗೇಶ್ವರ ॥೯೦॥

**ಗದ್ಯ:—** ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ತೊಂಬತ್ತನೆಯದಾದ ಕ್ರಿಯಾಪ್ರಕಾಶಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೭೫ ಭಾವಪ್ರಕಾಶಸ್ಥಲ

**ಸೂತ್ರ:—** ಇಂತು ಸತ್ಕ್ರಿಯೆಯಲ್ಲಿ ತಾನೇ ಕ್ರಿಯಾಸ್ವರೂಪವಾಗಿ ಪ್ರಕಾಶಿಸುವ ಲಿಂಗವು ಶ್ರೀ ಮಹದೈಕ್ಯನ ಮಹಾನುಭಾವ ಮಧ್ಯದಲ್ಲಿ ಭಾವಸ್ವರೂಪು ತಾನೆಯಾಗಿ ಪ್ರಕಾಶವಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಭಾವಪ್ರಕಾಶ ಸ್ಥಲವಾದುದು.

**ವಚನ:—** ಲಿಂಗಪ್ರಾಣವೆಂಬೆನೇ ಪ್ರಾಣದ ಹಂಗಿನ ಲಿಂಗ. ಪ್ರಾಣಲಿಂಗವೆಂಬೆನೇ ಲಿಂಗದಹಂಗಿನ ಪ್ರಾಣ. ಲಿಂಗ ಪ್ರಾಣವಲ್ಲ ಪ್ರಾಣ ಲಿಂಗವಲ್ಲ. ಉಭಯಸಂದಳಿದವರ ತೋರಿ ಬದುಕಿಸಯ್ಯಾ ಕೂಡಲ ಚನ್ನಸಂಗಮದೇವಾ ॥೨॥

ಪದ—ರಾಗ—ಭೂಪಾಳಿ.

ಲಿಂಗಶರಣನು ನಿಜಲಿಂಗಶರಣನು ಆವ ಗ್ರಾಹಕನಲ್ಲವು ಅಯ್ಯ ಲಿಂಗ ಶರಣನು ನಿಜಲಿಂಗ ಶರಣನು ॥ ಪ ॥

ಜ್ಞಾನಭಾಷೆಯು ಸನ್ಮಾತ್ರದ ನೆರವಿಂಗ ನೂನಸೋಹಮೆಂದು ಕೂಗಿದವಯ್ಯ। ತನ್ನ ಭಕ್ತ್ಯಾಂಗನೆಯು ಬಿಟ್ಟು ಲಜ್ಜೆಗೆಟ್ಟು ತನ್ನಂತೆಂದಡೆಯು ಜನಿಸುವನಲ್ಲವಯ್ಯ ॥೧॥

ಕಾಲಾಳಿಗೆ ಸೆರೆಯು ಸಿಕ್ಕುವನಲ್ಲ ಮೇಲಾಳಿಗೆ ಅಂಗ ವಿಸುವನಲ್ಲ। ತನ್ನ ಸರ್ವೇಂದ್ರಿಯಂಗಳೊಳಕಿನಿತಿಲ್ಲವೆ ಹಿಂದಣ ಹೆಜ್ಜೆಯಿಲ್ಲದೆ ಒಂದೆ ಮಯ್ಯಲ್ಲಿ ಹೂಣ ಹೊಗುವನಯ್ಯ ॥೨॥

ಶರಣರ ಶರಿರ ಅಪಮಾನದಾದಿಯಿಂದ ದೂರತ್ತವ ಸರಿ ಇಪುದಯ್ಯ ನೋಡಾ। ತನ್ನಪರಿಗೆ ವೇಷ ಸಾರುತ್ಯೆದವೆ ತಾವಾಗಿ ಶರೀರ ಕೋವ ಸಮ್ಯಕ್ಪ್ರಹೋನಪ್ರಹಕಾಯುವು ಎಂದುದಾಗಿ ॥೩॥

ಬಯಲಿಂಗೆ ಅಪ್ಪರಿಸಿ ಬಳಲುವನಲ್ಲ. ಕುಂಬಳದೊಳಗೆ ಸೂಜಿಯು ಪೂಳುವಂತೆ। ಲಿಂಗದೊಳಾಳುವನು ಹವಣನರಿಯನಂತುವ ನರಿಯರೂಹುಗೆಟ್ಟು ಕುರುಗೆಟ್ಟು ತನ್ನ ತಾನು ಹೊರಿಯಾಗಿರುವನಯ್ಯ ॥೪॥

ಬಳಿಕ ಆತ್ಮಾ ಇದಂ ಏಕಏವಗ್ರಾಹಿರಿತ್ಯಾದಿ ಶ್ರುತಿ ನಲಿದಾಡಿದವಯ್ಯಾ। ಲಿಂಗಕೂಡಲ ಚನ್ನಸಂಗನೈಕ್ಯಕ್ಕೆ ಒಂದೊಂದು ತಮ್ಮತಮ್ಮ ಪರಿಯಾಯ ದೊಳದರುತಿರ್ಪವಯ್ಯಾ ॥೫॥

**ಶಾರ್ದೂಲ:—** ಏನುಂ ತೋರದ ನಾಹತಸ್ಥಲದೊಳಿತ್ತಂನಿಂದ ತಧ್ಯಾನದೋಳ್। ಜ್ಞಾನಾತೀತಮೆನಿಪ್ಪ ನಿರ್ಮಲ ಪರಬ್ರಹ್ಮಂ ಮಹಾ ಕಾಂತಿಯಿಂ॥ ತಾನೇ ಶೋಭಿಸುತಿರ್ಪುದಾವ ಗಮವಿದ್ಯಾಕಾಶದಿಂ ಸರ್ವಮುಂ। ತಾನೇ ತಾನೆನಿಸಿರ್ದ ಯೋಗಿಗೆ ನಿಜಂ ಶ್ರೀಸಿದ್ಧಲಿಂಗೇಶ್ವರಾ ॥೯೧।

ಗದ್ಯ:— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ತೊಂಬತ್ತುಒಂದನೆಯದಾದ ಭಾವಪ್ರಕಾಶಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೭೬ ಜ್ಞಾನಪ್ರಕಾಶಸ್ಥಲ.

**ಸೂತ್ರ:—** ಇಂತು ಭಾವಪ್ರಕಾಶವನೈದಿದ ಅಂಗವು ಮಹದೈಕ್ಯ ಭಾವ ಭಾವಿಕ ಭಾವಿತೃಗಳೆಂಬ ತ್ರಿವಿಧವು ನಷ್ಟವಾಗಿ ತನ್ನಲ್ಲಿ ತಾನು ಪ್ರಕಾಶವಾದ ಭೇದವೆಂತಿರ್ದುದೆಂದಡೆ ಮುಂದೆ ಜ್ಞಾನಪ್ರಕಾಶಸ್ಥಲವಾದುದು.

**ವಚನ:—** ಸುಖವ ಬಲ್ಲಾತ ಸುಖಿಯಲ್ಲ ದುಃಖವ ಬಲ್ಲಾತ ದುಃಖಿಯಲ್ಲ. ಸುಖದುಃಖವೆರಡನು ಬಲ್ಲಾತನು ಜ್ಞಾನಿಯಲ್ಲ. ಹುಟ್ಟಿದಮುನ್ನ ಸತ್ತವರ ಕುರುಹಬಲ್ಲರೆ ಆತನೇ ಬಲ್ಲತನದ ಮಹಾ ಜ್ಞಾನಿಯು ಕಂಡಾ ಗುಹೇಶ್ವರಾ ॥೩॥

ಪದ—ರಾಗ—ಫಲಮಂಜರಿ

ದರ್ಪಣದ ಛಾಯೆಯಂತೆ ಪ್ರಕಾಶವ ಮಂಜೊಳಕೊಂಡಂತೆ ಆ ಲಿಂಗದ ಮಾಯಾ ಸಂಭ್ರಮವು। ಮರೀಚಿಕಾಜಲದಂತೆ ತೋರಿಯಡಗಿದ ಭೇದವು ನೋಡಾ ॥ಪಲ್ಲವ॥

ಜಲದಲ್ಲಿ ಅನಿಲವಿಕಾರದಿಂದ ಉಲಿದೇಳುವ ಫೇನತರಂಗ ಚಲ ನೆಯಿಂದಲಿ ಕಂಡಿಹೆನೆಂದರೆ ಮಲಿನ ಬಂಧದಲಿ ಬಿದ್ದರು ॥೧॥

ರಜ್ಜುಸರ್ಪ ಸ್ಥಾಣುಚೋರಭ್ರಮೆ ತೇಜಿಸಬಾರದ ವಿವರಣೆ ಭಜ ನೆಯಿಂದಲಿ ಕಂಡಿಹೆನೆಂದಡೆ ಅಜಹರಿ ರುದ್ರರ ಕಾಡಿತ್ತು ॥೨॥

ಅರಸುವ ಅರಿಕೆಯುಳ್ಳನ್ನಕ್ಕರ ಮಾಯೆ ಅರಿಕೆ ಸತ್ತಡೆ ಮಾಯೆ ಲೋಪ ಅರಿವಿನ ಸೂತಕ ತಲೆಯನರಿಯಲು ಅಲ್ಲಿ ಮಾಯವಾಯ್ತು ॥೩॥

ಎಲ್ಲವ ನೊಳಕೊಂಡಿತ್ತು ಮಾಯೆ ಬಲ್ಲಿದರೆಂಬವರಾರು ಯಿಲ್ಲ ಮೆಲ್ಲನೆ ಉಲುಹಡಗಲು ತೀವ್ರದಿಂದಲ್ಲಿಯೆ ಮಾಯೆ ಲೋಪವಾಯ್ತು ॥೪॥

ಅನುಭೃಸ್ನಕ್ಕ ನೀನುಂಟಿಲೆ ಮಾಯೆ ಅನಿಲ್ಲದಿರ್ದಡೆ ನೀ ನಿಲ್ಲಲಿಗೆ ಅನುನೀನು ಎಂಬುಭಯವನಳಿಯಲು ಆನಂದ ನಿಜಗುಣಯೋಗ ॥೫॥

**ಶಾರ್ದೂಲ**:—ದ್ವೈತಭ್ರಾಂತಿಯದಿಲ್ಲ ಭಾವಿಸೆ ಶಿವಾದ್ವೈತತ್ವಮುಂ ರಾಗ ವಿ। ಖ್ಯಾತಜ್ಞಾನಿಗೆ ಮಾಯೆ ತಾನಳಿದು ಸರ್ವಂಬ್ರಹ್ಮರೂಪಾಗಿತಾ॥ ನೇತ್ರೋತ್ಕರ್ಷಂ ನಿಬಿಡ ಪ್ರಕಾಶದೆ ಯದಂತಿಂತೆಂದು ಪೇಳಲ್ಕೆ ವಾ। ಚಾತೀತಂ ಘನ ಚಿತ್ಪ್ರಭಾವಮಯನವಂ ಶ್ರೀ ಸಿದ್ಧಲಿಂಗೇಶ್ವರಾ ॥೯೨॥

**ಗದ್ಯ**:—ಇಂತೀ ಪ್ರಕಾರದಿಂ ನೂರೊಂದುಸ್ಥಲದೊಳಗೆ ತೊಂಭ ತ್ತೆರಡನೆಯದಾದ ಜ್ಞಾನಪ್ರಕಾಶಸ್ಥಲದ ವಿಚಾರವು ಅನುವಿನಿಂ ಮುಗಿ ಯಲಾಯಿತು.

---

## ೭೭ ಸ್ವೀಕೃತ ಪ್ರಸಾದಿಸ್ಥಲ.

**ಸೂತ್ರ**:—ಇಂತು ಕ್ರಿಯಾಪ್ರಕಾಶ ಭಾವಪ್ರಕಾಶ ಜ್ಞಾನಪ್ರಕಾಶ ವೆಂಬ ತ್ರಿವಿಧ ಸ್ಥಲಂಗಳೇಕವಾದ ಲಿಂಗವು ಮಹದೈಕ್ಯನಲ್ಲಿ ಪರಿಣಾಮ ಗ್ರಾಹಕವನೈದಿ ಲಿಂಗದಲ್ಲಿ ಭಿನ್ನಭಾವವಳಿದು ಪರಮಾನಂದದಲ್ಲಿ ಪರಿ ಣಾಮಿಯಾಗಿರ್ದು ಕೊಡದೇ ಪ್ರಸಾದವಾದುದರ ಭೇದವೆಂತಿರ್ದುದೆಂ ದಡೆ ಮುಂದೆ ಸ್ವೀಕೃತ ಪ್ರಸಾದಿಸ್ಥಲವಾದುದು.

**ವಚನ**:—ಇಲ್ಲೆಂಬುದನು ಇಲ್ಲೆನಬಲ್ಲಡೆ ಅರ್ಪಿತ. ಉಂಟೆಂಬುದನು ಉಂಟೆನಬಲ್ಲಡೆ ಪ್ರಸಾದ. ಆ ಪ್ರಸಾದವ ತಾನಿಲ್ಲದೆ ಕೊಳಬಲ್ಲಡೆ ಪ್ರಸಾ ದಿಯು. ಆ ಪ್ರಸಾದಿಯ ಪರಮಪರಿಣಾಮವೇ ಮಹಾ ಪ್ರಸಾದವಾ

ಗಿಯು ಆ ಮಹಾ ಪ್ರಸಾದವೇ ತಾನಾಗಿ ಬೆಳಗುತ್ತಿಪ್ಪನಯ್ಯಾ ಕೂಡಲ ಚನ್ನಸಂಗಾ ನಿಮ್ಮ ಶರಣನು ॥೪॥

ಪದ—ರಾಗ—ಆರಬಿ

ಶ್ರೀ ಮಹದೊಳಗೆ ಮಹಮ್ರೂಪಾಗಿ ಕೊಂಡುದೆ ಪ್ರಸಾದವಾಯ್ತು ಶ್ರೀ ಗುರುಬಸವರಾಜಂಗೆ ॥ಪ॥

ಮಹಾ ಘನಲಿಂಗದೊಳಗೆ ಮಹಾ ಘನತದ್ರೂಪಾಗಿ ಸಹಜ ಪರಿಣಾಮ ಪ್ರಸಾದವನಾರೋಗಿಸಿ ನಿರ್ವಯಲಾದ ಗುರುಬಸವ ॥೧॥

ನಿಂದಸುಖವ ನಿಂದೆ ನೆಂದೆಂಬ ಸಂಶಯಭಾವ ಮರೆದು ನಿಂದ ನಿಜ ಪರಿಣಾಮ ಪ್ರಸಾದದೊಳೊಂದಿ ನಿಜಗ್ರಾಹಕನಾದ ಗುರುಬಸವ ॥೨॥

ಅರ್ಪಿತವಿಲ್ಲದ ಮುನ್ನವೆ ಅರ್ಪಿತ ನಿಜ ರೂಪಾಗಿ ಅರ್ಪಿತಗ್ರಾಹಕ ಪರಿಣಾಮ ಪ್ರಸಾದಕ್ಕೆ ತವನಿಧಿಯಾದ ಗುರುಬಸವ ॥೩॥

ಮುಟ್ಟಿದ ಮುನ್ನವೆ ಪ್ರಸಾದ ಗ್ರಾಹಕನಾಗಿ ಮುಟ್ಟಿದೆನೆಂಬುದ ನರಿಯದೆ ಬಯಲ ಪರಮಾನಂದ ದೃಷ್ಟಿಮುಟ್ಟಿದ ಗುರುಬಸವ ॥೪॥

ನಿರ್ಣಯ ನಿರ್ವಯವಾದ ನಿರಂಜನ ಸನ್ನಿಹಿತ ಕೂಡಲ ಚನ್ನಸಂಗನಲ್ಲಿ ನಿತ್ಯತೃಪ್ತನಾದ ಪರಿಣಾಮಿ ಗುರುಬಸವ ॥೫॥

**ಶಾರ್ದೂಲ:**—ಸಂದೇಹಂಗಳನ್ನೆಲ್ಲಮಂ ಕಳೆದ ಮುಕ್ತಂ ವಾಂಛೆಯಿಂ ಬೇಕೆನು। ತ್ತೊಂದಂ ಬೇಡುವನಲ್ತು ಬಿಟ್ಟುಕಳೆವಾತಂ ಮುನ್ನವೆಯಾಯ್ತು ತಾಂ॥ ನಿಂದದ್ವೈತಪದ ಸ್ವಭಾವ ದಿನವೆಲ್ಲಂ ಭುಂಜನಂಗೆಯ್ದುವಿಂ।ನ್ನೊಂದಂ ಕಾಣೆನವಂಗೆ ಬೇರೆನಿಪುದಂ ಶ್ರೀಸಿದ್ಧಲಿಂಗೇಶ್ವರಾ॥೯೩॥

**ಗದ್ಯ:**—ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ತೊಂಭತ್ತಮೂರನೆಯದಾದ ಸ್ವೀಕೃತ ಪ್ರಸಾದಿಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

## ೯೪ ಶಿಷ್ಯೋದನ ಪ್ರಸಾದಿಸ್ಥಲ.

**ಸೂತ್ರ:**—ಇಂತು ಪರಮಾನಂದ ಪ್ರಸಾದದ ನಿಜಸುಖವನಾರೋಗಿಸಿ ತೃಪ್ತಿಯಾದ ಲಿಂಗವು ಮಹದೈಕ್ಯನಲ್ಲಿ ತಾನು ತಾನಾಗಿ ನಿಂದುದೇ

**೪೫. ಒಂದಾಗಿಹವ್ಯೈದು ಭೂತ. ಚಂದ್ರ ಸೂರ್ಯರು ನಂದಿವಾಹನ ನಿಮ್ಮ ತನುವಲ್ಲವೇ? ನಿಂದುನೋಡಲು ಜಗಭರಿತನಾಗಿಪ್ಪೆ. ಇನ್ನು ನೋಯಿಸುವೆನಾರನಯ್ಯ ರಾಮನಾಥಾ?**

ಹಿಂದಿನ ವಚನದ ಭಾವವನ್ನೇ ಇನ್ನೊಂದು ರೀತಿಯಲ್ಲಿ ವಚನಕಾರನು ಇಲ್ಲಿ ಹೇಳಿದ್ದಾನೆ. ಜಗತ್ತೆಂದರೆ ಪಂಚಭೂತಗಳಾದ ಪೃಥ್ವಿ ಆಪ್, ತೇಜ, ವಾಯು, ಆಕಾಶ ಇವುಗಳಿಂದ ಆದಂಥಾದ್ದು. ಇವುಗಳಿಂದಲೇ ಚಂದ್ರ ಸೂರ್ಯ ನಂದಿವಾಹನರೂ ಕೂಡ ಆಗಿದ್ದಾರೆ. ಆದರೆ ಇವುಗಳಲ್ಲೆಲ್ಲ ಪರಮಾತ್ಮನು ತುಂಬಿಕೊಂಡಿದ್ದಾನೆ. ಆದ್ದರಿಂದ ಇವೆಲ್ಲವುಗಳು ಪರಮಾತ್ಮನ ತನುಗಳೆಂದೇ ಹೇಳಬಹುದು. ಅಂದ ಬಳಿಕ ಯಾರಿಗೂ ನೋಯಿಸಬಾರದೆಂದು ವಚನಕಾರನ ಅಭಿಪ್ರಾಯವು. ಹೀಗೆ ಮಾಡಿದರೆ ಪರಮಾತ್ಮನನ್ನೇ ನೋಯಿಸಿದಂತೆ ಆಗುತ್ತದೆಂದು ಅವನು ಇಲ್ಲಿ ಹೇಳಿದ್ದಾನೆ.

**೪೬. ವಿಷಯದ ಪಿತ್ತ ತಲೆಗೇರಿದಲ್ಲಿ ವಿವೇಕವೆಂಬ ದೃಷ್ಟಿ ನಷ್ಟವಾಗಿ ಪಶುಪತಿಯ ನೆನೆಹು ಕೆಟ್ಟು ಮತಿ ಮಂದವಾದಲ್ಲಿ ಮಂತ್ರದ ನೆನಹುಂಟೇ ಹೇಳಾ ರಾಮನಾಥಾ?**

ಮನುಷ್ಯನು ನೀತಿಯಿಂದ ನಡೆಯುವದಿಲ್ಲ. ಆದ್ದರಿಂದ ಅವನ ಇಂದ್ರಿಯಗಳು ಅವನನ್ನು ನಾನಾ ವಿಷಯಗಳಿಗೆ ಎಳಿಸುತ್ತವೆ. ಅವುಗಳ ಮೇಲಿನ ಇಚ್ಛೆಯೇ ಅವನ ಮನಸ್ಸಿನಲ್ಲಿ ತುಂಬಿ ಹೋಗುತ್ತದೆ. ಇದರಿಂದ ಅವನ ವಿವೇಕವು ಭ್ರಷ್ಟವಾಗುತ್ತದೆ. ಅಂದರೆ ಅವನಿಗೆ ಯಾವದು ಕೆಟ್ಟದು ಯಾವದು ಹಿತವಾದದ್ದು ಎಂಬದು ತಿಳಿಯದೆ ಹೋಗುತ್ತದೆ. ಹೀಗಾದ ಕೂಡಲೆ ಅವನು ಪರಮಾತ್ಮನನ್ನು ಲಕ್ಷಿಸದೆ ಮತಿಭ್ರಷ್ಟನಾಗಿ ವರ್ತಿಸಹತ್ತುತ್ತಾನೆ. ಇಂಥವನಿಗೆ ಮಂತ್ರದ ನೆನಹೂ ತಪ್ಪಿಹೋಗುತ್ತದೆ. ಅಂದರೆ ಅವನು ಮೋಕ್ಷಕ್ಕೆ ಹೊರತಾಗುವನು. ಆದ್ದರಿಂದ ಮೋಕ್ಷಕ್ಕೆ ವಿಷಯವಾಸನೆಯನ್ನು ಮೊದಲು ಹರಿಯುವದೇ ಮನುಷ್ಯನ ಕರ್ತವ್ಯವೆಂದು ವಚನಕಾರನ ಅಭಿಪ್ರಾಯವು.

ಈ ಮೇರೆಗೆ ವಚನಕಾರನು ನೀತಿಯ ಬಗ್ಗೆ ಸಾಮಾನ್ಯವಾಗಿ ವಿವರಿಸಿ ಮುಂದೆ ನೈತಿಕಾಚರಣೆಯ ಬಗ್ಗೆ ಬೇರೆ ಬೇರೆ ವಿಷಯಗಳನ್ನು ಹೇಳಲು ಉದ್ಯುಕ್ತನಾಗುತ್ತಾನೆ.

**೪೭. ಹೊಲೆಯರ ಬಾವಿಯಲೊಂದು ಎಲು ನಟ್ಟಿದ್ದಡೆ ಹೊಲೆ ಹೊಲೆಯೆಂಬುದೀ ಲೋಕವೆಲ್ಲ. ಹಲು ವೆಲುವಿದ್ದ ಬಾಯಲ್ಲಿ ಒಲವರವ ನುಡಿದಡೆ ಅದು ಹೊಲೆಯರ ಬಾವಿಂದ ಕರಕಷ್ಟ ಕಾಣಾ ರಾಮನಾಥಾ.**

ಒಲವರ=ರವ್ಯುತೆ, ಪಕ್ಷಪಾತ, ವಿಷಯದ ಸಂತೋಷ; ಕರಕಷ್ಟ=ಬಹಳ ಕೆಟ್ಟದ್ದು.

ನೈತಿಕ ಆಚರಣೆಗೆ ಮನುಷ್ಯನು ತಾನೇ ಜವಾಬುದಾರನು, ಎರಡನೆಯವರಲ್ಲ ಎಂಬ ಅಭಿಪ್ರಾಯವನ್ನು ವಚನಕಾರನು ಇಲ್ಲಿ ತೋರಿಸಿದ್ದಾನೆ. ಮನುಷ್ಯನು ಇದನ್ನು ಲಕ್ಷಿಸದೆ, ಅವನು ಹೆರವರನ್ನು ಹೀಯಾಳಿಸುವದುಂಟು. ಈ ಬಗ್ಗೆ ವಚನಕಾರನು ಒಂದು ದೃಷ್ಟಾಂತವನ್ನು ಹೇಳಿದ್ದಾನೆ. ಏನಂದರೆ:—ಬಾವಿಯ ಮೇಲೊಂದು ಎಲುವು ನೆಟ್ಟಿದ್ದರೆ, ಅದು ಹೊಲೆಯರ ಬಾವಿ ಎಂದು ತಿಳಿದು ಅವರ ನೀರನ್ನು ಯಾರೂ ಮುಟ್ಟುವದಿಲ್ಲ. ಹೀಗೆ ಮಾಡುವದು ಅನ್ಯಾಯವೆಂದು ವಚನಕಾರನ ಅಭಿಪ್ರಾಯವು. ಯಾಕಂದರೆ ನಿಜವಾದ ಹೊಲೆಯರ ಬಾವಿಯು ಮನುಷ್ಯನ ಬಾಯಿಯೇ ಇರುತ್ತದೆ. ಇದರಲ್ಲಿ ಯಾವಾಗಲು ವಿಷಯರಸದ ಮಡುವು ತುಂಬಿಕೊಂಡಿರುತ್ತದೆ. ಮತ್ತು ಪರಮಾತ್ಮನಾದರೂ ಇದನ್ನು ತೋರಿಸಲಿಕ್ಕೆ ಅದರ ದಂಡೆಯಮೇಲೆ ಎಲುವುಗಳನ್ನು ನೆಟ್ಟಿದ್ದಾನೆ. ಈ ಎಲುವುಗಳು ಒಂದಲ್ಲ ಎರಡಲ್ಲ ಮೂವತ್ತೆರಡು ಇವೆ. ಆದ್ದರಿಂದ ಅನೀತಿಯ ವರ್ತನೆಯು ತನ್ನಲ್ಲಿಯೇ ಇದ್ದು ಅದಕ್ಕೆ ಕಾರಣವಾಗಿರುವದು ಅವನ ಮಾತುಗಳೇ ಹೊರ್ತು ಮತ್ತೊಂದಾವೂ ಇಲ್ಲವೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**೪೮. ಇತ್ತ ಬಾ ಎನ್ನದವನ ಹತ್ತೆ ಹೊದ್ದಲುಬೇಡ. ಇತ್ತ ಬಾ ಎಂಬ ಸದ್ಭಕ್ತನ ಮನೆಯ ಬಾಗಿಲ ಹತ್ತಿಪ್ಪೆ ಕಾಣಾ ರಾಮನಾಥಾ**

ಹತ್ತೆ=ಸಮೀಪ

ವಚನಕಾರನು ಇಲ್ಲಿ ಸದ್ಭಕ್ತರು ಯಾರಿರುವರೋ ಅವರ ಬಾಗಿಲ ಸಮೀಪದಲ್ಲಿ ಇರಬೇಕೆಂದು ಹೇಳಿದ್ದಾನೆ. ಈ ಸದ್ಭಕ್ತರು ಯಾವಾಗಲೂ ಸತ್ಕಾರ ಭಾವವುಳ್ಳವರಿರುವರು. ಅವರು ಮನೆಗೆ ಬಂದವರನ್ನು ಆದರಿಸಿ ಕರೆಯುತ್ತಾರೆ. ಇಂಥವರ ಬದಿಯಲ್ಲಿ ಇರಬೇಕೇ ಹೊರತು ಯಾರು ತನ್ನನ್ನು ಆದರಿಸಿ ಕರೆಯುವದಿಲ್ಲವೋ ಅಂಥವರೊಡನೆ ಇರಬೇಡವೆಂದು ಹೇಳಿದ್ದಾನೆ.

**೪೯. ಎತ್ತಪ್ಪೆ ಶರಣಂಗೆ. ತೊತ್ತಪ್ಪೆ ಶರಣಂಗೆ. ಭೃತ್ಯನಾಗಿ ಸದ್ಭಕ್ತರ ಮನೆಯ ಬಾಗಿಲ ಕಾಯ್ದಿಪ್ಪ ಸೊಣಗನಪ್ಪೆ. ಕರ್ತಾರ, ನಿನಗೆ ಕರನೆತ್ತಿ ಪೊಡೆವಡುವ ಭಕ್ತರ ಮನೆಯ ಹಿತ್ತಲ ಬೇಲಿಯಾಗಿಪ್ಪೆನ್ನೈ ರಾಮನಾಥಾ.**

ಸೊಣಗ=ನಾಯಿ; ಪೊಡೆವಡು=ನಮಸ್ಕಾರಮಾಡು.

ವಚನಕಾರನು ಭಕ್ತರೊಡನೆ ಹ್ಯಾಗೆ ನಡೆಯಬೇಕೆಂಬುದನ್ನು ಇಲ್ಲಿ ಬಹು ಸುಂದರವಾಗಿ ವಿವರಿಸಿದ್ದಾನೆ. ಶರಣರನ್ನು ಎತ್ತಿ ಹಿಡಿಯತಕ್ಕದ್ದು, ಅವರ ಸೇವೆಮಾಡತಕ್ಕದ್ದು, ಅವರು ಹೇಳಿದಂತೆ ಕೇಳತಕ್ಕದ್ದು, ಅವರ ರಕ್ಷಣೆಮಾಡತಕ್ಕದ್ದು ಮತ್ತು ಅವರ ಜೀನಸುಗಳನ್ನು ಕಾಪಾಡತಕ್ಕದ್ದು ಎಂದು ಇಲ್ಲಿ ಅವನು ಅನೇಕ ದೃಷ್ಟಾಂತಗಳನ್ನು ಕೊಟ್ಟು ಹೇಳಿದ್ದಾನೆ.

**೫೦. ಕೀಳು ಡೋಹರ ಕಕ್ಕ, ಕೀಳು ಮಾದರ ಚನ್ನ, ಕೀಳು ವಹಿಲ ದೇವ, ಕೀಳು ಉದ್ಭಟಯ್ಯ. ಕೀಳಿಂಗಲ್ಲದೆ ಹಯನು ಕರೆಯದು ಕಾಣಾ ರಾಮನಾಥಾ.**

ಪರಮಾತ್ಮನು ಒಲಿಯಬೇಕಾದರೆ ಮನುಷ್ಯನು ದೈನ್ಯ ಭಾವದಿಂದಿರಬೇಕೆಂದು ವಚನಕಾರನು ಇಲ್ಲಿ ಹೇಳಿದ್ದಾನೆ. ದೊಡ್ಡಸ್ತಿಕೆಯ ಅಹಂಭಾವವುಳ್ಳವರಿಗೆ ಎಂದೂ ಪರಮಾತ್ಮನು ಒಲಿಯನೆಂದು ಅವನ ಅಭಿಪ್ರಾಯವು. ಇದಕ್ಕೋಸ್ಕರ ಅವನು ಢೋಹರ ಕಕ್ಕಯ್ಯ, ಮಾದರ ಚನ್ನಯ್ಯ, ವಹಿಲಯ್ಯ ಮತ್ತು ಉದ್ಭಟಯ್ಯ ಈ ಶಿವಶರಣರ ಉದಾಹರ

ಣೆಗಳನ್ನು ಕೊಟ್ಟು ಅವುಗಳೊಡನೆ ಒಂದು ವ್ಯವಹಾರಿಕ ಉದಾಹರಣೆಯನ್ನೂ ಕೊಟ್ಟಿದ್ದಾನೆ. ಏನೆಂದರೆ, ಒಬ್ಬ ಮನುಷ್ಯನು ಆವಿನ ಹಾಲನ್ನು ದೊರಕಿಸ ಬೇಕಾದರೆ, ಅವನು ಅದರ ಅಡಿಯಲ್ಲಿದ್ದುಕೊಂಡು ಕೀಳಾಗಿ ಅದರೊಡನೆ ವರ್ತಿಸ ಬೇಕು. ಆಗ ಅದು ಹಾಲು ಕೊಡುತ್ತದೆ. ಅದರಂತೆಯೇ ಮನುಷ್ಯನು ಜಗತ್ತಿನಲ್ಲಿ ದೈನ್ಯ ಭಾವದಿಂದ ವ್ಯವಹರಿಸಿದಾಗ್ಗೆ ಅವನಿಗೆ ಮೋಕ್ಷವು ದೊರಕುತ್ತದೆಂದು ವಚನಕಾರನ ಭಾವವು.

**೫೧. ಭಕ್ತನ ಮಠವೆಂದು ಭಕ್ತ ಹೋದಡೆ ಆ ಭಕ್ತ ಭಕ್ತಂಗೆ ಅಡಿ ಇಟ್ಟು ಇದಿರೆದ್ದು ನಡೆದು ಹೊಡೆಗೆಡೆದು ಒಡಗೊಂಡು ಬಂದು ವಿಭೂತಿ ವೀಳೆಯುವನಿಕ್ಕಿ ಪಾದಾರ್ಚನೆಯಂ ಮಾಡಿ ಸಮಯುವನರಿತು ಲಿಂಗಾರ್ಚನೆಯಂ ಮಾಡಿಸಿ ಒಕ್ಕುದ ಕೊಂಡು ಓಲಾಡುತಿಪ್ಪುದೇ ಭಕ್ತಿ. ಹೀಗಲ್ಲದೆ ಬೆಬ್ಬನೆ ಬೆರೆತು ಬಿಬ್ಬನೆ ಬೀಗಿ ಅಹಂಕಾರ ಭರಿತನಾಗಿಪ್ಪವನ ಮನೆಯ ಲಿಂಗಸಮಾತರ ಹೊಗರು ಕಾಣಾ ರಾಮನಾಥಾ.**

ಹೊಡೆಗೆಡು=ನಮಸ್ಕಾರ ಮಾಡು; ಒಕ್ಕು=ಬಿಡು, ಕೊಡು; ಓಲಾಡು=ತೂಗಾಡು, ಆನಂದ ಪಡು; ಬೆರೆ=ಸೊಕ್ಕಿನಿಂದ ನಡೆ; ಬೀಗು=ಉಬ್ಬು, ಗರ್ವಿಸು, ಸಮಾತ=ಒಪ್ಪಿಗೆ

ಇದರಲ್ಲಿ ವಚನಕಾರನು ಭಕ್ತರು ಭಕ್ತರೊಡನೆ ಹ್ಯಾಗೆ ವಿನಯ ಭಾವದಿಂದ ನಡೆಯ ಬೇಕೆಂಬುದನ್ನು ವರ್ಣಿಸಿದ್ದಾನೆ. ಅರ್ಥವು ಸ್ಪಷ್ಟವದೆ.

**೫೨. ಒಡೆಯರನೊಡಗೊಂಡು ಬಂದು ಕೈಗಡಿಗೆಯ ನೀರ ಕೈಯ್ಯಲ್ಲಿ ಕೊಟ್ಟು, ಒಡೆಯರೆ ಕಾಲತೊಳಕೋ ಎಂಬವರ ಮನೆಗೆ ಅಡಿ ಇಡಲಾಗದೈಯ್ಯ ಮೃಡಶರಣರು. ಒಡಲಿಚ್ಛೆಗೆ ಬಡಮನವ ಮಾಡಿ ಹೊಕ್ಕುಂಬವರ ಎನಗೊಮ್ಮೆ ತೋರದಿರಾ ರಾಮನಾಥಾ.**

ಕೂಳಿಗೆ ಆಸೆ ಮಾಡಿ, ಎಲ್ಲಿ ತನಗೆ ಆದರ ದೊರೆಯುವದಿಲ್ಲವೋ ಅಲ್ಲಿಗೆ ಹೋಗಿ, ಅಪಮಾನವನ್ನು ಹೊಂದಿ ಊಟ ಮಾಡಿ ಬರಬೇಡಿರೆಂದು ವಚನಕಾರನು ಇಲ್ಲಿ ಜಂಗಮರನ್ನು ಉದ್ದೇಶಿಸಿ ಹೇಳಿದ್ದಾನೆ.

**೫೩ ಹಾಸಿಗೆ ಹೊರಸೇಕೆ? ಲೇಸೇಕೆ ನಿಮ್ಮ ಭೃತ್ಯ ನಿಗೆ? ನಿಮ್ಮ ಸಾತ್ವಿಕರಿದಿರಲು ಕುಳ್ಳಿರಲೇಕೆ? ಸರಿ ಪಂಕ್ತಿ ಎಂಬ ಹೇಸಿಕೆಯುಂಟೇ ರಾಮನಾಥಾ?**

ಭಕ್ತನಾದವನು ಉತ್ತಮರಾದವರೊಡನೆ ಹ್ಯಾಗೆ ವರ್ತಿಸಬೇಕೆಂಬುದನ್ನು ಇಲ್ಲಿ ವಚನಕಾರನು ವಿವರಿಸಿದ್ದಾನೆ. ಅವನು ಅವರೊಡನೆ ಸಮಾನತ್ವದಿಂದ ನಡೆಯದೆ ಕೇವಲ ಭೃತ್ಯ ಭಾವದಿಂದ ನಡೆಯಬೇಕೆಂದು ಹೇಳಿದ್ದಾನೆ.

**೫೪. ಅರ್ಥ ಉಂಟೆಂದು ಅಹಂಕರಿಸಿ ಮಾಡುವನ ಭಕ್ತಿ ತೊತ್ತಿನ ಕೂಟದ ತೂರ್ಯದ ಮೇಳದಂತೆ. ತನು ಮನ ಧನದಲ್ಲಿ ವಂಚನೆಯುಳ್ಳ ಪ್ರಪಂಚಿಯ ಮನೆಯ ಕೂಳು ಶುನಕನ ಬಾಯ ಎಲುವ ಪ್ರತಿ ಶುನಕ ತಿಂದಂತೆ ಕಾಣಾ ರಾಮನಾಥಾ**

ತೂರ್ಯ=ಸಂತೋಷ

ಅಹಂಕಾರ ಭರಿತನಾಗಿ ಯಾವನು ಭಕ್ತಿಯನ್ನು ಮಾಡಲೆಣಿಸುತ್ತಾನೋ, ಅವನು ಎಷ್ಟು ಶ್ರೀಮಂತನಿದ್ದರೂ ಕೂಡ, ಅವನ ಪದಾರ್ಥಗಳನ್ನು ಯಾರೂ ಸೇವಿಸ ಬಾರದೆಂದು ವಚನಕಾರನ ಅಭಿಪ್ರಾಯವು. ಯಾಕಂದರೆ ಇವನಲ್ಲಿ ಅರ್ಪಣ ಭಾವವಿರುವದಿಲ್ಲ. ಇವನು ತನುಮನ ಧನಗಳನ್ನು ವಂಚಿಸಿ ಮಾಡುತ್ತಾನೆ. ಇವನು ಕೇವಲ ಪ್ರಪಂಚಿಯು. ಇಂಥವನು ಕೊಡುವ ಪದಾರ್ಥಗಳನ್ನು ಕೈಕೊಳ್ಳುವದೆಂದರೆ ಒಂದು ನಾಯಿಯು ತಿನ್ನುತ್ತಿದ್ದ ಕೂಳನ್ನು ಮತ್ತೊಂದು ನಾಯಿಯು ಬಂದು ಕಸೆದುಕೊಂಡು ತಿನ್ನುವಂತೆಯೇ ಸರಿ ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

ದೇವರ ದಾಸಿಮಯ್ಯನು ಸ್ತ್ರೀಯರ ವಿಷಯವಾಗಿ ಬಹಳ ಉಚ್ಚ ಕಲ್ಪನೆಯುಳ್ಳವನಾಗಿದ್ದಾನೆ. ಅವನು ತನ್ನ ವಚನಗಳಲ್ಲಿ ಅವರಿಗೆ ಬಹಳ ಮಹತ್ವ ಕೊಟ್ಟಿರುತ್ತಾನೆ. ಇದನ್ನು ಮುಂದಿನ ವಚನಗಳಲ್ಲಿ ವಾಚಕರು ಕಾಣಬಹುದು.

**೫೫. ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಸತಿಪತಿಗಳೊಂದಾಗದವನ ಭಕ್ತಿ ಅಮೃತದೊಳು ವಿಷ ಬೆರೆದಂತೆ ಕಾಣಾ ರಾಮನಾಥಾ.**

ಸತಿಪತಿಗಳು ಸಹಕಾರದಿಂದ ವರ್ತಿಸುವದು ಎಷ್ಟು ಮಹತ್ವದ್ದೆಂಬದನ್ನು ದೇವರ ದಾಸಿಮಯ್ಯನು ಇಲ್ಲಿ ಬಹು ಸುಂದರವಾಗಿ ಹೇಳಿದ್ದಾನೆ. ಯಾವ ದಂಪತಿಗಳು ಪರಸ್ಪರ ಸಹಾಯಕರಾಗಿ ಶಿವನೊಡನೆ ಭಕ್ತಿಯಿಂದ ವರ್ತಿಸುತ್ತಾರೋ, ಅವರ ಭಕ್ತಿಯು ಈಶ್ವರನಿಗೆ ಪ್ರಿಯವಾಗುವದು. ಇಲ್ಲದಿದ್ದರೆ ಅಮೃತದಲ್ಲಿ ವಿಷ ಬೆರೆದಂತೆಯೇ ಸರಿ ಎಂದು ಹೇಳಿದ್ದಾನೆ. ಅಂದರೆ ಸತಿಯನ್ನೊಡಗೂಡದೆ ಭಕ್ತಿಯನ್ನಾಚರಿಸುವದು ವ್ಯರ್ಥವೆಂದು ವಚನಕಾರನ ಅಭಿಪ್ರಾಯವು.

**೫೬. ಗಂಡ ಭಕ್ತನಾಗಿ ಹೆಂಡತಿ ಭವಿಯಾದಡೆ ಉಂಡ ಊಟ ಇಬ್ಬರಿಗೂ ಸರಿಭಾಗ. ಸತ್ತ ನಾಯ ತಂದಟ್ಟದ ಮೇಲೆ ಇಳುಹಿ ಒಬ್ಬರೊಪ್ಪಚ್ಚಿಯ ಹಂಚಿಕೊಂಡು ತಿಂಬಂತೆ ಕಾಣಾ ರಾಮನಾಥಾ.**

ಒಪ್ಪಚ್ಚಿ=ಸ್ವಲ್ಪ, ತುಸು

ಯಾವನು ತಾನೊಬ್ಬನೇ ಭಕ್ತಿಯಿಂದಾಚರಿಸಿ, ತನ್ನ ಸ್ತ್ರೀಯನ್ನು ಬೇರೆ ವಿಧವಾಗಿ ಆಚರಿಸುವಂತೆ ಮಾಡಗೊಡುತ್ತಾನೋ ಅಂಥವನನ್ನು ವಚನಕಾರನು ಇಲ್ಲಿ ಅತ್ಯಂತ ಹಳಿದಿದ್ದಾನೆ. ಸ್ತ್ರೀಯನ್ನು ಬಿಟ್ಟುಕೊಟ್ಟು ತಾನೊಬ್ಬನೇ ಶುದ್ಧಭಾವದಿಂದ ಗ್ರಹದಲ್ಲಿ ಆಚರಿಸುವದು ಆಗದೆಂದು ವಚನಕಾರನ ಅಭಿಪ್ರಾಯವು. ಹೀಗೆ ಆಚರಿಸುವವರು ಒಂದು ಸತ್ತನಾಯನ್ನು ತಂದು ಅಟ್ಟದ ಮೇಲಿಟ್ಟು ಇಬ್ಬರೂ ಅದನ್ನು ತುಸು ತುಸು ತಿಂದಂತೆಯೇ ಸರಿ ಎಂದು ಇಂಥವರನ್ನು ಬಹು ತಿರಸ್ಕಾರಭಾವದಿಂದ ಇಲ್ಲಿ ಹಳಿದಿದ್ದಾನೆ. ತಾನು ಹ್ಯಾಗೆ ಇದ್ದಾನೋ ಹಾಗೆಯೇ ಸ್ವಸ್ತ್ರೀಯನ್ನೂ ಮಾಡುವದು ಪತಿಯ ಕರ್ತವ್ಯವೆಂದು ವಚನಕಾರನ ಅಭಿಪ್ರಾಯವು.

**೫೭. ಗಂಡನುಳ್ಳವಳ್ಮನ ಗೌರಿ ಎಂದು ಕಂಡಡೆ, ಭೂಮಂಡಲಕ್ಕೆ ಅರಸಾಗಿ ಪುಟ್ಟುವನಾತನು. ಗಂಡನುಳ್ಳವಳ್ಮನ ಒಡವೆರೆದಾತ ನರಕದಲ್ಲಿ ದಿಂಡುಗೆಡೆದಿಪ್ಪನೈ ರಾಮನಾಥಾ.**

ದಿಂಡುಗೆಡೆ= ತೊಲೆಯಂತೆ ನೆಲಕ್ಕೆ ಬೀಳು

ಯಾವ ಸ್ತ್ರೀಯು ಪತಿಯುಕ್ತಳಾಗಿದ್ದಾಳೋ ಆಕೆಯು ಪ್ರತ್ಯಕ್ಷ ಪರಮೇಶ್ವರನ ಹೆಂಡತಿಯಾದ ಪಾರ್ವತೀ ದೇವಿಯಂತೆ ಕಾಣಬೇಕೆಂದು ವಚನಕಾರನು ಇಲ್ಲಿ ಹೇಳಿದ್ದಾನೆ. ಆಕೆಯನ್ನು ಅತ್ಯಂತವಾಗಿ ಆದರಿಸಬೇಕಂದು ಅವನ ಅಭಿಪ್ರಾಯವು. ಹೀಗೆ ಯಾರು ವರ್ತಿಸುತ್ತಾರೋ ಅವರು ಮುಂದಿನ ಜನ್ಮದಲ್ಲಿ ಅರಸಾಗಿ ಹುಟ್ಟುವರು. ಆದರೆ ಯಾರು ಹೀಗೆ ವರ್ತಿಸದೆ, ಅವರನ್ನು ಅವಮಾನ ಬಡಿಸುತ್ತಾರೋ ಅವರನ್ನು ಪರಮಾತ್ಮನು ನರಕದಲ್ಲಿ ದಬ್ಬುವನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**೫೮. ಶಿವಭಕ್ತರು ತಮ್ಮ ನಿಜಕೈಲಾಸಕ್ಕೆ ಹೋದರೆ, ಅವರರಸಿಯು ಪಾರ್ವತಿಯುಸರಿ ಎಂದು ಕಾಣಲಿಬೇಕು. ಅಲ್ಲಿ ಅನುಸರಣೆಯು ಕೊಟ್ಟು ಬೆರಸಿ ಮಾತನಾಡುವ ನರಕಿಗಳನೇನೆಂಬೆ ರಾಮನಾಥಾ?**

ಅನುಸರಣೆ=ಅಯೋಗ್ಯವರ್ತನೆ; ಬೆರೆ=ಸೊಕ್ಕಿನಿಂದ ನಡೆ;

ಈ ಪ್ರಕಾರ ದೇವರ ದಾಸಿಮಯ್ಯನು ಕೇವಲ ಗಂಡನಿದ್ದಂಥ ಸ್ತ್ರೀಯರಕೂಡ ಅಷ್ಟೇ ಅಲ್ಲ, ಗಂಡ ಸತ್ತಂಥ ವಿಧವೆಯರ ಕೂಡವೂ ಹೀಗೆಯೇ ಅತ್ಯಾದರದಿಂದ ವರ್ತಿಸಬೇಕೆಂದು ಅವನು ಇಲ್ಲಿ ಹೇಳಿದ್ದಾನೆ. ಅವರೂ ಪಾರ್ವತಿಯು ಸರಿ ಎಂದು ಕಾಣಬೇಕು. ಹಾಗೆ ಇರದೆ ಯಾರು ಸೊಕ್ಕಿನಿಂದ ಅವರೊಡನೆ ನಡೆಯುತ್ತಾರೋ ಅವರು ನರಕಕ್ಕೆ ಹೋಗುವರೆಂದು ವಚನಕಾರನ ಅಭಿಪ್ರಾಯವು. ರಂಡೆ ಮುಂಡೆಯರು ಅಶುಭರಲ್ಲ, ಅವರೂ ಪಾರ್ವತಿಯು ಸಮಾನರು.

**೫೯. ಅಡಗ ತಿಂಬರು ಕಣಕದಡಿಗೆ ಇರಲ್ಕೆ. ಸುರೆಯು ಕುಡಿವರು ಹಾಲಿರಲ್ಕೆ. ಮುಕ್ಕುವರು ಭಂಗಿಯು ಸಕ್ಕರೆ ಇರಲ್ಕೆ. ಸ್ವಸ್ತ್ರೀ ಇದ್ದಂತೆ ಪರಸ್ತ್ರೀಯರಿಗೆ ಅಳುಪುವರು. ಸತ್ತನಾಯು ಭಕ್ಷಿಸುವ ಹಡಕಿಗರನೇನೆಂಬೆನಯ್ಯಾ ರಾಮನಾಥಾ?**

ಅಡಗ=ಮಾಂಸ; ಅಳುಪು=ತೊಂದರೆಕೊಡು; ಹಡಿಕಿ=ಹೊಲಸು

ಯಾರು ವ್ಯಭಿಚಾರವಮಾಡುತ್ತಾರೋ ಅವರು ತಿನ್ನತಕ್ಕಂಥ ಹಿತ ಕರವಾದ ಅನೇಕ ವಸ್ತುಗಳು ಇದ್ದರೂ ಅವುಗಳನ್ನು ಬಿಟ್ಟು ಕೊಟ್ಟು ಹಿತವಲ್ಲದ ಪದಾರ್ಥಗಳನ್ನು ತಿಂದಂತೆಯೇ ಸರಿ ಎಂದು ಹೇಳಿದ್ದಾನೆ.

**೬೦. ಗುರುನಿರೂಪವ ಮಾಡರು. ಪರವಧುವ ನೆರೆವರು. ಪರಧನವನಳುಪುವರು. ಗುರುವಿಲ್ಲವವರಿಗೆ. ಪರವಿಲ್ಲವವರಿಗೆ. ಇಂತಪ್ಪ ನರಕಿಗಳ ನೆನಗೊಮ್ಮೆ ತೋರದಿರಾ ರಾಮನಾಥಾ.**

ನಿರೂಪ=ಆಜ್ಞೆ; ನೆರೆ=ಕೂಡು;

ಯಾರು ಗುರುವಿನಾಜ್ಞೆಯನ್ನು ಮೀರುತ್ತಾರೋ, ಯಾರು ಪರವಧುವನ್ನು ಕೂಡುತ್ತಾರೋ, ಯಾರು ಪರಧನವನ್ನು ತುಡುಕುತ್ತಾರೋ, ಇಂಥವರಿಗೆ ಗುರುವಿಲ್ಲ, ಮುಕ್ತಿಇಲ್ಲವೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**೬೧. ಪರವಧುವ ನೆರೆಯದೆ ಪರಧನವ ತುಡುಕದೆ ಪರದೈವದಿಚ್ಛೆನಡೆಯದೆ ಗುರುಲಿಂಗಜಂಗಮಕ್ಕೆ ವರದಾಸ ನಾದಾತನೆ ಧರೆಮೂರಕ್ಕೆ ಗುರುವಾಗಿಪ್ಪನೈ ರಾಮನಾಥಾ.**

ಕೇವಲ ಗುರುಲಿಂಗ ಜಂಗಮದ ಪೂಜಾಮಾತ್ರದಿಂದ ಮನುಷ್ಯನಿಗೆ ಮೋಕ್ಷವು ಲಭಿಸಲಾರದು. ಆದರೆ ಇದರೊಡನೆ ಆತನು ಪತ್ನೀವ್ರತನಾಗಿಯೂ ಲೋಭರಹಿತನಾಗಿಯೂ ಏಕದೈವ ನಿಷ್ಠಾಪರನಾಗಿಯೂ ಇರುವದು ಅವಶ್ಯವೆಂದು ವಚನಕಾರನು ಇಲ್ಲಿ ಅಂದಿದ್ದಾನೆ. ಅವನು ಇಲ್ಲಿ ನೀತಿಯ ಆಚರಣೆಗೆ ಬಹಳ ಮಹತ್ವಕೊಟ್ಟಿದ್ದಾನೆ.

**೬೨. ಸಾಸುವೆಯ ಮಟ್ಟೆ ಭಕ್ತಿಯುಳ್ಳನ್ನಕ್ಕ ವೇಶಿಯ ಮುಟ್ಟಿದಡೆ ಹೊಲೆಯರ ಮನೆಯಮುರುಹ ಹೊರಗಿರಿಸಿದಡೆ, ಹಂದಿ ಬಂದು ಮೂಸಿ ನೋವಂತೆ ಕಾಣಾ ರಾಮನಾಥಾ.**

ಮಟ್ಟೆ=ಪ್ರಮಾಣ; ಮುರುಹವಮಾಂಸ

ಭಕ್ತಿಯುತನಾದ ಒಳಿತ ವೇಶ್ಯಾಗಮನವನ್ನು ಸಂಪೂರ್ಣವಾಗಿ ತ್ಯಜಿಸಬೇಕೆಂದು ವಚನಕಾರನ ಅಭಿಪ್ರಾಯವು. ಹೀಗೆ ವರ್ತಿಸದೆ ಇದ್ದರೆ ಹೊಲೆಯರ ಮನೆಯ ಮಾಂಸವನ್ನು ಹಂದಿ ತಿಂದಂತೆಯೇ ಸರಿ ಎಂದು ಇಲ್ಲಿ ಹೇಳಿದ್ದಾನೆ.

**೬೩. ಈಶನ ಶರಣರು ವೇಶಿಯ ಹೋದರೆ, ಬೀಸ ಲೋಗರವ ಹೊರಗಿರಿಸಿದಡೆ, ಹಂದಿ ಮೂಸಿ ನೋಡಿ ದಂತೆ ಕಾಣಾ ರಾಮನಾಥಾ.**

ಓಗರ=ಅನ್ನ

ಹಿಂದಿನ ವಚನದ ಭಾವವನ್ನೇ ವಚನಕಾರನು ಪುನಃ ಇಲ್ಲಿ ಬೇರೊಂದು ವಿಧವಾಗಿ ಹೇಳಿದ್ದಾನೆ.

**೬೪. ವೇಶಿಯ ಎಂಜಲ ತಿಂದು ಈಶ್ವರ ಪ್ರಸಾದವ ಭುಂಜಿಸಿದೊಡೆ ಓಸರಿಸಿತ್ತಯ್ಯ ಲಿಂಗವು. ಆತ ದ್ರೋಹಿ. ಭಾಷೆ ತಪ್ಪುಕನವನು ಭವದಲ್ಲಿ ಬಳಲುವನು. ಅಂತಹ ವನ ಕಂಡು ಹೇಸಿ ಕಡೆಗೆ ತೊಲಗಿದೆನು ಕಾಣಾ ರಾಮನಾಥಾ.**

ಓಸರಿಸು=ಹಿಂಜರಿ; ಭವ=ಸಂಸಾರ

ಲಿಂಗವಂತನು ಯಾವಾಗಲೂ ಈಶ್ವರನ ಪ್ರಸಾದವನ್ನು ಭುಂಜಿಸಿ ಆದಕ್ಕನುಸಾರವಾಗಿ ನಡೆಯುವದು ಅವನ ಕರ್ತವ್ಯವಾಗಿದೆ. ಇಂಥವನು ವೇಶಿಯರೊಡನೆ ಇದ್ದರೆ ಅವನು ಲಿಂಗದ್ರೋಹಿಯು, ಅವನು ಯಾವಾಗಲೂ ಪ್ರಪಂಚದ ತೊಂದರೆಯಲ್ಲಿ ಬಳಲುವನು ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**೬೫. ಹೆಣ್ಣ ಕಂಡು ಹೆಚ್ಚಿ ಹೆಕ್ಕಳ ಬಡುವಂತೆ ಕಣ್ಣಿಟ್ಟು ನೋಡದಿರಾ. ಶಿವಲಿಂಗ ದೇವನ ಕರಣದಿಚ್ಛೆಗೆ ಹರಿದು ನರಕದಲ್ಲಿ ನೆರೆದು ಬರುದೊರೆವೋಗದೆ ಮರೆಯದೆ ಪೂಜಿಸು ನಮ್ಮ ರಾಮನಾಥಾ.**

ಹೆಚ್ಚು=ಉಬ್ಬು; ಹೆಕ್ಕಳಬಡು= ಹೆಚ್ಚಾಗು, ಉನ್ಮತ್ತನಾಗು; ಬರುದೊರೆ= ನೀರಿಲ್ಲದ ನದಿ

ಲಿಂಗವಂತನ ಇಂದ್ರಿಯಗಳು ಯಾವಾಗಲೂ ಲಿಂಗಾಧೀನವಾಗಿರ ತಕ್ಕದ್ದು. ಆದ್ದರಿಂದ ಅವು ಯಾವಾಗಲೂ ಶುದ್ಧವಾಗಿರತಕ್ಕದ್ದು. ಇಂಥವನು ಸ್ತ್ರೀಯರಿಗೆ ಪರವಶನಾಗಿ ಆಚರಿಸುವದು ಲಿಂಗಾಚರಣೆಗೆ ವಿರೋಧವಾದದ್ದು. ಇವನ ಸ್ಥಿತಿಯು ನೀರಡಿಸಿದವನು ನೀರು ಕುಡಿಯಲಿಕ್ಕೆ ನೀರಿಲ್ಲದ ಹೊಳೆಗೆ ಹೋದಂತೆಯೇ ಸರಿ ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**೬೬. ಶಿವಪೂಜೆ ಎತ್ತ? ವಿಷಯದ ಸವಿ ಎತ್ತ? ಆ ವಿಷಯದ ಸವಿ ತಲೆಗೇರಿ ಶಿವಪೂಜೆಯ ಬಿಟ್ಟು ವೇಶಿಯರ ಎಂಜಲ ಹೇಸದೆ ತಿಂಬ ದ್ರೋಹಿಗಳನೇನೆಂಬೆನೈ ರಾಮನಾಥಾ?**

ಇಂದ್ರಿಯೋಪಭೋಗದ ಸುಖವು ಪರಮಾತ್ಮನಲ್ಲಿ ವಿಶ್ವಾಸವಿಟ್ಟು ಪೂಜಿಸುವ ಸುಖಕ್ಕೆ ಎಂದಿಗೂ ಸಮ ಬಾರದೆಂದು ವಚನಕಾರನ ಅಭಿಪ್ರಾಯವು.

**೬೭. ಆಸೆ ಪರಿಣಾಮಕ್ಕೆ ಬೇಸತ್ತು ಹೋಯಿತ್ತು, ಆಶ್ರಯದ ನಿಃಕ್ರಿ ಕೆಟ್ಟಿತ್ತು, ಗ್ರಾಸ ನೊಲ್ಲನಾಯಿತ್ತು, ಸ್ತ್ರೀಯರ ಮೋಲಣೆಚ್ಚೆ ಕೆಟ್ಟಿತ್ತು, ಈಶ್ವರಾ ನಿಮ್ಮ ಪಾದಾಂಬುಜ ಸೇವೆಯಿಂದ ಕಾಣಾ ರಾಮನಾಥಾ.**

ವಚನಕಾರನು ಪರಮಾತ್ಮನ ಸೇವೆಯಿಂದ ಆಗುವ ಫಲಗಳನ್ನು ಇಲ್ಲಿ ವಿವರಿಸಿದ್ದಾನೆ. ಆತನ ಸೇವೆಯಿಂದ ಮನುಷ್ಯನ ಮನಸ್ಸಿನಲ್ಲಿ ಒಂದು ಬಗೆಯ ಪರಿಣಾಮ ಅಂದರೆ ಆನಂದವಾಗುತ್ತದೆ. ಈ ಆನಂದದಿಂದ ದುರಾಶೆಗಳು ಹೋಗಿ ಬಿಡುತ್ತವೆ. ಕ್ರಿಯಾರಹಿತನಾಗಿ ವರ್ತಿಸುವ ಯಾವ ಲಿಂಗಾಂಗಿಯ ರೀತಿಯೋ ಅದಾದರೂ ನಿಂತು ಹೋಗುತ್ತದೆ. ನಾಲಿಗೆಯ ರುಚಿಗೆ ಒಲಿದು ಭುಂಜಿಸುವ ವೃತ್ತಿಯಾದರೂ ಕಡಿಮೆಯಾಗುತ್ತದೆ. ಸ್ತ್ರೀ ವ್ಯಾಮೋಹವೂ ತಗ್ಗುತ್ತದೆ ಎಂದು ಹೇಳುತ್ತಾನೆ.

## ಪ್ರಾರ್ಥನೆಯ ವಚನಗಳು.

ಹಿಂದಿನ ವಚನಗಳಲ್ಲಿ ದೇವರದಾಸಿಮಯ್ಯನು ಭಕ್ತನ ಆಚರಣೆಗಳ ವಿಷಯವಾಗಿ ಬೋಧಿಸಿದ್ದಾನೆ. ಭಕ್ತನು ಪ್ರಪಂಚದ ವ್ಯಾಮೋಹದಲ್ಲಿ ಸಿಲುಕದೆ ವರ್ತಿಸತಕ್ಕದ್ದು, ಅವನು ಪರಮಾತ್ಮನಲ್ಲಿ ಅತ್ಯಂತ ವಿಶ್ವಾಸವುಳ್ಳವನಾಗಿರತಕ್ಕದ್ದು, ನೀತಿಯಿಂದ ನಡೆಯತಕ್ಕದ್ದು ಎಂದು ಮೊದಲಾಗಿ ವಿವರಿಸಿ ಮುಂದಿನ ವಚನಗಳಲ್ಲಿ ಅವನು ಪರಮಾತ್ಮನಲ್ಲಿ ಅತ್ಯಂತ ಭಕ್ತಿ ಪೂರಿತ ಮನಸ್ಕನಾಗಿ ಅವನನ್ನು ಸ್ತುತಿಯಿಸತೊಡಗುತ್ತಾನೆ. ಇವುಗಳಲ್ಲಿ ಅವನು ಪರಮಾತ್ಮನ ಅಸದೃಶ ಸಾಮರ್ಥ್ಯ, ಅವನ ಉದಾರಭಾವ ಮೊದಲಾದವುಗಳನ್ನು ಮನಸ್ಸಿನಲ್ಲಿ ತಂದುಕೊಂಡು, ಅವನ ಬಗ್ಗೆ ಭಕ್ತಿಯುಳ್ಳವನಾಗಿ ನಾನಾಬಗೆಯಾಗಿ ಹಾಡುತ್ತಾನೆ.

**೬೮. ಕಲಿವೀರ ಕಡಿವಲ್ಲಿ ಬಲುವಿಷವು ಸುಡುವಲ್ಲಿ ನೆಲೆಗೆಟ್ಟು ಮೊರೆಯೋ ಎಂಬಲ್ಲಿ, ನಿಮ್ಮ ತಲೆಗಾದು ರಕ್ಷಿಸಿದ ಸುಲಭನನರಿಯರೇ ಹೊಲೆಯರಿರಾ ಸಲೆ ನಂಬಿ ಬದುಕಿರೋ ರಾಮನಾಥಾ.**

ಇದರಲ್ಲಿ ವಚನಕಾರನು ಪರಮಾತ್ಮನು ಮಹಾಸಮರ್ಥನೆಂದು ಮೊದಲು ಹೇಳಿ ಅದಕ್ಕೆ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾನೆ. ನಾರಸಿಂಹನು ಹಿರಣ್ಯಕಶ್ಯಿಪುವಿನ ವಧೆಯನ್ನು ಮಾಡಿ ಲೋಕ ಸಂಹಾರಕ್ಕೆ ಉದ್ಯುಕ್ತನಾದನು. ಮತ್ತು ಸಮುದ್ರಮಂಥನ ಮಾಡುವಾಗ್ಗೆ ಮಹಾವಿಷವು ಹುಟ್ಟಿ ಲೋಕವನ್ನು ದಹಿಸತೊಡಗಿತು. ಅಂಥ ಸಮಯದಲ್ಲಿ ಮಹಾ ಸಮರ್ಥನಾದ ಪರಮೇಶ್ವರನು ಜಗತ್ತನ್ನು ರಕ್ಷಿಸಿದನು. ಹೀಗೆ ಅವನು ಇದ್ದರೂ ಅವನನ್ನು ಕಾಣಲು ಸುಲಭವೆಂದು ವಚನಕಾರನು ಇಲ್ಲಿ ಹೇಳಿದ್ದಾನೆ. ಯಾರು ಅವನನ್ನು ನಂಬುತ್ತಾರೋ ಅವರಿಗೆ ಅವನ್ನು ಸುಲಭನೆಂದು ಅವನ ಅಭಿಪ್ರಾಯವು. ಆದ್ದರಿಂದ ಪರಮಾತ್ಮನನ್ನು ನಂಬಿ ಬದುಕಿರೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**೬೯. ಕುಲಸ್ವಾಮಿ ನಿಮ್ಮುವನರಿವುದ ಕಂಡಡೆ ತಲೆವಾಗುವೆ, ಕಾತ ಕಳವೆಯಂತೆ. ಕುಲಜ ನಾನೆಂದು ತಲೆವಾಗದಿದ್ದಡೆ ತಲೆಶೂಲದ ತಲೆಯಯ್ಯಾ ರಾಮನಾಥಾ**

ಕಾತ=ತುಂಬಿ ಹಣ್ಣಾದ ; ಕುಲಜ = ಉತ್ತಮ ಕುಲದವ.

ವಚನಕಾರನು ಪರಮಾತ್ಮನ ವಿಷಯವಾಗಿ ಅನ್ನುವದೇನಂದರೆ, ಆವನು ಮಹಾ ಮಹಿಮನು. ಅವನ ಮಹಿಮೆಯನ್ನು ಕಂಡು ನಾನು ಆಶ್ಚರ್ಯ ಚಕಿತನಾಗಿದ್ದೇನೆ. ಮತ್ತು ನಾನು ತೆನೆ ಇಕ್ಕಿದ ಬತ್ತದ ಹುಲ್ಲಿನಂತೆ ತಲೆ ಬೊಗ್ಗಿಸಿಕೊಂಡಿದ್ದೇನೆ. ಅವನೇ ನನ್ನ ಕುಲಸ್ವಾಮಿಯು ಎಂದು ನಾನು ತಿಳಿಯತಕ್ಕದ್ದು. ಹೀಗೆ ತಿಳಿಯದೆ, ನಾನೇ ಕುಲದಲ್ಲಿ ಶ್ರೇಷ್ಠನೆಂದು ಗರ್ವತಾಳಿ ಪರಮಾತ್ಮನನ್ನು ಕಣ್ಣೆತ್ತಿ ನೋಡದಿದ್ದರೆ, ಆ ನನ್ನ ತಲೆಯು ತಲೆಶೂಲಿಯ ತಲೆಯು ಎಂದು ವಚನಕಾರನು ತನ್ನನ್ನು ಹೀಯಾಳಿಸಿಕೊಂಡಿದ್ದಾನೆ.

**೨೦. ನೀನೀಶನೀಯದೆ ಮಾನೀಶನೀವನೆ? ನೀನೀಸುವ ಕಾರಣ ಮಾನೀಶನೀವನು. ಆ ಮಾನೀಶನ ಹೃದಯದೊಳು ಪೊಕ್ಕು ನೀನೀಸುವ ಕಾರಣದಿಂದೆ ನೀನೆ ಶರಣೆಂಬೆನೈಯ್ಯ ರಾಮನಾಥಾ.**

ಮಾನೀಶ = ಮನುಷ್ಯ; ಈಸು = ಕೊಡು;

ಪರಮಾತ್ಮನು ಜಗತ್ತಿನ ವ್ಯವಹಾರಗಳಿಗೆಲ್ಲ ಪ್ರೇರಕನಾಗಿದ್ದಾನೆ. ಅವನ ಇಚ್ಛಾ ಮಾತ್ರದಿಂದ ಜಗತ್ತಿನ ಕಾರ್ಯಗಳು ನಡೆಯುತ್ತವೆ. ಆದ್ದರಿಂದ ಮನುಷ್ಯನಲ್ಲಿ ಕೊಡುವ ಗುಣವನ್ನು ಹುಟ್ಟಿಸುವವನು ಪರಮಾತ್ಮನೇ ಇದ್ದಾನೆ. ಆದ್ದರಿಂದ ವಚನಕಾರನು ಅನ್ನುವದೇನಂದರೆ, ನನಗೆ ಏನಾದರೂ ಬೇಕಾದರೆ ಮಾನವರನ್ನು ಬೇಡಲಾರೆನು. ಆದರೆ ಪರಮಾತ್ಮನನ್ನೇ ಬೇಡಿಕೊಳ್ಳುವೆನೆಂದು ಹೇಳುತ್ತಾನೆ. ಮನುಷ್ಯನಿಗೆ ಜಗತ್ತಿನಲ್ಲಿ ಅನೇಕ ಸಂಕಟಗಳು ಬರುವದುಂಟು. ಆ ಸಮಯದಲ್ಲಿ ಜನರ ಮೇಲೆ ಅವಲಂಬಿಸದೆ ಪರಮಾತ್ಮನನ್ನೇ ಶರಣು ಹೊಕ್ಕು ವರ್ತಿಸಬೇಕೆಂದು ವಚನಕಾರನ ಅಭಿಪ್ರಾಯವು.

**೨೧ ಒರತೆಗಳ ಕಂಡಿಂತು ಕೆಲರು ಬಾವಿಯ ತೋಡೆಂಬರು. ಅರನಟಿಗೆ ಛತ್ರವು ತಮ್ಮದೆಂಬರು. ಪಮಿರ್ಕೈದದಿರೆ, ಸುರಿವ ಮಳೆಯು ಸುರಿಸದಿದ್ದರೆ, ಅವರೇತರದಲ್ಲಿ ನೀಷು ತರಯ್ಯಾ ರಾಮನಾಥಾ?**

ನದಿಯ ಪಾತ್ರದಲ್ಲಿರುವ ಒರತೆಗಳನ್ನು ನೋಡಿ. ಜನರು ಬಾವಿಗಳನ್ನು ಅಗಿಯುತ್ತಾರೆ. ಮತ್ತು ಅರವಟಿಗೆ ಛತ್ರಗಳನ್ನೂ ಇಡುತ್ತಾರೆ. ಈ ಕಾರ್ಯಗಳನ್ನು ಮಾಡಿ ತಾವು ಬಹು ಪುಣ್ಯ ಮಾಡಿದೆನೆಂದು ಹೇಳಿಕೊಳ್ಳುತ್ತಾರೆ. ಇದು ಯುಕ್ತವಲ್ಲೆಂದು ವಚನಕಾರನ ಅಭಿಪ್ರಾಯವು. ಯಾಕಂದರೆ ಪರಮಾತ್ಮನು ಮಳೆಯನ್ನು ಸುರಿಸದಿದ್ದರೆ ಇವರು ಮೇಲ್ಕಂಡ ಪುಣ್ಯಕಾರ್ಯಗಳನ್ನು ಮಾಡಬಲ್ಲರೋ? ಮಾಡಲಾರರು. ಆದ್ದರಿಂದ ಮನುಷ್ಯನು ಮಾಡುವ ಪ್ರತಿಯೊಂದು ಕಾರ್ಯಕ್ಕೂ ಪರಮಾತ್ಮನ ಸಂಬಂಧ ಉಂಟು. ಸೃಷ್ಟಿಯ ನಿಯಮಗಳು ಮನುಷ್ಯನ ಪ್ರತಿಯೊಂದು ಕಾರ್ಯವನ್ನು ಬಿಗಿದು ಹೋಗಿವೆ. ಆದ್ದರಿಂದ ಅವನನ್ನೇ ಹೊಗಳುವದು ಯುಕ್ತವೆಂದು ವಚನಕಾರನ ಮುಖ್ಯ ಅಭಿಪ್ರಾಯವು.

**೭೨. ಉಣ್ಣೆ ಕೆಚ್ಚಲ ಹತ್ತಿ ಉಂಬುದೇ ನೊರೆವಾಲ? ಪುಣ್ಯ ಕ್ಷೇತ್ರದಲ್ಲಿ ಹುಟ್ಟಿ ಉಣ್ಣದವನು ಆ ಉಣ್ಣೆಯಿಂದ ಕರಕಷ್ಟ ರಾಮನಾಥಾ.**

ಅನೇಕರು ಪರಮಾತ್ಮನು ಎಲ್ಲಿ ಇದ್ದಾನೆ ಮತ್ತು ಅವನನ್ನು ಪೂಜಿಸುವದಾದರೂ ಹೇಗೆ ಎಂದು ಪ್ರಶ್ನಮಾಡುವದುಂಟು. ಇವರಿಗೆ ದಾಸಿಮಯ್ಯನು ಈ ವಚನದಲ್ಲಿ ಉತ್ತರ ಕೊಟ್ಟಿದ್ದಾನೆ.

ಪರಮಾತ್ಮನು ಸರ್ವವ್ಯಾಪಿಯಾಗಿದ್ದಾನೆ. ಅವನು ನಮಗೆ ದೂರದಲ್ಲಿಲ್ಲ. ಸಮೀಪದಲ್ಲಿಯೇ ಇದ್ದಾನೆ. ಹ್ಯಾಗೆ ಆಪನ ಕೆಚ್ಚಲು ಉಣ್ಣೆಗೆ ಹತ್ತಿಯಾಗಿ ಇರುತ್ತದೋ ಹಾಗೆಯೇ ಪರಮಾತ್ಮನು ನಮ್ಮ ಹತ್ತರವೇ ಇದ್ದಾನೆ. ಆದರೆ ಆ ಉಣ್ಣೆಯು ಆ ಕೆಚ್ಚಲಿನಲ್ಲಿಯ ನೊರೆವಾಲನ್ನು ಹ್ಯಾಗೆ ಅರಿಯದೋ ಹಾಗೆಯೇ ನಾವು ನಮಗೆ ಸಮೀಪವರ್ತಿಯಾದ ಪರಮಾತ್ಮನನ್ನು ಅರಿಯಲಾರದಾಗಿದ್ದೇವೆ. ಜಗತ್ತೆಂದರೆ ಪರಮಾತ್ಮನು ವಾಸಿಸತಕ್ಕ ಒಂದು ಪುಣ್ಯಕ್ಷೇತ್ರವು. ಇಂಥ ಕ್ಷೇತ್ರದಲ್ಲಿ ನಾವು ಇದ್ದರೂ ಕೂಡ ನಾವು ಅದರ ಉಪಯೋಗವನ್ನು ಮಾಡಿಕೊಳ್ಳುವದಿಲ್ಲ. ಅಂದ ಬಳಿಕ ನಮ್ಮ ಸ್ಥಿತಿಯು ಉಣ್ಣೆಗಿಂತಲೂ ಕಡೆಯಾದದ್ದೆಂದು ವಚನಕಾರನ ಅಭಿಪ್ರಾಯವು.

೭೩. ಇಳೆ ನಿಮ್ಮ ದಾನ. ಬೆಳೆ ನಿಮ್ಮ ದಾನ. ಸುಳಿದು ಬೀಸುವ ವಾಯು ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥಾ?

ವಚನಕಾರನು ಸೃಷ್ಟಿಯ ಸೌಂದರ್ಯವನ್ನೂ ಆದರ ಉಪಯುಕ್ತತೆಯನ್ನೂ ನೋಡಿ ಪರಮಾತ್ಮನ ಬಗ್ಗೆ ಅತ್ಯಾದರ ಭಾವವನ್ನು ತಾಳಿ ಅವನು ಈ ವಚನವನ್ನು ನುಡಿದಿರುವನು. ಅರ್ಥವು ಸ್ಪಷ್ಟವದೆ. ದಯಾಶಾಲಿಯಾದ ಪರಮಾತ್ಮನನ್ನೇ ಹೊಗಳಬೇಕೆಂದು ಅವನ ಅಭಿಪ್ರಾಯವು.

೭೪. ಕಾಯ ನಿಮ್ಮ ದಾನ. ಜೀವ ನಿಮ್ಮ ದಾನ. ಕಾಯ ಜೀವವುಳ್ಳಲ್ಲಿಯೇ ನಿಮ್ಮ ಪೂಜಿಸದ ನಾಯಿಗಳನೇನೆಂಬೆ ಹೇಳಾ ರಾಮನಾಥಾ?

ಮನುಷ್ಯನ ಕಾಯಜೀವಗಳಾದರೂ ಪರಮಾತ್ಮನ ದೇಣಿಗೆಗಳಿವೆ. ಈ ದೇಣಿಗೆಗಳ ಸದುಪಯೋಗವನ್ನು ಮನುಷ್ಯನು ಮಾಡತಕ್ಕದ್ದು. ಅಂದರೆ ಅವನು ಪರಮಾತ್ಮನನ್ನು ಭಕ್ತಿಭಾವದಿಂದ ಪೂಜಿಸುವದೇ ಅವನ ಕರ್ತವ್ಯವೆಂದು ವಚನಕಾರನ ಅಭಿಪ್ರಾಯವು.

೭೫. ಎತ್ತು ನಿಮ್ಮ ದಾನ ಬಿತ್ತು ನಿಮ್ಮ ದಾನ. ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥಾ?

ಬಿತ್ತು=ಬೀಜ

ಪರಮಾತ್ಮನು ಮನುಷ್ಯನಿಗೆ ಎತ್ತು, ಬೀಜ, ನೀರನ್ನು ಕೊಟ್ಟಿದ್ದಾನೆ. ಇವುಗಳಿಂದ ಅವನು ಜೀವಿಸುತ್ತಾನೆ. ಇವಿಲ್ಲದಿದ್ದರೆ ಅವನು ಕ್ಷಣ ಹೊತ್ತು ಜೀವಿಸಲಾರನು. ಅಂದ ಬಳಿಕ ಅವನು ಎಂಥ ಕಾರುಣ್ಯವುಳ್ಳವನು ಎಂದು ವಚನಕಾರನು ಇಲ್ಲಿ ಅಂದಿದ್ದಾನೆ. ಆದ್ದರಿಂದ ಪರಮಾತ್ಮನಿಗೋಸ್ಕರ ನಾವು ಕೃತಜ್ಞತಾಭಾವವನ್ನು ತಾಳಿ ಅವನನ್ನೇ ಹೊಗಳಬೇಕೇ ಹೊರತು ಅನ್ಯರನ್ನು ಹೊಗಳಬಾರದೆಂದು ವಚನಕಾರನ ಅಭಿಪ್ರಾಯವು.

# ಶಿವಾನುಭವ

(ತ್ರೈಮಾಸಿಕವು.)

ವಷ ೩]　　　ಡಿಶೆಂಬರ ೧೯೨೮　　　[ಸಂಚಿಕೆ ೧೨



ಸಂಪಾದಕಃ— ಫ. ಗು. ಹಳಕಟ್ಟಿ ವಿಜಾಪುರ.

# ವಿಷಯಾನುಕ್ರಮಣಿಕೆ.




ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಲೀಬುರುಜದ ಹತ್ತಿರಿರುವ ತಮ್ಮ ೧೬೨೦ (ಅ) ನೇ ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ. ೩] ದಿಶೆಂಬರ ೧೯೨೮. [ಸಂಚಿಕೆ. ೧೨

## ಜ್ಞಾನಯೋಗ.

[ಲೇಖಕ:—ಮುಷಿಣಾಕಪ್ಪ ಸಾಸನೂರು ಸಾ. ಕಲಕೇರಿ ತಾ. ಸಿಂದಗಿ]

ಜ್ಞಾನ ಶಬ್ದವು ಸಂಸ್ಕೃತ ಜ್ಞಾ=ತಿಳಿ, ಎಂಬ ಧಾತುವಿನಿಂದ ಬಂದಿದ್ದು ಇದರರ್ಥವು ತಿಳಿವಳಿಕೆಯೆಂದಾಗುತ್ತದೆ. ಈ ದಾರಿಯು ತನ್ನ ಸಾಧಕರಿಗೋಸುಗ ಮುಂದಿರಿಸಿದ ಗುರಿ ಎಂದರೆ ಸಕಲ ವಿಶ್ವಕ್ಕೆ ಉಗಮು ಸ್ಥಾನವಾದ ಅಂತಿಮ ಸತ್ಯವನ್ನು ತಿಳಿಯುವದು, ಒಂದೇ ಜೀವವು, ಒಂದೇ ಪ್ರಾಣಿಯು, ಒಂದೇ ಸತ್ಯವು ಇರುತ್ತದೆ. ಎಲ್ಲ ಬಗೆಯ ಭೇದ ಭಾವಗಳಾಗಲಿ ದ್ವಿತ್ವ, ಅನೇಕತ್ವಗಳಾಗಲಿ ಅಸತ್ಯವಾದವುಗಳು.

ಜ್ಞಾನಯೋಗವು ಸಂಪೂರ್ಣವಾಗಿ ಅದ್ವೈತ ತತ್ವಗಳ ಮೇಲೆ ನಿರ್ಮಿಸಲ್ಪಟ್ಟದೆ. ಒಳಹೊರಗಣ ಶಕ್ತಿಗಳೆಲ್ಲವೂ, ಯಾವದರಿಂದ ಉಗಮು ಹೊಂದುತ್ತವೆಯೋ ಮತ್ತು ಯಾವದು ಅನಂತ ಬುದ್ಧಿಯು ಮತ್ತು ಶಾಶ್ವತ ಸುಖದ ನೆಲೆಯಾಗಿದೆಯೋ ಅಂತಹದೊಂದು ವಸ್ತುವಿನಲ್ಲಿಯೇ ಎಲ್ಲ ವಿವಿಧ ವಿಶ್ವವನ್ನು ಏಕೀಕರಿಸಿ ತೋರಿಸುವದೇ ಈ ಯೋಗದ ಗುರಿ.

ಜ್ಞಾನಯೋಗಕ್ಕನುಸಾರವಾಗಿ ಪ್ರಕೃತಿ, ಮನಸ್ಸು, ಬುದ್ಧಿ, ಇಂದ್ರಿಯಶಕ್ತಿ, ನಾಮರೂಪಗಳು ಆ ಬ್ರಹ್ಮನವೇ ಬೇರೆ ಬೇರೆ ಆಭಾಸರೂಪಗಳು. ಅವು ನಮಗೆ ನಿಜವೆಂದು ತೋರಿದರೂ ಅವು ನಿಜವಾಗಿ ಸಾಪೇಕ್ಷಿಕ ಸತ್ಯಗಳಾಗಿರುತ್ತವೆ. ಸಮುದ್ರದಲ್ಲಿ ತೆರೆಗಳು ಎದ್ದು ಆಡಿ, ಕೆಲ ಕಾಲದ ತರುವಾಯ ಇಲ್ಲದಂತಾಗುತ್ತವೆ. ಅದರಂತೆಯೇ ಕರ್ತೃಕಾರಣ

ಗಳೆಂಬ ತೆರೆಗಳು ಈ ಬ್ರಹ್ಮ ಸಮುದ್ರದಲ್ಲಿ ಹುಟ್ಟಿ ಕೆಲಹೊತ್ತು ಬಾಳಿ ಆ ಮೇಲೆ "ಬ್ರಹ್ಮನಲ್ಲಿಯೇ ಅಡಗುತ್ತವೆ. ಬ್ರಹ್ಮನಿಂದಲೇ ಎಲ್ಲ ಸಜೀವ ನಿರ್ಜೀವ ಪದಾರ್ಥಗಳ ಜನನವಾಗಿ ಅದರ ಬಲದಿಂದಲೇ ಬಾಳಿ, ಕಡೆಗೆ ಅದರಲ್ಲಿಯೇ ಲೀನವಾಗುತ್ತವೆ. ಅದನ್ನು ಎಲ್ಲರೂ ಅರಿಯತಕ್ಕದ್ದು" ಎಂದು ವೇದಾಂತವು ಸಾರುತ್ತದೆ. ಅದು (ಬ್ರಹ್ಮವು) ದೈವಿಕ ಉಗಮ ವಾಗಿದ್ದು, ಇದೊಂದು ಅನಂತವಾದ ಚಿತ್ರಪಟದಂತಿರುವದು. ಇದರ ಮೇಲೆ ಮಾಯೆಯು ಜೀವ ಈಶ್ವರರ ಚಿತ್ರಗಳನ್ನು ಚಿತ್ರಿಸಿದೆ.

ಈಶ್ವರ ಮತ್ತು ಜೀವರಲ್ಲಿಯ ಅಭೇದತ್ವವನ್ನರುಹುವದೇ ಜ್ಞಾನ ಯೋಗದ ಮುಖ್ಯಗುರಿ. ಜೀವವು ಬ್ರಹ್ಮನ ಪ್ರತಿಬಿಂಬ ರೂಪವಾದ್ದ ರಿಂದ ಅದು ನಿಜವಾಗಿ ದೈವಿಕವಾಗಿದೆ. ಈ ಜೀವನ ನಿಜಸ್ವರೂಪನೇ ಆತ್ಮನು. ಎಲ್ಲ ಪ್ರಾಪಂಚಿಕ ಸುಖ-ದುಃಖಗಳಿಗೆ ಕಾರಣವಾದ ಶಾರೀ ರಿಕ, ಐಂದ್ರಿಕ, ಆಸಕ್ತಿಯಿಂದಲೂ ಸ್ವಾರ್ಥತೆಯ ಸಂಕೋಲೆಯಿಂದಲೂ ಬಿಡುಗಡೆ ಹೊಂದಬೇಕಾದರೆ ಒಂದೇ ಒಂದು ಹಾದಿಯು ಉಂಟು. ಅದು ಬ್ರಹ್ಮ ಮತ್ತು ಆತ್ಮರ ಪೂರ್ಣ ಏಕತ್ವದಜ್ಞಾನ. ಬ್ರಹ್ಮ ಆತ್ಮರ ಏಕ ತ್ವದ ಜ್ಞಾನರೂಪವಾದ ಜ್ಯೋತಿಯು 'ನಾನು ದೇಹ' 'ನಾನು ಇಂದ್ರಿ ಯಗಳು' 'ನಾನು ಮನಸ್ಸ' ಎಂಬ ಭ್ರಾಂತಿಯನ್ನುಂಟುಮಾಡಿ, ಪರಿ ಪೂರ್ಣ ಆನಂದ ನಿವಾಸಸ್ಥಾನದಿಂದ ನಮ್ಮನ್ನು ದೂಡುವ ಅಜ್ಞಾನ ವನ್ನು ಹೊಡೆದೋಡಿಸುವದು. ಇದಕ್ಕೆ ಅವಿದ್ಯೆಯೆನ್ನುತ್ತಾರೆ. ಎಲ್ಲ ಮಿಥ್ಯಾಜ್ಞಾನ, ಪ್ರಾಪಂಚಿಕ ಆಸಕ್ತಿ ಮೊದಲಾದವುಗಳಿಗೆ ಇದೇ ಕಾರಣೀ ಭೂತವಾಗಿದೆ. ಈ ಅವಿದ್ಯಾಶಕ್ತಿಯಿಂದ ಮೋಹಿತರಾಗಿ ದೇಹವನ್ನು ಆತ್ಮನೆಂದೂ, ಆತ್ಮನನ್ನು ದೇಹವೆಂದೂ, ಜಡವನ್ನು ಚೈತನ್ಯವೆಂದೂ, ಚೈತನ್ಯವನ್ನು ಜಡವೆಂದೂ ತಪ್ಪು ತಿಳುವಳಿಕೆಯು ನಮಗಾಗುತ್ತದೆ. ಸ್ವಸ್ವರೂಪದ ಅಜ್ಞಾನಮೂಲಕವಾಗಿ ನಾವು ಸಂಪೂರ್ಣವಾಗಿ ಸ್ವಾರ್ಥ ಉದ್ದೇಶಸಾಧನೆಗಾಗಿಯೂ, ನಮ್ಮ ಕರ್ಮಫಲ ಪ್ರಾಪ್ತಿಗಾಗಿಯೂ, ಕೆಲ ಸಮಾಡಹತ್ತುತ್ತೇವೆ. 'ಆತ್ಮನು ಅಮರನೂ ಸರ್ವಜ್ಞನೂ ಅನಾದಿಯಿಂದ ಸ್ವತಂತ್ರನೂ ಇರುತ್ತಾನೆ. ಅವಿದ್ಯೆಯ ಪ್ರಭಾವದಿಂದ ಜೀವನು ತಾನು ಹುಟ್ಟು ಸಾವುಗಳಿಗೆ ಅಧೀನನೆಂದು ತಿಳಿದು, ಸ್ವಾತಂತ್ರ್ಯ, ಜ್ಞಾನ, ಅನಂತಸುಖಗಳ ಉಗಮವು ತನ್ನಲ್ಲಿಯೇ ಉಂಟೆಂಬದನ್ನು ಮರೆತು

ಸುಖ, ಜ್ಞಾನಗಳ ಸಂಪಾದನೆಗೆ ಹೊರಗೆ ಹುಡುಕಹತ್ತಿ ಇಂದ್ರಿಯಗಳ ದಾಸನಾಗುತ್ತಾನೆ. ಶರೀರದಿಂದಾಗಲಿ, ಮನಸ್ಸಿನಿಂದಾಗಲಿ ನಾವು ಮಾಡುವದೆಲ್ಲವೂ ಅವಿದ್ಯೆಯ ಪ್ರಭಾವದಿಂದುಂಟಾದ ಸ್ವಸ್ವರೂಪ ಭ್ರಾಂತಿ ಎಂಬ ನಿದ್ರೆಯಲ್ಲಿಯ ಕನಸಿನಂತಿರುತ್ತದೆ. ಈ ಅಜ್ಞಾನ ನಿದ್ರೆಯಲ್ಲಿಯ ಸ್ವಪ್ನಗಳು ಭಕ್ತಿಯಿಂದಾಗಲಿ, ಧ್ಯಾನದಿಂದಾಗಲಿ ಇಲ್ಲದಂತಾಗಲಾರವು. ಆದರೆ ಆತ್ಮನ ನಿಜಸ್ವರೂಪ ಮತ್ತು ಬ್ರಹ್ಮ ಆತ್ಮರಲ್ಲಿಯ ನಿಜವಾದ ಸಂಬಂಧ ಇವುಗಳ ನಿಜವಾದ ಅರಿವೆಯು ಉಂಟಾದಾಗಲೇ ಅಂದರೆ ವಿದ್ಯೆಯಿಂದ ಈ ಅವಿದ್ಯೆಯು ಸಮೂಲ ನಾಶಹೊಂದುವದು ಎಂಬದು ಜ್ಞಾನಯೋಗದ ಹೇಳಿಕೆ.

ಈ ತರದ ತಿಳುವಳಿಕೆಯು ಸದಾಚರಣೆಯಿಂದಾಗಲಿ, ಪ್ರಾರ್ಥನೆಗಳಿಂದಾಗಲಿ ಬಾರದು. ಆದರೆ ನಿಃಸ್ವಾರ್ಥ ನೀತಿವಂತ ಕರ್ಮಗಳನ್ನು ಮಾಡಿ ಮನಸ್ಸು, ಅಂತಃಕರಣಗಳನ್ನು ಶುದ್ಧೀಕರಿಸಿ ನಿಜವಾದ ಮತ್ತು ಭೇದರಹಿತನಾದ ಆತ್ಮ ಮತ್ತು ಅಸತ್ಯವಾದ ಹಾಗು ಭೇದಕ್ಕೊಳಗಾಗದ ಪ್ರಕೃತಿಗಳಲ್ಲಿಯ ಭಿನ್ನತೆಯನ್ನು ಕಂಡು ಹಿಡಿದಾಗ ಮಾತ್ರ ಈ ತರದ ತಿಳುವಳಿಕೆಯು ಆತ್ಮನಿಗೆ ಉಂಟಾಗುವದು. ಸ್ವಸ್ವರೂಪ ಜ್ಞಾನಸಂಪಾದನೆಗಾಗಿಯೂ ಎಲ್ಲ ವಿಶ್ವದ ಬುಡಕ್ಕಿರುವ ಸತ್ಯದ ಜ್ಞಾನ ಲಾಭಕ್ಕಾಗಿಯೂ ಯೋಗ್ಯ ಸತ್ಯಾಸತ್ಯ ವಿವೇಕ ಬುದ್ಧಿಯು ಅವಶ್ಯವೆಂದು ಜ್ಞಾನಯೋಗವು ಹೇಳುತ್ತದೆ. ರಾಜಯೋಗ, ಕರ್ಮಯೋಗ, ಭಕ್ತಿಯೋಗಳಿಗಿಂತಲೂ, ಸ್ವಸ್ವರೂಪಜ್ಞಾನದಿಂದ ಹೆಚ್ಚು ಬೇಗನೆ ಆತ್ಮನಿಗೆ ಪರಮಾತ್ಮನ ನಿಜವಾದ ಜ್ಞಾನವಾಗುವದು.

ಆದಕಾರಣ ಪ್ರಪಂಚದ ಕ್ಷಣಭಂಗುರತ್ವವನ್ನು ಕಂಡು ಹಿಡಿದು ವಿಷಯ ಸುಖಗಳಿಗೆ ತಿಲಾಂಜಲಿಯನ್ನಿತ್ತು ಬುದ್ಧಿ ಶಕ್ತಿಯಿಂದ ಒಡಗೂಡಿದಂಥ ಕರ್ಮ, ಭಕ್ತಿಗಳಿಗೆ ಬಲವಿಲ್ಲದಂಥ ನಿಜವಾಗಿಯೂ ಸತ್ಯಾನ್ವೇಷಿಗಳಾದ ಜ್ಞಾನಯೋಗವು ಅತ್ಯಂತ ಉಪಯೋಗಿಯಾದದ್ದೂ ಯೋಗ್ಯವಾದದ್ದೂ ಇರುತ್ತದೆ. ಪ್ರಾಪಂಚಿಕ ಸುಖ, ಕೀರ್ತಿ, ಸ್ವಾರ್ಥ ಆಕಾಂಕ್ಷೆಗಳಿಗೆ ಸ್ವಲ್ಪಾದರೂ ಲೆಕ್ಕಿಸದೆ ತಾವು ಯಾರು, ತಮ್ಮ ಸ್ವರೂಪವೇನು, ಜೀವ, ಜಗತ್ತು, ಈಶ್ವರರಲ್ಲಿಯ ಸಂಬಂಧವೇನು, ಎಂಬದರ ತಿಳಿವಳಿಕೆಯೇ ತಮ್ಮ ಗುರಿಯಾಗಿರುವಂಥ ಎಲ್ಲ ಪ್ರಾಪಂಚಿಕ ಬಂಧನ ಆಸಕ್ತಿ

ಗಳಿಂದ ಮುಕ್ತರಾಗಲಿಕ್ಕೆ ಇಚ್ಛಿಸುವಂಥವರಿಗೋಸುಗವಾಗಿಯೇ ಈ ಯೋಗವಿರುತ್ತದೆ.

ಈ ಜ್ಞಾನ ಮಾರ್ಗದಿಂದ ಹೋಗಲಾಡಿಸುವವನು ತತ್ತ್ವಜ್ಞಾನದ ಕಡೆಗೆ ಬಲವುಳ್ಳವನೂ, ತೀಕ್ಷ್ಣಬುದ್ಧಿಯುಳ್ಳವನೂ ಪದಾರ್ಥಗಳ ನಿಜ ಸ್ವರೂಪವನ್ನು ಕಂಡು ಹಿಡಿಯುವದರಲ್ಲಿ ಕುಶಾಗ್ರ ಬುದ್ಧಿಯುಳ್ಳವನೂ ಆಗಿರತಕ್ಕದ್ದು. ವಿಶ್ವದ ಅಂತಿಮ ಸತ್ಯವು ಯಾವದೊಂದು ಬದಲಾವಣೆಯನ್ನು ಹೊಂದುವದಿಲ್ಲವೆಂದು ದೃಢ ಸಂಕಲ್ಪವನ್ನು ಅವನು ಮಾಡಬೇಕು. ಸದ ಸದ್ವಿವೇಕವೆಂಬ ಕರವಾಲವನ್ನು ಕೈಯಲ್ಲಿ ಹಿಡಿದು, ಹೊರಗಣ, ಒಳಗಣ ಯಾವದೊಂದು ಶಕ್ತಿಗೂ ಬಗ್ಗದೆ, ಆತ್ಮ ಅನಾತ್ಮರಲ್ಲಿಯ ಭೇದವನ್ನರಿಯತಕ್ಕದ್ದು. ಅವನ ಮನಸ್ಸು ಇಚ್ಛೆಗಳಿಂದಾಗಲಿ, ವಿಕಾರಗಳಿಂದಾಗಲಿ, ಅತ್ರಾಸಿತನಾಗಿರಬೇಕು. ಅವನ ಇಂದ್ರಿಯಗಳು ಚನ್ನಾಗಿ ಅಂಕೆಯಲ್ಲಿರಬೇಕು. ಅವನ ಶರೀರವು ಬಲವುಳ್ಳದ್ದೂ, ನಿರೋಗಿಯೂ ಎಲ್ಲ ಪರಿಸ್ಥಿತಿ ಸಂಬಂಧವಾದ ಕಷ್ಟ ನಷ್ಟಗಳಿಗೆ ಹಿಂಜರಿಯದಂಥಾದ್ದೂ ಇರಬೇಕು. ಅವನು ನಿರ್ವಿಕಾರನಾಗಿದ್ದು ತನ್ನ ಜ್ಞಾನಕ್ಕೆ ಅಡ್ಡಿಯನ್ನುಂಟು ಮಾಡುವ ಯಾವದೊಂದನ್ನು ಕೂಡಲೇ ತ್ಯಾಗ ಮಾಡಲಿಕ್ಕೆ ಸಿದ್ಧನಾಗಿರಬೇಕು. ಅವರು ಜ್ಞಾನಯೋಗಿಗಳಲ್ಲಿ ಪೂರ್ಣ ಶ್ರದ್ಧೆಯುಳ್ಳವರಾಗಿರಬೇಕು. ಮತ್ತು ವೇದಾಂತ ಶಾಸ್ತ್ರವು ಹೇಳುವ ತತ್ವಗಳಲ್ಲಿಯಾದರೂ ಅವರಿಗೆ ನಂಬಿಗೆ ಇರಬೇಕು.

ಜ್ಞಾನ ಯೋಗಕ್ಕೆ ಮೊದಲಿಗನಾದವನು ಪೂರ್ಣ ಧ್ಯಾನ ಧಾರಣಾ ಶಕ್ತಿಗಳಿಂದ ಕೂಡಿದವನಾಗಿರಬೇಕು. ಎಲ್ಲಪರಿಸ್ಥಿತಿಕ, ವಿಶ್ವ ಸಂಬಂಧಿ ಆಸಕ್ತಿಗಳಿಂದ ಪೂರ್ಣ ಬಿಡುಗಡೆ ಹೊಂದಲಿಕ್ಕೆ ಬಲವಾದ ಇಚ್ಛಾಯುಕ್ತನಾಗಿರಬೇಕು. ಸ್ವರ್ಗ ಸುಖವು ಕೂಡ ಒಂದು ಬಂಧನವೇ ಎಂದು ಅವನು ತಿಳಿಯಬೇಕು. ಈ ಎಲ್ಲ ಸದ್ಗುಣಗಳೆಂಬ ಕರವಾಲಗಳನ್ನು ಹಿಡಿದು ಪ್ರಾಪಂಚಿಕ ಭ್ರಾಂತಿಯನ್ನೆಲ್ಲ ಹೊಡೆದಟ್ಟಿ ಆತ್ಮ ಪರಮಾತ್ಮರ ಅಭೇದತ್ವವನ್ನು ತನ್ನ ಮಾನಸಿಕ ದೃಷ್ಟಿಯ ಮುಂದಿರಿಸಿ, ಸದ ಸದ್ವಿವೇಕವೆಂಬ ಸುತ್ತಿಗೆಯಿಂದ ಎಲ್ಲ ನಾಮ ರೂಪಗಳನ್ನು ಜಡಿದು, ಆಸಕ್ತಿ ಬಂಧನಗಳನ್ನು ಹರಿದು, ಜ್ಞಾನಾರ್ಜನೆಗೋಸುಗ ಜ್ಞಾನ ಯೋಗಿಯು ಮುಂದೆ ಸಾಗಬೇಕು. ತನ್ನ ಗುರಿಯನ್ನು ಮುಟ್ಟುವ ವರೆಗೆ ಎಲ್ಲಿಯೂ

ನಿಲ್ಲ ಕೂಡದು. ಜ್ಞಾನ ಯೋಗಿಯು ನಾಮ ರೂಪಾತ್ಮಕ ಸೃಷ್ಟಿಯೆಂಬ ಅರಣ್ಯವನ್ನು ಸತ್ಯ ಜ್ಞಾನವೆಂಬ ಬೆಂಕಿಯಿಂದ ಸುಟ್ಟು ಬೂದಿ ಮಾಡುವನು. ನಾಮರೂಪಗಳೆಲ್ಲವೂ ಮಾಯಾ ಸೃಷ್ಟಿಯು. ಜ್ಞಾನ ಯೋಗಾನುಸಾರವಾಗಿ ದಾಹಕ ಶಕ್ತಿಯು ಅಗ್ನಿಯಿಂದ ಅಭಿನ್ನವಿದ್ದಂತೆ ಮಾಯೆಯಾದರೂ ಬ್ರಹ್ಮನಿಂದ ಅಭಿನ್ನವಾಗಿರುತ್ತದೆ. ಬ್ರಹ್ಮಜ್ಞಾನಕ್ಕೋಸುಗ ಹಂಬಲಿಸುವ ಜ್ಞಾನ ಯೋಗಿಯು ಎಲ್ಲ ನಾಮ ರೂಪಗಳನ್ನು ಇದು ಅಲ್ಲ, ಇದು ಅಲ್ಲ, ಎಂದು ಬಿಟ್ಟು ಕಟ್ಟ ಕಡೆಗೆ ನಾಮ ರೂಪಾತೀತ ಬ್ರಹ್ಮ ವಸ್ತುವಿನ (ಅಲ್ಲಿ ಜ್ಞಾತೃ, ಜ್ಞೇಯ ಜ್ಞಾನಗಳೆಲ್ಲವೂ ತಮ್ಮ ವಿಶಿಷ್ಟತೆಯನ್ನು ಬಿಟ್ಟು ಸಚ್ಚಿದಾನಂದ ಸಮುದ್ರದಲ್ಲಿ ಮುಳುಗಿ ಹೋಗುವವು) ಜ್ಞಾನವಾಗುವದು.

ಇದಲ್ಲದೆ ಜ್ಞಾನಯೋಗಿ ಯಾಗುವವನು ಬ್ರಹ್ಮಾತ್ಮರ ಏಕತ್ವದ ನಿಧಿಧ್ಯಾಸವನ್ನು ಮಾಡುತ್ತಿರಬೇಕು. ಮತ್ತು ಯಾವಾಗಲೂ 'ನಾನು ಬ್ರಹ್ಮನಿದ್ದೇನೆ' 'ನಾನು ಸಚ್ಚಿದಾನಂದನಿದ್ದೇನೆ' ಮೊದಲಾದ ವಾಕ್ಯಗಳನ್ನು ಪುನಃ ಪುನಃ ಪಠಿಸುತ್ತಿರಬೇಕು- ಈ ರೀತಿಯಾಗಿ ಬ್ರಹ್ಮಜ್ಯೋತಿಯು ಅವಿದ್ಯೆಯೆಂಬ ಕತ್ತಲೆಯನ್ನು ಅವನ ಆತ್ಮನಿಂದ ತಳ್ಳಿ ಪ್ರಕಾಶವನ್ನು ಅಲ್ಲಿ ಉಂಟುಮಾಡುವವರೆಗೆ ಅವನು ಈ ಏಕತ್ವದ ಶ್ರವಣ, ಮನನ ನಿಧಿಧ್ಯಾಸಗಳನ್ನು ಮಾಡುತ್ತಿರಬೇಕು.

ಭಕ್ತಿಯೋಗಿಯಂತೆ ಯಾವನೊಬ್ಬ ತನ್ನಿಂದ ಭಿನ್ನನಾದ ವಿಶಿಷ್ಟ ಈಶ್ವರನನ್ನು ಪೂಜಿಸದೆ ಜ್ಞಾನಯೋಗಿಯು ಬೇರೆ ಬೇರೆ ಗ್ರಂಥಗಳಲ್ಲಿ ಈಶ್ವರನಿಗೆ ಕೊಟ್ಟ ಹೆಸರುಗಳ ನಿಜವಾದ ಮಹತ್ವವನ್ನು ಅರಿಯತಕ್ಕದ್ದು. ಸೃಷ್ಟಿಕರ್ತ, ಸೃಷ್ಟಿನಿಯಾಮಕ, ಅನಂತ, ಸರ್ವಜ್ಞ, ಸರ್ವಶಕ್ತ, ನಿತ್ಯ, ನಿರ್ವಿಕಾರ, ಸತ್ಯ, ಏಕ, ಇತ್ಯಾದಿ. ವಾಙ್ಮನಸ್ಸುಗಳಿಗೆ ಗೋಚರವಾಗದ ನಾಮರೂಪಾತೀತವಾದದ್ದನ್ನು ಅರಿಯಲಿಕ್ಕೆ ಅವನು ಯತ್ನಿಸತಕ್ಕದ್ದು. ಜ್ಞಾನಯೋಗಿಯು ಯಾವನೊಬ್ಬ ವಿಶಿಷ್ಟ ಈಶ್ವರಾರ್ಚನೆಯನ್ನು ಮಾಡುವದಿಲ್ಲ. ಅವನಿಗೆ ಪ್ರಾರ್ಥನೆ ಭಕ್ತಿಗಳೆಲ್ಲವೂ ನಿಷ್ಪ್ರಯೋಜಕ ಮತ್ತು ಅನವಶ್ಯಕವಾದವುಗಳು. ದೈವಿಕ ಸಹಾಯವು ಅವನಿಗೆ ಬೇಕಾಗಿಲ್ಲ. ಯಾಕಂದರೆ ಆತ್ಮನು ಸರ್ವ ಶಕ್ತನೂ ಸರ್ವಜ್ಞನೂ ಆಗಿರುವನೆಂದು ಅವನಿಗೆ ಗೊತ್ತಿರುತ್ತದೆ. ಮತ್ತು ಒಳಿತು, ಕೆಟ್ಟದು, ಸದ್ಗುಣ, ದುರ್ಗುಣ

ಮೊದಲಾದವುಗಳಿಗೆ ಅವನು ಮೀರಿದ್ದು ಅವನು ಯಾವ ತರದ ಸಿದ್ಧಾಂತಗಳಿಂದ ಮರ್ಯಾದಿತನಾಗಿಲ್ಲ, ಎಂಬದರ ಜ್ಞಾನವು ಜ್ಞಾನಯೋಗಿಗೆ ಇರುತ್ತದೆ. ಪರಮಾತ್ಮನಲ್ಲಿಯೂ ತನ್ನಲ್ಲಿಯೂ ಅಭೇದತ್ವವಿದೆಯೆಂದು ಅವನಿಗೆ ತೋರುತ್ತಿರುತ್ತದೆ. ತನ್ನನ್ನು ಶರೀರ, ಮನಸ್ಸು ಇಂದ್ರಿಯಗಳು ಬುದ್ಧಿ ಮೊದಲಾದವುಗಳೊಡನೆ ಏಕೀಕರಿಸದೆ ತಾನು ಹುಟ್ಟು ಸಾವಗಳಿಲ್ಲದ. ಪಾಪ ರಹಿತನಾದ, ನಿರ್ಭೀತನಾದ, ಅವಿನಾಶಿಯಾದ, ನಿರಂತರ ಶಾಂತನಾದ, ಸುಖ ದುಃಖಗಳಿಂದ ನಿರ್ವಿಕಾರಿಯಾದ, ಆತ್ಮನಿದ್ದೇನೆಂದು ಅವನಿಗೆ ಅರಿವೆಯುಂಟಾಗುತ್ತದೆ.

ನಿಜವಾದ ಜ್ಞಾನಯೋಗಿಯು ಎಲ್ಲ ಪ್ರಾಪಂಚಿಕ ವಿಷಯಗಳಿಗೂ ಮೀರಿದ್ದು. ಯಾವಾಗಲೂ 'ಅಹಂಬ್ರಹ್ಮಾಸ್ಮಿ' 'ಸೋಹಂ' 'ಸೋಹಂ' ಎಂದು ಅವನು ಅನ್ನ ಹತ್ತಿರಬೇಕು ಅವನು ತನ್ನಲ್ಲಿ,

''ನಾನು ಮನಸ್ಸಲ್ಲ, ಬುದ್ಧಿಯಲ್ಲ, ಅಹಂಕಾರವಲ್ಲ, ಇಂದ್ರಿಯಗಳಲ್ಲ, ಪೃಥ್ವಿಯಲ್ಲ, ಅಪ್ಪುಅಲ್ಲ, ತೇಜವಲ್ಲ, ವಾಯುವಲ್ಲ, ಆಕಾಶವೂ ಅಲ್ಲ ಆದರೆ ಸಚ್ಚಿದಾನಂದ ನಿತ್ಯಪರಿಪೂರ್ಣ ಸ್ವರೂಪನೇ ನಾನಿದ್ದೇನೆ.''

'ಶಾರೀರಿಕ ಕರ್ಮಗಳೂ ನಾನಲ್ಲ. ಶಾರೀರಿಕ ಭೂತಗಳೂ ನಾನಲ್ಲ. ಕರ್ಮಜ್ಞಾನಗಳ ಭಾವನೆಯೂ ನಾನಲ್ಲ. ಆದರೆ ಸಚ್ಚಿದಾನಂದ ನಿತ್ಯ ಪರಿಪೂರ್ಣ ರೂಪನೇ ನಾನು.'

''ನನ್ನಲ್ಲಿ ಪ್ರೀತಿಯಿಲ್ಲ, ದ್ವೇಷವಿಲ್ಲ, ಆಶೆಯಿಲ್ಲ, ಮಾಯೆಯಿಲ್ಲ, ಭ್ರಾಂತಿಯಿಲ್ಲ, ಅಹಂಕಾರವಿಲ್ಲ, ಗರ್ವವಿಲ್ಲ, ಮತವಿಲ್ಲ, ಮತಭೇದವಿಲ್ಲ, ಬಂಧದ ಬಿಡುಗಡೆಯ ಇಚ್ಛೆಯೂ ನನಗಿಲ್ಲ ನಾನು ಸಚ್ಚಿದಾನಂದ ರೂಪನಿದ್ದೇನೆ.''

''ನನ್ನಲ್ಲಿ ಸದ್ಗುಣವೂ ಇಲ್ಲ, ದುರ್ಗುಣವೂ ಇಲ್ಲ, ಪಾಪವೂ ಇಲ್ಲ, ನನಗೆ ಸುಖವೂ ಇಲ್ಲ, ದುಃಖವೂ ಇಲ್ಲ, ವಿಧಿನಿಯಮಗಳೂ ನನಗಿಲ್ಲ, ನಾನು ಆಹಾರವೂ ಅಲ್ಲ, ತಿನ್ನುವವನೂ ನಾನಲ್ಲ. ಆದರೆ ಸಚ್ಚಿದಾನಂದ ಪರಿಪೂರ್ಣನಾಗಿದ್ದೇನೆ.''

'ನನಗೆ ಮರಣವಿಲ್ಲ, ಮರಣದ ಅಂಜಿಕೆ ಇಲ್ಲ, ಹುಟ್ಟು ಇಲ್ಲ. ಜಾತಿಭೇದವಿಲ್ಲ, ನನಗೆ ತಂದೆ ಇಲ್ಲ, ತಾಯಿ ಇಲ್ಲ, ನಾನು ಮಿತ್ರನಲ್ಲ,

ವೈರಿಯಿಲ್ಲ, ಗುರುವೂ ಇಲ್ಲ, ಶಿಷ್ಯನೂ ಅಲ್ಲ, ಸಚ್ಚಿದಾನಂದ ರೂಪನೇ ನಾನು.'

'ನನಗೆ ಶಂಕೆಯಿಲ್ಲ ಪ್ರಶ್ನೆಗಳಿಲ್ಲ, ನಾನು ನಿರಾಕಾರನೂ, ಸರ್ವ ವ್ಯಾಪಿಯೂ, ಸೃಷ್ಟಿಯ ನಿರಂತರ ಯಜಮಾನನೂ, ಇಂದ್ರಿಯಗಳ ಒಡೆಯನೂ ಇದ್ದೇನೆ. ನಾನು ಬದ್ಧನೂ ಅಲ್ಲ, ಮುಕ್ತನೂ ಅಲ್ಲ, ನಾನೂ ಬ್ರಹ್ಮನೂ ಒಂದೇ, ನಾನು ಸರ್ವಾಂತರ್ಯಾಮಿಯು, ನಾನೇ ಎಲ್ಲವುಗಳ ಅವಿನಶ್ವರ ಈಶ್ವರನು. ನಾನು ಸಚ್ಚಿದಾನಂದ ರೂಪನಿದ್ದೇನೆ. ಅವನೇ ನಾನು ಎಂದು ನಿರಂತರ ಅನ್ನುತ್ತಿರುತ್ತಾನೆ.'

ಈ ರೀತಿಯಾಗಿ ಜ್ಞಾನಯೋಗಿಯು ಪರಿಪೂರ್ಣ, ನಿತ್ಯ, ನಿರ್ವಿಕಾರ ಸತ್ಯವನ್ನು ಇದೇ ಜೀವಿತದಲ್ಲಿ ಕಂಡುಹಿಡಿದು ತನ್ನ ಮತ್ತು ಅದರ ಏಕತ್ವ ನಿಶ್ಚಯವನ್ನು ಮಾಡಿಕೊಳ್ಳುತ್ತಾನೆ. ಬ್ರಹ್ಮವನ್ನು ತಿಳಿಯುವವನು ಬ್ರಹ್ಮನೇ ಆಗುತ್ತಾನೆಂದು ಜ್ಞಾನಯೋಗಿಯು ಹೇಳುತ್ತಾನೆ. ಯಾಕಂದರೆ ಬ್ರಹ್ಮನನ್ನು ಬ್ರಹ್ಮನಿಂದ ಬೇರೊಬ್ಬನಾದವನು ಅರಿಯಲಾರನು. ತನ್ನ ನಿಜವಾದ ಸ್ವರೂಪವೇ ಬ್ರಹ್ಮನೆಂಬುವದನ್ನು ಜ್ಞಾನಯೋಗಿಯು ಎಂದೂ ಮರೆಯುವದಿಲ್ಲ. ಈ ರೀತಿಯಾದ ಉಚ್ಚತಮಜ್ಞಾನಾರ್ಜನೆ ಮಾಡಿಕೊಂಡು ಯಾವಾಗಲೂ ಶಾರೀರಿಕ ಮಾನಸಿಕ ಕೃತ್ಯಗಳಿಗೆ ಸಾಕ್ಷಿರೂಪನಾಗಿರುತ್ತಾನೆ. ನಿರಂತರ ಸುಖಿಯು ನಿರ್ವಿಕಾರನೂ ಆಗಿದ್ದು ಮಾನವ ಜಾತಿಗೆ ಪೂರ್ಣ ಬಿಡುಗಡೆಯ ಹಾದಿಯನ್ನು ತೋರುತ್ತ ಸ್ಥಾನದಿಂದ ಸ್ಥಾನಕ್ಕೆ ತೆರಳುತ್ತಾನೆ. ಪೂರ್ಣ ಜ್ಞಾನಯೋಗಿಯಾದವನು ಬ್ರಹ್ಮನ ಅವತಾರವೆಂಬಂತೆ ಈ ಜಗತ್ತಿನಲ್ಲಿ ವಾಸಿಸುತ್ತಾನೆ.



# ಏಕಾಂತದ ರಾಮಯ್ಯ ಮತ್ತು ಅಬ್ಬಲೂರು ಶಿಲಾಶಾಸನ.

ಕಾಲ. ಸುಮಾರು ಕ್ರಿ. ಶ ೧೨೦೦

(ಲೇಖಕ:—ರಾ॥ ಸಾ॥ ಫ. ಗು. ಹಳಕಟ್ಟಿ ವಿಜಾಪುರ)



ಈ ಲೇಖದಲ್ಲಿ ನಾವು ಬಸವೇಶ್ವರನ ಕಾಲದಲ್ಲಿದ್ದ ಏಕಾಂತರಾಮಯ್ಯನೆಂಬ ಶಿವಶರಣನ ಒಂದು ಮಹತ್ವದ ಶಾಸನವನ್ನು ಕುರಿತು ಉಲ್ಲೇಖಿಸುತ್ತೇವೆ. ಈ ಶಿಲಾಶಾಸನವು ಧಾರವಾಡ ಜಿಲ್ಹೆಯಲ್ಲಿ ಹಿರೇಕೆರೂರ ತಾಲೂಕಿನಲ್ಲಿರುವ ಅಬ್ಬಲೂರ ಗ್ರಾಮದಲ್ಲಿ ಇರುತ್ತದೆ. * ಇದರಲ್ಲಿ ಅನೇಕ ಮಹತ್ವದ ಐತಿಹಾಸಿಕ ಸಂಗತಿಗಳು ಕಂಡು ಬರುತ್ತವೆ. ಈ ಶಿವಶರಣನ ವೃತ್ತಾಂತವು ಭೀಮಕವಿಯು ರಚಿಸಿದ ಬಸವಪುರಾಣದ ಸಂಧಿ ೪೪ ಮತ್ತು ೫೨ ಇವುಗಳಲ್ಲಿ ಬಂದಿರುತ್ತದೆ. ಆದರೆ ಈ ಶಿಲಾಶಾಸನದಲ್ಲಿ ಅದಕ್ಕೂ ವಿಶ್ವಸನೀಯವಾದ ಹೆಚ್ಚಿನ ವಿವರಣೆಯು ದೊರೆಯುತ್ತಿದೆ. ಮತ್ತು ಇದರ ಮೇಲಿಂದ ಕರ್ನಾಟಕ ಪ್ರಾಂತದಲ್ಲಿ ಶಿಲಾಶಾಸನಗಳನ್ನು ಶೋಧಿಸುವ ಕಾರ್ಯವು ಎಷ್ಟು ಮಹತ್ವದ್ದಿರುತ್ತದೆಂಬ ಸಂಗತಿಯು ಸ್ಪಷ್ಟವಾಗಿ ವಿದಿತವಾಗುತ್ತದೆ.

ಬಸವಪುರಾಣದಲ್ಲಿ ಕೆಳಗೆ ಕಾಣಿಸಿದಂತೆ ಏಕಾಂತದ ರಾಮಯ್ಯನ ವೃತ್ತಾಂತವು ಇರುತ್ತದೆ. ಏನೆಂದರೆ:—ಈತನು ಅಬ್ಬಲೂರವನು ಮತ್ತು ಅಪ್ರತಿಮ ವಿಕ್ರಮಶಾಲಿಯು. ಕಲ್ಯಾಣದಲ್ಲಿ ಬಸವೇಶ್ವರನ ಮಹಿಮೆಗಳನ್ನು ಕೇಳಿ, ಏಕಾಂತದ ರಾಮಯ್ಯನು ಅಲ್ಲಿಗೆ ಆಗಮಿಸಿದನು. ಅವನು ಅಲ್ಲಿ ಒಂದು ದೇವಾಲಯದಲ್ಲಿ ಇಳಿದುಕೊಂಡಿದ್ದ ಸಮಯದಲ್ಲಿ ಒಬ್ಬ ಜೈನನು ಕೆರಹಗಾಲಿನಿಂದ ಒಳಕ್ಕೆ ಪ್ರವೇಶಿಸಲು, ಏಕಾಂತದ ರಾಮಯ್ಯನು ಅವನನ್ನು ಪ್ರತಿಬಂಧಿಸಿದನು. ಆಗ ಉಭಯತರಲ್ಲಿ ಯಾವ ದೇವರು ಸತ್ಯವೆಂಬದರ ಬಗ್ಗೆ ವಾಗ್ವಾದವು ಆಗಿ ಆದರಲ್ಲಿ ಜೈನನು ಏಕಾಂತದ ರಾಮಯ್ಯನಿಗೆ, ನೀನು ನಿನ್ನ ತಲೆಯನ್ನು ಕತ್ತರಿಸಿ ಶಿವನಿಗೆ

---

* ಇದರ ವಿವರಣೆಯು ಎಪಿಗ್ರಾಫಿಕಾ ಇಂಡಿಕಾ ವ್ಹಾ. ನಂ. ೫ ಪುಟ ೨೪೫ ಇದರಲ್ಲಿ ಬಂದಿದೆ.

ಸಮರ್ಪಿಸಿ ಅದನ್ನು ಮರಳಿಪಡೆದರೆ ಆವನು ನಿಜವಾದ ದೇವರೆಂದೆನ್ನು ವೆನು ಎಂದು ಅನ್ನಲಾಗಿ, ಏಕಾಂತದ ರಾಮಯ್ಯನು ಅದಕ್ಕೆ ಒಪ್ಪಿ ಬಿಜ್ಜಳರಾಯನ ಸಮ್ಮುಖದಲ್ಲಿ ತನ್ನ ಶಿರಸ್ಸನ್ನು ಕತ್ತರಿಸಿ, ಆ ಸ್ಥಿತಿಯಲ್ಲಿ ಏಳುದಿನಗಳಿದ್ದು, ಏಳನೇ ದಿನ ತನ್ನ ಶಿರಸ್ಸನ್ನು ಪುನಃ ಪಡೆದುಕೊಂಡು ರಾಜನಿಂದ ಜಯಪತ್ರವನ್ನು ಹೊಂದಿದನು. ಆಮೇಲೆ ಏಕಾಂತದ ರಾಮಯ್ಯನು ಕಲ್ಯಾಣದ ಪಟ್ಟಣದಲ್ಲಿಯ ಎಲ್ಲ ಜಿನಾಲಯಗಳನ್ನು ನಾಶಮಾ ದನು ಎಂದು ಬಸವಪುರಾಣದಲ್ಲಿ ಹೇಳಲ್ಪಟ್ಟಿದೆ. ಆದರೆ ಈ ಅಬ್ಬಲೂರು ಶಿಲಾಲೇಖದಲ್ಲಿಯ ವರ್ಣನೆಯು ಇವಕ್ಕೂ ಸ್ವಲ್ಪ ಭಿನ್ನವಾಗಿದ್ದು, ಇದರಲ್ಲಿ ಹೆಚ್ಚು ವಿಶ್ವಸನೀಯವಾದ ಸಂಗತಿಗಳು ದೊರ ಕುತ್ತವೆ.

## ಶಿಲಾಶಾಸನದ ಸ್ಥೂಲ ವಿವರಣೆ.

ಶಿಲಾಶಾಸನದ ಪ್ರಾರಂಭದಲ್ಲಿ ಈಶ್ವರನ ಸ್ತುತಿಪರ ಪದ್ಯಗಳಿವೆ. ಮುಂದೆ ಹಿಮಗಿರಿಯೂ ಅದರ ದಕ್ಷಿಣ ಪಾರ್ಶ್ವದಲ್ಲಿರುವ ಭಾರತವರ್ಷವೂ ಕುಂತಳ ದೇಶವೂ ವರ್ಣಿಸಲ್ಪಟ್ಟಿವೆ. ಈ ಕುಂತಳದೇಶದಲ್ಲಿ ಆಳಂದೆ ಎಂಬ ನಗರವು ವಿಬುಧ ಜನರಿಂದಲೂ ನಾನಾವಿಧ ಗಂಧಸುಳಿವನಗ ಳಿಂದಲೂ ತಟಾಕಕೂಪಸಮೂಹಗಳಿಂದಲೂ ಧನಧಾನ್ಯ ಸಮೃದ್ಧಿಯಿಂ ದಲೂ ವಣಿಗಜನರಿಂದಲೂ ಕೂಡಿಕೊಂಡು ಅಮರಾವತಿಗೆ ಮಿಗಿಲೆ ನಿಸಿ ಒಪ್ಪುತ್ತಿತ್ತು. ಅಲ್ಲಿ ಸೋಮನಾಥನ ದೇವಾಲಯವೂ ಒಂದು ಇತ್ತು.

ಆ ಪಟ್ಟಣದ ಬ್ರಹ್ಮಪುರಿ (ಬ್ರಾಹ್ಮಣರಿರುವ ಸ್ಥಳ) ಯಲ್ಲಿ ವೇದ ವೇದಾಂಗವಿದನಾದ ಪುರುಷೋತ್ತಮನೆಂಬ ದ್ವಿಜನುವಾಸಿಸುತ್ತಿದ್ದನು. ಆವನ ಹೆಂಡತಿಯ ಹೆಸರು ಸೀತಾದೇವಿಯು. ಆದರೆ ಅವರಿಗೆ ಪುತ್ರನಿಲ್ಲ ದ್ದರಿಂದ ಅವರು ಸೋಮನಾಥನನ್ನು ಪುತ್ರಾಪೇಕ್ಷಿಗಳಾಗಿ ದಿನಾಲು ಪೂಜಿಸುತ್ತಿದ್ದರು.

ಇತ್ತ ಕೈಲಾಸಪರ್ವತದಲ್ಲಿ ಪರಮ ಮಹೇಶ್ವರನು ಅಸಂಖ್ಯ ಗಣ ಪರಿಣಿತನಾಗಿ ಒಡ್ಡೋಲಗದಲ್ಲಿರಲು ನಾರದನೆಂಬ ಗಣೇಶ್ವರನು ಅಲ್ಲಿಗೆ

ಮೊದಲಾದವುಗಳಿಗೆ ಅವನು ಮೀರಿದ್ದು ಅವನು ಯಾವ ತರದ ಸಿಮು ಮುಗಳಿಂದ ಮರ್ಯಾದಿತನಾಗಿಲ್ಲ, ಎಂಬದರ ಜ್ಞಾನವು ಜ್ಞಾನಯೋಗಿಗೆ ಇರುತ್ತದೆ. ಪರಮಾತ್ಮನಲ್ಲಿಯೂ ತನ್ನಲ್ಲಿಯೂ ಅಭೇದತ್ವವಿದೆಯೆಂದು ಅವನಿಗೆ ತೋರುತ್ತಿರುತ್ತದೆ. ತನ್ನನ್ನು ಶರೀರ, ಮನಸ್ಸು ಇಂದ್ರಿಯಗಳು ಬುದ್ಧಿ ಮೊದಲಾದವುಗಳೊಡನೆ ಏಕೀಕರಿಸದೆ ತಾನು ಹುಟ್ಟು ಸಾವಗಳಿಲ್ಲದ. ಪಾಪ ರಹಿತನಾದ, ನಿರ್ಭೀತನಾದ, ಅವಿನಾಶಿಯಾದ, ನಿರಂತರ ಶಾಂತನಾದ, ಸುಖ ದುಃಖಗಳಿಂದ ನಿರ್ವಿಕಾರಿಯಾದ, ಆತ್ಮನಿದ್ದೇನೆಂದು ಅವನಿಗೆ ಅರಿವೆಯುಂಟಾಗುತ್ತದೆ.

ನಿಜವಾದ ಜ್ಞಾನಯೋಗಿಯು ಎಲ್ಲ ಪ್ರಾಪಂಚಿಕ ವಿಷಯುಗಳಿಗೂ ಮೀರಿದ್ದು. ಯಾವಾಗಲೂ 'ಅಹಂಬ್ರಹ್ಮಾಸ್ಮಿ' 'ಸೋಹಂ' 'ಸೋಹಂ' ಎಂದು ಅವನು ಅನ್ನುತ್ತಿರಬೇಕು ಅವನು ತನ್ನಲ್ಲಿ,

"ನಾನು ಮನಸ್ಸಲ್ಲ, ಬುದ್ಧಿಯಲ್ಲ, ಅಹಂಕಾರವಲ್ಲ, ಇಂದ್ರಿಯಗಳಲ್ಲ, ಪೃಥ್ವಿಯಲ್ಲ, ಅಪ್ಪುಅಲ್ಲ, ತೇಜವಲ್ಲ, ವಾಯುವಲ್ಲ, ಆಕಾಶವೂ ಅಲ್ಲ ಆದರೆ ಸಚ್ಚಿದಾನಂದ ನಿತ್ಯಪರಿಪೂರ್ಣ ಸ್ವರೂಪನೇ ನಾನಿದ್ದೇನೆ."

'ಶಾರೀರಿಕ ಕರ್ಮಗಳೂ ನಾನಲ್ಲ. ಶಾರೀರಿಕ ಭೋಗಗಳೂ ನಾನಲ್ಲ. ಕರ್ಮಜ್ಞಾನಗಳ ಭಾವನೆಯೂ ನಾನಲ್ಲ. ಆದರೆ ಸಚ್ಚಿದಾನಂದ ನಿತ್ಯ ಪರಿಪೂರ್ಣ ರೂಪನೇ ನಾನು.'

"ನನ್ನಲ್ಲಿ ಪ್ರೀತಿಯಿಲ್ಲ, ದ್ವೇಷವಿಲ್ಲ, ಆಶೆಯಿಲ್ಲ, ಮಾಯೆಯಿಲ್ಲ, ಭ್ರಾಂತಿಯಿಲ್ಲ, ಅಹಂಕಾರವಿಲ್ಲ, ಗರ್ವವಿಲ್ಲ, ಮತವಿಲ್ಲ, ಮತಭೇದವಿಲ್ಲ, ಬಂಧದ ಬಿಡುಗಡೆಯ ಇಚ್ಛೆಯೂ ನನಗಿಲ್ಲ ನಾನು ಸಚ್ಚಿದಾನಂದ ರೂಪನಿದ್ದೇನೆ."

"ನನ್ನಲ್ಲಿ ಸದ್ಗುಣವೂ ಇಲ್ಲ, ದುರ್ಗುಣವೂ ಇಲ್ಲ, ಪಾಪವೂ ಇಲ್ಲ, ನನಗೆ ಸುಖವೂ ಇಲ್ಲ, ದುಃಖವೂ ಇಲ್ಲ, ವಿಧಿನಿಯಮಗಳೂ ನನಗಿಲ್ಲ, ನಾನು ಆಹಾರವೂ ಅಲ್ಲ, ತಿನ್ನುವವನೂ ನಾನಲ್ಲ. ಆದರೆ ಸಚ್ಚಿದಾನಂದ ಪರಿಪೂರ್ಣನಾಗಿದ್ದೇನೆ."

'ನನಗೆ ಮರಣವಿಲ್ಲ, ಮರಣದ ಅಂಜಿಕೆ ಇಲ್ಲ, ಹುಟ್ಟು ಇಲ್ಲ. ಜಾತಿಭೇದವಿಲ್ಲ, ನನಗೆ ತಂದೆ ಇಲ್ಲ, ತಾಯಿ ಇಲ್ಲ, ನಾನು ಮಿತ್ರನಲ್ಲ,

ವೈರಿಯುಇಲ್ಲ, ಗುರುವೂ ಅಲ್ಲ, ಶಿಷ್ಯನೂ ಅಲ್ಲ, ಸಚ್ಚಿದಾನಂದ ರೂಪನೇ ನಾನು.'

'ನನಗೆ ಶಂಕೆಯಿಲ್ಲ ಪ್ರಶ್ನೆಗಳಿಲ್ಲ, ನಾನು ನಿರಾಕಾರನೂ, ಸರ್ವ ವ್ಯಾಪಿಯೂ, ಸೃಷ್ಟಿಯ ನಿರಂತರ ಪುಜಮಾನನೂ, ಇಂದ್ರಿಯಗಳ ಒಡೆಯನೂ ಇದ್ದೇನೆ. ನಾನು ಬದ್ಧನೂ ಅಲ್ಲ, ಮುಕ್ತನೂ ಅಲ್ಲ, ನಾನೂ ಬ್ರಹ್ಮನೂ ಒಂದೇ, ನಾನು ಸರ್ವಾಂತರ್ಯಾಮಿಯು, ನಾನೇ ಎಲ್ಲವುಗಳ ಅವಿನಶ್ವರ ಈಶ್ವರನು. ನಾನು ಸಚ್ಚಿದಾನಂದ ರೂಪನಿದ್ದೇನೆ. ಅವನೇ ನಾನು ಎಂದು ನಿರಂತರ ಅನ್ನುತ್ತಿರುತ್ತಾನೆ.'

ಈ ರೀತಿಯಾಗಿ ಜ್ಞಾನಯೋಗಿಯು ಪರಿಪೂರ್ಣ, ನಿತ್ಯ, ನಿರ್ವಿಕಾರ ಸತ್ಯವನ್ನು ಇದೇ ಜೀವಿತದಲ್ಲಿ ಕಂಡುಹಿಡಿದು ತನ್ನ ಮತ್ತು ಅದರ ಏಕತ್ವ ನಿಶ್ಚಯವನ್ನು ಮಾಡಿಕೊಳ್ಳುತ್ತಾನೆ. ಬ್ರಹ್ಮವನ್ನು ತಿಳಿಯುವವನು ಬ್ರಹ್ಮನೇ ಆಗುತ್ತಾನೆಂದು ಜ್ಞಾನಯೋಗಿಯು ಹೇಳುತ್ತಾನೆ. ಯಾಕಂದರೆ ಬ್ರಹ್ಮನನ್ನು ಬ್ರಹ್ಮನಿಂದ ಬೇರೊಬ್ಬನಾದವನು ಅರಿಯಲಾರನು. ತನ್ನ ನಿಜವಾದ ಸ್ವರೂಪವೇ ಬ್ರಹ್ಮನೆಂಬುವದನ್ನು ಜ್ಞಾನಯೋಗಿಯು ಎಂದೂ ಮರೆಯುವದಿಲ್ಲ. ಈ ರೀತಿಯಾದ ಉಚ್ಚತಮಜ್ಞಾನಾರ್ಜನೆ ಮಾಡಿಕೊಂಡು ಯಾವಾಗಲೂ ಶಾರೀರಿಕ ಮಾನಸಿಕ ಕೃತ್ಯಗಳಿಗೆ ಸಾಕ್ಷಿರೂಪನಾಗಿರುತ್ತಾನೆ. ನಿರಂತರ ಸುಖಿಯು ನಿರ್ವಿಕಾರನೂ ಆಗಿದ್ದು ಮಾನವ ಜಾತಿಗೆ ಪೂರ್ಣ ಬಿಡುಗಡೆಯ ಹಾದಿಯನ್ನು ತೋರುತ ಸ್ಥಾನದಿಂದ ಸ್ಥಾನಕ್ಕೆ ತೆರಳುತ್ತಾನೆ. ಪೂರ್ಣ ಜ್ಞಾನಯೋಗಿಯಾದವನು ಬ್ರಹ್ಮನ ಅವತಾರವೆಂಬಂತೆ ಈ ಜಗತ್ತಿನಲ್ಲಿ ವಾಸಿಸುತ್ತಾನೆ.



# ಏಕಾಂತದ ರಾಮಯ್ಯ ಮತ್ತು ಅಬ್ಬಲೂರು ಶಿಲಾಶಾಸನ.

ಕಾಲ. ಸುಮಾರು ಕ್ರಿ. ಶ ೧೨೦೦

(ಲೇಖಕ:—ರಾ॥ ಸಾ॥ ಫ. ಗು. ಹಳಕಟ್ಟಿ ವಿಜಾಪುರ.)



ಈ ಲೇಖದಲ್ಲಿ ನಾವು ಬಸವೇಶ್ವರನ ಕಾಲದಲ್ಲಿದ್ದ ಏಕಾಂತರಾಮಯ್ಯನೆಂಬ ಶಿವಶರಣನ ಒಂದು ಮಹತ್ವದ ಶಾಸನವನ್ನು ಕುರಿತು ಉಲ್ಲೇಖಿಸುತ್ತೇವೆ. ಈ ಶಿಲಾಶಾಸನವು ಧಾರವಾಡ ಜಿಲ್ಹೆಯಲ್ಲಿ ಹಿರೇಕೆರೂರ ತಾಲೂಕಿನಲ್ಲಿರುವ ಅಬ್ಬಲೂರ ಗ್ರಾಮದಲ್ಲಿ ಇರುತ್ತದೆ. * ಇದರಲ್ಲಿ ಅನೇಕ ಮಹತ್ವದ ಐತಿಹಾಸಿಕ ಸಂಗತಿಗಳು ಕಂಡು ಬರುತ್ತವೆ. ಈ ಶಿವಶರಣನ ವೃತ್ತಾಂತವು ಭೀಮಕವಿಯು ರಚಿಸಿದ ಬಸವಪುರಾಣದ ಸಂಧಿ ೪೯ ಮತ್ತು ೫೨ ಇವುಗಳಲ್ಲಿ ಬಂದಿರುತ್ತದೆ. ಆದರೆ ಈ ಶಿಲಾಶಾಸನದಲ್ಲಿ ಅದಕ್ಕೂ ವಿಶ್ವಸನೀಯವಾದ ಹೆಚ್ಚಿನ ವಿವರಣೆಯು ದೊರೆಯುತ್ತಿದೆ. ಮತ್ತು ಇದರ ಮೇಲಿಂದ ಕರ್ನಾಟಕ ಪ್ರಾಂತದಲ್ಲಿ ಶಿಲಾಶಾಸನಗಳನ್ನು ಶೋಧಿಸುವ ಕಾರ್ಯವು ಎಷ್ಟು ಮಹತ್ವದ್ದಿರುತ್ತದೆಂಬ ಸಂಗತಿಯು ಸ್ಪಷ್ಟವಾಗಿ ವಿದಿತವಾಗುತ್ತದೆ.

ಬಸವಪುರಾಣದಲ್ಲಿ ಕೆಳಗೆ ಕಾಣಿಸಿದಂತೆ ಏಕಾಂತದ ರಾಮಯ್ಯನ ವೃತ್ತಾಂತವು ಇರುತ್ತದೆ. ಏನೆಂದರೆ:—ಈತನು ಅಬ್ಬಲೂರವನು ಮತ್ತು ಅಪ್ರತಿಮ ವಿಕ್ರಮಶಾಲಿಯು. ಕಲ್ಯಾಣದಲ್ಲಿ ಬಸವೇಶ್ವರನ ಮಹಿಮೆಗಳನ್ನು ಕೇಳಿ, ಏಕಾಂತದ ರಾಮಯ್ಯನು ಅಲ್ಲಿಗೆ ಆಗಮಿಸಿದನು. ಅವನು ಅಲ್ಲಿ ಒಂದು ದೇವಾಲಯದಲ್ಲಿ ಇಳಿದುಕೊಂಡಿದ್ದ ಸಮಯದಲ್ಲಿ ಒಬ್ಬ ಜೈನನು ಕೆರಹಗಾಲಿನಿಂದ ಒಳಕ್ಕೆ ಪ್ರವೇಶಿಸಲು, ಏಕಾಂತದ ರಾಮಯ್ಯನು ಅವನನ್ನು ಪ್ರತಿಬಂಧಿಸಿದನು. ಆಗ ಉಭಯತರಲ್ಲಿ ಯಾವ ದೇವರು ಸತ್ಯವೆಂಬದರ ಬಗ್ಗೆ ವಾಗ್ವಾದವು ಆಗಿ ಅದರಲ್ಲಿ ಜೈನನು ಏಕಾಂತದ ರಾಮಯ್ಯನಿಗೆ, ನೀನು ನಿನ್ನ ತಲೆಯನ್ನು ಕತ್ತರಿಸಿ ಶಿವನಿಗೆ

* ಇದರ ವಿವರಣೆಯು ಎಪಿಗ್ರಾಫಿಕಾ ಇಂಡಿಕಾ ವ್ಹಾ. ನಂ. ೫ ಪುಟ ೨೪೫ ಇದರಲ್ಲಿ ಬಂದಿದೆ.

ಸಮರ್ಪಿಸಿ ಅದನ್ನು ಮರಳಿ ಪಡೆದರೆ ಆವನು ನಿಜವಾದ ದೇವರೆಂದೆನ್ನುವೆನು ಎಂದು ಅನ್ನಲಾಗಿ, ಏಕಾಂತದ ರಾಮಯ್ಯನು ಅದಕ್ಕೆ ಒಪ್ಪಿ ಬಿಜ್ಜಳರಾಯನ ಸಮ್ಮುಖದಲ್ಲಿ ತನ್ನ ಶಿರಸ್ಸನ್ನು ಕತ್ತರಿಸಿ, ಆ ಸ್ಥಿತಿಯಲ್ಲಿ ಏಳುದಿನಗಳಿದ್ದು, ಏಳನೇ ದಿನ ತನ್ನ ಶಿರಸ್ಸನ್ನು ಪುನಃ ಪಡೆದುಕೊಂಡು ರಾಜನಿಂದ ಜಯಪತ್ರವನ್ನು ಹೊಂದಿದನು. ಆಮೇಲೆ ಏಕಾಂತದ ರಾಮಯ್ಯನು ಕಲ್ಯಾಣದ ಪಟ್ಟಣದಲ್ಲಿಯ ಎಲ್ಲ ಜಿನಾಲಯಗಳನ್ನು ನಾಶಮಾಡಿದನು ಎಂದು ಬಸವಪುರಾಣದಲ್ಲಿ ಹೇಳಲ್ಪಟ್ಟಿದೆ. ಆದರೆ ಈ ಅಬ್ಬಲೂರು ಶಿಲಾಲೇಖದಲ್ಲಿಯ ವರ್ಣನೆಯು ಇದಕ್ಕೂ ಸ್ವಲ್ಪ ಭಿನ್ನವಾಗಿದ್ದು, ಇದರಲ್ಲಿ ಹೆಚ್ಚು ವಿಶ್ವಸನೀಯವಾದ ಸಂಗತಿಗಳು ದೊರಕುತ್ತವೆ.

## ಶಿಲಾಶಾಸನದ ಸ್ಥೂಲ ವಿವರಣೆ.

ಶಿಲಾಶಾಸನದ ಪ್ರಾರಂಭದಲ್ಲಿ ಈಶ್ವರನ ಸ್ತುತಿಪರ ಪದ್ಯಗಳಿವೆ. ಮುಂದೆ ಹಿಮಗಿರಿಯೂ ಅದರ ದಕ್ಷಿಣ ಪಾರ್ಶ್ವದಲ್ಲಿರುವ ಭಾರತವರ್ಷವೂ ಕುಂತಳ ದೇಶವೂ ವರ್ಣಿಸಲ್ಪಟ್ಟಿವೆ. ಈ ಕುಂತಳದೇಶದಲ್ಲಿ ಆಳಂದೆ ಎಂಬ ನಗರವು ವಿಬುಧ ಜನರಿಂದಲೂ ನಾನಾವಿಧ ಗಂಧಶಾಳಿವನಗಳಿಂದಲೂ ತಟಾಕಕೂಪಸಮೂಹಗಳಿಂದಲೂ ಧನಧಾನ್ಯ ಸಮೃದ್ಧಿಯಿಂದಲೂ ವಣಿಗಜನರಿಂದಲೂ ಕೂಡಿಕೊಂಡು ಅಮರಾವತಿಗೆ ಮಿಗಿಲೆನಿಸಿ ಒಪ್ಪುತ್ತಿತ್ತು. ಅಲ್ಲಿ ಸೋಮನಾಥನ ದೇವಾಲಯವೂ ಒಂದು ಇತ್ತು.

ಆ ಪಟ್ಟಣದ ಬ್ರಹ್ಮಪುರಿ (ಬ್ರಾಹ್ಮಣರಿರುವ ಸ್ಥಳ) ಯಲ್ಲಿ ವೇದವೇದಾಂಗವಿದನಾದ ಪುರುಷೋತ್ತಮನೆಂಬ ದ್ವಿಜನುವಾಸಿಸುತ್ತಿದ್ದನು. ಅವನ ಹೆಂಡತಿಯ ಹೆಸರು ಸೀತಾದೇವಿಯು. ಆದರೆ ಅವರಿಗೆ ಪುತ್ರನಿಲ್ಲದ್ದರಿಂದ ಅವರು ಸೋಮನಾಥನನ್ನು ಪುತ್ರಾಪೇಕ್ಷಿಗಳಾಗಿ ದಿನಾಲು ಪೂಜಿಸುತ್ತಿದ್ದರು.

ಇತ್ತ ಕೈಲಾಸಪರ್ವತದಲ್ಲಿ ಪರಮ ಮಹೇಶ್ವರನು ಅಸಂಖ್ಯ ಗಣಪರಿಣಿತನಾಗಿ ಒಡ್ಡೋಲಗದಲ್ಲಿರಲು ನಾರದನೆಂಬ ಗಣೇಶ್ವರನು ಅಲ್ಲಿಗೆ

ಬಂದು ಮನುಷ್ಯ ಲೋಕದಲ್ಲಿ ಜೈನ; ಬೌದ್ಧರ ಸಮಯಗಳು ಉತ್ಕಟ ವಾಗಿವೆ ಎಂದು ಹೇಳಲು, ಮಹೇಶ್ವರನು ವೀರಭದ್ರನನ್ನು ಉದ್ದೇಶಿಸಿ ನೀನು ಮನುಷ್ಯ ಲೋಕದಲ್ಲಿ ನಿನ್ನ ಅಂಶದಿಂದ ಒಬ್ಬನನ್ನು ಹುಟ್ಟಿಸಿ ಪರಸಮಯಗಳನ್ನು ತಡೆಯಬೇಕೆಂದು ಹೇಳಲು ವೀರಭದ್ರನು ಪುರು ಷೋತ್ತಮಭಟ್ಟನ ಸ್ವಪ್ನದಲ್ಲಿ ತಾಪಸ ರೂಪದಿಂದ ಬಂದು ಪರಸಮಯ ನಿರ್ಯಾಮಕನಾದ ಒಬ್ಬ ಮಗನು ಹುಟ್ಟುವನೆಂದು ಹೇಳಿದನು.

ಆ ಪ್ರಕಾರ ಪುರುಷೋತ್ತಮಭಟ್ಟನು ಕೃತಾರ್ಥನಾಗಿ ಒಬ್ಬ ಮಗನನ್ನು ಪಡೆದು ಜಾತಕರ್ಮಾದಿ ಕ್ರಿಯೆಗಳನ್ನು ಮಾಡಿ ಅವನಿಗೆ ರಾಮನೆಂಬ ಹೆಸರನ್ನಿಟ್ಟನು.

ಈತನು ಶಿವಯೋಗಯುಕ್ತನಾಗಿ ನಿಸ್ಪೃಹವೃತ್ತಿಯಿಂದ ಆಚರಿ ಸುತ್ತ ಶಿವನಲ್ಲಿ ಏಕಾಗ್ರ ಭಕ್ತಿಯುಳ್ಳವನಾಗಿ ಏಕಾಂತದಲ್ಲಿ ಆರಾಧಿ ಸುವವನಾದ್ದರಿಂದ ಜನರಲ್ಲಿ ಏಕಾಂತದ ರಾಮನೆಂಬ ಹೆಸರನ್ನು ಪಡೆ ದನು.

ಮುಂದೆ ಅವನು ಶಿವಾಗಮೋಕ್ತವಾದ ವಿವಿಧ ಕ್ಷೇತ್ರಂಗಳನ್ನು ಚರಿಯಿಸುತ್ತ ದಕ್ಷಿಣ ಸೋಮನಾಥನೆಂದೆನಿಸಿಕೊಳ್ಳುವ ಹುಲಿಗೆಯ (ಲಕ್ಷ್ಮೇ ಶ್ವರ) ಸೋಮನಾಥನಲ್ಲಿಗೆ ಬಂದನು. ಅಲ್ಲಿಂದ ಅವನು ಅಬ್ಬಲೂರ ಬ್ರಹ್ಮೇಶ್ವರ ಸ್ಥಾನದಲ್ಲಿ ಬಂದು ಇರತೊಡಗಿದನು.

ಅಲ್ಲಿ ರಾಮಯ್ಯನು ಇರುತ್ತಿರಲು ಒಂದು ದಿನ ಸಂಕರಗೌಡ ನೆಂಬ ಆ ಗ್ರಾಮದ ಅಧಿಪತಿಯು ಜೈನರೊಡಗೂಡಿ ಅವನಿಗೆ ಅಡ್ಡಿ ಮಾಡಲಿಕ್ಕೋಸ್ಕರ ಬಂದು ಅವನ ಸಮ್ಮುಖದಲ್ಲಿ ನಿಂತು ಜಿನನೇ ದೈವವೆಂದು ಛಲದಿಂದ ಅನ್ನಹತ್ತಲು ಏಕಾಂತದ ರಾಮಯ್ಯನು ಶಿವಸನ್ನಿ ಧಿಯಲ್ಲಿ ಹೀಗೆ ಅನ್ಯ ದೇವತಾಸ್ತವನವನ್ನು ಮಾಡಕೂಡದೆಂತಲೂ ಅವ ನ ದಯದಿಂದಲೇ ಅನೇಕ ಭಕ್ತ ಗಣಂಗಳು ವರಗಳನ್ನು ಪಡೆದಿರುವ ರೆಂತಲೂ ಹೇಳಲಾಗಿ, ಅದಕ್ಕೆ ಜೈನರು ಹಿಂದಿನವರ ಕಥೆಯನ್ನು ಏಕೆ ಹೇಳುತ್ತೀ? ನೀನೇ ನಿನ್ನ ಶಿರವನ್ನು ಹರಿದು ಆತನಿಗೆ ಕೊಟ್ಟು ನೀನು ಅವನಿಂದ ಪಡೆದೆಯಾದರೆ ನೀನು ಭಕ್ತನು ಎಂದು ಹೇಳಲು ಅದಕ್ಕೆ ಏಕಾಂ ತದ ರಾಮಯ್ಯನು ಹೀಗೆ ಮಾಡಿದರೆ ನೀವು ನನಗೆ ಕೊಡುವ ಪಣವೇನು,

ಎಂದು ಕೇಳಲಾಗಿ, ಜೈನರು ತಮ್ಮ ಜಿನನನ್ನು ಕಿತ್ತು ಶಿವನನ್ನು ಸ್ಥಾಪಿಸು ವೆವು ಎಂದು ಹೇಳಿದರು. ಆಗ ರಾಮಯ್ಯನು ಆ ಪ್ರಕಾರ ಬಾಂದು ಓಲೆ ಯನ್ನು ಬರಕೊಡಿರಿ ಎಂದು ಹೇಳಲು ಹಾಗೆ ಜೈನರು ಬರಕೊಟ್ಟರು.

ಆ ಮೇಲೆ ಏಕಾಂತದ ರಾಮಯ್ಯನು ಶಿವನ ಸನ್ನಿಧಿಯಲ್ಲಿ ನಿಂತು ಪರಮಾತ್ಮನನ್ನು ಪ್ರಾರ್ಥಿಸಿ ಒಂದು ಕೃಪಾಣದಿಂದ ತನ್ನ ಶಿರಸ್ಸನ್ನು ಕತ್ತರಿಸಿ ಶಂಕರನ ಅಂಘ್ರಿಯಲ್ಲಿ ಇಟ್ಟನು. ಈ ಪ್ರಕಾರ ಅರಿದ ತಲೆಯು ಏಳು ದಿವಸಗಳ ವರೆಗೂ ಇರಲಾಗಿ ಹರನು ಆದರಿಂದ ಅದನ್ನು ರಾಮಯ್ಯನಿಗೆ ಮರಳಿ ಕೊಡಲಾಗಿ ಅವನು ತಿರುಗಿ ಪ್ರಾಣವನ್ನು ಹೊಂದಿದನು.

ಆಗ್ಗ ಜೈನರು ಜಿನ ಪ್ರಳಯವಾಗುವದೆಂದು ಅಂಜಿ ಏಕಾಂತದ ರಾಮಯ್ಯನನ್ನು ಬೇಡಿಕೊಳ್ಳಲಾಗಿ ಅವನು ಬಿಡದೆ ಜಿನ ಪ್ರತಿಮೆಯ ಮುಂಡವನ್ನು ಒಡೆದನು. ಮತ್ತು ಜೈನ ವೀರರನ್ನೂ ಅವರ ತುರಗಗ ಳನ್ನೂ ಓಡಿಸಿ ಜಿನನನ್ನು ಕೆಡವಿ ಜೈನರು ವೀರಸೋಮೇಶ್ವರನನ್ನು ಸ್ವೀಕರಿಸುವಂತೆ ಮಾಡಿದನು. ಆಗ ಜೈನರು ಬಿಜ್ಜಳನ ಕಡೆಗೆ ಹೋಗಿ ಏಕಾಂತದ ರಾಮಯ್ಯನು ಮಾಡಿದ ಈ ಕೃತಿಯ ಬಗ್ಗೆ ದೂರು ಹೇಳ ಲಾಗಿ ಅವನು ರಾಮಯ್ಯನನ್ನು ಕರಿಸಿ, ನೀನೇಕೆ ಹೀಗೆ ಮಾಡಿದೆ ಎಂದು ಕೇಳಲಾಗಿ ರಾಮಯ್ಯನು ಜೈನರು ತನಗೆ ಬರಕೊಟ್ಟ ಓಲೆ ಯನ್ನು ಅವನಿಗೆ ತೋರಿಸಿ, ಅಂದದ್ದೇನಂದರೆ ಈ ಓಲೆಯು ನಿನ್ನ ಭಂಡಾ ರದಲ್ಲಿರಲಿ, ಜೈನರು ಸಮರ್ಥರಿದ್ದರೆ ನನ್ನ ತಲೆಯನ್ನು ಪುನಃ ಅರಿದು ಅದನ್ನು ಅವರ ಕೈಯಲ್ಲಿ ಒಡ್ಡುವೆನು, ಅವರು ಅದನ್ನು ಸುಟ್ಟ ಬಳಿಕ ಅದನ್ನು ಪುನಃ ಪಡೆಯುವೆನು, ಹೀಗೆ ಮಾಡಿದರೆ ಆನೇಸೆಜ್ಜೆಯಬಸದಿ ಮುಖ್ಯವಾದ ೭೦೦ ಬಸದಿಗಳಲ್ಲಿಯ ಜಿನಗಳನ್ನು ಒಡೆಯುವೆನೆಂದು ಅವರು ಪಣವಾಗಿ ಒಡ್ಡಬೇಕು ಎಂದು ಹೇಳಲು, ಬಿಜ್ಜಳರಾಯನು ಈ ಕೌತುಕವನ್ನು ನೋಡುವೆನೆಂದು ಆ ಬಸದಿಗಳ ಪಂಡಿತರನ್ನು ಕರೆಯಿಸಿ ರಾಮಯ್ಯನ ಈ ಪಣಕ್ಕೆ ಒಪ್ಪಿದರೆ ಹಾಗೆ ಓಲೆಯನ್ನು ಬರಕೊಡಿರಿ ಎಂದು ಕೇಳಲು, ಅವರು ಈಗ ಒಡೆದ ಒಂದು ಬಸದಿಯನ್ನು ಸ್ಥಾಪಿ ಸಲಿಕ್ಕೆ ಬಂದೆವಲ್ಲದೆ ಉಳಿದ ಜಿನಪ್ರತಿಮೆಗಳ ಪ್ರಳಯ ಮಾಡಲು ಬಂದಿ ಲ್ಲೆಂದು ಹೇಳಲಾಗಿ ಬಿಜ್ಜಳರಾಯನು ನಕ್ಕು ನೀವು ಇನ್ನು ಮಾತಾ ಡದೆ ಹೋಗಿರೆಂದು ಕಳಿಸಿ ರಾಮಯ್ಯನಿಗೆ ಜಯಪತ್ರವನ್ನು ಕೊಟ್ಟನು.

ಮುಂದೆ ಶಿಲಾಲೇಖದಲ್ಲಿ ಮಹಾಮಂಡಲೇಶ್ವರನಾದ ಬಿಜ್ಜಳನ ಬಿರುದುಗಳು ಉಲ್ಲೇಖಿಸಲ್ಪಟ್ಟಿದ್ದು ತರುವಾಯ ಅದರಲ್ಲಿ ಬರೆದಿರುವ ದೇನಂದರೆ, ಬಿಜ್ಜಳದೇವನು ರಾಮಯ್ಯನು ಮಾಡಿದ ಈ ಪರಮಸಾಹಸ ವನ್ನೂ ಅವನ ನಿರತಿಶಯವಾದ ಮಹೇಶ್ವರ ಭಕ್ತಿಯನ್ನೂ ನೋಡಿ ಮೆಚ್ಚಿ ವೀರ ಸೋಮನಾಥ ದೇವರ ದೇಗುಲದ ಮಾಟಕೂಟ ಪ್ರಾಕಾರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೂ ದೇವರ ಅಂಗಭೋಗ ನೈವೇದ್ಯಕ್ಕೂ ಬನವಾಸಿ ೧೨ ಸಾವಿರ ಪ್ರಾಂತದಲ್ಲಿ ಒಂದು ಕಂಪಣ (ಭಾಗ) ವಾದ ಸತ್ತಳಿಗೆ ೭೦ರ ಅಧಿಪತಿಯಾದ ಚಟ್ಟರಸ ಮತ್ತು ಆ ಕಂಪಣದ ಮುಖ್ಯ ಸ್ಥರನ್ನು ಮುಂದಿಟ್ಟುಕೊಂಡು ಆ ಸತ್ತಳಿಗೆ ೭೦ರಲ್ಲಿರುವ ಮುಳಗುಂದ ದಕ್ಷಿಣಕ್ಕಿರುವ ಗೋಗಾವೆ ಎಂಬ ಗ್ರಾಮವನ್ನು ಏಕಾಂತದ ರಾಮಯ್ಯನ ಪಾದವನ್ನು ತೊಳೆದು ಧಾರಾಪೂರ್ವಕ ದಾನವಾಗಿ ಕೊಟ್ಟನು.

ಇದರ ತರುವಾಯ ಚಾಲುಕ್ಯರಾಜರ ವಂಶಾವಳಿಯು ಹೇಳಲ್ಪಟ್ಟಿದೆ. ಈ ವಂಶದಲ್ಲಿ ತ್ರಿಭುವನಮಲ್ಲ ಸೋಮೇಶ್ವರದೇವನೆಂಬ ಅರಸನು ಉತ್ಪನ್ನನಾಗಿ ಅವನು ಕಳಚೂರ್ಯರ ವಂಶವನ್ನು ಸಂಹರಿಸಿ ಪ್ರಸಿದ್ಧಿಯನ್ನು ಹೊಂದಿದವನಾದನು.

ಈ ಸೋಮೇಶ್ವರ ದೇವನೂ ಅವನ ಸಕಳ ಚಮೂನಾಥ ಶಿರೋಮಣಿಯೂ ಚಾಳುಕ್ಯ ರಾಜ್ಯಪ್ರತಿಷ್ಠಾಪಕನೂ ಆದ ಕುಮಾರ ಬೊಮ್ಮಯ್ಯನೂ ಹೀಗೆ ಉಭಯತರು ಸಲೆಯಾಹಳ್ಳಿಯಕೊಪ್ಪ ಎಂಬ ಗ್ರಾಮದಲ್ಲಿ ಸುಖಸಂಕಥಾ ವಿನೋದದಿಂದ ಒಂದು ದಿವಸ ಧರ್ಮಗೋಷ್ಠಿಯಲ್ಲಿದ್ದಾಗ್ಗೆ ಪುರಾತನರೂ ನೂತನರೂ ಆದ ಶಿವಭಕ್ತರ ಗುಣಸ್ತವನವನ್ನು ಮಾಡುತ್ತಿರುವಲ್ಲಿ ಏಕಾಂತದ ರಾಮಯ್ಯನು ಅಬ್ಬಲೂರಲ್ಲಿದ್ದು ತನ್ನ ತಲೆಯನ್ನು ಕತ್ತರಿಸಿಕೊಂಡು ಬಿಜ್ಜಳದೇವನ ಕೈಯ್ಯಲ್ಲಿ ಜಯಪತ್ರವನ್ನು ಪಡೆದುಕೊಂಡು ಜಿನನನ್ನು ಒಡೆದು ಬಸದಿಯನ್ನು ಹಾಳುಗೆಡವಿ ವೀರ ಸೋಮನಾಥ ದೇವರನ್ನು ಅಲ್ಲಿ ಪ್ರತಿಷ್ಠೆ ಮಾಡಿ ಅದಕ್ಕೆ ಮೂರು ಗೋಪುರಗಳಿಂದ ಕೂಡಿಕೊಂಡ ಪರ್ವತ ಪ್ರಮಾಣವಾದ ಒಂದು ದೇಗುಲವನ್ನು ಶಿವಾಗಮೋಕ್ತ ರೀತಿಯಿಂದ ಕಟ್ಟಿಸಿದನೆಂಬುದನ್ನು ಕೇಳಿ ತ್ರಿಭುವನಮಲ್ಲ ಸೋಮೇಶ್ವರ ದೇವನು ವಿಸ್ಮಯಪಟ್ಟು ರಾಮಯ್ಯನನ್ನು ನೋಡುವ ಪ್ರೀತಿಯಿಂದ ಬಿನ್ನವತ್ತಳೆಯನ್ನು ಬರೆಯಿಸಿ ಅವನನ್ನು ಬರ

ಸಿಕೊಂಡು ಇದಿರ್ಗೊಂಡು ತನ್ನ ಮನೆಗೆ ಕರೆದುಕೊಂಡು ಹೋಗಿ ಬಹಳ ಸತ್ಕಾರದಿಂದ ಅವನನ್ನು ಪೂಜಿಸಿದನು. ಆಗ ಅವನು ವೀರ ಸೋಮನಾಥ ದೇವರ ದೇಗುಲದ ಜೀರ್ಣೋದ್ಧಾರಕ್ಕೂ ದೇವರ ಅಂಗ ಭೋಗ ನೈವೇದ್ಯಕ್ಕೂ ಉತ್ಸವಾದಿ ಪರ್ವಗಳಿಗೂ ಅನ್ನದಾನ ವಿದ್ಯಾ ದಾನಕ್ಕೂ ಬನವಸೆ ೧೨ ಸಾವಿರ ಪ್ರಾಂತದಲ್ಲಿ ಒಂದು ಕಂಪಣವಾದ ನಾಗರಖಂಡ ೭೦ರಲ್ಲಿ ಇರುವ ಅಬ್ಬಲೂರ ಗ್ರಾಮವನ್ನು ಆ ಕಂಪಣದ ಮುಖ್ಯಸ್ಥನಾದ ಮಲ್ಲಿದೇವನನ್ನು ಮುಂದಿಟ್ಟುಕೊಂಡು ಆ ಊರಿನ ಮೇಲಾಳಿಗೆ ಸುಂಕ ದಂಡ ನಿಧಿನಿಕ್ಷೇಪವಾಗಿ ಏಕಾಂತ ರಾಮಯ್ಯಗಳ ಪಾದವನ್ನು ತೊಳೆದು ಧಾರಾಪೂರ್ವಕವಾಗಿ ಕೊಟ್ಟು ಒಂದು ತಾಮ್ರ ಶಾಸನವನ್ನು ಬರೆಯಿಸಿದನು. ಮತ್ತು ರಾಮಯ್ಯನನ್ನು ಆನೆಯ ಮೇಲೆ ಕೂಡ್ರಿಸಿ ಮೆರೆಸಿದನು. ಈ ಪ್ರಕಾರ ರಾಮಯ್ಯನು ಶ್ರೀಕಂಠನ ಪದಾಂಬುಜವನ್ನು ಪೂಜಿಸುತ್ತ ಶಿವಸಮಯಕ್ಕೆ ರಕ್ಷಕನಾಗಿ ಹೆಸರು ಪಡೆದನು.

ಇದರ ತರುವಾಯ ಶಾಸನದಲ್ಲಿ ಮಯೂರವರ್ಮ ಕುಲಭೂಷಣನಾದ ಕದಂಬ ಕಂಠೀರವನಾದ ಮಹಾಮಂಡಲೇಶ್ವರನಾದ ಕಾಮದೇವರಸನ ಬಿರುದುಗಳು ಹೇಳಲ್ಪಟ್ಟಿವೆ. ಅವನು ಹಾನಗಲ್ಲ ೫೦೦ರಲ್ಲಿ ಆಳುತ್ತಿರಲು ಅವನು ಅಬ್ಬಲೂರ ವೀರಸೋಮನಾಥ ದೇವರಲ್ಲಿಗೆ ಬಂದು ಅಲ್ಲಿ ರಾಮಯ್ಯನು ಶಿವಾಗಮ ವಿಧಾನದಿಂದ ಮಾಡಿಸಿದ ಪರ್ವತೋಪಮಾನವಾದ ದೇಗುಲವನ್ನು ಕಂಡು ಅವನು ಮಾಡಿದ ಸಾಹಸವನ್ನು ಕೇಳಿ ಮೆಚ್ಚಿ ಪರಮ ಪ್ರೀತಿಯಿಂದ ಅವನನ್ನು ಕೂಡಿಕೊಂಡು ತನ್ನ ಹಾನಗಲ್ಲ ರಾಜಧಾನಿಗೆ ಹೋಗಿ ತಾನು ತನ್ನ ಮಾಂಡಲಿಕ ಸಹಿತನಾಗಿ ಸುಖಸಂಕಥಾ ವಿನೋದದಿಂದ ಕುಳಿತುಕೊಂಡು ಪರಮ ಭಕ್ತಿಯಿಂದ ಅವನಿಗೆ ಹಾನಗಲ್ಲ ೫೦೦ ಪ್ರಾಂತದಲ್ಲಿ ಒಂದು ಕಂಪಣವಾದ ಹೊಸನಾಡು ೭೦ ರಲ್ಲಿ ಮುಂಡಗೋಡ ಸಮೀಪದಲ್ಲಿ ಇದ್ದ ಜೋಗೇಸರ ಗ್ರಾಮದ ಉತ್ತರಕ್ಕಿರುವ ಮಲ್ಲವಳ್ಳಿ ಎಂಬ ಗ್ರಾಮವನ್ನು ವೀರ ಸೋಮನಾಥ ದೇವರ ದೇಗುಲದ ಜೀರ್ಣೋದ್ಧಾರಕ್ಕೂ ದೇವರ ಅಂಗಭೋಗ ನೈವೇದ್ಯಕ್ಕೂ ಉತ್ಸವಾದಿ ಪರ್ವಗಳಿಗೂ ಅನ್ನದಾನಕ್ಕೂ ರಾಮಯ್ಯಗಳ ಕಾಲನ್ನು ತೊಳೆದು ಧಾರಾಪೂರ್ವಕವಾಗಿ ದಾನ ಕೊಟ್ಟನು.

ಆ ಮೇಲೆ ಶಾಸನದಲ್ಲಿ ಈ ಶಾಸನವನ್ನು ನಾಶಪಡಿಸಿದವರು ಪಾಪಕ್ಕೆ ಗುರಿಯಾಗುವರೆಂದು ಹೇಳಲ್ಪಟ್ಟದೆ. ಸ್ವಸ್ತಿ ಇದರ ಮುಂದೆ ದೇಗುಲವನ್ನು ಮಾಡಿಸಿದ ರಾಮಯ್ಯನ ಸ್ತುತಿಗಳಿವೆ.

ಇದರ ತರುವಾಯ ಶಾಸನದಲ್ಲಿ ಕೇಶವರಾಯ ಚಮೂಪನು ಈ ಶಾಸನವನ್ನು ಹೇಳಿದ ನಂತರ ಅದನ್ನು ತಿದ್ದಿ ನಿರಾಯಾಸದಿಂದ ಈಶನ ದಾಸನಾದಂಥ ಶಿವಚರಣ ಕಮಳ ಶರಣನಾದಂಥಾ ಶರಣನೆಂಬವನು ಬರೆದನೆಂದು ಹೇಳಲ್ಪಟ್ಟಿದೆ.

ಇದರ ತರುವಾಯ ಶಾಸನದಲ್ಲಿ ಮುಕ್ಕಣ್ಣ ಕದಂಬ ವಂಶದವನಾದ ಬನವಾಸಿಯ ಮಧುಕನಾಥದೇವರ ಪಾದಪದ್ಮಾರಾಧಕನಾದ ಮಲ್ಲಿದೇವರಾಯನು ನಗರ ಖಾತೆಯಲ್ಲಿರುವ ಒಂದು ಗ್ರಾಮವನ್ನು ಕೊಟ್ಟ ಬಗ್ಗೆ ಒಂದು ಉಲ್ಲೇಖವದೆ. ಇಲ್ಲಿ ಕಲ್ಲು ಭಿನ್ನವಾದ್ದರಿಂದ ಈ ದಾನದ ಮುಂದಿನ ವಿವರಣೆಯು ತಿಳಿಯುವದಿಲ್ಲ.

ಈ ಪ್ರಕಾರ ಈ ಶಾಸನದ ಮುಖ್ಯ ಸಾರಾಂಶವಿದೆ.

ಇನ್ನು ಮೇಲೆ ಈ ಶಿಲಾಶಾಸನದಿಂದ ಗೊತ್ತಾಗುವ ಕೆಲ ಮಹತ್ವದ ಸಂಗತಿಗಳನ್ನು ಇಲ್ಲಿ ನಿರೂಪಿಸುವೆವು.

ಬಸವೇಶ್ವರನ ಕಾಲದಲ್ಲಿ ಅನೇಕ ಶಿವಶರಣರು ಉದ್ಭವಿಸಿ ಶಿವಮತವನ್ನು ಪುನರುಜ್ಜೀವನ ಗೊಳಿಸಿದರೆಂಬುದನ್ನು ಈ ಶಿಲಾಶಾಸನವು ಸ್ಥಿರಪಡಿಸುತ್ತದೆ. ಆಗಿನಕಾಲದಲ್ಲಿ ಆನೇಕ ಶಿವಶರಣರು ಧರ್ಮ ಪ್ರಸಾರ ಕಾರ್ಯಕ್ಕೋಸ್ಕರ ಮಹತ್ಪ್ರಯತ್ನಗಳನ್ನು ಮಾಡಿ ಆಗಿನ ದೇಶಾಧಿಪತಿಗಳಿಂದ ಸಹ ಅತ್ಯಂತ ಪೂಜ್ಯರಾಗಿದ್ದರೆಂತಲೂ ಇದರಿಂದ ಕಂಡು ಬರುತ್ತದೆ. ಹಿಂದೆ ನಾವು ಶಿವಾನುಭವ ೯ ನೇ ಸಂಚಿಕೆಯಲ್ಲಿ ಬಸವಣ್ಣನವರ ವಂಶಜನಾದ ಹಾಲಬಸವಿದೇವನ ಶಿಲಾಶಾಸನದ ಬಗ್ಗೆ ಉಲ್ಲೇಖಿಸಿದ್ದು, ಅವನು ದೇವಗಿರಿಯ ಯಾದವ ರಾಜರಿಂದ ಅತೀವ ಮನ್ನಣೆಗೆ ಪಾತ್ರನಾಗಿದ್ದು ಕಂಡುಬರುತ್ತದೆ.

ಅದರಂತೆಯೇ ಏಕಾಂತದ ರಾಮಯ್ಯನು ಕಲಚೂರ್ಯ ಬಿಜ್ಜಳ, ಚಾಲುಕ್ಯ ಸೋಮೇಶ್ವರ, ಕದಂಬ ಕಾಮದೇವ, ಮಲ್ಲಿದೇವರಸರು, ಕೇಶಿರಾಜ ಈ ಮಹಾ ಪ್ರಭುಗಳಿಂದ ಮನ್ನಣೆ ಹೊಂದಿದವನಾಗಿದ್ದನೆಂದು ಈ ಅಬ್ಬಲೂರು ಶಿಲಾಶಾಸನದಿಂದ ಗೊತ್ತಾಗುತ್ತದೆ. ಅನೇಕರು ಬಸವೇಶ್ವರನ ಕಾಲಕ್ಕೆ ಆಗಿಹೋದ ಶಿವಶರಣರ ಕಾರ್ಯಗಳ ಮಹತ್ವವನ್ನು ತುಚ್ಛೀಕರಿಸುವದುಂಟು. ಇದು ಕೆಲಜನರಲ್ಲಿ ಇತ್ತಿತ್ತ ಕಂಡು ಬರಹತ್ತಿದೆ. ಆದರೆ ಅವರು ಈ ಎರಡೂ ಶಿಲಾಶಾಸನಗಳನ್ನು ಚನ್ನಾಗಿ

ಪರೀಕ್ಷಿಸಿದರೆ ಅವರ ತಪ್ಪು ಗ್ರಹಿಕೆಗಳು ದೂರಾಗುವವೆಂದು ನಾವು ಭಾವಿಸಿದ್ದೇವೆ.

ಏಕಾಂತದ ರಾಮಯ್ಯನು ಆಳಂದೆ ಗ್ರಾಮದವನೆಂದು ಈ ಶಾಸನದಲ್ಲಿ ಹೇಳಲ್ಪಟ್ಟಿದೆ. ಈ ಆಳಂದೆ ಗ್ರಾಮವು ಕಲಬುರ್ಗಿ ಜಿಲ್ಹೆಯಲ್ಲಿ ಈಗ ಒಂದು ಮುಖ್ಯ ಗ್ರಾಮವಾಗಿದೆ. ಸರಕಾರಿಯಲ್ಲಿ ಅದಕ್ಕೆ ಅಳಂದ ಎಂಬ ಹೆಸರು ಇದ್ದು ಅದಕ್ಕೆ ರೂಢಿಯಲ್ಲಿ ಜನರು ಆಲದಿ ಎಂದು ಕರೆಯುವದುಂಟು. ಇದರ ಹತ್ತರ ನಿಂಬರಗಿ ಎಂಬ ಗ್ರಾಮವಿದ್ದು, ಅಲ್ಲಿಯ ಶಿಲಾ ಶಾಸನದಲ್ಲಿ ಈ ಭಾಗವು ಆಳಂದೆ ಎಂದು ಕರೆಯಲ್ಪಟ್ಟಿದೆ. ಅದ್ದರಿಂದ ಆಳಂದೆ ಗ್ರಾಮವು ಇದೇ ಎಂದು ಫ್ಲೀಟಸಾಹೇಬರು ಊಹಿಸಿದ್ದಾರೆ. ಬಸವ ಪುರಾಣದಲ್ಲಿ ಏಕಾಂತದ ರಾಮಯ್ಯನ ಗ್ರಾಮವು ಅಬ್ಬಲೂರೆಂದು ಹೇಳಿದ್ದು ಅದು ಅವನ ಜನ್ಮಸ್ಥಾನವಾಗಿರದೆ ಅವನು ಹಿಂದುಗಡೆ ವಾಸವಾಗಿದ್ದ ಸ್ಥಾನವಾಗಿರುತ್ತದೆ.

ಏಕಾಂತದ ರಾಮಯ್ಯನ ತಂದೆಯು ವತ್ಸಗೋತ್ರದ ಪುರುಷೋತ್ತಮನೆಂಬ ಹೆಸರಿನ ಬ್ರಾಹ್ಮಣನಾಗಿದ್ದನು. ಆದರೆ ಏಕಾಂತದ ರಾಮಯ್ಯನು ಈ ಶಿಲಾಶಾಸನದಲ್ಲಿ ಶಿವಯೋಗಯುಕ್ತನೆಂತಲೂ ಶಿವಾಗಮೋಕ್ತವಾಗಿ ದೇಗುಲವನ್ನು ಪ್ರತಿಷ್ಠಿಸಿದವನೆಂತಲೂ ಶಿವಸಮಯ ಪ್ರಕಾರನೆಂತಲೂ ವರ್ಣಿಸಲ್ಪಟ್ಟಿರುವದರಿಂದ ಶಿವಾಗಮೋಕ್ತ ಶಿವಧರ್ಮವನ್ನು ಅವನು ಅನುಸರಿಸುತ್ತಿದ್ದನೆಂಬದು ಸ್ಪಷ್ಟವಾಗುತ್ತದೆ. ಹ್ಯಾಗೆ ಬಸವೇಶ್ವರನು ಬ್ರಾಹ್ಮಣ ವರ್ಣದಲ್ಲಿ ಉದಯಿಸಿ ವೀರಶೈವ ಧರ್ಮವನ್ನು ಪ್ರಸಾರಗೊಳಿಸಿದನೋ ಹಾಗೆಯೇ ಏಕಾಂತದ ರಾಮಯ್ಯನೂ ಪ್ರಸಾರ ಪಡಿಸಿರಬಹುದೆಂದು ಈ ಶಿಲಾಲೇಖದಿಂದ ತೋರುತ್ತದೆ.

ಈ ಶಿಲಾಶಾಸನದಲ್ಲಿ ಬಿಜ್ಜಳನು ಮಹಾಮಂಡಲೇಶ್ವರನೆಂದು ಹೇಳಲ್ಪಟ್ಟಿದ್ದಾನೆ. ಈ ಬಿರುದು ರಾಜ್ಯವಾಳುವ ಅರಸನದಿರದೆ ಅವನಿಗೆ ಅಧೀನನಾದ ಪ್ರಾಂತಾಧಿಪತಿಯದು ಇರುತ್ತದೆ ಮತ್ತು ಇಲ್ಲಿ ಅವನು ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದದ್ದರ ಉಲ್ಲೇಖವೂ ಇಲ್ಲ. ಆರಂಭದಲ್ಲಿ ಬಿಜ್ಜಳನು ಚಾಲುಕ್ಯರಾಜರಾದ ಜಗದೇಕಮಲ್ಲ ಮತ್ತು ತ್ರೈಲೋಕ್ಯಮಲ್ಲ ಇವರ ಮಾಂಡಲಿಕನಾಗಿದ್ದು ಹಿಂದುಗಡೆ ತ್ರೈಲೋಕ್ಯಮಲ್ಲನನ್ನು ರಾಜ್ಯದಿಂದ ತಳ್ಳಿ ಸಾರ್ವಭೌಮ ಅರಸನಾದದ್ದು ಇತಿಹಾಸದಿಂದ ತಿಳಿದು

ಬರುತ್ತದೆ. ಅವನು ಹೀಗೆ ರಾಜ್ಯವನ್ನು ಆಕ್ರಮಿಸಿದ್ದು ೧೧೫೬ ಮತ್ತು ೧೧೬೦ ಇದರ ಮಧ್ಯದಲ್ಲಿ ಆದ್ದರಿಂದ ಏಕಾಂತದ ರಾಮಯ್ಯನು ಅಬ್ಬ ಲೂರಲ್ಲಿ ಜಿನ ಧರ್ಮವನ್ನು ನಾಶಮಾಡಿ ಶಿವ ಧರ್ಮವನ್ನು ಸ್ಥಾಪಿಸಿದ್ದು ಇದಕ್ಕೂ ಪೂರ್ವದಲ್ಲಿ ಎಂದು ಊಹಿಸಬಹುದಾಗಿದೆ. ಅಂದರೆ ಬಸವೇ ಶ್ವರನು ಮಂತ್ರಿಯಾಗುವ ಪೂರ್ವದಲ್ಲಿಯೇ ವೀರಶೈವ ಧರ್ಮದ ಚಳ ವಳಿಯು ಕರ್ನಾಟಕದಲ್ಲಿ ಪ್ರಾರಂಭವಾಗಿತ್ತೆಂದು ಗೊತ್ತಾಗುತ್ತದೆ.

ಬಿಜ್ಜಳನು ಏಕಾಂತದ ರಾಮಯ್ಯನ ಕೂಡ ಹ್ಯಾಗೆ ವರ್ತಿಸಿದ ನೆಂಬದನ್ನು ಇಲ್ಲಿ ವಿಚಾರ ಮಾಡುವದು ಬಹು ಮಹತ್ವದ್ದಿರುತ್ತದೆ. ಬಿಜ್ಜಳನು ಜೈನನೆಂದು ಜೈನ ಮತ್ತು ವೀರಶೈವ ಗ್ರಂಥಕಾರರು ಹೇಳಿ ದ್ದಾರೆ. ಹೀಗೆ ಅವನು ಜೈನನಾಗಿದ್ದರೂ ಏಕಾಂತದ ರಾಮಯ್ಯನು ಒಂದು ಜಿನಾಲಯವನ್ನು ನಾಶ ಪಡಿಸಿದರೂ ಸಹ ಆವನು ಅವನಿಗೆ ಏನೂ ನೋಯಿಸದೆ ರಾಮಯ್ಯನ ಇಚ್ಛೆಯ ಮೇರೆಗೆ ಬೇರೆ ಬಸದಿಗಳ ಪಂಡಿತರನ್ನು ಕರೆಯಿಸಿ ರಾಮಯ್ಯನ ಪಣಕ್ಕೆ ನೀವು ಒಪ್ಪುವಿರೋ ಹ್ಯಾಗೆ ಎಂದು ಅವರಿಗೆ ವಿಚಾರಿಸಿದನು. ಅದಕ್ಕೆ ಅವರು ಒಪ್ಪದಿರಲು ರಾಮ ಯ್ಯನಿಗೆ ಜಯ ಪತ್ರವನ್ನು ಕೊಟ್ಟು ಸೋಮನಾಥ ದೇವರ ದೇವಾಲ ಯಕ್ಕೆ ಒಂದು ಗ್ರಾಮವನ್ನು ಸಹ ಉಂಬಳಿ ಹಾಕಿ ಕೊಟ್ಟನು. ಈಸಂಗ ತಿಯು ಬಿಜ್ಜಳನ ಧಾರ್ಮಿಕ ಸಮ ವೃತ್ತಿಯನ್ನು ತೋರಿಸಿ ಕೊಡು ತ್ತದೆ. ಇದು ನಾವು ಲಕ್ಷಿಸತಕ್ಕ ಸಂಗತಿಯಾಗಿದೆ.

ಬಿಜ್ಜಳನು ಕೊಟ್ಟ ಗೋಗಾವಿಯ ಗ್ರಾಮವು ಅಬ್ಬಲೂರಿನ ದಕ್ಷಿ ಣಕ್ಕೆ ಸುಮಾರು ೧೭ ಮೈಲಿನ ಮೇಲೆ ಶಿಕಾರಿಪುರ ಗ್ರಾಮಕ್ಕೆ ಸಮೀ ಪವಾಗಿ ಇದೆ. ಆದರೆ ಅಲ್ಲಿ ಮುಳಗುಂಡ ಗ್ರಾಮವು ಇದ್ದದ್ದು ನಮಗೆ ಕಂಡು ಬರುವದಿಲ್ಲ.

ಬಿಜ್ಜಳ ಅರಸನು ಕಲಚೂರ್ಯ ವಂಶದವನಾಗಿದ್ದು ಈ ವಂಶದ ವರು ಬಿಜ್ಜಳನ ತರುವಾಯ ಬಹಳ ದಿವಸ ರಾಜ್ಯವಾಳಲಿಲ್ಲ. ಅವರ ಕಡೆಯವನನ್ನು ಮೊದಲಿನ ಚಾಲುಕ್ಯರ ವಂಶದವನಾದ ತ್ರಿಭುವನ ಮಲ್ಲ ಸೋಮೇಶ್ವರನು ೧೧೮೨ರ ಸುಮಾರಿನಲ್ಲಿ ತಳ್ಳಿ ಅಣ್ಣಿಗೇರಿಯಲ್ಲಿ ರಾಜ್ಯವಾಳಹತ್ತಿದ್ದು ಇತಿಹಾಸದಿಂದ ಗೊತ್ತಾಗುತ್ತದೆ. ಈ ರಾಜ್ಯಕ್ರಾಂತಿ ಯಲ್ಲಿ ಇವನಿಗೆ ವಿಶೇಷ ಸಹಾಯವಾದವನು ಬೊಮ್ಮನೆಂಬ ಸೇನಾ

ಧಿಪತಿಯು ಇದರಿಂದ ಇವನಿಗೆ ಚಾಲುಕ್ಯ ರಾಜ್ಯಪ್ರತಿಷ್ಠಾಪಕನೆಂಬ ಬಿರುದು ಪ್ರಾಪ್ತವಾಗಿದೆ. ಈ ಬಿರುದಿನಿಂದಲೇ ಇವನು ಅಬ್ಬಲೂರು ಶಿಲಾಶಾಸನದಲ್ಲಿ ಕರೆಯಲ್ಪಟ್ಟಿದ್ದಾನೆ. ಈ ಬೊಮ್ಮ ಮತ್ತು ಇವನ ಹೆಂಡತಿ ಸುಗ್ಗಳೆ ಇವರ ವಿಷಯವಾಗಿ ಪ್ರೊ॥ ನಂದೀಮಠ ಇವರು ಶಿವಾನುಭವದ ೧೧ನೇ ಸಂಚಿಕೆಯಲ್ಲಿ ತೊರಗಲ್ಲ ಶಿಲಾಶಾಸನದ ವಿವರ ಣೆಯಲ್ಲಿ ಕೊಟ್ಟಿದ್ದಾರೆ. ಅದನ್ನು ವಾಚಕರು ನೋಡಬೇಕು. ಇವರಲ್ಲಿ ಸುಗ್ಗಳೆಯು ಪರಮ ಮಹೇಶ್ವರಿಯೆಂತಲೂ ಬೊಮ್ಮನು ದೇವಶಕ್ತಿ ಪಂಡಿ ತನಲ್ಲಿ ವಿಶ್ವಾಸವುಳ್ಳವನೆಂತಲೂ ಹೇಳಲ್ಪಟ್ಟಿದೆ. ಇದರಿಂದ ಇವನು ಆಗಮ ಧರ್ಮವನ್ನು ಪರಿಪಾಲಿಸುತ್ತಿದ್ದನೆಂಬ ಊಹೆಗೆ ಆಸ್ಪದವಾಗುತ್ತದೆ. ಈ ಅಬ್ಬಲೂರು ಶಿಲಾಶಾಸನದಲ್ಲಿ ಈ ಬೊಮ್ಮನೂ ರಾಜನಾದ ಸೋಮೇ ಶ್ವರನೂ ಸೆಲೆಯ ಹಳ್ಳಿಯ ಕೊಪ್ಪವೆಂಬ ಗ್ರಾಮದಲ್ಲಿ ಇದ್ದಾಗ್ಗೆ "ಪುರಾ ತನ ನೂತನಂಪ್ಪ ಶಿವಭಕ್ತರಗುಣಸ್ತವನಂ ಮಾಡುತ್ತಮಿರ್ದು" ಎಂದು ಹೇಳಲ್ಪಟ್ಟಿದೆ. ಶಿಲಾಲೇಖದಲ್ಲಿ ಇದು ಒಂದು ಮಹತ್ವದ ಉಲ್ಲೇಖ ವಾಗಿದೆ. ಇಲ್ಲಿ ಪುರಾತನರೆಂದರೆ ಚೋಳಮಂಡಲದ ೬೩ ಮಂದಿ ಪುರಾ ತನರಿರಬಹುದು. ಮತ್ತು ನೂತನ ಭಕ್ತರೆಂದರೆ ಬಸವೇಶ್ವರನ ಕಾಲದಲ್ಲಿ ಆಗಿಹೋದ ಶಿವಶರಣರಿರಬೇಕು. ಇದರ ಮೇಲಿಂದ ಬಸವೇಶ್ವರನ ಕಾಲಕ್ಕೆ ಒದಗಿದ ಕ್ರಾಂತಿಯ ಸೂಚನೆಯು ಇದರಲ್ಲಿ ಉಲ್ಲೇಖಿಸಲ್ಪ ಟ್ಟಿದೆ. ಆ ಕಾಲಕ್ಕೆ ಅನೇಕ ಶಿವಶರಣರು ಉದಯರಾಗಿ ಧರ್ಮಜಾಗ್ರತೆ ಯನ್ನು ಮಾಡಿದ್ದು ಸ್ಪಷ್ಟವಾಗುತ್ತದೆ. ಮತ್ತು ಅವರ ಗುಣಕೀರ್ತನ ಗಳು ಆಗಿನ ರಾಜರ ಆಸ್ಥಾನಗಳಲ್ಲಿ ನಡೆಯುತ್ತಿದ್ದವೆಂತಲೂ ಗೊತ್ತಾ ಗುತ್ತದೆ. ಇಲ್ಲಿ ಸೆಲೆಯ ಹಳ್ಳಿಯ ಕೊಪ್ಪ ಗ್ರಾಮವು ಯಾವುದೆಂಬದು ನಮಗೆ ಗೊತ್ತಾಗುವದಿಲ್ಲ.

ಮೇಲ್ಕಂಡ ಜಯಸಿಂಹನ ತರುವಾಯ ಕಾಮದೇವನೆಂಬ ಮಹಾ ಮಂಡಲೇಶ್ವರನು ಹಾನಗಲ್ಲಲ್ಲಿ ಆಳುತ್ತಿರುವಾಗ ಅವನು ಅಬ್ಬಲೂರಿಗೆ ಬಂದು ರಾಮಯ್ಯನನ್ನು ಹಾನಗಲ್ಲಿಗೆ ಕರೆದುಕೊಂಡು ಹೋಗಿ ಮಲ್ಲವಳ್ಳಿ ಎಂಬ ಗ್ರಾಮವನ್ನು ಅವನಿಗೆ ಉಂಬಳಿ ಹಾಕಿಕೊಟ್ಟಿದ್ದು ಉಲ್ಲೇಖಿಸ ಲ್ಪಟ್ಟಿದೆ. ಈ ಮಲ್ಲವಳ್ಳಿಯು ಶಿಲಾಲೇಖದಲ್ಲಿ ಹೇಳಿದಂತೆ ಈಗಿನ ಮುಂಡಗೋಡ ಗ್ರಾಮದ ನೈರುತ್ಯ ದಿಕ್ಕಿಗೆ ೩ ಮೈಲಿನ ಮೇಲೆ ಈ ಗ್ಗೆಯೂ ಇದೆ, ಆದರೆ ಜೋಗೇಸರ ಗ್ರಾಮವು ಅಲ್ಲಿ ಈಗ ಇದ್ದದ್ದು

ಬರುತ್ತದೆ. ಅವನು ಹೀಗೆ ರಾಜ್ಯವನ್ನು ಆಕ್ರಮಿಸಿದ್ದು ೧೧೫೬ ಮತ್ತು ೧೧೬೦ ಇದರ ಮಧ್ಯದಲ್ಲಿ ಆದ್ದರಿಂದ ಏಕಾಂತದ ರಾಮಯ್ಯನು ಅಬ್ಬ ಲೂರಲ್ಲಿ ಜಿನ ಧರ್ಮವನ್ನು ನಾಶಮಾಡಿ ಶಿವ ಧರ್ಮವನ್ನು ಸ್ಥಾಪಿಸಿದ್ದು ಇದಕ್ಕೂ ಪೂರ್ವದಲ್ಲಿ ಎಂದು ಊಹಿಸಬಹುದಾಗಿದೆ. ಅಂದರೆ ಬಸವೇ ಶ್ವರನು ಮಂತ್ರಿಯಾಗುವ ಪೂರ್ವದಲ್ಲಿಯೇ ವೀರಶೈವ ಧರ್ಮದ ಚಳ ವಳಿಯು ಕರ್ನಾಟಕದಲ್ಲಿ ಪ್ರಾರಂಭವಾಗಿತ್ತೆಂದು ಗೊತ್ತಾಗುತ್ತದೆ.

ಬಿಜ್ಜಳನು ಏಕಾಂತದ ರಾಮಯ್ಯನ ಕೂಡ ಹ್ಯಾಗೆ ವರ್ತಿಸಿದ ನೆಂಬದನ್ನು ಇಲ್ಲಿ ವಿಚಾರ ಮಾಡುವದು ಬಹು ಮಹತ್ವದ್ದಿರುತ್ತದೆ. ಬಿಜ್ಜಳನು ಜೈನನೆಂದು ಜೈನ ಮತ್ತು ವೀರಶೈವ ಗ್ರಂಥಕಾರರು ಹೇಳಿ ದ್ದಾರೆ. ಹೀಗೆ ಅವನು ಜೈನನಾಗಿದ್ದರೂ ಏಕಾಂತದ ರಾಮಯ್ಯನು ಒಂದು ಜಿನಾಲಯವನ್ನು ನಾಶ ಪಡಿಸಿದರೂ ಸಹ ಅವನು ಅವನಿಗೆ ಏನೂ ನೋಯಿಸದೆ ರಾಮಯ್ಯನ ಇಚ್ಛೆಯ ಮೇರೆಗೆ ಬೇರೆ ಬಸದಿಗಳ ಪಂಡಿತರನ್ನು ಕರೆಯಿಸಿ ರಾಮಯ್ಯನ ಪಣಕ್ಕೆ ನೀವು ಒಪ್ಪುವಿರೋ ಹ್ಯಾಗೆ ಎಂದು ಅವರಿಗೆ ವಿಚಾರಿಸಿದನು. ಅದಕ್ಕೆ ಅವರು ಒಪ್ಪದಿರಲು ರಾಮ ಯ್ಯನಿಗೆ ಜಯ ಪತ್ರವನ್ನು ಕೊಟ್ಟು ಸೋಮನಾಥ ದೇವರ ದೇವಾಲ ಯಕ್ಕೆ ಒಂದು ಗ್ರಾಮವನ್ನು ಸಹ ಉಂಬಳಿ ಹಾಕಿ ಕೊಟ್ಟನು. ಈ ಸಂಗ ತಿಯು ಬಿಜ್ಜಳನ ಧಾರ್ಮಿಕ ಸಮ ವೃತ್ತಿಯನ್ನು ತೋರಿಸಿ ಕೊಡು ತ್ತದೆ. ಇದು ನಾವು ಲಕ್ಷಿಸತಕ್ಕ ಸಂಗತಿಯಾಗಿದೆ.

ಬಿಜ್ಜಳನು ಕೊಟ್ಟ ಗೋಗಾವಿಯ ಗ್ರಾಮವು ಅಬ್ಬಲೂರಿನ ದಕ್ಷಿ ಣಕ್ಕೆ ಸುಮಾರು ೧೭ ಮೈಲಿನ ಮೇಲೆ ಶಿಕಾರಿಪುರ ಗ್ರಾಮಕ್ಕೆ ಸಮೀ ಪವಾಗಿ ಇದೆ. ಆದರೆ ಅಲ್ಲಿ ಮುಳಗುಂಡ ಗ್ರಾಮವು ಇದ್ದದ್ದು ನಮಗೆ ಕಂಡು ಬರುವದಿಲ್ಲ.

ಬಿಜ್ಜಳ ಅರಸನು ಕಲಚೂರ್ಯ ವಂಶದವನಾಗಿದ್ದು ಈ ವಂಶದ ವರು ಬಿಜ್ಜಳನ ತರುವಾಯ ಬಹಳ ದಿವಸ ರಾಜ್ಯವಾಳಲಿಲ್ಲ. ಅವರ ಕಡೆಯವನನ್ನು ಮೊದಲಿನ ಚಾಲುಕ್ಯರ ವಂಶದವನಾದ ತ್ರಿಭುವನ ಮಲ್ಲ ಸೋಮೇಶ್ವರನು ೧೧೮೩ರ ಸುಮಾರಿನಲ್ಲಿ ತಳ್ಳಿ ಅಣ್ಣಿಗೇರಿಯಲ್ಲಿ ರಾಜ್ಯವಾಳಹತ್ತಿದ್ದು ಇತಿಹಾಸದಿಂದ ಗೊತ್ತಾಗುತ್ತದೆ. ಈ ರಾಜ್ಯಕ್ರಾಂತಿ ಯಲ್ಲಿ ಇವನಿಗೆ ವಿಶೇಷ ಸಹಾಯವಾದವನು ಬೊಮ್ಮನೆಂಬ ಸೇನಾ

ಧಿಪತಿಯು ಇದರಿಂದ ಇವನಿಗೆ ಚಾಲುಕ್ಯ ರಾಜ್ಯಪ್ರತಿಷ್ಠಾಪಕನೆಂಬ ಬಿರುದು ಪ್ರಾಪ್ತವಾಗಿದೆ. ಈ ಬಿರುದಿನಿಂದಲೇ ಇವನು ಅಬ್ಬಲೂರು ಶಿಲಾಶಾಸನದಲ್ಲಿ ಕರೆಯಲ್ಪಟ್ಟಿದ್ದಾನೆ. ಈ ಬೊಮ್ಮ ಮತ್ತು ಇವನ ಹೆಂಡತಿ ಸುಗ್ಗಳೆ ಇವರ ವಿಷಯವಾಗಿ ಪ್ರೊ॥ ನಂದೀಮಠ ಇವರು ಶಿವಾನುಭವದ ೧೧ನೇ ಸಂಚಿಕೆಯಲ್ಲಿ ತೊರಗಲ್ಲ ಶಿಲಾಶಾಸನದ ವಿವರಣೆಯಲ್ಲಿ ಕೊಟ್ಟಿದ್ದಾರೆ. ಅದನ್ನು ವಾಚಕರು ನೋಡಬೇಕು. ಇವರಲ್ಲಿ ಸುಗ್ಗಳೆಯು ಪರಮ ಮಹೇಶ್ವರಿಯೆಂತಲೂ ಬೊಮ್ಮನು ದೇವಶಕ್ತಿ ಪಂಡಿತನಲ್ಲಿ ವಿಶ್ವಾಸವುಳ್ಳವನೆಂತಲೂ ಹೇಳಲ್ಪಟ್ಟಿದೆ. ಇದರಿಂದ ಇವನು ಆಗಮ ಧರ್ಮವನ್ನು ಪರಿಪಾಲಿಸುತ್ತಿದ್ದನೆಂಬ ಊಹೆಗೆ ಆಸ್ಪದವಾಗುತ್ತದೆ. ಈ ಅಬ್ಬಲೂರು ಶಿಲಾಶಾಸನದಲ್ಲಿ ಈ ಬೊಮ್ಮನೂ ರಾಜನಾದ ಸೋಮೇಶ್ವರನೂ ಸೆಲೆಯ ಹಳ್ಳಿಯ ಕೊಪ್ಪವೆಂಬ ಗ್ರಾಮದಲ್ಲಿ ಇದ್ದಾಗ್ಗೆ "ಪುರಾತನ ನೂತನರಪ್ಪ ಶಿವಭಕ್ತರಗುಣಸ್ತವನಂ ಮಾಡುತ್ತಮಿರ್ದು" ಎಂದು ಹೇಳಲ್ಪಟ್ಟಿದೆ. ಶಿಲಾಲೇಖದಲ್ಲಿ ಇದು ಒಂದು ಮಹತ್ವದ ಉಲ್ಲೇಖವಾಗಿದೆ. ಇಲ್ಲಿ ಪುರಾತನರೆಂದರೆ ಚೋಳಮಂಡಲದ ೬೩ ಮಂದಿ ಪುರಾತನರಿರಬಹುದು. ಮತ್ತು ನೂತನ ಭಕ್ತರೆಂದರೆ ಬಸವೇಶ್ವರನ ಕಾಲದಲ್ಲಿ ಆಗಿಹೋದ ಶಿವಶರಣರಿರಬೇಕು. ಇದರ ಮೇಲಿಂದ ಬಸವೇಶ್ವರನ ಕಾಲಕ್ಕೆ ಒದಗಿದ ಕ್ರಾಂತಿಯ ಸೂಚನೆಯು ಇದರಲ್ಲಿ ಉಲ್ಲೇಖಿಸಲ್ಪಟ್ಟಿದೆ. ಆ ಕಾಲಕ್ಕೆ ಅನೇಕ ಶಿವಶರಣರು ಉದಯರಾಗಿ ಧರ್ಮಜಾಗ್ರತೆಯನ್ನು ಮಾಡಿದ್ದು ಸ್ಪಷ್ಟವಾಗುತ್ತದೆ. ಮತ್ತು ಅವರ ಗುಣಕೀರ್ತನಗಳು ಆಗಿನ ರಾಜರ ಆಸ್ಥಾನಗಳಲ್ಲಿ ನಡೆಯುತ್ತಿದ್ದವೆಂತಲೂ ಗೊತ್ತಾಗುತ್ತದೆ. ಇಲ್ಲಿ ಸೆಲೆಯ ಹಳ್ಳಿಯ ಕೊಪ್ಪ ಗ್ರಾಮವು ಯಾವುದೆಂಬದು ನಮಗೆ ಗೊತ್ತಾಗುವದಿಲ್ಲ.

ಮೇಲ್ಕಂಡ ಜಯಸಿಂಹನ ತರುವಾಯ ಕಾಮದೇವನೆಂಬ ಮಹಾಮಂಡಲೇಶ್ವರನು ಹಾನಗಲ್ಲಲ್ಲಿ ಆಳುತ್ತಿರುವಾಗ ಅವನು ಅಬ್ಬಲೂರಿಗೆ ಬಂದು ರಾಮಯ್ಯನನ್ನು ಹಾನಗಲ್ಲಿಗೆ ಕರೆದುಕೊಂಡು ಹೋಗಿ ಮಲ್ಲವಳ್ಳಿ ಎಂಬ ಗ್ರಾಮವನ್ನು ಅವನಿಗೆ ಉಂಬಳಿ ಹಾಕಿಕೊಟ್ಟಿದ್ದು ಉಲ್ಲೇಖಿಸಲ್ಪಟ್ಟಿದೆ. ಈ ಮಲ್ಲವಳ್ಳಿಯು ಶಿಲಾಲೇಖದಲ್ಲಿ ಹೇಳಿದಂತೆ ಈಗಿನ ಮುಂಡಗೋಡ ಗ್ರಾಮದ ನೈರುತ್ಯ ದಿಕ್ಕಿಗೆ ೩ ಮೈಲಿನ ಮೇಲೆ ಈಗ್ಗೆಯೂ ಇದೆ. ಆದರೆ ಜೋಗೇಸರ ಗ್ರಾಮವು ಅಲ್ಲಿ ಈಗ ಇದ್ದದ್ದು

ಗೊತ್ತಾಗುವದಿಲ್ಲ. ಈ ಕಾಮದೇವನ ಅನೇಕ ಶಿಲಾಶಾಸನಗಳು ಅನೇಕ ಉಪಲಬ್ಧವಿದ್ದು ಅವುಗಳಿಂದ ಅವನು ೧೧೮೮ರಿಂದ೧೨೧೧ರ ವರೆಗೆ ಹಾನಗಲ್ಲಿನಲ್ಲಿ ಆಳುತ್ತಿದ್ದಹಾಗೆ ಕಂಡು ಬರುತ್ತದೆ. ಕಾಮದೇವನ ತರುವಾಯ ಮಲ್ಲದೇವನೆಂಬ ಕದಂಬ ರಾಜನು ಇಲ್ಲಿ ಆಳಹತ್ತಿದನು. ಅವನ ಶಿಲಾಲೇಖಗಳು ೧೨೧೯ದಿಂದ ೧೨೩೧ರ ವರೆಗೆ ಸಿಗುತ್ತವೆ. ಇವನು ಸೋಮೇಶ್ವರ ದೇವಾಲಯಕ್ಕೆ ಏನೋ ಒಂದು ದಾನಕೊಟ್ಟ ಹಾಗೆ ಕಂಡುಬರುತ್ತದೆ. ಆದರೆ ಇವನ ಕಾಲದಲ್ಲಿ ರಾಮಯ್ಯನು ಜೀವಿಸಿರ ಲಿಲ್ಲೆಂಬದು ಶಿಲಾಲೇಖದಿಂದ ಸ್ಪಷ್ಟವು.

ಈ ಎಲ್ಲ ವಿವರಣೆಗಳ ಮೇಲಿಂದ ಏಕಾಂತದ ರಾಮಯ್ಯನು ಬಸವೇಶ್ವರನ ಕಾಲಕ್ಕೆ ಇದ್ದು ಅವನು ದಕ್ಷಿಣ ಧಾರವಾಡ ಜಿಲ್ಹೆಯಲ್ಲಿ ಒಬ್ಬ ಮಹತ್ವಿಕ ಪುರುಷನಾಗಿ ಅನೇಕ ಸಾಮಂತ ರಾಜರ ಕಡೆಯಿಂದ ಮನ್ನಣೆಯನ್ನು ಹೊಂದಿದ್ದು ಸಿದ್ಧವಾಗುತ್ತದೆ.

ಅವನ ಇತಿಹಾಸವನ್ನು ಈ ಶಿಲಾಶಾಸನದಲ್ಲಿ ಸವಿಸ್ತಾರವಾಗಿ ಬರೆಯಿಸಿದವನು ಕೇಶವರಾಜ ಚಮೂಪನೆಂತಲೂ ಅದನ್ನು ಬರೆದವನು ಈಶ್ವರನ ದಾಸನಾದ ಶರಣನೆಂಬವನೆಂತಲೂ, ಇದರಲ್ಲಿ ಹೇಳಿಲ್ಪಟ್ಟಿದೆ. ಈ ಕೇಶವರಾಜ ಚಮೂಪನು ಆ ಕಾಲಕ್ಕೆ ಒಬ್ಬ ಪ್ರಸಿದ್ಧ ದಂಡನಾಯಕನಾಗಿದ್ದನು. ಅವನ ಹೆಸರುಳ್ಳ ಶಿಲಾಲೇಖಗಳು ಶಿವಮೊಗ್ಗಾ ಜಿಲ್ಹೆಯಲ್ಲಿ ಬಹಳ ಸಿಗುತ್ತವೆ.

ಆದರೆ ಈ ಶಿಲಾಲೇಖವನ್ನು ಬರೆಯಿಸಿದ ಕಾಲವು ಇಲ್ಲಿ ಉಲ್ಲೇಖಿಸಲ್ಪಟ್ಟಿಲ್ಲ. ಫ್ಲೀಟಸಾಹೇಬರು ಇದು ಕ್ರಿ. ಶ. ೧೨೦೦ನೇ ಇಸ್ವಿಯಲ್ಲಿರಬಹುದೆಂದು ತರ್ಕಮಾಡಿದ್ದಾರೆ. ಇದನ್ನು ಗ್ರಹಿಸಲು ನಮಗೆ ಏನೂ ಅಡ್ಡಿ ತೋರುವದಿಲ್ಲ. ಆದ್ದರಿಂದ ಶಿಲಾಶಾಸನವು ಬಸವೇಶ್ವರನು ಐಕ್ಯನಾದ ಬಳಿಕ ೨೦—೩೦ ವರ್ಷಗಳಲ್ಲಿ ಬರೆಯಿಸಿರಬೇಕು.

ಕೆಲವು ಯುರೋಪಿಯನ್ ಪಂಡಿತರು ಈ ಶಿಲಾಶಾಸನವು ಎಪಿಗ್ರಾಫಿಕಾ ಇಂಡಿಕಾದಲ್ಲಿ ಪ್ರಸಿದ್ಧವಾದ ಬಳಿಕ ವೀರಶೈವ ಧರ್ಮವನ್ನು ಉಜ್ವಲ ಸ್ಥಿತಿಗೆ ತಂದವನು ಬಸವೇಶ್ವರನಿರದೆ ಏಕಾಂತದ ರಾಮಯ್ಯನಿದ್ದಾನೆಂದು ಕೆಲವು ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ. ಆದರೆ ಬಸವೇಶ್ವರ ಮತ್ತು ಏಕಾಂತ ರಾಮಯ್ಯಗಳಂತೆ ಕರ್ನಾಟಕದಲ್ಲಿ ಅಸಂಖ್ಯ

ಶಿವಶರಣರು ಉತ್ಪನ್ನರಾಗಿ ವೀರಶೈವ ಮತವನ್ನು ಪ್ರಸಾರಗೊಳಿಸಿದ ಕಲ್ಪನೆಯು ಅವರಿಗಿಲ್ಲ. ಒಬ್ಬಿಬ್ಬ ವ್ಯಕ್ತಿಗಳಿಂದ ವೀರಶೈವ ಧರ್ಮವಾಗಿದೆ ಎಂದು ಅವರ ತಿಳುವಳಿಕೆ. ಇದು ತಪ್ಪು ಇರುತ್ತದೆ. ಆಗಿನ ಕಾಲಕ್ಕೆ ಈ ಪ್ರಾಂತದಲ್ಲಿ ಜೈನ ಬೌದ್ಧರ ವರ್ಚಸ್ಸು ಅತ್ಯಂತವಾಗಿದ್ದು ಶಿವಮತವು ಅಳಿಯುವ ಸ್ಥಿತಿಯಲ್ಲಿ ಬಂದಿತ್ತು. ಆಗ ಅನೇಕ ವಿಭೂತಿಗಳು ಹುಟ್ಟಿ ಅದನ್ನು ಉದ್ಧರಿಸಿದ್ದಾರೆ. ಇದರ ವಿವರಣೆಯು ಬೋಧಪ್ರದವೂ ಮನೋವೇಧಕವೂ ಇರುತ್ತದೆ ಈಗಿನ ಕಾಲಕ್ಕೆ ಇದರ ಇತಿಹಾಸವನ್ನು ಕಂಡುಹಿಡಿಯುವದು ಬಹಳ ಅವಶ್ಯವದೆ. ಆದರೆ ಇದರ ಸಾದ್ಯಂತ ವಿಶ್ವಸನೀಯ ವೃತ್ತಾಂತಗಳು ಇನ್ನೂ ಶೋಧಿಸಲ್ಪಟ್ಟಿಲ್ಲ. ಈ ಅದ್ಭುತವಾದ ಇತಿಹಾಸದ ಕಣಗಳು ವೀರಶೈವ ವಾಙ್ಮಯದಲ್ಲಿಯೂ ಶಿಲಾಲೇಖಗಳಲ್ಲಿಯೂ ದಂತಕಥೆಗಳಲ್ಲಿಯೂ ಇನ್ನೂ ಅಲ್ಲಲ್ಲಿ ದೃಗ್ಗೋಚರವಾಗುತ್ತಲಿವೆ. ಇವುಗಳನ್ನು ನಾವು ಕಂಡುಹಿಡಿದು, ಅವುಗಳನ್ನು ಒಟ್ಟುಗೂಡಿಸಿ ವೀರಶೈವ ಸಮಾಜದ ಸಾಮಾಜಿಕ ಮತ್ತು ಧಾರ್ಮಿಕ ಇತಿಹಾಸವನ್ನು ನಾವು ಬರೆಯಬೇಕಾಗಿದೆ. ಈ ಕಾರ್ಯವನ್ನು ವೀರಶೈವ ವಾಙ್ಮಯ ಮತ್ತು ವೀರಶೈವ ಸಂಸ್ಕೃತಿಯನ್ನೂ ವೀರಶೈವರೇ ಮಾಡತಕ್ಕದ್ದಾಗಿರುವದು. ಆದ್ದರಿಂದ ಅವರು ಇಂಥ ಶಿಲಾಶಾಸನಗಳ ಮತ್ತು ವಾಙ್ಮಯದ ಶೋಧಗಳನ್ನು ಸ್ವತಃ ನಿರ್ವಹಿಸುವದು ಅತ್ಯಂತ ಅವಶ್ಯಕವಾಗಿರುತ್ತದೆ.

ಈ ಶಿಲಾಶಾಸನವು ಹಿರೇಕೇರೂರಿನಿಂದ ೪ ಮೈಲು ಉತ್ತರಕ್ಕಿರುವ ಅಬ್ಬಲೂರ ಗ್ರಾಮದಲ್ಲಿ ಸೋಮನಾಥ ದೇವಾಲಯದ ಗೋಡೆಯಲ್ಲಿರುತ್ತದೆ. ಇದರ ಎತ್ತರ ೬ ಫೂಟು ೧ ಇಂಚು. ಅಗಲು ೩ ಫೂಟು ೨॥ ಇಂಚು.

ಭೀಮ ಕವಿಯು ಹೇಳಿದ ರಾಮಯ್ಯನ ವೃತ್ತಾಂತವನ್ನುನಾವು ಈ ಲೇಖದ ಆರಂಭದಲ್ಲಿ ಕೊಟ್ಟಿದ್ದೇವೆ. ಅದು ಈ ಶಿಲಾಲೇಖದಲ್ಲಿಯ ವೃತ್ತಾಂತಕ್ಕಿಂತಲೂ ಬಹಳ ಭಿನ್ನವಾಗಿರುತ್ತದೆ. ಇದೇ ಮೇರೆಗೆ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಎಂಬ ಗ್ರಂಥದಲ್ಲಿಯೂ ರಾಮಯ್ಯನ ವಿವರಣೆಯು ಇರುತ್ತದೆ. ಅದರಲ್ಲಿ ಹೇಳಿರುವದೇನಂದರೆ ರಾಮಯ್ಯನು ಶಿವಪುರದಲ್ಲಿದ್ದನು. ಅವನು ಧರ್ಮ

ವೃದ್ಧಿ ಮಾಡುತ್ತ ಅಬ್ಬಲೂರಿಗೆ ಬಂದನು. ಆ ಗ್ರಾಮದಲ್ಲೆಲ್ಲ ಜಿನಾಲಯಗಳೇ ಇದ್ದು ಬ್ರಹ್ಮೇಶ್ವರ ಲಿಂಗವೆಂಬ ಒಂದೇ ಶಿವಾಲಯವಿತ್ತು. ಅದಕ್ಕೆ ಪೂಜಾದಿ ಕಾರ್ಯಗಳು ಯಾವವೂ ನಡೆಯುತ್ತಿರಲಿಲ್ಲ. ಆಗ ರಾಮಯ್ಯನು ಮನಸ್ಸಿನಲ್ಲಿ ನೊಂದವನಾಗಿ ದೇವಾಲಯವನ್ನು ಪ್ರವೇಶಿಸಿದನು. ಅಲ್ಲಿ ಒಬ್ಬ ಜೈನನು ಕೆರಹಿಗಾಲಿನಿಂದಿರುವದನ್ನು ನೋಡಿ ಅವನಿಗೆ ಹೊರಕ್ಕೆ ಹೋಗಲು ಹೇಳಿದನು. ಆಗ ಉಭಯತರಲ್ಲಿ ವಾಗ್ವಾದಗಳಾಗಿ ಜೈನನು ರಾಮಯ್ಯನಿಗೆ ನೀನು ನಿನ್ನ ತಲೆಯನ್ನು ಕಡಿದುಕೊಂಡು ಅದನ್ನು ಮರಳಿ ಪಡೆದರೆ ನಾನು ವೀರಶೈವನಾಗುವೆನೆಂದು ಹೇಳಿದನು. ಅದಕ್ಕೆ ರಾಮಯ್ಯನು ಆ ಪ್ರಕಾರ ಕಡಿದುಕೊಂಡು ಪುನಃ ತಲೆಯನ್ನು ಪಡೆಪರೆ ಅಬ್ಬಲೂರು, ಹುಲಿಗೆರೆ, ಅಣ್ಣೀಗೆರೆ, ಸೊನ್ನಲಿಗೆ, ಹೇಮಕೂಟ, ಕಪ್ಪಡಿ, ಕೆಂಭಾವಿ, ಕಲ್ಯಾಣ ಇಲ್ಲಿಯ ಬಸದಿಗಳನ್ನು ಹಾಳುಮಾಡುವೆನೆಂದು ಹೇಳಿದನು. ಇದಕ್ಕೆ ಉಭಯ ಪಕ್ಷದವರು ಒಪ್ಪಿ ಆ ಪ್ರಕಾರ ಬರವಣಿಗೆಯನ್ನು ಕೊಟ್ಟು ಅದನ್ನು ಬಿಜ್ಜಳನ ಬಳಿಯಲ್ಲಿ ಇಟ್ಟರು. ಆ ವೇಳೆ ಏಕಾಂತದ ರಾಮಯ್ಯನು ತನ್ನ ತಲೆಯನ್ನು ಕೊಯ್ದುಕೊಂಡು ಅದನ್ನು ಮರಳಿ ಪಡೆದನು. ಆಗ ರಾಮಯ್ಯನು ಅಬ್ಬಲೂರಲ್ಲಿಯ ಎಲ್ಲ ಬಸದಿಗಳನ್ನು ಶಿವಾಲಯಗಳನ್ನಾಗಿ ಮಾಡಿದನು ಎಂದು ಈ ಗ್ರಂಥದಲ್ಲಿ ಹೇಳಿದೆ. ಆದರೆ ಶಿಲಾಶಾಸನದಲ್ಲಿಯ ವೃತ್ತಾಂತವು ಇವೆಲ್ಲವುಗಳಿಗಿಂತ ಹಿಂದಿನದಿರುವದರಿಂದ ಅದು ಹೆಚ್ಚಿಗೆ ವಿಶ್ವಸನೀಯವಾಗಿದೆ. ಇದರಲ್ಲಿ ತೋರಿಸಿದ ಅದ್ಭುತ ಕಥೆಯು ದಂತಕಥೆ ಎಂದು ತಿಳಿದರೂ ಕೂಡ ರಾಜರಿಂದ ಮನ್ನಣೆ ಹೊಂದಿದ ಬಗ್ಗೆ ಹೇಳಿದ ಉಳಿದ ಸಂಗತಿಗಳು ನಂಬಲಿಕ್ಕೆ ಅರ್ಹವಾಗಿವೆ.

# ಅಬ್ಬಲೂರ ಶಿಲಾಲೇಖವು.

೧ ಓಂ [॥] ನಮಃಸ್ತುಂಗ ಶಿರಃಶ್ಚುಂಬಿ ಚಂದ್ರ ಚಾಮರ ಚಾರವೆ ತ್ರೈಲೋಕ್ಯನಗರಾರಂಭ ಮೂಲಸ್ಥಂಭಾಯ ಶಂಭವೆ॥ ಶ್ರೀಮ ದ್ಗಂಗಾತರಂಗೋ

೨ ಚ್ಛಲಿತ ಜಳಕಣ ಶ್ರೇಣಿ ಪುಃಪಾಲಿ ಶೋಭಾಧಾಮಂ ಚಂಚಜ್ಜ ಟಾಪಲ್ಲವಮುವ್ರತ ಕರೋದ್ವ್ಯಾಕ್ಷಳಂ ಬಾಹು ಶಾಖಾ ರಾಮಂ ಗೌರಿಲತಾ

೩ ಲಿಂಗಿತಮಮರನುತಂ ಶಂಭು ಕಲ್ಪದ್ರುಮಾದಂ ರಾಮಾಂಗರ್ಥಿಯಿಂ ವಾಂಛಿತ ಫಳಭಯುಮಂ ಸಂತತೋತ್ಸಾಹದಿಂದಂ॥ ಶ್ರೀಕಂಠಂ ರಾಮದೇವಾಂಗನುಪಮ

೪ ಮಹಿಮಾಂಗೆ ಸಂಪತ್ತನೆಂದುಂ ನಾಕೌಕಾನೀಕ ಮೌಳಿಪ್ರಕಾರ ಮಣಿಗಣಶ್ರೇಣಿ ಸೋಮಾಂಶು ಜಾಳ ವ್ಯಾಕೀರ್ಣಂಘ್ರಿ ದ್ವಯಾ ಳಂಕ್ರಿತನಾಮೃವರಂ ಶೀತಶೈಲೇಂದ್ರ

೫ ಕನ್ಯಾಳೋಕಾಂಶು ಶ್ರೀನಿವಾಸಂ ಸಕಲ ಗುಣವೃತಂ ವೀರ ಸೋಮೇಶನೀಶಂ॥ ಚಳದುಗ್ರಾಗ್ರಹ ವಕ್ತ್ರಚ್ಛುತ ತಿಮಿನಿಕರಾ ತುಚ್ಛ ಪುಚ್ಛಾಗ್ರಘಟಾಕುಳಿತಂ

೬ ಭಿಃ ಕುಂಭಿಯೂಥ ಪ್ರಕಾರ ಸಜಳಘೂತ್ಕಾರ ಹಸ್ತಾಭ್ರಮಾಳಾ ಮಿಳಿತಂ ಸುತ್ತಿಪ್ಪ(ರ್ಪ)ದು ದ್ಯನ್ಮಣಿಗಣ ಕಿರಣಸ್ಫಾರ ಮುಕ್ತಾಂಶು ವೇಳಾಚಳಮಾಳಂ

೭ ಭುರಾಮ ರಾಮಾಮಂಡನ ವಿಪುಲ ಕಟೀದೇಶಮುದ್ರಂ ಸಮು ದ್ರಂ ||ವ॥ ಅನಂತಾನೇಕ ಚಳಚರ ನಿವಾಸಮುಂ ಸಮುತ್ತುಂಗ ಲಹರಿ ನಿವಾಸಮುಮೆನಿಸಿ ಸೊಗಯಿಸುವ

೮ ಲವಣ ಸಮುದ್ರದಿಂ ಪರಿವೃತವಾದ ಜಂಬೂದ್ವೀಪದಿ ತೆಂಕಲು ನೀಲ ನಿಷಧ ಹಿಮವಂತ ಪರ್ವತಗಳೊಳವಲ್ಲಿ ॥ವೃ॥ ಎಸಗುಂ ಪೂರ್ವಾಪರಂಭೋನಿಧಿ ಮಿ[ಶಿ]

೯ ವಿತತಾಯಾಮದಿಂ ಸಿದ್ಧಕನ್ಯಾವಿಸರನಾಂ ಗೇರು ಕೇಳಿ ಶ್ರಮ ಶಮ ಮಹಿಮಾಕಂದರಂ ಸ್ವರ್ದುನೀವಾಹ ಪ್ರಸರೋಪಕ್ಷುಣ್ಣ ನಾನಾ [ನಾಗಾನಿ]

೧೦ ಕರಗಳದ್ಗಂಧ ಶ್ರೈವಾಲಿ ಪರೌಳಿವಿಸರಣಾ ಪ್ರಸ್ಫುರ ಶೀತದ್ಯುತಿ ರುಚಿನಿಚಯ ಭ್ರಾಜಿತಂ ಶೀತಶೈಲಂ ||ವ|| (॥) ಆ ಹಿಮಗಿ (ರಿ)ಂದ್ರದ ದಕ್ಷಿಣ ಪಾರ್ಶ್ವದ [ತಿF]

೧೧ ಯತ್ತಿಪ್ಪ ಭಾರತವರ್ಷದೊಳು ಕುಂತಳದೇಶವೆಂಬುದಾಧಿಕ ಶೋಭವೆತ್ತಿಶೆವುದಲ್ಲಿ ॥ಕ॥ ಸೊಗಯಿಪುದಾಳಂದೆಯೆಂಬುದು ನಗರಾಚಲ..ಪೆಸೆದು ನಾಡವ್ಯವು

೧೨ ರಾವತಿಗಂ ಮಿಗಿಲೆನಿಸಿ ವಿಭುದ ಜನದಿಂದ ಅಗಣಿತ ಧನಧಾನ್ಯ ಜಳಸವೃದ್ಧಿಯಿನೆಂದುಂ ॥ಮತ್ತ॥ ಪ್ರಕಟಿತ ಕಾಮರಾವತಿಯೊಳು ಸುಕೆ(ಕೇ)ಶಿಯು[ಂ] ಮಂಜುಘೋಷೆಯುಂತಾಮಿರ್ಬರ್ಸರ

೧೩ ಕಳವದೂತತಿಯಲ್ಲಂ ಸುಕೇಶಿಯರಂ ಮಂಜುಘೋಷೆಯರ ತತ್ಪ್ರದೋಳ್ ॥ವೃ|| ಅದು ನಾನಾವಿಧಿ ಗಂಧ ಸಾಳಿವನದಿಂ ಸವ್ವತ್ತುಕೇದ್ಯಾನ ನಂದನದಿಂ ಪೂರ್ಣ ತಟಾಕ ಕೂಪ

೧೪ ಸರಸಿ ಸಂದೋಹದಿಂ ಸಾರಸೋವ್ಮದ ಭೃಂಗಿ ಕೋಕ ಕೇಕಿ ಶುಕ ಸಂಘಾನೀಕ ಶಾಕುಂತನಾದದಿನೆತ್ತಂ ಗಣಿಕಾ ವಿನೋದ ಕೃತ ವೀಣಾನಾದದಿಂದೊಪ್ಪುಗುಂ (॥) ವ (॥) ಅಂತಪರ ಮಿತಕೇ

೧೫ ದಾರ ಭೂಮಿಯುಂ ಅಪಾರ ಜಲಾಶ್ರಯಾಬ್ಧಿರಾಮುಂ ಬಹು ಜನಾಕೀರ್ಣಮುಂ ಅನೇಯಾಗಣಿಕಾ ನಿವಾಸಮುಂ ಅಗಣಿತ ವಣಿಗ್ಜನಾಶ್ರಯಮುಮೆನಿಸಿ ಶೋಭಾನಿವಾಸಮಾಗೆ

೧೬ ॥ವೃ॥ ಅವತರಿಸಿರ್ದಸಲ್ಲಿ ರಜತಾತಳದಿಂ ಗಿರಿಜಾಸಮೇತಮುತ್ಸವದೊಳೆ ಸೋಮನಾಥನಖಿಳಾಮೃವೌಳಿ ವಿನದ್ಧರತ್ನಸಂಭವ ಕಿರಣಪ್ರಭಾಪಟಲ ಪುಂಜಪರಾಗ ಪದಾಬ್ಜನರ್ಥಿಯಿಂದ

೧೭ ವನತಭಕ್ತಿಕಾಭಿಮತ ಸಿದ್ಧಿ ಫಳೋದಯ ಕಲ್ಪವೃಹಂ ॥ಕ॥ಆ ಸೋಮನಾಥಪುರ ಸಂವಾಸಿತರೊಳು ಬ್ರಹ್ಮಪುರಿಗಳೋಳ್ ಪಿ(ವಿ)ಪ್ರರೊಳ್ ಆ ಬ್ಯಾ(ವ್ಯಾ)ಸ ಶುಕವಾಮದೇವ ಪರಿಶರ ಕವಿಲಾದಿ ಸಾದ್ರಿಶನೊ

೧೮ ರ್ಬನ್ನಗಪ್ಪಂ ॥ಕ॥ ಶ್ರೀ ವತ್ಸಗೋತ್ರ ನುರ್ಬೀ (ರ್ವಿ) ದೇವನುತಂ ನಿಖಿಲವೇದಾ ವೇದಾಂಗ ವಿದಂ ಪಾವನಚರಿತ್ರ ಸದ್ಭಾವಂ ಪುರು

ಷೋತ್ತಮಂ ದ್ವಿಜೋತ್ತಮ ನೆನಿಸಂ ॥ಕ॥ ಆ ವಿಪ್ರನಸತಿ ಸೀತಾ
ದೇವಿ ಗವಾ (ಸಾ) ತ್ಯ
೧೯ ಪನ ಸತಿಗಂ ಗುಣಸದ್ಭಾವದೆ ಪದ್ಮಾಂಬಿಕೆ ಸಲೆಪಾವನ ಸುಚರಿತ್ರೆ
ಪತಿಹಿತ ಬ್ರ (ವ್ರ) ತೆಯುನಿಸಳ್॥ ಆ ದಂಪತಿಗಳ್ ಪಲಕಾಲವನ
ಪತ್ಯರಾಗಿರ್ದೊಂದು ದೇವಾಸಂ ನಾಪುತ್ರಸ್ಯ ಲೋಕೋಸ್ತಿಎಂಬ
ವೇದವಾಕ್ಯಮು (೦) ತಿ
೨೦ [ಳಿದು] ॥ಕ॥ ಪುತ್ರಾರ್ಥವಾಗಿ ಸತ್ಯಪವಿತ್ರಾಚರಣಂ ನೆಗಳ್ದ ಪುರು
ಷೋತ್ತಮ ನಾಪತ್ರಾಣನೀಶನೆಂದು ಕಳತರಾನ್ವಿತನಾಗಿ ಶಂಭುವಂ
ಪೂಜಿಸಿದನ್ ॥ವ॥ (||) ಅನ್ನೆಗಮಿತ್ತ ದ್ವಿಜದಾನುಜ ವೃಂದವಂದಿತ
ಪಾದಾರವಿಂದ
೨೧ [ನಪ್ಪ] ಮಹೇಶ್ವರಂ ಕವಿಳಾಸ ಪರ್ಬ (ರ್ವ) ತದ ರಮ್ಯಭೂಮಿ
ಯೊಳು ಕೇಶವ-ವಾಸವ-ಅಬ್ಜಭವರೋಲಗಿಸಲಾಸಂಖ್ಯಾತಗಣಪರಿ
ವೃತನುಮಾಸಹಿತಂ ಒಡ್ಡೋಲಗದೊಳು ಸುಖಸಂಕಥ
೨೨ ವಿನೋದದಿಂದಮಿರೆ ನಾರದನೆಂಬ ಗಣೇಶ್ವರ ನಿಂತೆಂದ ॥ವೃ॥ ಓಹಿ
ಲದಾಪಿ (ಸ) ಚನ್ನ ಸಿರಿಯಾಳ ಹಲಾಯುಧ ಬಾಣನುದ್ಭಟರ
ದೇಹದೊಳೊಂದಿ ಬಂದ ಮಲಯೇಶ್ವರ ಕೇಶವರಾಜಾದಿಯುಗ್ರೈಹಿ
೨೩ ಕ ಸೌಖ್ಯಮುಮಂ ಬಿಸುಟಸಂಖ್ಯಾಗಣಂ ನಿಜವಾದ ಭಕ್ತಿಸದ್ಗೇ
ಹದೊಳಿಲ್ಲಿರಲು ಸಮಯಮುತ್ಕಟವಾದುವು (ದು) ಜೈನ ಬೌದ್ಧ
ರೊಳ (ಳ್)॥ ಎಂಬುದಮಂ ಮಹೇಶ್ವರಂ ದರಹಸಿತ ವದನಾರವಿಂ
೨೪ ದನಾಗಿ ವೀರಭದ್ರನಂ ನೀಂ ಮನುಷ್ಯಲೋಕದೊಳು ನಿಮ್ಮಂಶ
ದೊಳೊರ್ಬ (ರ್ಬ) ನಮಂ ಪುಟ್ಟಿಸಿ ಪರಸಮಯಗಳಂ ನಿಯಾಮಿ
ಸೆಂಬುದಂ ವೀರಭದ್ರನಂ ಪುರುಷೋ
೨೫ ತ್ತಮ ಭಟ್ಟರ್ಗ ಸಪ್ನದೊಳ್ ತಾಪಸರೂಪದಿಂ ಬಂದು ಪುತ್ರಂಪರ
ಸಮಯ ನಿಯಮಕಂ ನಿಮಗೆ ಪುಟ್ಟುಗುಂ ಎ (೦) ದು ಮತ್ತ
ಮಿಂತೆಂದಾ|| ಜೈನ ಮಾರ್ಗೇಷೋಯೇಯಾ
೨೬ ತಾ ಬಹವೋ ದಕ್ಷಿಣಾಪಥೇತೇ ದೂಷಿತಾಭವನು ಸರ್ವೇರಾಮೇ
ಣಾತವಸೂನುನಾ ॥ವ॥ ಎಂದು ವ (ಪ) ರಮ ಪ್ರಸಾದಂ ಮಾಡಿ
ಪೋಪುದಂ ಪುರುಷೋತ್ತಮಭಟ್ಟರು.

೨೭ ಕೃತಾರ್ಥರಾಗಿ ಸಂತಸಮಂಬಟ್ಟು ಮಗನಂ ಪಡೆದು ಜಾತಕರ್ಮಾ
ದಿಕ್ರಿಯೆಗಳಂ ಮಾಡಿ ದೇವತೋದ್ದೇಶದಿಂ ರಾಮನೆಂದು ಪೆಸರನ್ನಿ
ಟ್ಟರ್ ಆತನುಂ ತನ್ನ ದಿಬ್ಯ (ವ್ಯ) ಜನ್ಮಾನು ರೂಪಮಾ

೨೮ ಗೆ ಶಿವಯೋಗ ಯುಕ್ತನಾಗಿ ನಿಸ್ಪೃಹವೃತ್ತಿಯಂ ಚರಿಸುತ್ತಂ॥ ಕಂದ॥
ಏಕಾಗ್ರ ಭಕ್ತಿಯೋಗಾದಿ ನೇಕಾಕಿಯನಲ್ಕೆಸಂದು ಶಿವನಂ
ಪಿರಿದಪ್ಪೇಕಾಂತದೊಳಾರಾಧಿ

೨೯ ಸಿ ಏಕಾಂತದ ರಾಮನೆಂಬ ಪೆಸರಂ ಪಡೆದಂ ॥ವ॥ ಸಂತತಂ
ಸಂದು ಶಿವಾಗಮೋಕ್ತ ವಿವಿಧ ಕ್ಷೇತ್ರಂಗಳೊಳು ಶಂಭವಾಯತ
ನಾನೇಕ ನವೀನದ ಪ್ರಕರದೊಳು ಗೌರಿವಲ್ಲಭಾಂಘ್ರಿದ್ವ

೩೦ ಯಾಶ್ರಿತ ವಾಕ್ಕಾಯ ಮನೋನುಗಂ ಚರಿಯಿಸುತ್ತಂ ಬಂದು
ಕಂದಂ ಸುರಾರ್ಚಿತನಂ ದಕ್ಷಿಣ ಸೋಮನಾಥನನಘೌಘತ್ರಾ
ಸಿಯಂ ಪ್ರೀತಿಯಿಂ ॥ವ॥ ಅಂತು ಬಂದನವರ

೩೧ ತವಿನಮದಮರ ಮೌಳಿ ಮಣಿಕಿರಣ ಮಾಮಂಜರೀ ರಂಜಿತಾ
ಮಂಘ್ರಿಯುಗಮನಪ್ಪ ಹುಲಿಗೆರೆಯ ಸೋಮನಾಥ ನಾರಾಧಿಸುತ್ತ
ಮಿಪ್ಪುದಂಮಾ ಪರಮೇಶ್ವರಂ ಪ್ರತ್ಯಕ್ಷನಾಗಿ

೩೨ ಅತ್ರಶ್ಲೋಕ-ದ್ವಯಂ॥ ಅಬ್ಬಲೂರು ವರಗ್ರಾಮಂ ಗತ್ವಾ ರಾಮ
ಮಾಮಾಜ್ಞೇಯ ತತ್ರವಾಸಂ ಕುರುಷ್ವತ್ವಂ ಯುಜಮಾಂ ಭಕ್ತಿ
ಯೋಗತಃ ಜೈನಾಃ ಸಹವಿವಾದಂಚ ಶಂಕಾಂ ಹಿತ್ವಾಕು

೩೩ ರುಷ್ವಥ। ಸ್ವಶಿರೋಪಿಪಣಂ ಕೃತ್ವಾ ಪುತ್ರತ್ವಂ ವಿಜಯೀಭವ॥
ಎಂದು ಸೋಮನಾಥದೇವರ್ಬೆಸಸಿದ ಏಕಾಂತದ ರಾಮಯ್ಯನ
ಅಬ್ಬಲೂರ ಬ್ರಹ್ಮೇಶ್ವರ ಸ್ಥಾನದೊಳು ನಿಸ್ಪೃಹ ವೃತ್ತಿಯಿಂದ
ಮಿರೆ. ॥ಕಂದ॥

೩೪ ಯುಳಿದ ಅಬ್ಬಿಬಂದು ಜೈನರ ಪಾಲರಂತಾ ಸಂಕರಗೌಂಡಸಹಿತಂ
ಪಿರಿದುಂ ಛಲದಿಂ ಕೈವಾರಿಸಿದತ್ತೋಲಗಡೆ ಜಿನದೈವನೆಂದು
ಶಿವಸನ್ನಿಧಿಯೊಳು ॥ವ॥ ಅದಂ ಕೇಳ್ದು ಏಕಾಂತದ ರಾಮಯ್ಯಮ

೩೫ ನತಿ ಕ್ರುದ್ಧನಾಗಿ ಶಿವಸನ್ನಿಧಿಯೊಳನ್ಯ ದೇವತಾಸ್ತವನಂ ಮಾಡ
ಲಾಗದೆಂದಂ ಮಾಣದೆ ನುಡಿಯುತ್ತಿರಲೆಂತೆಂದಂ ॥ವೃ॥ ಜಗಮಂ
ಮಾಡುವನಾವ ನಾವನದನಾ

೩೬ ಪತ್ಕಾ (ಲ) ದೊಳ್ ಕಾವನಿಂ ಮಿಗೆಕೋಪಂ ತನಗಾಗೆ ಸಂಹರಿಸಪಾವಂ ದಕ್ಷಣಾ ಶಂಭು ಸರ್ವಾಗನಿರ್ದಂತೆ ಗತ ಪ್ರಭಾವ ವಿಭವಂ ಸಂಸಾರವೊಳು ಬಿದ್ದು ದಂದುಗವೊಳು ಬಿದ್ರ್ದ [ರ್ದೊ] ತಪಕೆಸಾರ್ದು

೩೭ ಸುಖಮಂ ಪೊರ್ದಿರಪ್ಪನುಂ ದೇವನೇ ॥ಕ॥ ಹರನಾಂತಿರಿವನೆ ನಿಮ್ಮ ಮುಂಕೊಕ್ಟೆ ತಾವುದಾವುದು ಮುನ್ನಂ ಹರನೊಳ್ಪಡ ದರನೇಕರಮುಮಂ ಬಾಣದಿನಿಶಾಳ ಭಕ್ತಗಣಂಗಳು ॥ಕ॥ ಎನೆ ಜೈ

೩೮ ನರೆಂಗು ನೀಂ ಮುನ್ನಿನ ಹಿತರರ ಹೇಳಲ್ಕೆ ನಿಮ್ಮಯು ಸಿ (ಶಿ) ರಾಮಂ ಜಾನ ವ್ಯಯುಲರಿದು ಕೊಟ್ಟಾತನೊಳಿಂ ಪಡೆ ನೀನೆ ಭಕ್ತನಾತನೆದೇವಂ ॥ಕ॥ ಎನಲೇಕಾಂತದ ರಾಮಂ ಮಾನಸಿಜ ರಿಪುಗಿತ್ತು ತಲೆಯು

೩೯ ನಾಂ ಪಡೆದಡೆ ನೀವೆನಗೀವ ಪಣಮುದೇನೆನೆ ಮುನಿದೆಂದರ್ ಜೈನ ನಕಿತ್ತು ಶಿವನಂ ನಿಲಿಪೆವು ॥ಕ॥ ಎನೆ ಕುಡುವು ದೋಲಯುಂ ನೀವೆನಗೆಂ ದಿತ್ತೋಲೆಗೊಂಡು ಶಿರಾಮುಂ ತಾಂ ಭೋ [ಂ] ಕೆನಲರಿದು ಕುಡುವ ಪದದೊ

೪೦ ಳು ಶಿವನಾಂ ಸಾನಿಧ್ಯವಮಾಡಿ ರಾಮಂ ನುಡಿಗುಂ ॥ವೃ॥ಉಡುಗದೆ ಶಂಭುನೀನೆ ಸಾರಣೆನ್ನೆದಡಂ ಮನುಮಾನ್ಯ ಬಾ(ಭಾ) ವದೊಡರ್ಡಡ ವಿೂಕ್ಕೃಪಣ ಮುಖದಿಂ ತಲೆಪೋಗದೆ ನಿಲ್ಕಿದಲ್ಲದಿ

೪೧ ರ್ದಡೆ ಶಿವ ನಿಮ್ಮ ಮುನ್ನಡಿ ಗುರುಳುಗೆನುತಂ ಕಲಿರಾಮುನಾರ್ದು ಕೈಗಿಡಿದರದಿಕ್ಕಲು ಮ್ಯಯಿಸಿದಂ ಶಿರಮುಂ ಶಿವನಂಘ್ರಿಯುಗಮ ದೊಳು ॥ವೃ॥ ಅರೆಗಯಿಗೊಂಡನೆ ಕಿತ್ತು ನೋಡಿದನೆ ಕುರ್ಪಂಗ

೪೨ ಳುಕಿ ವ್ಯೆಗಯ್ಪನೆ ಶಿರಗಂ ಪಾರ್ದನೆ ಬಾಳ್ಸಿ ಭಕ್ತರೆನುತಂ ಬಲ್ಲಾಳುರಾಮುಂ ಸ್ವಕಂಧರಮುಂ ಚಕ್ಕನೆ ಹುಲ್ಲಕಟ್ಟನರಿವಂತ ಕ್ಲೇಶದಿಂದಾ ಗಳಾಂತರಿದೀಶಾಂಘ್ರಿಯೊಳಿ [ಕ್ಕೆ ಶಂಕರ] ಗಣಕ್ಕಾನಂದ

೪೩ ವಂ ಮಾಡಿದಂ ॥ಕ॥ ಅರಿದ ತಲೆಯೋಳು ದೆವಸಂ ಬರೆಗಂನೊರ್ದಿಂ ಬಳಿಕಮಿತ್ತಂ ಹರನಾದರದಿಂ ತಲೆಕಲೆಯಿಲ್ಲದೆ ಶಿರವಾದದು ಲೋಕವಳಿ(ರಿ) ಯು ರಾಮ (ಂ) ಪಡೆದಂ ॥ಕ॥ ಬೆ

೪೪ ಗಾರ್ಗಿ ಜೈನರೆಲ್ಲಂ ಪುರಗಿ ಜಿನಪ್ರಳಿ (ಳ)ಯುವೆಂಬುದಂ ಮಾತ
ದಿರಿನ್ನೆಡರ್ಗೆ ಕಾಲ್ವಿಡಿಯು ಮಾಣದೆ ಒರಸಿಡಲಾಂತೆರಗಿ ಜಿನ್ನತಲೆ
ಯುಂ ಮುರಿದಂ ||ವೃ|| ಬಡಿಗೊಂಡೊರ್ಬನೆ ಸೊಕ್ಕಿ ಬಾಳೆ

೪೫ ವನಮುಂ ಕಾಡಾನೆ ಪೊಕ್ಕೊಂತಿರಲು ಕಾಡಾಗಲು ಕಾಪಿನವೀರರಂ
ತುರಗಮಾಂ ಸಾಮಂತರಂ ತುಳ್ದು ಮಾಮಾರ್ಪಡೆಗಳು ಜೈನರ
ಮಾರಿ ಬಂದುದೆನುತಂ ಬೆ(ಂ)ಗೊಟ್ಟು ಪೋಗಲು ಜನಿಂ ಕೆಡೆ
ವನ್ನಂ ಬಿಡದಲ್ಲಿ ಕೈಕೊ

೪೬ ಳಿಸಿದಂ ಶ್ರೀ ವೀರಸೋಮೇಶನಂ ||ವೃ|| ಅದನಲ್ಲಿಂ ನೆರೆಪೋಗಿ
ಬಿಜ್ಜಳ ಮಹಾಪಾಲಂಗೆ ಜೈನಾರ್ಕುಳರ್ಕವದಿಂ ಪೇಳ್ದು ವಿರೋ
ಧವಾಗೆ ಪಿರಿದುಂ ದೂರುತ್ತಿರಲು ಕೋಪದುರ್ಮದನಾ ಬಿಜ್ಜಳ
ಭೂಭುಜಂ ಮುನಿಸಿನಿಂ

೪೭ ರಾಮಯ್ಯನಂ ಕಂಡು ನೀನಿದೇನಯ್ಯ ಯುಮನೇಕೆ ಮಾಡಿದೆ
ನಲ' ಕೊಟ್ಟೋಲೆಯುಂ ತೋರಿದಂ ||ಕಂ|| ಅವರಿತ್ತಯೋಲಿಯಿದೆ
ನೀನವಧರಿಸುವದಿಕ್ಕು ನಿನ್ನ ಭಾಂಡಾರದೊಳಿಂ

೪೮ ನವರೊಡ್ಡವಿರಲಿನ್ನೊಡ್ಡುದಾರ್ಪಡೆ ಸಿಮ್ಮ ಮುಂದೆ ಜೈನರಂ ಪ
ಲರಂ ||ವ|| ಅಂತಪ್ಪಡೀ ತಲೆಯುನರಿವವರ ಕೈಯೊಳೊಡ್ಡುವೆನ
ವರದಂ ಸುತ್ತಿ ಬಳಿಕವಾಂ ಪಡುವೆನನಗಾನೆ ಸಜ್ಜೆಯು ಬಸ

೪೯ ದಿ ಮುಖ್ಯವಾಗಿ ಎಂಟುನೂರಂ ಬಸದಿ ಜಿನರಂ ಪಲರನೊಡ್ಡು
ವುದೆನೆ ಬಿಜ್ಜಳರಾಯುಂ ನಾಮೀ ಕೌತುಕಂ ನೋಡುವೆವೆಂದು
ಬಸದಿಗಳ ಪಂಡಿತರಂ [ಐನೂರಂ] ಜೈನವಂ ಕರೆದು ನೀ ಮಾ
ಪ್ಪಡೆ

೫೦ ಬಸದಿಗಳಂ ಪಣಮುಂ ಮಾಡಿ ಓಲೆಯುಂ ಕುಡುವೆಂದಡೆವರಾವೀ
ಮುನ್ನೋಡದ ಬಸದಿಯುಂದೂರಲ' ಬಂದೆವಲ್ಲದಿನೊಡ್ಡಿ ಜಿನ
ಪ್ರಳಿ[ಳ]ಯುಂ ಮಾಡಲು ಬಂದವರಲ್ಲೆ(ಲ್ಲ)ವೆನೆ ಬಿಜ್ಜಳರಾಯುಂ
ನಕ್ಕು ನೀವಿನ್ನುಸಿ

೫೧ ರದೆ ಪೋಗಿ ಸುಖದೆನಿರಿವೆಂದವರಂ ಕಳಿಪಿ ರಾಮಯ್ಯ(ಂ)ಗಳಿ
ಗೆಲ್ಲಮುವರಿಯು ಜಯಪತ್ರಮುಂ ಕೊಟ್ಟು(ಟ್ಟಂ) ||ವೃ|| ಅರಿರಾಯ
ಕ್ಷಿತಿರ್ಭಂ ನಾಗಾರಿಯುರಿ ರಾಯಾಂಭೋಧಿ ಕುಂಭೋದ್ಭ

೫೨ ವಂ ಅರಿರಾಯೋಂ ಧನ ಲೇಖ್ರ(ವ್ರ)ವಸ್ಥಿ ಅರಿರಾಯನಂಗ ಭಾಳೇಕ್ಷಣಂ ಅರಿರಾಯೋಗ್ರ-ಭುಜಂಗ-ಭೂರಿ-ಗರುಡಂ ಶ್ರೀ ಬಿ ಜ್ಜಣಂ ವೈರಿರಾಜರ ಮಾಕರ್ಷಣದೊಲೆ(ಲಿ)ತಾಸಿ ಸುಹೃದಂ ಕೀ ರ್ತ್ಯಾಂಗನಾವಲ್ಲಭಂ

೫೩ ಚೋಳನಾನಿಕ್ಕಿ ಲಾಳನಾಧಿಕ್ಕರಿಸಿ ಸ್ಥಿತಿಹೀನವಮಾಡಿ ನೇಪಳಾ ನಾಂಧ್ರನಂ ತುಳಿದು ಗುರ್ಜರನಂ ಶರೆಯಿಟ್ಟು ಚೇದಿ ಭೂಪಾ ಲನ ವೈಮಯಂ ಮುರಿದು ವಂಗನ ಬೀಸಿಸಿ ಕಾದಿ ಕೊಂದು ಬಂ

೫೪ ಗಾಳ ಕಲಿ(ಂ)ಗ ಮಗಧ ಪಟಸ್ವರ ಮಾಳವ ಭೂಮಿಪಾಲರಂ ಪಾಲಿಸಿದಂ ಧರಾವಳಿಯುಂ ಕಲಿ ಬಿಜ್ಜಣರಾಯ ಭೂಭುಜಂ ॥ಕ॥ ಕೊಡದೊಳಗೆ ಪುಟ್ಟಿ ಕಡಲಂ ಕುಡಿದಂ ಘಟಯೋನಿ ಪುಟ್ಟಿ ಕಳಚೂರ್ಯ

೫೫ ರೊಳೋಗಡಿಸದೆ ಚಾಳುಕ್ಯರನ್ವಯ ಗಡಲಂ ಕುಡಿದಿರ್ಕ ಸ ಜ್ಜನಂ ಬಿಜ್ಜಣನೊಳು ॥ವ॥ ಸ್ವಸ್ತಿ ಸಮಗತ ಪಂಚ ಮಹಾಶಬ್ದ ಮಹಾಮಂಡಲೇಶ್ವರಂ॥ಕಾಳಾ(ಳ)ಂಜರ ಪುರವರಾಧೀಶ್ವರಂ[ ] ಸುವರ್ಣವೃಷ

೫೬ ಭದ್ವಜಂ। ಡಮರುಗ ತುರ್ಯ ನಿಘೋಷಣಂ। ಕಳಚೂರ್ಯ ಕುಳಕ [ಮಳ] ಮಾರ್ತಾಂಡಂ [ ] ಕದನಪ್ರಚಂಡಂ ಮೊನೆ ಮುಟ್ಟೆ ಗಂದಂ [ ] ಸುಭತರಾದಿತ್ಯಂ। ಕಲಿಗಳಾಂಕುಸ [ಶ]ಂ। ಗಜಸಾ

೫೭ ಮಂತ ಶರಣಂಗತ ವಜ್ರ ಪಂಜರಂ [ ] ಪ್ರತಾಪಲಂಕೇ ಶ್ವರಂ [ ] ಪರನಾರಿಸಹೋದರಂ [ ] ಸ (ಶ) ನಿವಾರ ಶಿದ್ಧಿ [ ] ಗಿರಿದುರ್ಗ ಮಲ್ಲಂ [ ] ಚಲದ (ಂ) ಕರಾಮ [ಂ] ನಿಃಸ [ಶ] ಂಕಮಲ್ಲ ನಿತ್ಯಖಿಳ ನಾಮಾದಿಸ

೫೮ ಮಸ್ತ ಪ್ರಶಸ್ತಿ ಸಹಿತ (ಂ) ಶ್ರೀಮತು ಬಿಜ್ಜಣದೇವಂ ರಾಮಯ್ಯಂ ಗಳು ಮಾಡಿದ ಪರಮಸಾಹಸಕಂ ನಿರತಿಶಯವಪ್ಪ ಮಾ (ಮ) ಹೇಶ್ವರ ಭಕ್ತಿಗ [ಂ] ಮೆಚ್ಚಿ ವೀರಸೋಮನಾಥ ದೇವರ ದೇಗುಲ

೫೯ ದ ಮಾಟಕೂಟ ಪ್ರಕಾರ [ಪ್ರಸಾದ] ಖಂಡಸ್ಫುಟಿತ ಜೀರ್ಣೋ
ದ್ಧಾರಕ್ಕಂ ದೇವರಂಗಭೋಗ ನೈವೇದ್ಯಕ್ಕಂ ಬನವಾಸೆ ಪನ್ನಿರ
ಚ್ಚಾಸಿರದ ಕಂಪಣದ (ಣಂ) ಸತ್ತಳಿಗೆ ಯಪ್ಪತ್ತರ ಮನ್ನೆಯ ಚಟ್ಟ
ರಸನು ಮಾಳ (ಂ) ಪಣದ ಗ್ರಾಯಿತ ಪ್ರ

೬೦ ಭು ಗಂಡುಗಳುಮಂ ಮುಂದಿಟ್ಟು ಶ್ರೀಮದು ಬಿಜ್ಜಳದೇವ (ಂ)
ಸತ್ತಳಿಗೆಯಪ್ಪತ್ತರೊಳಗೆ ಮುಳಗುಂಡದಿಂ ತೆಂಕಣ ಗೋಗಾವೆ
ಯಂಬ ಗ್ರಾಮುಮಂ ಪ್ರಸಿದ್ಧ ಸೀಮಾಸಹಿತಂ ತ್ರಿಭೋಗಮುಮಂ

೬೧ ಶ್ರೀಮದೇಕಾಂತದ ರಾಮಯ್ಯಂಗಳ ಕಾಲಂ ಕರ್ಚ್ಚಿ ಧಾರಾಪೂ
ರ್ವಕಂ ಮಾಡಿಕೊಟ್ಟು ಪ್ರತಿಪಾಲಿಸಿದಂ ॥ಓಂ॥ [॥] ಶ್ರೀನುತ
ಕೀರ್ತಿ ವಿಕ್ರಮದೊಳೊಂದಿದ ಸೋಮಕುಲೈಕ ಭೂಷಣಂ ತಾನೆ
ನಿವೀ

೬೨ ಚಾಳುಕ್ಯನೃಪರನ್ವಯದೊಳು ವಸುಧಾಧಿನಾಥರಾಖ್ಯಾನ ಪರಾ
ಕ್ರಮುರ್ಕಳಿಯ ಧಾತ್ರಿ ಪರಾಹೃತಯಾಗೆ ತೈಲಪಂ ತಾನೆ ಚಾಳು
ಕ್ಯಧಾತ್ರಿ ಕುಲಶೈಲನಸಲು ಮುದದಿಂದೆ ತಾಳ್ದಿದಂ॥

೬೩ ಅಂತಾ ತೈಲಪದೇವಂಗೆ ಸತ್ಯಾಶ್ರಯ ದೇವನೆಂಬ ಮಗಂ
ಪುಟ್ಟಿದಂ ತತ್ತನಯುಂ ವಿಕ್ರಮದೇವಂ ತದನುಜಂ ದಶವರ್ಮ
ದೇವನಾತನ ಮಗಂ ಜಯಸಿಂಹರಾತನ ಮಗನಾಹವ

೬೪ ಮಲ್ಲನಾತನ ಮಗಂ ತ್ರಿಭುವನಮಲ್ಲ ಪೆರ್ಮಾರಿರಾಯನಾತನ
ಮಗಂ ಭೂಲೋಕಮಲ್ಲ ಸೋಮೇಶ್ವರ ದೇವನಾತನ ಮಗಂ
ಪ್ರತಾಪ ಚಕ್ರವರ್ತಿ ಜಗದೇಕಮಲ್ಲನಾತನ ತಮ್ಮಂ ತ್ರೈಲೋ

೬೫ ಕ್ಯಮಲ್ಲ ನೂರ್ಮಡಿ ತೈಲಪನಾತನ ಮಗಂ ತ್ರಿಭುವನಮಲ್ಲ
ಸೋಮೇಶ್ವರ ದೇವನಾತನ ಪರಾಕ್ರಮ ಪ್ರಭಾವ ಮೆಂತೆಂದಡೆ
॥ವೃ॥ ಕೋಡುಳ್ಳು ಗ್ರಾಮದೇಭವೊಂದೆರಡೆನಲ್ಕೆಂಭತ್ತು ವೊಡ್ಡಾ
ಗಿರಲ್ ಕೊಡಿ

೧೬ ತ್ತಾನದೆ ತಳ್ತು ಕಾಡಿಗೆಲ್ದಂ ಕೋಡಿಲ್ಲಾ ದೊಂದಾನೆಯಿಂ ನಾಡ ಬೀಡ ನಿಭಂಗಳಂ ತುರಗಮುಂ ಸೋಮೇಶ್ವರಂ ಬಿಲ್ಲಮುಂ ನೋಡಲ್ಕೆ ಕಳಚೂರ್ಯ ವಂಶಮನದಂ ನಿರ್ಮೂಲವಂ ಮಾಡಿದಂ ॥ವೃ॥ ದ [ಧ]

೧೭ ರೆ ನಿಸಾಪಟ್ಟಮಾಗಲು ಸಿರಿನಿಜಮಾಶ (ಸ) ದಿಂ ಸ(೦) ದುದಾರಕ್ಕೆ ತಾನಾಗರ ಮಾಗಲು ಕೀರ್ತಿದಿಕ್ಪಾಳ ನಿಕರಮುಖಾದೇಶಮಾಗಲು ಜಯಾ ಸೌಂದರಿ ನೀಚ(೦) ತೋಳಬಾಳಂ ಸೇರ್ವಿಡಿದಿರೆ ಸಾಮ್ರಾಜ್ಯಮಂ ತಾಳ್ದಿದಂದು

೧೮ ರ್ಧರ ಶೌರ್ಯಂ ವೀರ ಸೋಮೇಶ್ವರ ಸಹಿತ ವಧೂ ನೇತ್ರನೀರೇಜಸೋಮಂ॥ ಅಂಧ ತಮವೆನಿಪ ಕಳಚೂರ್ಯಾಂಧಂ ಮಸುಳಲ್ಕೆ ತಮ್ಮತೇಜದೆ ಧರೆಗನುಬಂಧಂ ತಮ್ಮೊಳೆ ಸಲಿಸಮ್ಮಂ

೧೯ ಧಿಸೆ ಚಾಳುಕ್ಯರಾಯಃ ಸೋಮಂ ನೆಗಳ್ದಂ ॥ವ॥ ಅಂತಾ ತ್ರಿಭುವನಮಲ್ಲ ಸೋಮೇಶ್ವರದೇವಂ ಸಕಳಚಮೂನಾಥ ಸಿರೋಮಣಿಯುಂ ಚಾಳುಕ್ಯ ರಾಜ್ಯ ಪ್ರತಿಷ್ಠಾಪಕನಪ್ಪ ಕು

೨೦ ಮಾರ ಬಮ್ಮಯ್ಯನುಂ ತಾನು (೦) ಸಲೆಯಾ ಹಳ್ಳಿಯು ಕೊಪ್ಪದೊಳು ಸುಖಸಂಖ (ಕ) ಥಾ ವಿನೋದ ನಿರ್ದೊಂದು ದಿವಸಂ ಧರ್ಮಗೋಷ್ಠಿಯೊಳಿರ್ದು ಪುರಾತ[ನ] ನೂತ [ನ] ರಪ್ಪ ಶಿವಭಕ್ತರಗು

೨೧ ಣಸ್ತವನಂ ಮಾಡುತ್ತ ಮಿರ್ದೇಕಾಂತ ರಾಮಯ್ಯಂಗಳ್ ಅಬ್ಬಲೂರಲಿದ್ದಲ್ಲಿ ಜೈನರೆಲ್ಲಂ ನೆರೆದು ಬಂದು ಮಹಾವಿವಾದಂ ಮಾಡಿನೀ (೦) ತಲೆಯು ನರಿದುಕೊಂಡು ಶಿವನ ಕೈಯೋಳ್ಪಡದೆಯಪ್ಪಡೆ ಜಿನ

೨೨ ನ ನೊಡೆದು ಶಿವನಂ ಪ್ರತಿಷ್ಟೆ [ಷ್ಠೆ] ಮಾಡುವೆಂದೊಡ್ಡಮನೊಡ್ಡೋಲೆಯಂ (ಕೊ) ಟ್ಟಡವರು ಕೊಟ್ಟೋಲೆಯಂ ಕೊಂಡು ತಮ್ಮ ತಲೆಯನರಿದುಕೊಂಡು ಶಿವಂಗೆ ಪೂಜೆಮಾಡಿ ಬಳಿಕಾ ತಲೆಯಂ ಏಳು

೭೩ ದಿವಸಕೆ ಮುನ್ನಿನಂತೆ ತಲೆಯುಂ ಪೊ (?) ಲೆ (?) ಪೀೞ್ವಂತು
ಸಡೆದು ಬಿಜ್ಜಣ ದೇವನ ಕೈಯುಲು ಜಯ ಪತ್ರವಂ ಪೂಜೆ
ಸಹಿತಂ ಕೊಂಡುದುಮುಂ ಜಿನನೊಡೆದು ಬಸದಿಯುನಳಿದು ಬಿಸು

೭೪ ಟು ನೆಲನಂ ಖ (ಂ) ಡಿಸಿ ವೀರಸೋಮನಾಥದೇವರಂ ಪ್ರತಿ
ಷ್ಠೆಮಾಡಿ ಶಿವಾಗಮೋಕ್ತವಾಗೆ ಪರ್ಬ (ರ್ವ) ತ ಪ್ರ (ಮಾ) ಣದ
ದೇಗುಲಮುಂ ತ್ರಿಕೂಟವಾಗೆ ಮಾಡಿಸಿದರೆಂಬುದಂ ಕೇಳ್ದು ತ್ರಿಭು
ವನಮಲ್ಲ ಸೋ

೭೫ ಮೇಶ್ವರದೇವಂ ವಿಸ್ಮಯುಂ ಬಿ (ಬ) ಟ್ಟು ನೋಡುವರರ್ಥಿಯಿಂ
ಬಿನ್ನವತ್ತಳೆಯುಂ ಬರಿಯಿಸಿ ಬರಿಸೈಯ್ಯವರ್ನಿದಿಗೊರ್ಂಡು ತಮ್ಮಯು
ಮನೆಗೊಡಗೊಂಡು ಪೋಗಿಪಿಂದುಂ ಸತ್ಕಾರದಿಂ ಪೂಜಿ

೭೬ ಸಿ ಶ್ರೀಮದ್ವೀರಸೋಮನಾಥ ದೇವರ ದೇಗುಲದ ಮಾಟಕೂಟ
ಪ್ರಕಾರ ಖಂಡಸ್ಫುಟ ಜೀರ್ನ್ಣೋದ್ಧಾರಕಂ ದೇವರ ಅಂಗಭೋಗ
ರಂಗಭೋಗ ನೈವೇದ್ಯಕಂ ಚೈತ್ರ

೭೭ ಪವಿತ್ರ ವಸಂತೋತ್ಸವಾದಿ ಪರ್ವಗಳಿಗನ್ನದಾನ ವಿದ್ಯಾದಾನಕ್ಕ(ಂ)
ಬನವಸೆ ಪನ್ನಿಚ್ಚಿರ್ಛಾಸಿರದ ಕ (ಂ) ಪುಂ ನಾಗರಖಂಡವೆಪ್ಪತ್ತ
ರೊಳಗಣ ಅಬ್ಬಲೂರನಾದೇವಗರ್ಾವೂರಾಗ

೭೮ ಲು ಬೇಳ್ಕುವೆಂದು ಪರಮಭಕ್ತಿಯಿಂದ ಕ (ಂ) ಪಣ (ದ) ಮ
ನ್ನೆಯ ಮಲ್ಲದೇವನಂ ಮು (ಂ) ದಿಟ್ಟುವೂರ ಮೇಲಾಳಕೆ ಮ
ನ್ನೆಯುಸುಂಕ ದಂಡದೋಷ ನಿಧಿನಿಕ್ಷೇಪ ಸಹಿತವಾಗಿ ಏಕಾಂತ

೭೯ ರಾಮಯ್ಯ (ಂ) ಗಳ ಕಾಲಂ ಕರ್ಚ್ಚಿ ಪೂರ್ವಪರಸಿದ್ಧ ಸೀಮಾಸ
ಹಿತಂ ತ್ರಿಭೋಗ ಸಹಿತಂ ಧಾರಾಪೂರ್ವಕಂ ಮಾಡಿ (ಪಾ) ಪ.
ರಮೇಶ್ವರ ದತ್ತಿಯಾಗೆ (ಗಿ) ತಾಮ್ರಶಾಸನಂ ಕೊಟ್ಟಾನೆಯನೇಳ
(ರು) ಮೆ

೮೦ ರಯಿಸಿ ಪರಮಭಕ್ತಿಯಿಂ ಪ್ರತಿ-ಪಾಲಿಸಿದಂ [ ] ಓಂ [ ]
ಶ್ರೀಕಂಠಪದಾಂಭುಜ ಮನನಾಕುಳಿಚಿತ್ತದೊಳೆ ಪೂಜಿಪಂ ಶಿವಸ
ಮಯು ಪ್ರಾಕಾರ ನೆ(ನೆ)ಸಿ ಸಲೆನೆಗಳ್ದ ಏಕಾಂತದ ರಾಮಮುನೀಶ

೮೧ ಭಕ್ತಿಪ್ರೇಮಂ॥ಓ [ ] ಶ್ರೀಯುಂ ದೀರ್ಘಾಯುವಂ ಕೀರ್ತಿ
ಯುನನುದಿನವುಂ ಮಾಳ್ಕೆ ನಿರ್ವಾಣವೃಂದ ಜ್ಯಾಯುಂ ಶ್ರೀ ವೀರ
ಸೋಮಂ ವಿಧೃತ ಹಿಮಕರಂ ಕಾಮದೇವಂಗುದಾರ ಶ್ರೀಯುಕ್ತಂ

೮೨ ಗದ್ರಿ ಜಾಸ್ಮಿತಸಿತ ತರಳಾಲೋಲ ವಿಸ್ತಾರಲೋಲಾ ನೇಯ (ತ್ರಾ)
ಳೋಕೋಢ (?) ತ ಶ್ರೀ ಲಲಿತ ರತಿಕಳಾಲಾಸ್ಯ ಶೈಲೂಷವೇಷಂ
ಸ್ವಸ್ತಿಸಮಾಧಿಗತ ಪಂಚಮಹಾಶಮಂ

೮೩ ಡಳೇಶ್ವರಂ ಬನವಾಸಿ ಪುರವರಾಧಿ (ಧೀ) ಶ್ವರಂ ಜಯಂತಿ ಮಧು
ಕೇಶ್ವರ ದೇವರ ದೇವರ ಲಬ್ಧವರಪ್ರಸಾದಂ ವಿದ್ವಜನಾಲ್ಹಾದಂ
ಮಯೂರವರ್ಮ ಕುಲಭೂಷಣಂ ಕದಂಬ ಕಂಠೀರವಂ ಕದನ
ಪ್ರಚಂಡ ಸಾಹ

೮೪ ಸೋತ್ತುಂಗಂ ಕಲಿಗಳಾಂಕುಸ(ಶ)ಂ ಸತ್ಯರಾಧೇಯಂ ಶರಣಾ
ಗತ ವಜ್ರಪಂಜರ(ಂ) ಯಾಚಕ ಕಾಮಧೇನುವಿತಖಿಳ ನಾಮಾ
ವಳಿ ಸಹಿತನಪ್ಪ ಶ್ರೀಮನ್ಮಹಾ ಮಂಡಲೇಶ್ವರ(ಂ)ಕಾಮದೇವರಸ

೮೫ ರ್ ಪಾನಂಗಲ್ಲೈನೂರಂ ದುಷ್ಟನಿಗ್ರಹ ಶಿಷ್ಟಪ್ರತಿಪಾಲನದಿನಾಳು
ತ್ತವಿ.ರ್ದ ಅಬ್ಬಲೂರ ವೀರಸೋಮನಾಥ ದೇವರಂ ಬಂದು
ಕಂಡು ರಾಮಯ್ಯಂಗಳು ಶಿವಾಗ(ಮ)ವಿಧಾ

೮೬ ನದಿಂ ಮಾಡಿಸಿದ ಪರ್ಬ (ರ್ವ) ತೋಪಮಾನಮಪ್ಪ ದೇಗುಲವುಂ
ಕಂಡವರು ಮಾಡಿದ ಸಾಹಸಮಂ ಸವಿಸ್ತಾರ (ಂ) ಕೇಳ್ದು ಮೆಚ್ಚಿ
ಪರಮ ಪ್ರೀತಿಯಿಂದೊಡಗೊಂಡು ಪೋಗಿ

೮೭ ಪಾನುಂಗಲ್ಲ ನೆಲೆವೀಡಿನೊಳ್ ಪ್ರಧಾನರು (ಂ) ತಾನುಂ ಮಡು
ಕೆಯ ಮಂಡಳಿಕ ಸಹಿತಂ ಸುಖಸಂಕಥಾ ವಿನೋದದಿಂ
ಕುಳ್ಳಿರ್ದು ಪರಮಭಕ್ತಿಯಿಂ ವೀರಸೋಮನಾಥ

೮೮ ದೇವರ್ಗೆ ಪಾಣುಂಗ ಲ್ಲೈನೂರರೊಳಗಣ ಕಂಪಣಂ ಹೊಸನಾ
ಡೆಪ್ಪತ್ತರೊಳಗೆ ಮುಂಡಗೋಡ ಸಮೀಪದ ಜೋಗೇಸರದಿಂ ಬಡ
ಗಣ ಮಲ್ಲವಳ್ಳಿ ಎಂಬ ಗ್ರಾಮಂ ಪರಸಿಧಸೀ

೭೯ ಮೂಪಹಿತವಾಗಿ ತ್ರಿಭೋಗಾಭ್ಯಂತರಂ ನಾಮಸ್ಯಂ ಮಾಡಿಯಾ ದೇವರ ದೇಗುಲದ ಖಂಡಸ್ಫುಟಿತ ಜೀರ್ಣೋದ್ಧಾರಕಂ ದೇವ ರಂಗಭೋಗ ರಂಗಭೋಗ ನೈವೇದ್ಯ (ಕ್ಕಂ) ಚೈತ್ರ

೯೦ ಪವಿತ್ರ ವಸಂತೋತ್ಸವಾದಿ ಪರ್ಬ (ರ್ವ) ಗಳ್ಗಂ ಅನ್ನದಾನಕ್ಕೆ ನೆಂದು ರಾಮಯ್ಯಂಗಳ ಕಾಲಂಕರ್ಚಿ ಧಾರಾಪೂರ್ವಕಂ ಮಾಡಿ ಪರಮ ಭಕ್ತಿಯಿಂ ಕೊಟ್ಟು ಧರ್ಮವಂ ಪ್ರತಿಪಾಳಿಸಿದಂ ॥ ಸ್ವಸ್ತ್ಯಸ್ತು ಓಂ॥

೯೧ ಇಂತೀ ಧರ್ಮಂಗಳಂ ಪ್ರತಿಪಾಲಿಯಿಸಿದವರು ಶ್ರೀ ವಾರಣಾಸಿ ಪ್ರಯಾಗೆ ಕುರುಕ್ಷೇತ್ರ ಅರ್ಘ್ಯತೀರ್ಥ ಶ್ರೀ ಪರ್ವತಾದಿ ಪುಣ್ಯ ಕ್ಷೇತ್ರದಲ್ಲಿ ಸಾಯಿರ ಕವಿಲೆಗಳಕೊಂಡುಂ

೯೨ ಕೊಳಗುವಂ ಹೊನ್ನೊಳ್ಕಟ್ಟಿಸಿ ಚತರ್ವೇದಪಾರಗರಪ್ಪ ಸುಬ್ರಾಹ್ಮಣರ್ಗೆ ಸೂರ್ಯಗ್ರಹಣ ಸೋಮಗ್ರಹಣ ಟ್ಯ (ವ್ಯ) ತಿಪಾಟಸ (ಂ) ಕ್ರಮಣಾದಿ ಪುಣ್ಯಕಾಲದೋಳ್ ವಿಧಿಯುಕ್ತವಾಗಿ ಕೊಟ್ಟ

೯೩ ಪ (ಫ) ಲವಂ ಪಡೆವರು ಈ ಧರ್ಮವನಳಿದವರಾ ಗಂಗೆ ಕುರುಕ್ಷೇತ್ರ ಪ್ರಯಾಗಾದಿ ಪುಣ್ಯಕ್ಷೇತ್ರಂಗಳೊಳಾ ಕಪಿಲೆಗಳುವಂ ಬ್ರಾಹ್ಮಣರುವಂ ಕೊಂಡಪಾಪಮುಂ ಪಡೆವುಯರ್ಥಸಂ

೯೪ ದೇಹವಿಲ್ಲೆಂಬುದಂ ಮುನ್ನಂ ಮನುವಾಕ್ಯಂಗಳು (ಳ) ಂ ಪೇಳ್ದು ॥ಶ್ಲೋಕ॥ ಬಾಹುಭಿರ್ವಸುಧಾ ಭುಕ್ತಾ ರಾಜಭಿಃ ಸಗರಾಧಿ: ಯುಸ್ಯಯುಸ್ಯ ಯುದಾ ಭೂಮಿಸ್ತಸ್ಯ ತಸ್ಯತದಾ ಪ (ಫ) ಲಂ॥ ಗ ಣ್ಯಂತೆ ಪಾಂ ವ( ಪ) ವೋ

೯೫ ಭೂಮೇರಗಣ್ಯಾ (ಂ) ತಿ ವೃಷ್ಟಿಬಿಂದವಾಃ ನಗಣ್ಯತೇ ವಿಧಾತ್ರಾಪಿ ಧರ್ಮಸಂರಕ್ಷಣೇ ಫಲಂ ॥ ಸ್ವದತ್ತಂ ಪರದತ್ತಂ ವಾಯೋಹರೇತ ವಸುಂಧರಾಂ। ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾಯಾಂ। ಜಾ

೯೬ ಯತೇ ಕ್ರಿಮಿಃ॥ ಕರ್ಮಣಾ ಮನಸಾವಾಚಾಯಾ: ಸಮರ್ಥೋ
ಪ್ಯುಪೇಕ್ಷತೇ। ಸಭ್ಯಾಸ್ತಥೈವ ಚಾಂಡಾಳ(ಃ)ಸರ್ವ ಧರ್ಮ ಬಹಿ
ಷ್ಕೃತಃ॥ ಕುಲಾನಿತಾರಯೇತ್ ಕರ್ತಾ ಸಪ್ತ ಸಪ್ತ ಚ॥ ಅಧೋವಪಾ

೯೭ ತಯೇದ್ಧರ್ತಾ ಸಪ್ತ ಸಪ್ತ ಚ ಸಪ್ತ ಚ||ಶ್ಲೋಕ॥ ಅಪಿಗಂಗಾದಿ
ತೀರ್ಥೇಷು ಹಂತುರಗಾಮಥವಾ ದ್ವಿಜಂ ನಿಷ್ಕೃತಿಃ ಸ್ಯಾನದೇ
ವಸ್ವ ಬ್ರಹ್ಮಸ್ವ ಹರಣೆವ್ನೃಣಾಂ|| ಸಾಮಾನ್ಯೋಯಂ ಧರ್ಮಸೇ
ತುರ್

೯೮ ನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿಃ ಸರ್ವನೇ
ತಾನು ಭಾವಿತ (ನ): ಪಾರ್ಥಿವೇಂದ್ರಾನ್ ಭ್ಯೂಯೋ ಭ್ಯೂಯೋ
ಯಾಚತೇ ರಾಮಚಂದ್ರಃ॥ ಸ್ವಸ್ತ್ಯಸ್ತುಮಂಗಳಂ ಚ। ಶ್ರೀ ಶ್ಹ॥ ಓಂ

೯೯ ಓಂ[ ] ಹರನೋಳ್ ತವನಿಧಿಎಂಟಂ ದರವೂರವಿಲ್ಲೆನಿಸಿ ಪಡೆದ
ದೇಗುಲವಂ ಪುರಹರನ ಕೈಲಾಸದಂತಿರೆ ವಿರಚಿಸಿದಂ ಶಂಭು
ಭಕ್ತಿ ಧಾಮಂ ರಾಮಂ ॥ವೃ॥ ದೇಗುಲಕೆಂದು ಭಕ್ತ

೧೦೦ ಜನವಾದರದಿಂದಿರೆರ್ದ ಕೊಟ್ಟ(ಡದ)ಂ ಹಾಗವನಾದಡಂ ಕಳಿದು
ಕೊಳ್ಳದೆ ಬೇಡದೆ ನಾಡೆ ದೈ (ದೈ) ನ್ಯದಿಂ ಪೋಗಿ ನೃಪಾಲರಂ
ಶಿವನನುಗ್ರಹವಕ್ಷಯವಾಗೆ ಮಾಡಿದಂ ದೇಗುಲ(ವ)ಂ ಹರಾದ್ರಿಗೆಣೆ

೧೦೧ ಯಾಗಿರೆ ರಾಮನಿದೇಂ ಕೃತಾರ್ಥನೋ||ಕ॥ ಕೇಶವರಾಜ ಚಮೂ
ಪಂ ಶಾಸನವಂ ಪೇಳ್ದನಂತರಂ ತಿರ್ದಿ ನಿರಾಯಾಸನೆ ಬರೆದ
ನೀಶನ ದಾಸಂ ಶಿವಚರಣ ಕಮಳ ಶರಣಂ ಶರಣಂ|| ಓಂ [ ]

೧೦೨ ಸ್ವಸ್ತಿ ಶ್ರೀ ಮತ್ತು ಹರಧರಣೀ ಪ್ರಸೂತ ಮುಕ್ಕಣ್ಣ ಕದಂಬ
(ವಂಶ) ರುಂ ಬನವಾಸಿ ಪುರವರಾಧೀಶ್ವರಂ ಶ್ರೀಮಧುಕನಾಥ
ದೇವರ ದಿಬ್ಯ [ವ್ಯ] ಶ್ರೀಪಾದ

೧೦೩ ಪದ್ಮರಾಧಕರುಂ॥ ಮಲ್ಲಿದೇವರಾಯರುಂ॥ ನಗರ ಖಂಡೆಯ ...
......................ರಿಗೆ ನಾಡುವಂ ....................
೧೦೪ ........................................ಕೊಟ್ಟರು.

# ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿನಾಂ ಸ್ತುತಿ ಪಂಚಕಮಿದಮ್.

(ಲೇಖಕ:—ಶ್ರೀ. ಸದಾಶಿವ ಶಿವಾಚಾರ್ಯ ಬೆಲಗೂರು ಸಂ. ಮೈಸೂರ.)

॥ ಛಂದೋದ್ರುತ ವಿಲಂಬಿತಮ್ ॥

ಭುವಿಲಸದ್ಯಡಯೂರ ಪುರಾಧಿಪಂ। ಪರಮ ಯೋಗಿಜನೈರ್ನುತ ಪಾದುಕಮ್ ॥ ಅಖಿಲ ಮಾನವ ಕಾಮನ ಪೂರಕಂ। ಭಜ ನಿರಂಜನ ತೋಂಟದ ಯೋಗಿನಮ್ ॥೧॥

ಗುರುಮಜಂ ಕರುಣಾರಸಪೂರಿತಂ । ಭವಹರಂ ಕುಲಜೈಃ ಪರಿಪೂಜಿತಮ್ ॥ ಸದಮಲಂ ಪರಮಾರ್ಥ ವಿದಾಯಕಂ । ಭಜ ನಿರಂಜನ ತೋಂಟದ ಯೋಗಿನಮ್ ॥೨॥

ಪ್ರಥಿತ ವೀರಮತಾಂಬುಜ ಭಾಸ್ಕರಂ। ನಿರುತಮನ್ಯಮತೇಭ ನಿರಂಕುಶಮ್ ॥ ದುರಿತ ಜಾಲವಿನಾಶಕಮೀಶ್ವರಂ। ಭಜ ನಿರಂಜನ ತೋಂಟದ ಯೋಗಿನಮ್ ॥೩॥

ಅಗಣಿತಾದ್ಭುತಲೀಲ ಮಹಾಲಯಂ। ಜಗದನಂತ ಶಿವಾರ್ಯಚರಪ್ರಭುಮ್ ॥ ಅಣಿಮ ಮುಖ್ಯ ಸುಖೇವಿರತಿಂಶಿವಂ। ಭಜ ನಿರಂಜನ ತೋಂಟದ ಯೋಗಿನಮ್ ॥೪॥

ಮನಸಿಜಾರಿಪದೇಽಸ್ಯರತಿಂಪರಂ। ಘನ ವಿರಾಗ ವಿರಾಜ ಸುವೈಭವಮ್ ॥ ಅಜಡಯೋಗ ಸಮಾಧಿವಿಲೋಲುಪಂ। ಭಜ ನಿರಂಜನ ತೋಂಟದ ಯೋಗಿನಮ್ ॥೫॥

ಪಠತಿಯಃ ಸ್ತುತಿಪಂಚಕ ಮಾದರಂ। ಗುರು ಸದಾಶಿವಯೋಗಿಕೃತಂ ತ್ವಿದಮ್ ॥ ಝುಟಿತಿತಸ್ಯ ಸುಖಂಕರಬಿಲ್ವವ । ಧ್ರುವತಿನಾತ್ರ ವಿಚಾರಣಮನ್ಯಥಾ ॥೬॥

# ಗುರುರಗಳೆ.

(ರಾ. ರಾ. ಶಿವಪ್ಪ ಮಾಸ್ತರ ಮು. ಮಳಖೇಡ ಜಿ. ಕಲಬುರ್ಗಿ
ಇವರು ಒಂದು ಹಳೇಗ್ರಂಥದಿಂದ ಎತ್ತಿ ಬರೆದದ್ದು.)



ಬ್ರಹ್ಮಗು ತನಗು ಭೇದಿಲ್ಲ। ಬ್ರಹ್ಮವೆಂಬುದು ಬೇರಿಲ್ಲ ॥೧॥
ಬೇರಿಲ್ಲೆಂದು ಶೃತಿ ಪೇ॥ ಳುವದು । ಸರ್ವವು ಬ್ರಹ್ಮವೆಂಬುವದು ॥೨॥
ವೇದವು ನಿಜದಿ ಪೇಳುವದು । ಅದನು ಲಾಲಿಸಿ ತಿಳಿಯುವದು. ॥೩॥
ಐದು ದೇಹವು ತಾನಲ್ಲ। ಐದು ಅವಸ್ಥೆ ತನಗಿಲ್ಲ ॥೪॥
ಬ್ರಹ್ಮದ ವಿದ್ಯೆಯೆಂಬುವದು । ಗುರುಮುಖದಿಂದ ತಿಳಿಯುವದು ॥೫॥
ತಿಳಿದರೆ ನೀನು ಪುಣ್ಯಾತ್ಮ। ಇನ್ನು ಬೇರುಂಟೆ ಪರಮಾತ್ಮ॥೬॥
ಪರಮ ತಾನೆರಡವತಾರ। ಈಗ ಹೇಳುವೆ ವಿಸ್ತಾರ ॥೭॥
ಜೀವಈಶ್ವರವೆಂಬುವದು । ವಿದ್ಯೆಯವಿದ್ಯೆಯೆಂಬುವದು ।೮॥
ಎರಡು ತಾವೊಂದೆಂಬುವದು । ತತ್ವಮಸಿಮಹವಾಕ್ಯವಿದು ॥೯॥
ತಿಳಿಬೇಕಾದರೆ ಗುರುಬೇಕು । ಆತನ ಮುಖದಲಿರಿಯಬೇಕು ॥೧೦॥
ಗುರುವು ಸಿಗುವದು ದುರ್ಲಭ । ಆತ ಸಿಕ್ಕರೆ ಬಹು ಲಾಭ ॥೧೧॥
ಗುರುವಿಗಿಂದಲಿ ದೈವಿಲ್ಲ । ಹರಿಹರ ಗುರುವಿಗೆ ಸಮವಲ್ಲ ॥೧೨॥
ನಗುರೊರಧಿಕ ಶೃತಿಯೆಂದೆ। ತಿಳಿದರೆ ನಿನಗೆ ಫಲವೆಂದೆ ॥೧೩॥
ಒಂದು ನಾನಿಗ ಹೇಳುವೆನು। ವಿವರದಲಿ ಸಲೆ ತಿಳಿ ನೀನು ॥೧೪॥
ಅಚ್ಚರಿಯದ ಮಾತದು ಇದೆ। ಅದು ತಿಳಿದರೆ ಮಹಫಲವಿದೆ ॥೧೫।
ದೇಹವೆಂಬುದು ಪುರವುಂಟು । ಘನತರ ಪರ್ವತವಲ್ಲುಂಟು ॥೧೬॥
ಪರ್ವತದಲೊಂದು ಕೊಳನುಂಟು । ಕೊಳದಿಯರಳಿದ ಕಮಲುಂಟು ॥೧೭॥
ಕಮಲೊಳು ದಿವ್ಯ ನೀರುಂಟು । ನೀರಲಿ ಮಿಂಚು ಮಿಂಚುವದು ॥೧೮॥
ನೆಲ್ಲಿಮುಳ್ಳಿನಂತಿರುವದು । ಹೇಮವರ್ಣದ ಕಳೆಯಹುದು ॥೧೯॥

ಅದರ ತುದಿಯಲಿ ಬ್ರಹ್ಮವಿಹುದು। ನಾನಾ ವರ್ಣವ ತೋರುವದು ॥೨೦॥
ಗುರುಮುಖದಿಂದಲಿ ತಿಳಿವುದು। ಗುರುಕರುಣಿಲ್ಲದೆ ದೊರೆಯದು ॥೨೧॥
ಜಪತಪಯೋಗಕೆ ಸಿಲುಕದು। ಗುರುವಿನ ಸೇವೆ ಮಾಡುವದು ॥೨೨॥
ಗುರುಪದವನು ಎಂದಿಗು ಬಿಡ। ಬಿಟ್ಟರೆ ನರಕ ತಿಳಿಮೂಢಾ ॥೨೩॥
ದೀನದಯಾಳು ಶ್ರೀಗುರುವು। ತನ್ನಂತೆ ಮಾಡಿದ ನಿಶ್ಚಯವು ॥೨೪॥
ಗುರುವಿಗೆ ತನು ಮನವ ಒಪ್ಪಿಸಿ। ತತ್ವವಿಚಾರವ ಶೋಧಿಸಿ ॥೨೫॥
ಸರ್ವಗುರುವೆಂದು ಅರಿಯುವದು॥ ಜನನ ಮರಣವ ನೀಗುವದು ॥೨೬॥
ಗುರುವಿನ ಪಾದ ನಿಶ್ಚಯಿಸು। ಮಹಾನಂದವನಾಶ್ರಯಿಸು ॥೨೭॥
ಹಲವು ಮಾತಿನಗೊಡವೇನು। ಪರಮಾನಂದದೊಳಿರು ನೀನು ॥೨೮॥
ಆನಂದದಾ ಬೆಲಿ ಏನೇನು। ತಾನೆ ತಾನೆ ನಿರ್ವಯಲು ॥೨೯॥

---

## ಬಸವೇಶ್ವರನ ಜನನವೂ ಬಾಲ್ಯವೂ.

**ಲೇಖಕ:— ವೀರಪ್ಪ ಚನ್ನಪ್ಪ ಯುಗಟ ವಕೀಲ ಹಾವೇರಿ.**

---

**ನಾಗಕಂಕಣ ನಾಜ್ಞೆಯೊಳು ಭೂಭಾಗದೊಳು ಬಂದಾದಿ ವೃಷಭಂ।**
**ಬಾಗವಾಡಿಯೊಳುದಯವಾದಂ ಬಸವನಾಮದಲಿ॥ ೩ನೇ ಸಂಧಿ ಬ. ಪು.**

ಯಾವ ಮಹಿಮನು ಮಾನವ ವರ್ಗಕ್ಕೆ ಒಂದು ಶ್ರೇಷ್ಠತರವಾದ ಜೀವಿತವನ್ನು ಜಗತ್ತಿಗೆ ತೋರಿಸಿದನೋ, ಯಾವನು ಒಂದು ಜನಾಂಗವನ್ನೇ ಸುಧಾರಣೆಯ ಶಿಖರಕ್ಕೆ ಮುಟ್ಟಿಸಿದನೋ, ಯಾವನು ತನ್ನ ಅಪಾರವಾದ ಸ್ವಾರ್ಥತ್ಯಾಗವನ್ನು ಸಂದರ್ಶಿಸಿದನೋ, ಯಾವನು ಸಹನಶೀಲತೆಯ ಸೌಭಾಗ್ಯ ಮೂರ್ತಿಯಾಗಿದ್ದನೋ, ಯಾವನು ಭೂತದಯೆಯ ಭಾಂಡಾರವಾಗಿದ್ದನೋ, ಯಾವನು ಅನ್ಯಾಯವನ್ನು ನಿರ್ಭಯವಾಗಿ ಖಂಡಿಸಿದನೋ, ಮತ್ತು ಯಾವನಲ್ಲಿ ನಿಶ್ಚಲವಾದ ದೈವಭಕ್ತಿಯಿತ್ತೋ ಅಂಥ ಮಹಾಪುರುಷನ ಜನ್ಮಭೂಮಿಯಾದ ಕರ್ನಾಟಕವು ಪುಣ್ಯಭೂ

ಮಿಯಲ್ಲವೇ? ಅಂಥ ಮಹಾಪುರುಷನ ಲಾಭವು ತಮಗುಂಟಾದುದಕ್ಕಾಗಿ ಎಲ್ಲ ಕನ್ನಡಿಗರು ತಾವು ಸುದೈವಿಗಳೆಂದು ಅಭಿಮಾನಪಡಬೇಕಾದುದಲ್ಲವೇ? ಬಸವಾವತಾರದ ಕಾರಣವೇನಂದರೆ, ಒಮ್ಮೆ ನಾರದನು ಶಿವನ ಓಲಗಕ್ಕೆ ಬಂದು 'ಎಲೈ ಪರಶಿವನೇ, ಭೂಲೋಕದಲ್ಲಿ ಜನರು ಅನಾಚಾರಿಗಳಾಗಿಯೂ ಶೈವಾಚಾರದಲ್ಲಿ ಅನಾಸಕ್ತಿಯುಳ್ಳವರಾಗಿಯೂ ಸಾಧುಜನರ ಉಪದೇಶದಲ್ಲಿ ಉಪೇಕ್ಷೆಯುಳ್ಳವರಾಗಿಯೂ ಇರುವರು; ಆದ್ದರಿಂದ ನಿನ್ನ ಪ್ರಮಥನಾಥರಲ್ಲೊಬ್ಬನನ್ನು ಭೂಲೋಕಕ್ಕೆ ಕಳುಹು' ಎಂದನು. ಆಗ ಶಿವನು ತನ್ನ ವಾಹನವಾಗಿದ್ದ ನಂದಿಯನ್ನುನೋಡಿ, ನಂದಿಯೇ ನೀನು ಮಹಾಜ್ಞಾನಿಯಾಗಿರುವೆ, ನೀನು ಭೂಲೋಕಕ್ಕೆ ಹೋಗಿ ಶಿವಮತವನ್ನು ಉದ್ಧರಿಸುವವನಾಗೆಂದನು.

ಯಾವಾಗ್ಗೆ ಅಧರ್ಮವು ಹೆಚ್ಚುವದೋ ಮತ್ತು ಧರ್ಮವು ಕುಂದುವದೋ ಆಗ್ಗೆ ಅವತಾರೀಪುರುಷನೊಬ್ಬನು ಬರುವನೆಂಬ ಜನರ ನಂಬಿಗೆಯಂತೆ ಬಸವನ ಅವತಾರವೂ ಸಂಭವಿಸಿತು. ವಿಜಾಪುರ ಜಿಲ್ಹೆಯಲ್ಲಿ ಬಾಗೆವಾಡಿಯೆಂಬ ಗ್ರಾಮವಿರುವದು. ಆ ಗ್ರಾಮದಲ್ಲಿ ಮಂಡಿಗೆ ಮಾದರಸನೆಂಬೊಬ್ಬ ಶೈವ (ಕಾಶ್ಯಪಗೋತ್ರದ) ಬ್ರಾಹ್ಮಣನಿದ್ದನು. ಆತನಿಗೆ ಮಾದಲಾಂಬಿಕೆಯೆಂಬ ಸಾಧ್ವೀ ಶಿರೋಮಣಿಯೊಬ್ಬಳು ಪತ್ನಿಯಾಗಿದ್ದಳು ಆ ದಂಪತಿಗಳಿಗೆ ಬಹುಕಾಲದವರೆಗೆ ಗಂಡುಮಕ್ಕಳಿಲ್ಲದಿರಲು × ಜಪ

---

× ಮಾದರಸನಿಗೆ ನಾಗಲಾಂಬಿಕೆಯೆಂಬ ಮಗಳಿದ್ದಳೆಂದು ಹೇಳಿದೆ. ಆದರೆ ಬಸವಪುರಾಣದ ಹೇಳಿಕೆಗೂ ಬಿಜ್ಜಳ ಚರಿತ್ರೆಯಲ್ಲಿ ಪದ್ಮಾವತಿಯೆಂಬ ಮಗಳಿದ್ದಳೆಂಬ ಹೇಳಿಕೆಗೂ ಷಡುಷಷ್ಠಿ ಪುರಾತನರ ಪುರಾಣದಲ್ಲಿ ಸತ್ಯಪ್ಪ, ಅಪ್ಪಣ್ಣ ಎಂಬ ಪುತ್ರರೂ, ನಾಗಲಾಂಬಿಕೆ ಎಂಬ ಮಗಳೂ ಇದ್ದರೆಂಬದೂ ಮತ್ತು ಹೊಲದಲ್ಲಿ ಬಾಗಿದ ಹೊಡೆಯಲ್ಲಿದ್ದಕೂಸನ್ನುತಂದು ಬಸವನೆಂಬ ಹೆಸರಿಟ್ಟುಕೊಂಡನೆಂಬದಕ್ಕೂ, ಸಿಂಗಿ ರಾಜಪುರಾಣದಲ್ಲಿ ಮಕ್ಕಳೇ ಇರಲಿಲ್ಲವೆಂಬದಕ್ಕೂ ಐಕ್ಯಮತವೇ ಇಲ್ಲ. ಪದ್ಮಾವತಿಯೆಂಬ ಹೆಸರನ್ನು ಲಿಂಗಾಯತರಲ್ಲಿ ಎಲ್ಲಿಯೂ ಈ ವರೆಗೂ ಇಟ್ಟಿಲ್ಲ. ಇದು ಜೈನನಾದ ಧರಣಿ ಪಂಡಿತನ ಕಲ್ಪಿತ ಕವನವು. ಇನ್ನು ಷಡುಷಷ್ಠಿ ಪುರಾಣವು ಅಸಂಭವ ಸಂಗತಿಯನ್ನು ಅತಿಶಯೋಕ್ತಿಯಿಂದ ಹೇಳಿರುವದು. ಸಿಂಗಿ ರಾಜನು ೧೫ ನೇ ಶತಮಾನದವನಾದ್ದರಿಂದ ಅವನ ಹೇಳಿಕೆಯನ್ನು ನಂಬಲಾಗುವದಿಲ್ಲ. ತೆಲುಗು ಬಸವ ಪುರಾಣವನ್ನು ಬರೆದ ಪಾಲ್ಕುರಿಕೆ ಸೋಮೇಶ್ವರರು ೧೧೯೫ ರಲ್ಲಿದ್ದರು. ಬಸವನ ಐಕ್ಯವು ೧೧೬೮. ಸೋಮೇಶ್ವರರು ಬಸವನ ಸಮಕಾಲೀನರಾದರು. ಬಸವನ ಬಿಸಿಬಿಸಿ ವಾರ್ತೆಯು ಸೋಮೇಶ್ವರರಿಗೆ ಲಭಿಸಿತು. ಸೋಮೇಶ್ವರರ ತೆಲುಗು ಪುರಾಣವನ್ನೇ ಭೀಮ ಕವಿಗಳು ಕನ್ನಡಕೆ ಪರಿವರ್ತಿ

ಅದರ ತುದಿಯಲಿ ಬ್ರಹ್ಮವಿಹುದು। ನಾನಾ ವರ್ಣವ ತೋರುವದು ॥೨೦॥
ಗುರುಮುಖದಿಂದಲಿ ತಿಳಿವುದು। ಗುರುಕರುಣಿಲ್ಲದೆ ದೊರೆಯುದು ॥೨೧॥
ಜಪತಪಯೋಗಕೆ ಸಿಲುಕದು। ಗುರುವಿನ ಸೇವೆ ಮಾಡುವದು ॥೨೨॥
ಗುರುಪದವನು ಎಂದಿಗು ಬಿಡ। ಬಿಟ್ಟರೆ ನರಕ ತಿಳಿಮೂಢಾ ॥೨೩॥
ದೀನದಯಾಳು ಶ್ರೀಗುರುವು। ತನ್ನಂತೆ ಮಾಡಿದ ನಿಶ್ಚಯವು ॥೨೪॥
ಗುರುವಿಗೆ ತನು ಮನವ ಒಪ್ಪಿಸಿ। ತತ್ವವಿಚಾರವ ಶೋಧಿಸಿ ॥೨೫॥
ಸರ್ವಗುರುವೆಂದು ಅರಿಯುವದು ॥ ಜನನ ಮರಣವ ನೀಗುವದು ॥೨೬॥
ಗುರುವಿನ ಪಾದ ನಿಶ್ಚಯಿಸು। ಮಹಾನಂದವನಾಶ್ರಯಿಸು ॥೨೭॥
ಹಲವು ಮಾತಿನಗೊಡವೇನು। ಪರಮಾನಂದದೊಳಿರು ನೀನು ॥೨೮॥
ಆನಂದದಾ ಬೆಲಿ ಏನೇನು। ತಾನೆ ತಾನೆ ನಿರ್ವಯಲು ॥೨೯॥

---

## ಬಸವೇಶ್ವರನ ಜನನವೂ ಬಾಲ್ಯವೂ.

ಲೇಖಕಃ— ವೀರಪ್ಪ ಚನ್ನಪ್ಪ ಯುಗಟ ವಕೀಲ ಹಾವೇರಿ.

---

ನಾಗಕಂಕಣ ನಾಜ್ಞೆಯೊಳು ಭೂಭಾಗದೊಳು ಬಂದಾದಿ ವೃಷಭಂ।
ಬಾಗವಾಡಿಯೊಳುದಯವಾದಂ ಬಸವನಾಮದಲಿ॥ ೩ನೇ ಸಂಧಿ ಬ. ಪು.

ಯಾವ ಮಹಿಮನು ಮಾನವ ವರ್ಗಕ್ಕೆ ಬಂದು ಶ್ರೇಷ್ಠತರವಾದ ಜೀವಿತವನ್ನು ಜಗತ್ತಿಗೆ ತೋರಿಸಿದನೋ, ಯಾವನು ಒಂದು ಜನಾಂಗವನ್ನೇ ಸುಧಾರಣೆಯ ಶಿಖರಕ್ಕೆ ಮುಟ್ಟಿಸಿದನೋ, ಯಾವನು ತನ್ನ ಅಪಾರವಾದ ಸ್ವಾರ್ಥತ್ಯಾಗವನ್ನು ಸಂದರ್ಶಿಸಿದನೋ, ಯಾವನು ಸಹನಶೀಲತೆಯ ಸೌಭಾಗ್ಯ ಮೂರ್ತಿಯಾಗಿದ್ದನೋ, ಯಾವನು ಭೂತದಯೆಯ ಭಾಂಡಾರವಾಗಿದ್ದನೋ, ಯಾವನು ಅನ್ಯಾಯವನ್ನು ನಿರ್ಭಯವಾಗಿ ಖಂಡಿಸಿದನೋ, ಮತ್ತು ಯಾವನಲ್ಲಿ ನಿಶ್ಚಲವಾದ ದೈವಭಕ್ತಿಯಿತ್ತೋ ಅಂಥ ಮಹಾಪುರುಷನ ಜನ್ಮಭೂಮಿಯಾದ ಕರ್ನಾಟಕವು ಪುಣ್ಯಭೂ

ಮಿಯಲ್ಲವೇ? ಅಂಥ ಮಹಾಪುರುಷನ ಲಾಭವು ತಮಗುಂಟಾದುದಕ್ಕಾಗಿ ಎಲ್ಲ ಕನ್ನಡಿಗರು ತಾವು ಸುದೈವಿಗಳೆಂದು ಅಭಿಮಾನಪಡಬೇಕಾದುದಲ್ಲವೇ? ಬಸವಾವತಾರದ ಕಾರಣನೇನಂದರೆ, ಒಮ್ಮೆ ನಾರದನು ಶಿವನ ಓಲಗಕ್ಕೆ ಬಂದು 'ಎಲೈ ಪರಶಿವನೇ, ಭೂಲೋಕದಲ್ಲಿ ಜನರು ಅನಾಚಾರಿಗಳಾಗಿಯೂ ಶೈವಾಚಾರದಲ್ಲಿ ಅನಾಸಕ್ತಿಯುಳ್ಳವರಾಗಿಯೂ ಸಾಧು ಜನರ ಉಪದೇಶದಲ್ಲಿ ಉಪೇಕ್ಷೆಯುಳ್ಳವರಾಗಿಯೂ ಇರುವರು; ಆದ್ದರಿಂದ ನಿನ್ನ ಪ್ರಮಥನಾಥರಲ್ಲೊಬ್ಬನನ್ನು ಭೂಲೋಕಕ್ಕೆ ಕಳುಹು' ಎಂದನು. ಆಗ ಶಿವನು ತನ್ನ ವಾಹನವಾಗಿದ್ದ ನಂದಿಯನ್ನುನೋಡಿ, ನಂದಿಯೇ ನೀನು ಮಹಾಜ್ಞಾನಿಯಾಗಿರುವೆ, ನೀನು ಭೂಲೋಕಕ್ಕೆ ಹೋಗಿ ಶಿವ ಮತವನ್ನು ಉದ್ಧರಿಸುವವನಾಗೆಂದನು.

ಯಾವಾಗ್ಗೆ ಅಧರ್ಮವು ಹೆಚ್ಚುವದೋ ಮತ್ತು ಧರ್ಮವು ಕುಂದುವದೋ ಆಗ್ಗೆ ಅವತಾರೀಪುರುಷನೊಬ್ಬನು ಬರುವನೆಂಬ ಜನರ ನಂಬಿಗೆಯಂತೆ ಬಸವನ ಅವತಾರವೂ ಸಂಭವಿಸಿತು. ವಿಜಾಪುರ ಜಿಲ್ಹೆಯಲ್ಲಿ ಬಾಗೇವಾಡಿಯೆಂಬ ಗ್ರಾಮವಿರುವದು. ಆ ಗ್ರಾಮದಲ್ಲಿ ಮಂಡಿಗೆ ಮಾದರಸನೆಂಬೊಬ್ಬ ಶೈವ (ಕಾಶ್ಯಪಗೋತ್ರದ) ಬ್ರಾಹ್ಮಣನಿದ್ದನು. ಆತನಿಗೆ ಮಾದಲಾಂಬಿಕೆಯೆಂಬ ಸಾಧ್ವೀ ಶಿರೋಮಣಿಯೊಬ್ಬಳು ಪತ್ನಿಯಾಗಿದ್ದಳು ಆ ದಂಪತಿಗಳಿಗೆ ಬಹುಕಾಲದವರೆಗೆ ಗಂಡುಮಕ್ಕಳಿಲ್ಲದಿರಲು × ಜಪ

---

× ಮಾದರಸನಿಗೆ ನಾಗಲಾಂಬಿಕೆಯೆಂಬ ಮಗಳಿದ್ದಳೆಂದು ಹೇಳಿದೆ. ಆದರೆ ಬಸವ ಪುರಾಣದ ಹೇಳಿಕೆಗೂ ಬಿಜ್ಜಳ ಚರಿತ್ರೆಯಲ್ಲಿ ಪದ್ಮಾವತಿಯೆಂಬ ಮಗಳಿದ್ದಳೆಂಬ ಹೇಳಿಕೆಗೂ ಷಡುಷಷ್ಟಿ ಪುರಾತನರ ಪುರಾಣದಲ್ಲಿ ಸತ್ಯಪ್ಪ, ಅಪ್ಪಣ್ಣ ಎಂಬ ಪುತ್ರರೂ, ನಾಗಲಾಂಬಿಕೆ ಎಂಬ ಮಗಳೂ ಇದ್ದರೆಂಬದೂ ಮತ್ತು ಹೊಲದಲ್ಲಿ ಬಾಗಿದ ಹೊಡೆಯಲ್ಲಿದ್ದ ಕೂಸನ್ನುತಂದು ಬಸವನೆಂಬ ಹೆಸರಿಟ್ಟುಕೊಂಡನೆಂಬದಕ್ಕೂ, ಸಿಂಗಿ ರಜಪುರಾಣದಲ್ಲಿ ಮಕ್ಕಳೇ ಇರಲಿಲ್ಲವೆಂಬದಕ್ಕೂ ಐಕ್ಯ ಮತವೇ ಇಲ್ಲ. ಪದ್ಮಾವತಿಯೆಂಬ ಹೆಸರನ್ನು ಲಿಂಗಾಯತರಲ್ಲಿ ಎಲ್ಲಿಯೂ ಈ ವರೆಗೂ ಇಟ್ಟಿಲ್ಲ. ಇದು ಜೈನನಾದ ಧರಣಿ ಪಂಡಿತನ ಕಲ್ಪಿತ ಕವನವು. ಇನ್ನು ಷಡುಷಷ್ಟಿ ಪುರಾಣವು ಅಸಂಭವ ಸಂಗತಿಯನ್ನು ಅತಿಶಯೋಕ್ತಿಯಿಂದ ಹೇಳಿರುವದು. ಸಿಂಗಿ ರಾಜನು ೧೫ ನೇ ಶತಮಾನದವನಾದ್ದರಿಂದ ಅವನ ಹೇಳಿಕೆಯನ್ನು ನಂಬಲಾಗುವದಿಲ್ಲ. ತೆಲುಗು ಬಸವ ಪುರಾಣವನ್ನು ಬರೆದ ಪಾಲ್ಕುರಿಕೆ ಸೋಮೇಶ್ವರರು ೧೧೯೫ ರಲ್ಲಿದ್ದರು. ಬಸವನ ಐಕ್ಯವು ೧೧೬೮. ಸೋಮೇಶ್ವರರು ಬಸವನ ಸಮಕಾಲೀನರಾದರು. ಬಸವನ ಬಿಸಿಬಿಸಿ ವಾರ್ತೆಯು ಸೋಮೇಶ್ವರರಿಗೆ ಲಭಿಸಿತು. ಸೋಮೇಶ್ವರರ ತೆಲುಗು ಪುರಾಣವನ್ನೇ ಭೀಮ ಕವಿಗಳು ಕನ್ನಡಕೆ ಪರಿವರ್ತಿ

ಹೋಮಾದಿಗಳನ್ನು ಮಾಡಿ ನಿಷ್ಫಲಹೊಂದಿ ಕಡೆಗೆ ನಂದಿವ್ರತವನ್ನು ಮಾಡತೊಡಗಿ ದೇವಾಲಯಕ್ಕೆ ಭಕ್ತಿಯುಕ್ತಳಾಗಿ ಪರಮವೈಭವದಿಂದ ಆ ವ್ರತವನ್ನು ಮಾಡಿ ನಂದಿಕೇಶನನ್ನು ಬಗೆಬಗೆಯ ಸ್ತೋತ್ರಗಳಿಂದ ಹೊಗಳಿ, ಎಲೈ ಭಕ್ತವತ್ಸಲನಾದ ಸ್ವಾಮಿಯೇ! ನಿನ್ನಂತೆ ಶಿವಭಕ್ತಿ ಸಂಪನ್ನನಾದ ಮಗನು ಹುಟ್ಟಿದರೆ ಆತನಿಗೆ ನಿನ್ನ ಹೆಸರಿಟ್ಟು ಸಲಹುವೆನೆಂದು ಹರಸಿಕೊಂಡು ಮನೆಗೆ ಬಂದು ದಂಪತಿಗಳಿಬ್ಬರೂ ಸುಖದಿಂದಿರುತ್ತಿರಲು, ತನ್ನನ್ನು ಧ್ಯಾನಿಸಿ ಪುತ್ರನಾಗಬೇಕೆಂದು ಬೇಡಿಕೊಂಡು ಪುಣ್ಯಶಾಲಿನಿಯಾದ ಮಾದಲಾಂಬಿಕೆಯ ಭಕ್ತಿಯನ್ನು ನೆನೆದು, ಭೂಮಂಡಲಕ್ಕಿಳಿದು ಬರುತ್ತಿದ್ದ ನಂದಿಕೇಶನು ಆ ಮಾದಾಂಬೆಯ ಗರ್ಭವನ್ನು ಪ್ರವೇಶಿಸಿದನು. ಹೀಗೆ ಅವ್ಯಕ್ತದೇಹಿಯಾದ ಮಗನು ಬಸುರಿಗೆ ಬರಲು ಮಾದಲಾಂಬಿಕೆಗೆ ಹಸಿವು ಅಡಗಿಹೋಯಿತು. ಆಕೆಯ ದೇಹವು ಬಿಳುಪಾಯಿತು. ಓಕರಿಕೆಗಳು ಕಾಣಿಸಿದವು. ಮಗನು ಹುಟ್ಟುವನೆಂಬ ಆನಂದದಿಂದ ಬಾಯಬಿಡುವಂತೆ ಆಕಳಿಕೆಗಳು ಬರಹತ್ತಿದವು. ಪರಮೇಶ್ವರನ ದೇಹವು ಆ ಸಾಧ್ವಿಯ ಗರ್ಭದಲ್ಲಿ ನೆಲಿಸಲು ಆಕೆಗೆ ಯೋಗನಿದ್ರೆಯೇ ನಿದ್ರೆಯಾಯಿತು. ಹೀಗೆ ಸರ್ವಜನಾನಂದಕರವಾದ ಆ ಗರ್ಭವು ೯ ತಿಂಗಳವರೆಗೂ ದಿನದಿನಕ್ಕೆ ಅಭಿವೃದ್ಧಿಹೊಂದುತ್ತ ಇಂಪಿನಿಂದ ಬೆಳೆಯಿತು. ಆಗ ನಂದೀಶನು ಆ ಗರ್ಭವೆಂಬ ಮನೆಯನ್ನು ಯೋಗ ಸದನವನ್ನಾಗಿ ಮಾಡಿಕೊಂಡು ಸಿದ್ಧಪದ್ಮಾಸನದಲ್ಲಿ ಕುಳಿತು ಪರಿಶುದ್ಧನಾಗಿ ಪರಮಯೋಗ ಭರದಿಂದಿರುತ್ತ ಬ್ರಹ್ಮಾನಂದ ಸುಖದಲ್ಲಿದ್ದನು. ಈ ಪ್ರಕಾರ ಆತನು ಆಕೆಯ ಗರ್ಭದಲ್ಲಿ ಮೂರುವರ್ಷಗಳನ್ನು ಧ್ಯಾನದಲ್ಲಿ ಕಳೆದನು. * ಆಗ ಮಾದಲಾಂಬಿಕೆಯ ದೇಹದ ಕೀಲಸಂದಿಗಳೂ, ಕೈಕಾಲ ಬೆರಳುಗಳೂ ಇರಿಯಲಾರಂಭಿಸಿದವು. ಒಳಗಿನ ಗರ್ಭವು ಬಲವಾಗಿ ನೋಯತೊಡಗಿತು. ಅದರ ಬಾಧೆಯನ್ನು

---

ಸಿರುವರು. ಭೀಮ ಕವಿಯು ೧೩೬೯ನೇ ಇಸವಿಯಲ್ಲಿ ಇದ್ದನು. ಆದ್ದರಿಂದ ಬಸವಪುರಾಣದಹೇಳಿಕೆಯೇ ಹೆಚ್ಚು ಆಧಾರವಾಗಿದೆ.

* ಸಿಂಗಿರಾಜ ಪುರಾಣದಲ್ಲಿ ೯ ತಿಂಗಳಲ್ಲಿ ಹೆತ್ತಳೆಂದಿದೆ. ವೈದ್ಯಕೀ ಗ್ರಂಥಗಳಲ್ಲಿ ಗರ್ಭವು ೨ ವರ್ಷಗಳಿಗಿಂತ ಹೆಚ್ಚು ಕಾಲನಿಂತ ಉದಾಹರಣೆಗಳಿವೆ. ಗರ್ಭವು ೩ ವರ್ಷ ನಿಂತದ್ದು ಅಸಂಭವವಲ್ಲ.

ಕಾಲಲಾರದೆ ಮಾದಾಂಬೆಯು ಮರಳಿ ನಂದೀಶನ ಗುಡಿಗೆಬಂದು ಭಕ್ತಿಯಿಂದೆರಗಿ, ನಂದೀಶನೇ, ನಿನ್ನ ವರದಿಂದ ಧನ್ಯಳಾದಾಗ್ಯೂ ಲೋಕದಲ್ಲಿ ಪುಣ್ಯಾತ್ಮರು ಒಂಭತ್ತು ತಿಂಗಳಲ್ಲಿ ಮಕ್ಕಳನ್ನು ಹೆರುವರು ನಾನು ಗರ್ಭವನ್ನುತಾಳ್ದು ಮೂರುವರ್ಷಗಳಾದವಲ್ಲಾ, ನನ್ನನ್ನು ಉದ್ಧರಿಸೆಂದು ಬೇಡಿಕೊಂಡು ಆಯಾಸದಿಂದ ನಿಟ್ಟುಸಿರುಬಿಡುತ್ತ ಮನೆಗೆ ಬಂದು ಹಾಸಿಗೆಯಮೇಲೆ ಮಲಗಿಕೊಂಡಳು. ಆಯಾಸ ಪರಿಹಾರಾರ್ಥವಾಗಿ ಮಾಡಿದ ಶೈತ್ಯೋಪಚಾರದ ಬಲದಿಂದ ಆ ಮಾದಾಂಬೆಯು ಸ್ವಲ್ಪಹೊತ್ತು ಕಣ್ಣು ಮುಚ್ಚಿಮಲಗಲು ವೃಷಭೇಶ್ವರನು ಜಂಗಮ ರೂಪದಿಂದ ಆಕೆಯ ಕನಸಿಗೆ ಬಂದು ನಾನು ನಿನ್ನ ಬಸುರಿನ ತಾಪವನ್ನೂ ಉಳಿದ ಚಿಂತೆಗಳನ್ನೂ ಪರಿಹರಿಸುವದಕ್ಕಾಗಿ ಬಂದೆನು. ನಿನ್ನ ಹೊಟ್ಟೆಯಲ್ಲಿ ತ್ರಿಲೋಕ ವಿಖ್ಯಾತನಾದ ಮಗನು ಹುಟ್ಟುವನು, ಅವನಿಗೆ ಬಸವನೆಂದು ಹೆಸರಿಡು, ಎಂದು ಹೇಳಿ ಮಾಯವಾದನು. ಬಳಿಕ ಮಾದಾಂಬೆಯು ಎಚ್ಚರಗೊಂಡು ಸುತ್ತಲೂ ನೋಡಿ ಯಾರೂ ಇಲ್ಲದುದರಿಂದ ತನ್ನನ್ನು ಉದ್ಧರಿಸಲು ಪರಮೇಶ್ವರನೆ ಬಂದಿದ್ದನೆಂದರಿತು ಸಖಿಜನರನ್ನು ಎಚ್ಚರಿಸಿ ಕನಸಿನ ವಿಚಾರವೆಲ್ಲವನ್ನೂ ವಿಸ್ತರಿಸಿ ಹೇಳಿದಳು. ಆ ಕಾಲದಲ್ಲಿ ಮಾದಾಂಬೆಯ ಬಸುರಿನಲ್ಲಿದ್ದ ಮಗುವು ಅಧೋದಯದಲ್ಲಿರಲು, ಆತನಲ್ಲಿಶಿವನು ಗುರುವಾಗಿಬಂದು ಲಿಂಗಧಾರಣೆಯನ್ನುಮಾಡಿ, ಈತನು ಎಲ್ಲಿಂದ ಬಂದನೋ ಎನ್ನುವಂತೆ ಮನೆಯವರು ಆಶ್ಚರ್ಯಪಡುವಂತೆ ಮಾಡಿದನು. ಆಗ ಶಿವನು ಜಡೆಮುಡಿಗಳನ್ನು ಧರಿಸಿ ಹಣೆಯಲ್ಲಿ ತಿಪುಂಡ್ರವನ್ನು ಧರಿಸಿಕೊಂಡು, ರುದ್ರಾಕ್ಷರತ್ನಕಂಬಳಿಗಳನ್ನುಟ್ಟು, ಮೈಗೆಲ್ಲ ವಿಭೂತಿಯನ್ನು ಧರಿಸಿ ಯತಿವೇಷಧಾರಿಯಾಗಿ, ಮಾದಲಾಂಬಿಕೆಯನ್ನು ಕುರಿತು ತಂಗೀ ನಾನು ಕಪ್ಪಡಿ ಸಂಗಮನಾಥನು, ಇವನು ನನ್ನ ಮಗನು ಲೋಕಹಿತಾರ್ಥವಾಗಿ ಈತನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದನು. ಆದಕಾರಣ ಇವನನ್ನು ನೋಡಬಂದೆನು. ನಾನೇ ಈತನ ಉಪದೇಶ ಗುರುವು. ನೀನು ಈತನನ್ನು ಶಿವಾರ್ಪಿತಮಾಡದೆ ಅನ್ಯಾರ್ಪಿತಮಾಡಿದರೆ ಆಣೆಯಿರುವದು ಎಂದು ಹೇಳಿ ಅದೃಶ್ಯನಾದನು.

ಸಿಂಗಿರಾಜ ಪುರಾಣವು ಈ ಯತಿಯಾಗಿ ಬಂದವನಿಗೆ ಜಾತವೇದಿ ಮುನಿಯೆಂದು ಹೆಸರಿತ್ತೆಂಬದಾಗಿ ಹೇಳುತ್ತದೆ. ಈ ಹೆಸರಿನ ಮುನಿಯು

ಕಪ್ಪಡಿಯಲ್ಲಿ ಇದ್ದದ್ದಾದರೆ ಸೋಮೇಶ್ವರನಾಗಲಿ ಅಥವಾ ಇನ್ನಿತರ ಗ್ರಂಥಕಾರರಾಗಲೀ ಹೇಳದೇ ಇರುತ್ತಿರಲಿಲ್ಲ. ಬಸವನಾದರೋ ಜಾತ ವೇದ ಮುನಿಯಲ್ಲಿ ವಿದ್ಯಾಬುದ್ಧಿಗಳನ್ನು ಹೊಂದಿದ್ದಾದರೆ ಆತನ ಉಪ ಕಾರ ಸ್ಮರಣೆಗಾಗಿ ತನ್ನ ವಚನ ಗ್ರಂಥದಲ್ಲಿ ಒಂದು ಶಬ್ದವನ್ನಾದರೂ ನುಡಿಯಬೇಕಾಗಿತ್ತಲ್ಲವೆ? ಆದರೆ ಬಸವನು "ಅಪ್ಪನು ನಮ್ಮ ಮಾದಾರ ಚನ್ನಯ್ಯ; ಬೊಪ್ಪನು ನಮ್ಮ ಡೋಹರ ಕಕ್ಕಯ್ಯ, ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ" ಹೀಗೆಂದು ಅನೇಕ ಅಂತ್ಯಜರ ಹೆಸರುಗಳನ್ನು ಸಹ ಹಾಡಿ ಹರಸಿರುವಾಗ ಜಾತವೇದ ಮುನಿಯನ್ನೇಕೆ ಮರೆತನು? ಈ ಹೆಸರು ಕಲ್ಪಿತವೇ ಸರಿ. ಬಸವನು ತನ್ನ ವಚನದಲ್ಲಿ "ಎನಗೆ ಕೂಡಲ ಸಂಗನ ನೆನವುದೇ ಚಿಂತೆ" ಎಂದು ಮೊದಲಾಗಿ ಸಂಗಮ ದೇವನೇ ತನ್ನ ಗುರುವೆಂದು ಅಡಿಗಡಿಗೂ ಅಂದಿರುವನು.

ಸಂಗಮನಾಥನು ಅದೃಶ್ಯನಾದ ಮೇಲೆ ದಟ್ಟವಾಗಿ ಹರಡಿದ ತಮೋ ರಾಶಿಯನ್ನು ನೀಗುವ ಸೂರ್ಯ ಮಂಡಲವೋ ಎನ್ನುವಂತೆ ಹೊಳೆಪಾದ ಒಂದು ಬೆಳಕು ಹೊಳೆಯಿತು. ಆಗ ಸುತ್ತಲೂ ನೋಡಿ ಸಕಲರೂ ಸೂರ್ಯ ಬಿಂಬವನ್ನು ಕಾಣದೆ ಕೋಟಿ ಸೂರ್ಯರಂತೆ ತೇಜೋರೂಪ ದಿಂದ ಮಲಗಿರುವ ಮಗುವನ್ನು ಕಂಡು ತಾಯಿ ತಂದೆಗಳು ಅತ್ಯಾ ನಂದಭರಿತರಾಗಿ ಶಿವಪಾದ ತೀರ್ಥದಲ್ಲಿ ಮಗುವನ್ನು ತೊಳೆದು ವಿಭೂ ತಿಯನ್ನು ಹಣೆಯಲ್ಲಿ ಹಚ್ಚಿ, ಬಸವನೆಂಬ ಹೆಸರಿಟ್ಟು ಗಣಾರಾಧನೆ ಯಿಂದ ಎಲ್ಲರನ್ನೂ ತೃಪ್ತಿಪಡಿಸಿದರು. ತನ್ನ ಹಿಂದೆ ಕತ್ತಲೆಯಿದ್ದರೂ ಅನ್ಯಾಕಾರವನ್ನು ತೋರ್ಪಡಿಸುತ್ತಿರುವ ದೀವಿಗೆಯನ್ನು ಹೀಯಾಳಿಸುವಂತೆ ಜ್ಞಾನತೇಜಃಪುಂಜನಾದ ಬಸವನು ಯಾವುದನ್ನು ನೋಡದೆಯೂ ಹಾಲನ್ನು ಕುಡಿಯದೆ ಶಿವಭಕ್ತಿ ಸುಧಾಮೃತವನ್ನು ತನ್ನ ವಶಮಾಡಿಕೊಂಡಿರುವಂತೆ ಕೈ ಬೆರಳುಗಳನ್ನು ಚೀಪುತ್ತ ಲಿಂಗಧ್ಯಾನ ನಿಷ್ಠೆಯಲ್ಲಿ ಮಗ್ನನಾದಂತೆಯೂ ಶಿವಧ್ಯಾನದಿಂದುಕ್ಕಿಬಂದ ಆನಂದಾಶ್ರುಗಳನ್ನು ಸುರಿಸುತ್ತಲೂ ಇದ್ದನು. ಬಗೆಬಗೆಯಾದ ಬಾಲಲೀಲೆಗಳನ್ನು ತೋರಿಸುತ್ತ ಪದ್ಮಾಸನವಿಧಿಯನ್ನು ಕಲಿಯುವಂತೆ ಕುಳಿತುಕೊಂಡಿರುತ್ತಲೂ, ಬಾಲಕನಾಗಿದ್ದರೂ ಆ ಬಸ ವೇಶನು ಲಿಂಗಾಚರಣೆಯನ್ನು ಮಾಡತೊಡಗಲು ಆತನಿಗೆ ಅತಿಶಯವಾಗಿ

ಸಕಲ ವಿದ್ಯೆಗಳು ಸುಲಭವಾಗಿ ವಶವಾದವು. ಸಕಲಶಾಸ್ತ್ರ ಪಾರಂಗತನಾದಾಗ ಆತನಿಗೆ ಎಂಟು ವರ್ಷಗಳು ಮಾತ್ರ ವಯಸ್ಸಾಗಿದ್ದಿತು ×

ಬಸವನ ಜನ್ಮಕಾಲವು ಶಾಲಿವಾಹನಶಕೆ ಸಿದ್ಧಾರ್ಥಿ ಸಂವತ್ಸರ ಅಂದರೆ ಕ್ರಿ. ಶ. ೧೧೩೯ ರಲ್ಲಿ ಸಂಭವಿಸಿತು. ಮಹಾತ್ಮರ ಜನನಗಳು ವಿಚಿತ್ರವಾಗಿವೆ. ಕ್ರೈಸ್ತನು ಹುಟ್ಟಿದಾಗ ಒಂದು ನಕ್ಷತ್ರವು ಉದಯವಾಗಿತ್ತೆಂತಲೂ ಆ ನಕ್ಷತ್ರವನ್ನು ಗುರುತಿಸಿಕೊಂಡು ಪೂರ್ವದೇಶದಿಂದ ಜ್ಞಾನಿಗಳು ಕ್ರೈಸ್ತನನ್ನು ನೋಡಲು ಬಂದರೆಂತಲೂ ಕ್ರೈಸ್ತನ ತಂದೆಯು ಕನಸಿನಲ್ಲಿ ದೇವದೂತನು ಬಂದು ಕೂಸಿಗೆ ಕ್ರೈಸ್ತನೆಂದು ಹೆಸರಿಡುವದಾಗಿ ಹೇಳಿದನೆಂಬನಾಗಿಯೂ ಆಗ ಏಸಿಯಾ ಮೈನರ ದೇಶದ ಜರೂಸಲೆಮ್ ಎಂಬ ಪಟ್ಟಣದಲ್ಲಿ ಆಳುತ್ತಿದ್ದ ಹೆರೊಡ ಎಂಬ ರಾಜನು ಕ್ರೈಸ್ತನು ಮಹಾಪುರುಷನಾಗುವನೆಂಬ ವಾರ್ತೆಯನ್ನು ಪೂರ್ವದೇಶದ ಪ್ರವಾಸಿಗಳಾದ ಜ್ಞಾನಿಗಳಿಂದ ತಿಳಿದುಕೊಂಡು ಅಸೂಯಾಪರನಾಗಿ ಕ್ರೈಸ್ತನು ಹುಟ್ಟಿದ ಸ್ಥಳವನ್ನು ತಿಳಿಯದವನಾಗಿ ಎರಡು ವರ್ಷಗಳೊಳಗಿನ ಕೂಸುಗಳನ್ನೆಲ್ಲ ಕೊಲ್ಲಿಸಿದನೆಂತಲೂ ಬೈಬಲ್ಲಿನಲ್ಲಿ ಹೇಳಿದೆ. (೨ನೇ ಅಧ್ಯಾಯ ಸೇಂಟಮ್ಯಾಥ್ಯೂ) ಕ್ರೈಸ್ತನ ಜನನ ಕಾಲಕ್ಕುಂಟಾದ ಈ ಕುರುಹುಗಳಿಗೂ ಬಸವನ ಜನನಕಾಲಕ್ಕುಂಟಾದ ಉಜ್ವಲವಾದ ಬೆಳಕಿಗೂ ಸಂಗಮನಾಥನು ಮಾದಾಂಬೆಯ ಕನಸಿನಲ್ಲಿ ಬಂದು ಕೂಸಿಗೆ ಬಸವನೆಂದು ಹೆಸರಿಡು ಎಂಬದಾಗಿ ಹೇಳಿದ ಸಂಗತಿಗೂ ಅತ್ಯಂತ ಸಮೀಪವಾದ ಹೋಲಿಕೆಯುಂಟು.

ಹೀಗೆ ಬಸವೇಶ್ವರನಿಗೆ ಎಂಟು ವರ್ಷಗಳಾದಾಗ ಆತನು ತನ್ನ ಆಟದ ಗೆಳೆಯರೊಂದಿಗೆ ಆಟವಾಡುತ್ತಿರುವಾಗ ಕೃಷ್ಣನೆಂಬ ಬಾಲಕನು ಬಾವಿಯಲ್ಲಿ ಮುಳುಗಿ ಮರಣ ಹೊಂದಿದನು. ಬಸವನೇ ಅವನನ್ನು ಬಾವಿಯಲ್ಲಿ ನೂಡಿದನೆಂದು ಉಳಿದ ಹುಡುಗರೆಲ್ಲರೂ ದೂರು ಹೇಳಿದರು. ಆಗ ಕೃಷ್ಣನ

---

× ಬಸವನು ಎಂಟು ವರ್ಷ ವಯಸ್ಕನಾಗಿ ಕಪ್ಪಡಿಗೆ ಹೋಗಿ ಜಾತವೇದ ಮುನಿಯಲ್ಲಿ ನಾನಾ ಶಾಸ್ತ್ರಗಳನ್ನು ತಲಿತನೆಂಬದು ಸುಳ್ಳು ಸಂಗತಿಯು. ಆತನಿಗೆ ಸ್ವಯಂಜ್ಞಾನೋದಯವಾಗಿತ್ತು. ಸಂಗಮೇಶ್ವರನಿಂದಲೇ ಆತನು ಸ್ಫೂರ್ತಿಯನ್ನು ಹೊಂದಿದನು. ಎಂಟು ವರ್ಷದ ಬಾಲಕನು ಹೇಳಿಸಿಕೊಂಡು ತತ್ವಜ್ಞಾನವನ್ನು ಕಲಿಯುವದಾದರೂ ಎಷ್ಟು ಸಾಧ್ಯವು.?

ತಾಯಿ ತಂದೆಗಳು ಕೋಪಾವೇಶದಿಂದ ಬಸವನ ಮೇಲೆ ಹರಿಹಾಯ್ದರು. ಬಸವನು ತಾನು ಅಪರಾಧಿಯಲ್ಲವೆಂದು ಬಗೆ ಬಗೆಯಾಗಿ ಹೇಳಿದರೂ ಅವರು ಕೇಳದಾದರು. ಆಗ ಬಸವನು ಗತ್ಯಂತರವನ್ನು ಕಾಣದೆ ಸಂಗಮೇಶ್ವರನನ್ನು ನೆನೆಯಲಾಗಿ ಸಂಗಮನಾಥನು ಪ್ರತ್ಯಕ್ಷನಾಗಿ ಬಸವನು ನಿರಪರಾಧಿಯೆಂಬುದಾಗಿ ಸಾಕ್ಷಿಯಾದನು. ಆಗ ನೆರೆದ ಜನರೆಲ್ಲರೂ ಬಸವನ ಅಗಾಧವಾದ ಭಕ್ತಿಗೆ ಮೆಚ್ಚಿದರು. ಆ ಮೇಲೆ ಬಸವನು ಆ ಜನರನ್ನು ಬಾವಿಗೆ ಕರೆದೊಯ್ದು "ಕಷ್ಣಾ ಎದ್ದು ಬಾ" ಎಂದು ಕರೆಯಲಾಗಿ ಆ ಬಾಲಕನು ಮೈತೊಳೆಕೊಂಡು ಎದ್ದು ಬಂದವನಂತೆ ಎಲ್ಲರೆದುರಿಗೆ ಎದ್ದು ಬಂದನು. ಆಗ ಇದನ್ನು ನೋಡಿದ ಜನಸಮೂಹವೆಲ್ಲವೂ ಬಸವನು ಮನುಷ್ಯ ಮಾತ್ರನಾಗಿರದೆ ದೇವತಾಪುರುಷನೆಂಬದಾಗಿ ಮನಗಂಡು ಆತನನ್ನು ನಾನಾಬಗೆಯಾಗಿ ಸ್ತುತಿಸಿದರು. ಶ್ರೀಕೃಷ್ಣನು ತನ್ನ ಬಾಲಲೀಲೆಯಲ್ಲಿ ರಾಕ್ಷಸ ವಧೆಯನ್ನು ಮಾಡಿದಂತೆ ಬಸವನು ಜೀವವನ್ನು ಬದುಕಿಸಿದ್ದು ಅವನ ಬಾಲಲೀಲೆಯಲ್ಲಿ ಅಗಾಧವಾದ ಸಂಗತಿಯೊಂದಾಗಿದೆ. ಮಹಾತ್ಮರು ಮಾಡಿದ ಪವಾಡಗಳ ದೃಷ್ಟಾಂತಗಳು ಎಲ್ಲ ಧರ್ಮಗಳಲ್ಲಿಯೂ ಕಂಡು ಬರುವವು. ಕಾಂಚೀನಗರಕ್ಕೆ ಅರಸನಾಗಿದ್ದ ಪ್ರಜಾಂಕ ಚೋಳನ ಮಗಳು ಬ್ರಹ್ಮರಾಕ್ಷಸದಿಂದ ಪೀಡಿತಳಾಗಿರಲು ಶ್ರೀರಾಮಾನುಜಾಚಾರ್ಯರು ಅದನ್ನು ತೊಲಗಿಸಿದರೆಂದು ಅವರ ಚರಿತ್ರೆಯಲ್ಲಿ ಹೇಳಿವೆ. ಶ್ರೀಶಂಕರಾಚಾರ್ಯರು ಓರ್ವ ಸ್ತ್ರೀಯೊಡನೆ× ಕಾಮಶಾಸ್ತ್ರದ ತರ್ಕವನ್ನು ಮಾಡುವ ಪ್ರಸಂಗ ಬಂದಾಗ ತಮ್ಮ ದೇಹವನ್ನು ತೊಲಗಿ ಸತ್ತುಹೋದ ಒಬ್ಬ ರಾಜನ ದೇಹಪ್ರವೇಶಮಾಡಿದರೆಂದು ಹೇಳಿವೆ. ಕ್ರೈಸ್ತನು ಒಂದು ರೊಟ್ಟಿಯನ್ನು ೫೦೦೦ ಜನರಲ್ಲಿ ಹಂಚಿ ಅವರನ್ನು ತೃಪ್ತಿಪಡಿಸಿದನೆಂತಲೂ ಸತ್ತವರನ್ನು ಬದುಕಿಸಿದನೆಂತಲೂ, ಅನೇಕ ವಿಧವಾದ ಬೇನೆಯವರನ್ನು ಗುಣಪಡಿಸಿದನೆಂತಲೂ ಬೈಬಲಿನಲ್ಲಿ ಅನೇಕ ಉದಾಹರಣೆಗಳಿವೆ.

ಬಸವನು ಎಂಟು ವರ್ಷದವನಿರುವಾಗಲೇ ಅತನ ಹೃದಯವು ಲಿಂಗದಮೇಲೂ ಚಿತ್ತವು ಸದಾಚಾರದ ಮೇಲೂ ಧ್ಯಾನವು ಪರಶಿವನೋರ್ವನಮೇಲೆಯೂ ಸ್ಥಿರಗೊಂಡಿದ್ದವು. ಇದಾಗಲೇ ಅವನ ತಲೆಯಲ್ಲಿ ಗಹನವಾದ ತಾತ್ವಿಕ ವಿಚಾರಗಳು ತುಂಬಿ ಅವನು ಯಾವಾಗಲೂ

× ಮಂಡನ ಮಿಶ್ರರ ಪಂಡಿತೆಯಾದ ಭಾರತಿಯೊಡನೆ ವಾದ ಮಾಡುವಾಗ

ವಿಚಾರದಲ್ಲಿಯೇ ಮಗ್ನನಾಗಿದ್ದನು. ಜಗತ್ತಿನಲ್ಲಿರುವ ದುಃಖ, ಹಿಂಸೆ, ಅನ್ಯಾಯ, ಅಸತ್ಯ ಮೊದಲಾದವುಗಳು ಅವನ ಮೃದುವಾದ ಮನಸ್ಸಿನಲ್ಲಿ ಮುಳ್ಳಿನಂತೆ ಚುಚ್ಚುತ್ತಿದ್ದವು. ಸೃಷ್ಟಿಯ ಉದ್ದೇಶವೇನಿರಬಹುದು? ಅದರ ಆದಿಯೆಂತು? ಅದರ ಅಂತ್ಯವು ಹೇಗೆ? ಇವೇ ಮೊದಲಾದ ಪ್ರಶ್ನೆಗಳು ಅವನ ಮಿದುಳನ್ನು ಕದಲಿದವು. ಇಂಥ ವಿಚಾರಗಳನ್ನು ಮುಂದಿಟ್ಟುಕೊಂಡು ಮುಗ್ಗರಿಸುತ್ತಿರುವಾಗ ಅವನು ಒಮ್ಮೊಂದೊಮ್ಮೆ ಯೋಗನಿದ್ರೆಯಲ್ಲಿ ಬೆರೆಯುತ್ತಿದ್ದನು. ಆಳವಾದ ಮಹಾಸಾಗರದ ತಳಕ್ಕೆ ಮುಳುಗಿ ಮುತ್ತುಗಳನ್ನು ಹೇಗೆ ತೆಗೆಯುವರೋ ಅದರಂತೆ ಬಸವನು ಯೋಗನಿದ್ರಾಪರವಶನಾದಾಗ ಬಿಕ್ಕಟ್ಟಾದ ಪ್ರಶ್ನೆಗಳಿಗೆ ತಾತ್ವಿಕ ರತ್ನಗಳೆಂಬ ಉತ್ತರಗಳನ್ನು ದೊರಕಿಸುತ್ತಿದ್ದನು. ಕಾರ್ಗತ್ತಲೆಯ ಮೋಡದಲ್ಲಿ ನಿಮಿಷಮಾತ್ರ ಮಿನುಗಿದ ಮಿಂಚು ಲೋಕವನ್ನೆಲ್ಲ ಪ್ರಕಾಶಗೊಳಿಸುವಂತೆ ಬಸವನ ಜ್ಞಾನಯೋಗದಲ್ಲುಂಟಾದ ಜ್ಞಾನೋದಯವು ಆತನ ಜ್ಞಾನಸರೋವರವನ್ನೆಲ್ಲ ಉಜ್ವಲಗೊಳಿಸುತ್ತಿತ್ತು.

ಬಸವನ ಮನೋಸ್ಥಿತಿಯು ಈ ಪ್ರಕಾರವಾಗಿರಲು ಆತನ ಜೀವಿತ ಚರಿತ್ರೆಯ ಕಾಲಚಕ್ರವು ಒಮ್ಮೆಲೇ ಮತ್ತೊಂದು ದಿಕ್ಕಿಗೆ ತಿರುಗುವಂಥ ಪ್ರಸಂಗವೊಂದು ಸಂಭವಿಸಿತು. ಬ್ರಾಹ್ಮಣಿಕವರ್ಣನಿಯಮದಂತೆ ಎಂಟು ವರ್ಷದವನಾದ ಬಸವನಿಗೆ ಉಪನಯನವನ್ನು ಮಾಡಲೆಳಸಿ ಆತನ ತಂದೆಯು ಸುಲಗ್ನವನ್ನು ಗೊತ್ತುಮಾಡಿ ಸಕಲ ಸಾಮಗ್ರಿಗಳನ್ನು ಸರಿಪಡಿಸಿಕೊಂಡು, ಬಸವನನ್ನು ಕುರಿತು "ಮಗನೇ ಇಂದಿಗೆ ನಾಲ್ಕನೆಯ ದಿನದ ಸುಮುಹೂರ್ತದಲ್ಲಿ ನಿನಗೆ ಮುಂಜಿಯಾಗಬೇಕು. ಇದು ಶ್ರೇಷ್ಠತರವಾದ ಬ್ರಾಹ್ಮಣ ಕರ್ಮವು." ಎಂದನು. ಇದನ್ನು ಕೇಳಿ ಶಿವಭಕ್ತಿಸಂಪನ್ನನಾದ ಬಸವೇಶ್ವರನು ತಂದೆಯನ್ನು ಕುರಿತು, ಜನಕಾ! ಇದೇನು ಬೋಧಾಹೀನರಾದ ಅಜ್ಞಾನಿಗಳಂತೆ ನೀನು ಮಾತಾಡುತ್ತಿರುವಿಯಲ್ಲ. ನನ್ನ ಜನನಕಾಲದಲ್ಲಿಯೇ ಸದ್ಗುರುವಾದ ಕಪ್ಪಡಿಯ ಸಂಗಮನಾಥನು ನನಗೆ ಸದುಪದೇಶ ಮಾಡಿರುವಲ್ಲಿ ಉಪನಯನದಿಂದ ಫಲವೇನು? ಶಿವ ಶಿವಾ! ಶಿವಭಕ್ತಿ ಪರಾಯಣತೆಯೇ ಲೋಕದಲ್ಲಿ ಮುಖ್ಯವಾದುದರಿಂದ ಶಿವಶರಣರ ಮತ್ತು ಅವರೊಡೆಯನಾದ ಶ್ರೀಕಂಠನ ಪಾದಸೇವೆಯನ್ನು ಬಿಟ್ಟು ಉಳಿದ ಪಾಮರರ ಕಾಲ್ಗೆರಗುವ ಮಾನವರಿಗೆ ಮುಕ್ತಿಯುಂಟೆ? ಶಿವಭಕ್ತನಾದವನು ಅಗ್ನಿಹೋತ್ರದಲ್ಲಿ ಕುಳಿತು ಆವುತಿಯನ್ನು ಹೇಳಬ

ಹುದೇ? ಈ ತೆರದ ನಿನ್ನ ಮಾತುಗಳು ನನಗೆ ರುಚಿಸುವದಿಲ್ಲ. ಶಂಕರ ನನ್ನು ಧ್ಯಾನಿಸು, ಶಿವಶರಣರನ್ನು ಮನ್ನಿಸು, ಶಿವದೀಕ್ಷೆಯನ್ನು ವಹಿಸು. ಪಾಪನಾಶಕವಾದ ಷಡಕ್ಷರ ಮಂತ್ರವನ್ನು ಬಿಟ್ಟು ಉಳಿದ ಮಂತ್ರಗ ಳನ್ನು ಜಪಿಸಬಹುದೆ? ವಿಭೂತಿ, ರುದ್ರಾಕ್ಷಿ, ಶಿವಮುದ್ರೆಗಳನ್ನು ಧರಿಸಿದ ಬಳಿಕ ಚರ್ಮದುರ್ಮುದ್ರೆಗಳನ್ನು ತಾಳಬಹುದೇ? ಶಿವಧರ್ಮಗಳ ಮರ್ಮ ವನ್ನರಿದು ಮಹಿತರಾಗಿರುವರು, ಸಂಸಾರ ಪಾಶವನ್ನು ಕಳೆದು ಸುಖ ಸಮುದ್ರದಲ್ಲಿ ಮುಳುಗಿರುವರು. ಅಂಥವರನ್ನು ಸಂಸಾರಸಾಗರದಲ್ಲಿ ಮುಳು ಗಿಸಬಹುದೆ? ಜನಕಾ ಇದು ನಿನಗೆ ಧರ್ಮವಲ್ಲ. ಕೋಪದಿಂದ ಬ್ರಹ್ಮನ ಶಿರವನ್ನು ಕಡಿದ ಪರಶಿವನ ವಂಶದಲ್ಲಿ ಹುಟ್ಟಿದವನನ್ನು ಬ್ರಹ್ಮವಂಶಜ ನೆಂದು ತಿಳಿಯಬೇಡ. ಜಾತಿ ಕುಲ ಗೋತ್ರಗಳನ್ನು ತೊರೆದು ಏಕರೂಪ ದಿಂದಿರುವವನಿಗೆ ನೀನು ಹೇಗೆ ವಂಶಾಚಾರ ಪದ್ಧತಿಗಳನ್ನುಳ್ಳ ಕರ್ಮ ವನ್ನು ಮಾಡಿಸುವೆ? ನನಗೆ ಮುಂಜಿಯನ್ನು ಮಾಡುವದು ನಿನಗೆ ಪಾಪ ಕರವಾದುದೆಂದನು.

ಈ ವಿಧವಾದ ಮಗನ ಮಾತನ್ನು ಕೇಳಿ ಮಾದರಸನು. ಎಲೈ, ವಿವೇಕನಿಧಿಯಾದ ಮಗುವೇ! ಈಗ ನಾನು ಮಾಡುವ ಉಪನಯನ ವಿಧಿಯು ಶಿವಚಿನ್ಹೆಯಾಗಿರುವದು. ಹೇಗೆಂದರೆ ಬ್ರಹ್ಮಕಪಾಲವೇ ಭಿಕ್ಷಾ ಪಾತ್ರೆ ಸರ್ಪದೇಹವೇ ಜನಿವಾರ, ವಿಷ್ಣುವಿನ ಕಂಕಾಳವೇ ಪಾಲಾಶದಂಡ, ಹಣೆಯಲ್ಲಿಡುವ ಮುಂಡ್ರುಂಗಳೇ ಭಸ್ಮವು. ಚಂಡಿಕೆಗಳೈದೂ ಶಿವನ ಕೆಂಜಡೆಗಳು, ಕೊರಳಲ್ಲಿರುವ ಕೃಷ್ಣಾಜನವೇ ಗಜಚರ್ಮವು, ಶ್ರೀ ಕಂಠಬೀಕ್ಷಾಟನವೇ ಬ್ರಹ್ಮಚರ್ಯವಾಗಿರುವ ಈ ದ್ವಿಜನ್ಮಕರ್ಮದಲ್ಲಿ ದೋಷವೇನುಂಟು? ಉತ್ತಮ ಕುಲದಲ್ಲಿ ಹುಟ್ಟಿದ ಶ್ರೇಷ್ಠವರ್ಣದ ಮಕ್ಕಳು ತಂದೆ ತಾಯಿಗಳಿಗೆ ವಿಧೇಯರಾಗಿರಬೇಕು. ಅಯ್ಯೋ ನೀನು ನನ್ನ ವಂಶವೆಂಬ ನಂದನ ವನಕ್ಕೆ ಕೊಡಲಿಯಂತಾದೆಯಾ! ಯುಕ್ತಿ ಯಿಂದ ತಿಳಿಹೇಳಿದ ನಮ್ಮ ರೀತಿಯನ್ನರಿದು ನಡೆದುಕೋ ಎಂದು ಕೋಪದಿಂದ ಮಗನನ್ನು ಗದ್ದರಿಸಿದನು. ಅದಕ್ಕೆ ಬಸವನು ಮಾದರಸ ನನ್ನು ಕುರಿತು, ನೀನು ಹೇಳುವ ಈ ಬ್ರಾಹ್ಮಣ್ಯ ಕರ್ಮವೂ ಶಿವಭಕ್ತಿ ಸದಾಚಾರವೂ ಬೇರೆ ಬೇರೆ ಆಚಾರ ಪದ್ಧತಿಗಳುಳ್ಳುದರಿಂದ ಒಂದಾಗಿ ಬೆರಸಿ ಹೇಳಬೇಡ. ಅಗ್ನಿಯೇ ಮುಖ, ಬ್ರಹ್ಮಪಿತನಾದ ಶ್ರೀಹರಿಯು ಹೃದಯು, ಪ್ರಾಣವಾಯುಗಳೈದು ಪಂಚಪ್ರಾಣಗಳು, ಭೂಮಿಯೇಯೋನಿ,

ಗಾಯಿತ್ರಿಮಂತ್ರಕ್ಕೆ ೨೪ ಅಕ್ಷರಗಳು, ೩ ಪಾದಗಳು, ೬ ಕುಕ್ಷಿಗಳು, ೬ ತತಿಗಳೆಂಬುದು ಶಾಸ್ತ್ರಸಿದ್ಧವಲ್ಲವೇ? ಇಂಥ ಮಂತ್ರದಿಂದ ಮೋಕ್ಷ ವುಂಟಾಗಬಹುದೆ? ಪಾಪರಾಶಿಗಳನ್ನು ಕ್ಷಣಮಾತ್ರದಲ್ಲಿ ನೀಗುವ ಪರ ಶಿವನ ಪ್ರಾಣರೂಪದಿಂದಿರುವ ಷಡಕ್ಷರೀ ಮಂತ್ರಕ್ಕೆ ನಾಯಕನಾದ ಮೃತ್ಯುಂಜಯನೇ ಸರ್ವಲೋಕಗಳಿಗೂ ಸದ್ಗುರುವಾಗಿರುವನು. ಆದ್ದರಿಂದ ಸಕಲ ಮಂತ್ರಗಳಿಗೂ ಈ ಷಡಕ್ಷರ ಮಂತ್ರವೇ ರಾಜಹಂಸ ಮಂತ್ರ ವೆಂದು ಖ್ಯಾತವಾದುದು. ಶರೀರವೆಂಬ ಅಂಗಕ್ಕೆ ದೀಕ್ಷಾಸಂಸ್ಕಾರವನ್ನು ಮಾಡಿ ಪಂಚಸೂತ್ರ ಘಟಿತವಾದ ಲಿಂಗದಲ್ಲಿ ೧೧ ತತ್ವಗಳನ್ನು ಸಂಯೋ ಜಿಸಿ ಆ ಲಿಂಗವನ್ನು ಅಂಗದಲ್ಲಿ ಧರಿಸಿ ೩೬ ತತ್ವಗಳುಳ್ಳ ಲಿಂಗಾಂಗಿ ಯಾಗಿ, ಶಿವಭಕ್ತಿ, ಅಷ್ಟಾವರಣ ಪಂಚಾಚಾರ, ಷಟ್ಸ್ಥಲ, ಲಿಂಗಾಂಗ ಸಾಮರಸ್ಯಗಳೆಂಬ ಅಪ್ರಾಕೃತ ಧರ್ಮಗಳನ್ನನುಸರಿಸಿ ಭಕ್ತಿ, ಜ್ಞಾನ, ವೈರಾಗ್ಯಗಳಿಂದ ತ್ಯಾಗಾಂಗ, ಯೋಗಾಂಗ, ಭೋಗಾಂಗಗಳಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳನ್ನು ಪೂಜಿಸಿ ಇಹದಲ್ಲಿ ಲಿಂಗಾಂಗ ಸಾಮರ ಸ್ಯದ ಭೋಗವನ್ನೂ, ಪರದಲ್ಲಿ ಲವಣೋದಕ ಸಂಯೋಗದಂತಿರುವ ಸಕಲ ನಿಷ್ಕಲ ಸಾಯುಜ್ಯವನ್ನೂ ಹೊಂದುವ ಅಪ್ರಾಕೃತ ಸಿದ್ಧಾಂತ ಮಾರ್ಗವನ್ನನುಸರಿಸಿ ನಡೆಯುವವನಿಗೆ ಈ ಪ್ರಾಕೃತ ಮಾರ್ಗವು ಓಕ ರಿಕೆಯಾಗುವದಿಲ್ಲವೇ? ನೀನು ನನಗೆ ತಂದೆಯೂ ಅಲ್ಲ, ನಾನು ನಿನಗೆ ಮಗನೂ ಅಲ್ಲ. ಇಲ್ಲದ ಸಂಬಂಧವನ್ನು ಕಟ್ಟಿಕೊಂಡು ಅಳಬೇಡ, ನನಗೆ ಲೋಕನಾಯಕನಾದ ಮೃತ್ಯುಂಜಯನೇ ತಂದೆ, ಶಿವಭಕ್ತಿಯೇ ತಾಯಿ, ಶಿವಶರಣರೇ ಬಂಧುಗಳು. ನಾನು ನಿನ್ನ ಬಳಿಯಲ್ಲಿ ಕ್ಷಣಮಾತ್ರವೂ ಇರಲಾರೆನು, ಎಂದು ಧಿಃಕರಿಸಿ ಅಲ್ಲಿಂದ ಮುಂದೆ ತನ್ನ ಗುರುವಾದ ಸಂಗಮೇಶ್ವರನನ್ನು ಮನದಲ್ಲಿ ಧ್ಯಾನಿಸಿಕೊಂಡು ತನ್ನ ಅಕ್ಕನಾದ ನಾಗಾಂಬೆ ಯನ್ನು ಸಂಗಡ ಕರೆದುಕೊಂಡು ಕಪ್ಪಡಿಗೆ ಹೊರಟನು. ಆಗ ಮುಂಜೆಗೆ ನೆರೆದಿದ್ದ ಬ್ರಾಹ್ಮಣರೆಲ್ಲರೂ ಮೋರೆಯೊಣಗಿಸಿಕೊಂಡು ಮನೆಗೆ ಹೋದರು.

ಕಪ್ಪಡಿಯ ದೇವಾಲಯವು ವಿಜಾಪುರ ಜಿಲ್ಲೆಯಲ್ಲಿದ್ದು ಹುನ ಗುಂದಕ್ಕೆ ಮೂರು ಹರದಾರಿಯುಂಟು. ಇಲ್ಲಿ ಕೃಷ್ಣಾ ಮಲಾಪಹಾರಿ ನದಿಗಳ ಸಂಗಮವುಂಟಾಗಿದೆ. ಈ ಸಂಗಮಸ್ಥಾನದಲ್ಲಿಯೇ ಸಂಗಮೇ ಶ್ವರನ ಭವ್ಯವಾದ ಜಕ್ಕಣಾಚಾರ್ಯರಿಂದ ಕಟ್ಟಲ್ಪಟ್ಟ ದೇವಾಲಯವಿದೆ. ಇದು ಪ್ರಸಿದ್ಧವಾದ ಯಾತ್ರಾಸ್ಥಾನವು. ಇದರಲ್ಲಿಯೂ ಬಸವನು ವಾಸ

ನಾಗಿದ್ದ ಸ್ಥಳವು. ಬಸವನು ಎಂಟು ವರ್ಷದಲ್ಲಿ ಅನುಸರಿಸಿದ ಈ ಮಾರ್ಗವನ್ನು ನೋಡಿದರೆ ಆರ್ಯ ಸಮಾಜದ ಸಂಸ್ಥಾಪಕನಾದ ದಯಾನಂದ ಸರಸ್ವತಿಯು ತನ್ನ ಹದಿನಾಲ್ಕನೇ ವಯಸ್ಸಿನಲ್ಲಿ ಅನುಸರಿಸಿದ ವೃತ್ತಿಯು ನೆನಪಾಗುವದು. ದಯಾನಂದನಾದರೂ ಬಸವನಂತೆಯೇ ಮಹಾಮೇಧಾವಿಯು, ಆತನಂತೆಯೇ ಹೊಸ ವಿಚಾರದ ಕರ್ತೃತ್ವಶಾಲಿಯು. ದಯಾನಂದನಲ್ಲಿ ಬದಲಾವಣೆ ಮುಂತಾದದ್ದು ಹೇಗೆಂದರೆ. ದಯಾನಂದನ ತಂದೆಯು ಬಸವನ ತಂದೆಯಂತೆಯೇ ಶೈವಬ್ರಾಹ್ಮಣನು. ಮಹಾಶಿವರಾತ್ರಿಯು ಬರಲಾಗಿ ತಂದೆ ಮಕ್ಕಳು ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕಾಯಿತು. ಜಾಗರಣೆಯು ಶಿವಾಲಯದಲ್ಲಿ ಮಾಡುವದಾಗಿತ್ತು. ಲಿಂಗವು ಪತ್ರೆಪುಷ್ಪಗಳಿಂದ ಪೂಜೆ ಮಾಡಲ್ಪಟ್ಟಿತ್ತು. ಅನೇಕ ಪಕ್ವಾನ್ನದ ಎಡೆಗಳು ದೇವರ ಎದುರಿನಲ್ಲಿದ್ದವು. ಮಧ್ಯರಾತ್ರಿಯಾಗುತ್ತ ಬಂದಬರಿಂದ ದಯಾನಂದನ ತಂದೆಯು ನಿದ್ರೆಯಿಂದ ತೂಕಡಿಸಹತ್ತಿದನು. ದಯಾನಂದನಾದರೋ ಅತ್ಯಂತ ಜಾಗ್ರತೆಯಿಂದಿದ್ದನು. ಹೀಗಿರುವಾಗ ಆ ದೇವಾಲಯದಲ್ಲಿ ಮೂಲೆಗಳಿಂದ ಇಲಿಗಳು ಬಂದು ಆ ಶಿವಲಿಂಗದ ಮೇಲೂ, ಎಡೆಗಳ ಮೇಲೂ ನಿರ್ಭಯವಾಗಿ ಓಡಾಡಿದವು. ಇದನ್ನು ನೋಡಿ ದಯಾನಂದನು ಮನಸ್ಸಿನಲ್ಲಿ ಅಂದದ್ದೇನಂದರೆ, ಲಿಂಗಕ್ಕೆ ಇಲಿಗಳೂ ಭಯಪಡದ ಮೇಲೆ ಅದು ಹೇಗೆ ದೇವರಾಗುವದು? ಕಲ್ಲಿನ ಪ್ರತಿಮೆಯು ದೇವರಾಗದು. ಹೀಗೆಂದು ತನ್ನ ತಂದೆಯನ್ನು ಎಬ್ಬಿಸಿ ಮೂರ್ತಿಪೂಜೆಯ ಆಧಾರವನ್ನು ತನಗೆ ವಿವರಿಸಿ ಹೇಳೆಂದನು. ಆಗ ತಂದೆಯು ಮೂರ್ತಿಯು ದೀಕ್ಷೆ ಮಾಡಿದ ಮೇಲೆ ದೇವಸ್ವರೂಪವನ್ನು ಹೊಂದುವದೆಂತಲೂ, ಆಮೇಲೆ ಅದು ಪೂಜೆಗೆ ಯೋಗ್ಯವಾಗುವದೆಂತಲೂ ಹೇಳಿದನು. ದಯಾನಂದನು ಈ ಉತ್ತರದಿಂದ ತೃಪ್ತನಾಗಲಿಲ್ಲ. ಇದಾದ ಸ್ವಲ್ಪ ದಿನಗಳಲ್ಲಿಯೇ ಅವನ ಪ್ರೀತಿಯ ತಂಗಿಯೊಬ್ಬಳು ತೀರಿ ಹೋದಳು. ಈ ಮೊದಲೇ ಕದಡಿ ಹೋದ ಅವನ ಚಿತ್ತವು ಸತ್ಯವನ್ನು ಶೋಧಿಸಬೇಕೆಂಬ ಕುತೂಹಲವುಳ್ಳದ್ದಾಯಿತು. ಆತನು ಸಮಯವನ್ನು ಸಾಧಿಸಿ ಮನೆಯನ್ನು ಬಿಟ್ಟು ತಪ್ಪಿಸಿಕೊಂಡು ಅನೇಕ ಮೈಲುಗಳ ವರೆಗೆ ಓಡುತ್ತ ಹೋಗಿ ಒಂದು ದೇವಾಲಯದ ಹತ್ತರವಿದ್ದ ದೊಡ್ಡ ಅರಳಿಯ ಮರವನ್ನೇರಿ ಬೆನ್ನಟ್ಟಿ ಬಂದವರಿಗೆ ತಾನು ಸಿಕ್ಕಬಾರದೆಂದು ರಾತ್ರಿಯನ್ನೆಲ್ಲ ಗಿಡದಲ್ಲಿಯೇ ಕಳೆದನು. ಮರುದಿವಸ ಕೆಲವು ದಾರಿಯನ್ನು ನಡೆದು

ಲಾಲಾಭಗತರಾಮನೆಂಬ ಸನ್ಯಾಸಿಯನ್ನು ಕಂಡು ಅವನಲ್ಲಿ ಬ್ರಹ್ಮಚಾರಿಯಾಗಿ ನಿಂತನು.

ದಯಾನಂದರ ದೃಷ್ಟಾಂತವನ್ನು ಕೊಟ್ಟ ಉದ್ದೇಶವೇನೆಂದರೆ ಮಹಾಪುರುಷರು ತಮ್ಮ ವಿವೇಕಕ್ಕನುಗುಣವಾಗಿ ನಿರ್ಭೀತರಾಗಿ ನಡೆಯುವರಲ್ಲದೆ ಲೋಕಾಪವಾದಕ್ಕೆ ಅಂಜರು. ಜನಸಾಮಾನ್ಯರು ತುಳಿದ ದಾರಿಯನ್ನು ತುಳಿಯರು. ಅವರು ಉಳಿದವರಿಗೆ ಹೊಸ ದಾರಿಯನ್ನೇ ಹಾಕಿಕೊಡುವರು. ಬಸವ ದಯಾನಂದರು ಸತ್ಯಕ್ಕಾಗಿ ಮನೆಮಾರುಗಳನ್ನು ಸಹ ತೊರೆಯಬೇಕಾಯಿತು. ಈ ಸಾಮ್ಯವನ್ನು ತೋರಿಸುವದಕ್ಕಾಗಿಯೇ ದಯಾನಂದರ ದೃಷ್ಟಾಂತವನ್ನು ಇಲ್ಲಿ ಕೊಡಬೇಕಾಯಿತು. ಹೀಗೆ ಮನೆಯನ್ನು ಬಿಟ್ಟು ಹೊರಟ ಬಸವನು ಅಕ್ಕನೊಡನೆ ಕಪ್ಪಡಿಗೆ ಬಂದು ತಲುಪಿದನು. ಬಸವನು ಮಹಿಮಾವಂತನೆಂಬದು ಸುತ್ತುಕಡೆಗಳಲ್ಲಿಯೂ ಹಬ್ಬಿತು. ಆತನಿಗೆ ಭೂತಭವಿಷತ್ಕಾಲಗಳ ಜ್ಞಾನವಿತ್ತು. ತನ್ನ ಹಿಂದಿನ ಜನ್ಮಗಳನ್ನು ಕುರಿತು ತಾನು ಪ್ರಥಮಭವಾಂತರದಲ್ಲಿ ತಿಲಾದನೆಂಬ ಗಣೇಶ್ವರನಾಗಿಯೂ, ೨ನೆಯ ಭವಾಂತರದಲ್ಲಿ ಸ್ಕಂದನೆಂಬ ಹೆಸರಿನಿಂದಲೂ, ೩ನೆಯ ಭವಾಂತರದಲ್ಲಿ ನೀಲಲೋಹಿತನೆಂಬವಾಗಿಯೂ, ೪ನೆಯದರಲ್ಲಿ ಮನೋಹರನೆಂಬ ಹೆಸರಿನಿಂದಲೂ, ೫ನೆಯದರಲ್ಲಿ ಕಾಲಲೋಚನೆಂಬನಾಗಿಯೂ, ೬ನೆಯದರಲ್ಲಿ ವೃಷಭನೆಂಬನಾಗಿಯೂ, ೭ನೆಯ ಭವಾಂತರದಲ್ಲಿ ಬಸವನೆಂಬ ಗಣೇಶ್ವರನಾಗಿಯೂ, ಬಂದಿರುವೆನೆಂದು ತನ್ನ ವಚನದಲ್ಲಿ ಹೇಳಿದ್ದಾನೆ. ಒಂದು ದಿನ ಬಸವನು ಲಿಂಗಾರ್ಚನೆಯನ್ನೂ ಜಂಗಮ ಪೂಜೆಯನ್ನೂ ಮಾಡುತ್ತಿರುವಾಗ ಕೆಲವು ಜನ ಭವಿಗಳಾದ ಕಳ್ಳರು ಬಸವನ ಮನೆಯಲ್ಲಿ ಕಳವು ಮಾಡಬೇಕೆಂದೆಣಿಸಿ ಶಿವಭಕ್ತರಲ್ಲದವರಿಗೆ ಆತನ ಮನೆಯಲ್ಲಿ ಪ್ರವೇಶವು ದೊರಕದೆಂಬದಾಗಿ ಬಗೆದು ಮೈಗೆಲ್ಲ ವಿಭೂತಿಯನ್ನು ಬಳಿದುಕೊಂಡು ಕೊರಲಿಗೆ ರುದ್ರಾಕ್ಷ ಮಾಲೆಯನ್ನಿಕ್ಕಿ ವಸ್ತ್ರದ ಸೆರಗಿನಲ್ಲಿ ಕರಿಯ ಬದನೇಕಾಯಿಯನ್ನು ಲಿಂಗವಾಗಿ ಕಟ್ಟಿಕೊಂಡು ಆತನ ಮನೆಯ ಹೊಕ್ಕು ಭಕ್ತಿಯಿಂದ ನಮಸ್ಕರಿಸಿದರು. ಭವಿಷ್ಯ ಜ್ಞಾನಿಯಾದ ಬಸವನು ಅವರು ಭವಿಗಳಾದ ಕಳ್ಳರೆಂದು ಯೋಚಿಸಿ ಅವರನ್ನು ಸನ್ಮಾರ್ಗಕ್ಕೆ ತರಲೆಳಸಿ ಅವರನ್ನು ಶಿವಪೂಜೆ ಮಾಡೆಂದು ಹೇಳಿದನು. ಆಗ ಕಳ್ಳರು ಎದೆಯೊ

ಡೆದುಕೊಂಡು ನಮ್ಮ ಗತಿ ಏನಾಗುವದೋ ಎಂದು ಭಯಗೊಂಡರು. ಲಿಂಗಪೂಜೆ ಮಾಡೋಣವೆಂದರೆ ಲಿಂಗಗಳು ನಮಗೆ ಆಳವಟ್ಟಿಲ್ಲ. ಏನಾದರೂ ಆಗಲಿ ಎಂದು ವಸ್ತ್ರಗಳನ್ನು ಬಿಚ್ಚಿ ನೋಡಲು ಅವು ಬಸವೇಶ್ವರನ ಕರುಣಾಕಟಾಕ್ಷದಿಂದ ಲಿಂಗಗಳೇ ಆಗಿ ಶೋಭಿಸಿದವು. ಅಂದಿನಿಂದ ಅವರು ತಮ್ಮ ಕಳವಿನ ವೃತ್ತಿಯನ್ನು ಬಿಟ್ಟು ನಿಜವಾದ ಶರಣರೇ ಆದರು.

ಬಸವೇಶ್ವರನು ಕಪ್ಪಡಿಯಲ್ಲಿ ೨೧ ವರ್ಷ ವಯಸ್ಸಿನವನಾಗುವವರೆಗೆ ಅಂದರೆ ೧೩ ವರ್ಷಗಳವರೆಗಿದ್ದನು. ಈ ಅವಧಿಯನ್ನು ಆತನು ಸೋಮಾರಿತನದಲ್ಲಿ ಕಳೆಯಲಿಲ್ಲ. ಆತನು ಷಟಸ್ಥಳವಚನ, ಮಂತ್ರಗೋಪ್ಯ, ಕಾಲಜ್ಞಾನವಚನ ಮೊದಲಾದ ಗ್ರಂಥಗಳನ್ನು ಇದೇ ಅವಧಿಯಲ್ಲಿ ಬರೆದಿರಬೇಕು. ಈತನ ವಚನಗಳು ರಮ್ಯವಾದ ನೀತಿಯ ನುಡಿಗಳಿಂದಲೂ, ಗಹನವಾದ ತತ್ವಗಳಿಂದಲೂ ತುಂಬಿ ತುಳುಕುತ್ತಿದ್ದವು. ಈತನು ಕಪ್ಪಡಿಯಲ್ಲಿದ್ದಾಗ ಯಾತ್ರಿಕರನೇಕರು ಅಲ್ಲಿಗೆ ಬರುತ್ತಿದ್ದರು. ಒಮ್ಮೆ ಲಿಂಗಾಭಿಷೇಕ ಸಮಾರಂಭವು ನಡೆದ ಕಾಲಕ್ಕೆ ಬಸವನು ಅನೇಕ ಶೈವ ಬ್ರಾಹ್ಮಣ ಪಂಡಿತರೊಡನೆ ಧಾರ್ಮಿಕ ವಿಷಯಗಳ ಮೇಲೆ ಚರ್ಚೆ ಮಾಡಿ ಅವರನ್ನು ಸೋಲಿಸಿದನು. ಕ್ರೈಸ್ತನು ೧೨ ವರುಷದ ಬಾಲಕನಿರುವಾಗ ಅವನ ತಾಯಿ ತಂದೆಗಳು ಅವನನ್ನು ಕರೆದುಕೊಂಡು ಸಮೀಪದಲ್ಲಿದ್ದ ಜೆರೂಸಲೆಮ್ ಪಟ್ಟಣದ ದೇವಸ್ಥಾನಕ್ಕೆ ಹೋಗಿ ದರ್ಶನ ತೆಗೆದುಕೊಂಡು ತಿರುಗಿ ಬರುತ್ತಿರಲು ಕ್ರೈಸ್ತನು ಅವರಿಗೆ ತಿಳಿಯದಂತೆ ಹಿಂದುಳಿದನು. ಅವನ ತಾಯಿ ತಂದೆಗಳು ಊರಿಗೆ ಬಂದನಂತರ ಕ್ರೈಸ್ತನು ತಮ್ಮ ಹಿಂಬಾಲಿಸಿ ಬರದ್ದನ್ನು ನೋಡಿ ಪುನಃ ದೇವಸ್ಥಾನಕ್ಕೆ ಹೋಗಿ ನೋಡಲಾಗಿ ಅವನು ಸನ್ಯಾಸಿಗಳೊಡನೆ ತತ್ವ ವಿವೇಚನೆ ಮಾಡುತ್ತ ಕುಳಿತಿರುವದನ್ನು ಕಂಡು ಆಗಾಧ ಪಟ್ಟು ಅವನನ್ನು ಪುನಃ ಕರೆದುಕೊಂಡು ಬಂದರು. ಕ್ರೈಸ್ತ, ಬಸವರ ಚರಿತ್ರೆಯಲ್ಲಿರುವಷ್ಟು ಸಾಮ್ಯವು ಮತ್ತಾರಲ್ಲಿಯೂ ಕಂಡು ಬರುವದಿಲ್ಲ.

ಬಸವೇಶ್ವರನು ವೀರಶೈವ ಮತೋದ್ಧಾರಕನಾದಾಗ್ಯೂ ಶೈವಬ್ರಾಹ್ಮಣವಂಶದಲ್ಲಿ ಜನ್ಮವೇಕೆತ್ತಿದನು, ವೀರಶೈವ ವಂಶದಲ್ಲಿಯೇ ಯೇಕೆ ಹುಟ್ಟಲಿಲ್ಲವೆಂಬ ಸಂಶಯವು ಕೆಲವರಲ್ಲಿ ಬರಬಹುದು. ಅವನ ಬ್ರಾಹ್ಮ

ಣವಂಶದಲ್ಲಿ ಹುಟ್ಟಿ ವೀರಶೈವ ಮತವನ್ನು ಅವಲಂಬಿಸಿದ್ದರಿಂದಲೇ ವೀರಶೈವ ಮತಕ್ಕೆ ವಿಶೇಷ ಪ್ರಾಶಸ್ತ್ಯಯುಂಟಾಯಿತು ಅವನು ಎರಡೂ ಧರ್ಮಗಳ ಶೀಲಾಚಾರಗಳನ್ನೂ, ತತ್ವಸಿದ್ಧಾಂತಗಳನ್ನೂ ಒರೆಗಲ್ಲಿನ ಮೇಲೆ ತಿಕ್ಕಿ ತೋರಿಸಿದನು. ಅವನು ವೀರಶೈವನಾಗಿಯೇ ಹುಟ್ಟಿದ್ದರೆ ಮುಂಜಿಯಂಥ ಗಡಚು ಪ್ರಸಂಗವು ಬಾಲ್ಯದಲ್ಲಿ ಸಂಭವಿಸುತ್ತಿರಲಿಲ್ಲ, ಇಷ್ಟೇ ಅಲ್ಲ; ಆತನ ಆಗ ತನ್ನ ತಂದೆಯೊಡನೆ ವಾದವಾಡಿ ತೋರಿಸಿದ ಅಸಾಧಾರಣವಾದ ಜ್ಞಾನವು ಲೋಕಕ್ಕೆ ವಿದಿತವಾಗದೆ ಹೋಗುತ್ತಿತ್ತು. ಇದು ಅಲ್ಲದೆ ಅವನ ಜೀವಿತಚರಿತ್ರೆಗೆ ಅಷ್ಟು ಕಳೆಯೂ ಉಂಟಾಗುತ್ತಿರಲಿಲ್ಲ. ಮಹಾತ್ಮರಿಗೆ ಕುಲಜಾತಿಗಳ ಬಂಧನವಿಲ್ಲ, ಸತ್ಯ ಧರ್ಮವೊಂದೇ ಅವರ ಗುರಿಯು. ಇಂಥ ಧರ್ಮಪುರಸ್ಕಾರಕ್ಕಾಗಿಯೇ ಅವರು ಹೋರಾಡುವದಲ್ಲದೆ ಜಾತಿದ್ವೇಷವನ್ನು ಬೆಳಸುವದಕ್ಕಲ್ಲ. ಬಸವನ ಕಾರ್ಯಸಂಕಲ್ಪವು ಒಂದು ವಿಶಿಷ್ಟತರದ್ದಾಗಿದ್ದಿತು. ಅಹಿಂಸಾ, ಸತ್ಯ ದಯ ಮೊದಲಾದ ಸತ್ವಗುಣಗಳಿಂದ ಪರಿಪಕ್ವವಾದ ಧರ್ಮಧ್ವಜವನ್ನೆತ್ತಿ ಹಿಡಿದು ಅಂಥ ಮತಕ್ಕೆ ದುರ್ಗತಿಯಲ್ಲಿ ಬಳಲುತ್ತಿದ್ದವರನ್ನೆಲ್ಲ ಸೇರಿಸಿ ಅವರನ್ನು ಪಾವನಜೀವನವುಳ್ಳವರನ್ನಾಗಿ ಮಾಡುವದಾಗಿತ್ತು. ಅಂಥ ಧರ್ಮಕ್ಷೇತ್ರವೇ ವೀರಶೈವಮತವಾಗಿತ್ತು. ಬಸವನು ಆ ಕ್ಷೇತ್ರದಲ್ಲಿ ಭಕ್ತಿಯೆಂಬ ಬೀಜವನ್ನು ಬಿತ್ತಿ ಮೋಕ್ಷವೆಂಬ ಮುತ್ತನ್ನು ಬೆಳೆದನು. ಬಸವನು ಒಂದು ಧರ್ಮದಲ್ಲಿ ಹುಟ್ಟಿ ಮತ್ತೊಂದು ಧರ್ಮದ ಉದ್ಧಾರಕನಾದಂತೆಯೇ ಕ್ರೈಸ್ತನು ಯಹುದೀ ಧರ್ಮದಲ್ಲಿ ಹುಟ್ಟಿ ಕ್ರಿಸ್ತ ಧರ್ಮವನ್ನುದ್ಧರಿಸಿದನು. ವ್ಯಾಸನು ಜಾಲಗಾರ ಮಗನಾದಾಗ್ಯೂ ವೈಷ್ಣವ ಮತಕ್ಕೆ ಗುರುವಾಗಿ ವೇದವ್ಯಾಸನೆಂದು ಹೆಸರಾದನು. ಆದ್ದರಿಂದ ಕುಲಜಾತಿಗಳು ನಿಮಿತ್ತ್ಯಮಾತ್ರವಾದವುಗಳೆಂದು ಮಹಾಪುರುಷರ ಚರಿತ್ರೆಯಿಂದಲೇ ಗೊತ್ತಾಗುತ್ತದೆ.

ಬಸವನು ೧೩ವರ್ಷ ಕಾಲ ಕಪ್ಪಡಿಯಲ್ಲಿರುವಾಗ ಧರ್ಮಜಾಗ್ರತಿಯೂ ಒಂದು ಮುಖ್ಯಕಾರ್ಯವಾಗಿದ್ದಿತು. ಅನೇಕ ಸಾಧು ಶರಣರು ಅವನನ್ನು ಆಶ್ರಯಿಸಿದ್ದರು. ಈ ವೇಳೆಯಲ್ಲಿ ಕಲ್ಯಾಣದಲ್ಲಿ ಬಿಜ್ಜಳ ರಾಜನ ಮಂತ್ರಿಯಾದ ಬಲದೇವನು ವೀರಶೈವನಾದುದರಿಂದ ಬಸವನ ಕೀರ್ತಿಯನ್ನು ಕೇಳಿದವನಾಗಿ ಆತನಿಗೆಯೇ ತನ್ನ ಮಗಳನ್ನು ಕೊಡು

ವೆನಲ್ಲದೆ ಇನ್ನಾರಿಗೂ ಕೊಡೆನೆಂದು ಪ್ರತಿಜ್ಞೆ ಮಾಡಿಕೊಂಡನು. ಬಲದೇವ ಮಂತ್ರಿಯು ಮಾದಲಾಂಬಿಕೆಯ ಅಣ್ಣನೂ ಬಸವನ ಸೋದರಮಾವನೂ ಆಗಿದ್ದನು. ಮಾದಲಾಂಬಿಕೆಯು ಶೈವ ಬ್ರಾಹ್ಮಣಳಿದ್ದು ಆಕೆಯ ಅಣ್ಣನಾದ ಬಲದೇವನೆಂತು ವೀರಶೈವನಾಗುವನೆಂಬ ಸಂದೇಹ ಬರಬಹುದು. ಆದರೆ ಬಸವಪುರಾಣದ ೩ನೇ ಸಂಧಿಯು ೮೭ನೇ ಪದ್ಯದಲ್ಲಿ ಹೀಗೆ ಹೇಳಿದೆ —(ವೀರಶೈವನಲ್ಲದವನು ಭವಿಯು.)

ಮಾದಲಾಂಬೆಯ ಸೋದರಂ ಶಿವ। ಪಾದಹಂಕಜ ಭಕ್ತಿಯುಕ್ತಂ
ಮೇದಿನೀಶ್ವರ ಬಿಜ್ಜಳನ ಭಂಡಾರಿ ಬಲದೇವಂ॥
ಆದಿ ಶಿವಭಕ್ತಂಗೆ ಮದುವೆಯನಾದರದಿ ಮಾಳ್ಪೆನಲ್ಲದೆ।
ಯೂ ದುಹಿತೆಯಂ ಭವಿಗೆ ಕೊಡೆನೆಂದೆಂಬ ಭಾಷೆಯೊಳು॥

ಇಲ್ಲಿ 'ಭವಿ' ಎಂಬ ಶಬ್ದವನ್ನು ಬಲದೇವನು ಸ್ಪಷ್ಟವಾಗಿ ಹೇಳಿರುವದರಿಂದ ಆತನು ಕಟ್ಟಾ ವೀರಶೈವನಾಗಿಯೇ ಇರಬೇಕು. ಹಾಗಾದರೆ ಅವನಿಗೆ ದೀಕ್ಷೆ ಕೊಟ್ಟವರಾರು. ಬಸವನೇ ಪರಮತೀಯರನ್ನು ಲಿಂಗಾಯತರನ್ನಾಗಿ ಮಾಡಲುಪಕ್ರಮಿಸಿದವನಲ್ಲವೇ? ಬಸವನಿಗಿಂತಲೂ ಪೂರ್ವದಲ್ಲಿ ಅನೇಕರು ಮತಪ್ರಸಾರದ ಕಾರ್ಯವನ್ನು ಮಾಡಿದ್ದರು. ಲುಯಿ ರಾಯಿಸ್ ಎಂಬವರು ತಮ್ಮ 'ಮೈಸೂರ್ ಮತ್ತು ಕೂರ್ಗ್' ಎಂಬ ಪುಸ್ತಕದಲ್ಲಿ ಏಕಾಂತರಾಮಯ್ಯನೆಂಬ ವೀರಶೈವನು ಐದುನೂರು ವೀರಶೈವ ಪಂಡಿತರೊಡನೆ ಬದಾಮಿಯ ಹತ್ತರಿರುವ ಐಹೊಳಿಯಲ್ಲಿದ್ದರೆಂತಲೂ ಅವರು ಉಳಿದ ಮತದವರನ್ನು ಲಿಂಗಾಯತರನ್ನಾಗಿ ಮಾಡುತ್ತಿದ್ದರೆಂತಲೂ, ಅದೇ ವೇಳೆಗೆ ಬಸವನು ಬಿಜ್ಜಳನ ಮಂತ್ರಿಯಾಗಿ ಏಕಾಂತರಾಮಯ್ಯನ ಕಾರ್ಯವನ್ನೇ ಮುಂದೆ ಸಾಗಿಸಿದನೆಂತಲೂ ಹೇಳಿದ್ದಾರೆ. ಆದ್ದರಿಂದ ಬಲದೇವ ಮಂತ್ರಿಯು ಏಕಾಂತರಾಮಯ್ಯನವರಿಂದಲೇ ವೀರಶೈವ ದೀಕ್ಷೆಯನ್ನು ಹೊಂದಿರಬೇಕು.

# ಗುರುಹಾಸ್ಯ.

ಇದನ್ನು ರಾ। ರಾ। ಎಚ್. ಜಿ. ಸಿದ್ಧಲಿಂಗಯ್ಯ ಮು. ಹಾರೋಹಳ್ಳಿ ಜಿ॥ ಬೆಂಗಳೂರು ಇವರು ದೊರಕಿಸಿ ನನ್ನ ಕಡೆಗೆ ಕಳಿಸಿಕೊಟ್ಟಿರುವರು. ಇದಕ್ಕೋಸ್ಕರ ನಾವು ಅವರಿಗೆ ಆಭಾರಿಯಾಗಿದ್ದೇವೆ. ಸಂಪಾದಕ.



**ಶಿಷ್ಯ:**— ಚನ್ನಶ್ರೀಗುರುರಾಯ ನಿಮ್ಮ ಶ್ರೀಪಾದ ಪದ್ಮವನು। ಮುನ್ನಲರಸುತ್ತ ಬಂದೆ। ಎನ್ನಭವ ಬಾಧೆಗಳ। ಚನ್ನಾಗಿ ಪರಿಹರಿಸಿ ಉನ್ನತದಿ ಸಲಹೆನ್ನ ನಿನ್ನ ಮೊರೆ ಹೊಕ್ಕೆನಭವಾ ॥ ಪಲ್ಲವಿ ॥

ಶ್ರೀಗುರು ನಿರಾಲಂಬ ನಿರ್ಗುಣನಿಜಾನಂದ। ಯೋಗಿಜನಹೃತ್ಕಮಲ ವಿಕಸಿತಭಾನು। ಶಶಿಮೌಳಿ ನಾಗಾರಿ ಗಮನಸಖ। ಸುರಶ್ರೀಷ್ಮನುತ ಗಾತ್ರತರಪದ್ಮಧರನೇ॥ ಭೋಗಿಭೂಷಣಭರ್ಗ ಭಾಳಾಕ್ಷ ಭವರಹಿತ। ಋಗಮುಶೃತಿಶಾಸ್ತ್ರ ಅನುವರಿತು ಪೊಗಳುವೆನು। ಈಗ ಕರ್ಣದಿ ಕೇಳಿ ಬೇಗದಿಂ ನಾಂ ಬಂದೆ ರಾಗದಿಂ ಸಲಹೆನ್ನನೂ ॥೧॥

**ಗುರು:**— ಎಲೆ ಮಗನೆ ನೀ ಕೇಳು ಎನ್ನ ಬಳಲಿಕೆಗಳನು। ನೆಲದೊಳಗೆ ಎನ್ನಂಥ ಪಾಪಿಗಳು ಮುನ್ನಿಲ್ಲ। ಬಲುಮೊಯುಳ್ಳರು ಬಂದು ಕಳೆದೊಯಿದರಾಕ್ಷಣವೆ ಕಳೆದು ನರೆಹುಚ್ಚನಾದೆ ।। ನೆಲೆತಪ್ಪಿ ಕುಲಗೆಟ್ಟು ಛಲವಳಿದು ತಲೆಭಕ್ತಿ। ಬಲುಭಂಗದಲಿ ಬಿದ್ದು ಯೆಲುಮೊಗಲನುಟ್ಟಂಗೆ। ಸಲಹೆಂದು ಕಾಡುವರೆ ಪರಮ ಮೂಢರ ಮೂಢ ನಾಚಿಕಿಲ್ಲೇನೊ ನಿನಗೇ ॥೨॥

**ಶಿಷ್ಯ:**— ಬಹಳ ಬಡತನಗಳನು ಹೇಳಬೇಡೈ ನೀನು। ಚೋಳಂಗೆ ಹೊನ್ನ ಮಳೆ ಏಳುದಿನ ಸುರಿಸಿದೈ। ಆಳಾಗಿ ನಂಬಿಗಂ ಪಡಿಹೊನ್ನ ನಿತ್ತುದನು। ಹೇಳಿದರು ಎನಗೊಬ್ಬರೂ ॥ ಕೇಳಯ್ಯ ಗುರುರಾಯ ಬಸವದಂಡೇಶ್ವರನೇ। ಮೇಲಾದ ಪಂಚಪರುಷವಕೊಟ್ಟೆ ಹರನೆಂದು। ಕೇಳುತಲಿನಾಂ ಬಂದೆ ಆಲೋಚನೆಗಳು ಏಕೆ। ಭಾಳಾಕ್ಷ ಸಲಹೆನ್ನನೂ ॥೩॥

ಗುರು:— ಬೆಂದ ಮನುಜನೆ ಕೇಳು ಹಿಂದೊಂದು ಕಾಲದಲಿ । ಚಂದ
ವಾಗಹುದೊಂದು ಚಿಂವಗಪ್ಪುರವಿರಲು । ಅಂದವಿಂದಲಿ ಅದರ ಹೃ
ತ್ಕಳದಿತಾನಾಗ । ಕೇಳಿದುದಕೊಡುತಿರ್ದೆನೂ ॥ ಮಂದಮತಿಯಲಿ
ನಾನು ಆ ಮಹಿಮ ಕಪ್ಪುರವ । ಸಂದಶರಣನು ಎಂದು ಶ್ರೀನೀಲ
ಕಂಠನಲಿ । ಹೊಂದಿಸಲು । ಅದನವರು ಮಾಜಿಕೊಂಡರು ಎನಗೆ
ಅಂದಿಂದ ಗತಿಯಿಲ್ಲವೋ ।೪॥

ಶಿಷ್ಯ:— ಪರಿಪರಿಯ ತರ್ಕಗಳ ಪೇಳಿತಪ್ಪಿಸಿಕೊಳ್ಳೆ । ನೆರೆನಿನ್ನ ಬಿಡೆನಯ್ಯಾ
ನಿರುತವಿದು ಕೇಳಿನ್ನು । ಹರಿಬ್ರಹ್ಮಸುರರ್ಗೆಲ್ಲ ಹವಣರಿತುಪದವಿ
ಯನು । ನೆರೆ ಕೊಟ್ಟಹರನೆನುತಲೀ॥ ಭರದಿಂದ ಮುನಿಜನರ
ಅರಿತು ರಕ್ಷಿಪನೆಂದು । ಧರೆಯೊಳಗೆ ಶಿವಗಿಂತ ॥ ಧೊರೆಗಳಿನ್ನಿಲ್ಲೆಂದು
ಮೆರೆವ ವೇದವಕೇಳಿ ತ್ವರಿತದಿಂ ನಾಂ ಬಂದೆ ಪರಮಗುರು ಸಲಹೆ
ನ್ನನೂ ॥೫॥

ಗುರು:— ಕೆಟ್ಟ ಮನುಜನೆ ಕೇಳು ಎಷ್ಟು ಹೇಳಲು ಕೇಳೆ। ಪಟ್ಟದಾ
ಮಗನೊಬ್ಬ ಮದುವೆಯಿಲ್ಲದೆ ಹೋದ ॥ ಬಟ್ಟೆಗಾವಿಯನುಟ್ಟು
ಬಗೆಬಗೆಯ ಮಣಿಗಳನು ಕೊಟ್ಟಳಿನ್ನಯ ಮಡದಿಯೂ ॥ ಹೊಟ್ಟೆ
ಗಿಲ್ಲದೆ ಹೋಗಿ ಹೊಲೆಯನೊಳು ಕೂಡಿಹಲು । ರಟ್ಟುಮಾಡಿದ
ರೆನ್ನ ಊರೆಲ್ಲ ಹೊರಹಾಕಿ । ಕೆಟ್ಟ ಮಸಣವ ಕಾಯ್ದು ಹೊಟ್ಟೆ
ಹೊರೆಯುವ ಎನ್ನ ಎಷ್ಟು ಕಾಡುವದೊ ನೀನೂ ॥೬॥

ಶಿಷ್ಯ:— ಎಲ್ಲ ದೇವರ ದೇವ ಬಲ್ಲಿದನು ನೀನೆಂದು । ಕಲ್ಲುಮಗಳಿಗು ಗಂ
ಡ ಸಲೆ ಕೃಪಾದಯಸಿಂಧು । ಸೊಲ್ಲಿನೊಳಗಿಹನೀತ ಸೋಮಶೇಖ
ರನೆಂದು । ಬಲ್ಲವರು ಹೇಳಲೊಡನೇ ॥ ಅಲ್ಲಿ ಪೇಳಿದ ಕೇಳಿ ನಿಲ್ಲದೇ
ನಾ ಬಂದೆ । ಖುಲ್ಲತನಗಳ ಬಿಟ್ಟು ಕೃಪೆ ಮಾಡು ಎನಗಿಷ್ಟು । ಒಲ್ಲೆ
ನೆಂದರೆ ರಟ್ಟು ಒಡೆಯನಿನಗದು ಸಿಟ್ಟು । ಕೊಡು ಎನಗೆ ಪದವ
ನಷ್ಟು ॥

ಗುರು:— ಪಾಲಸಲಿಸಲಿ ಬಂದ ಬಾಲಕಿಯ ನುಂಗಿದೆನು । ಚೀಲಾಳ
ನೇಬುವನ ಗೋಣ್ಮುರಿದೆ । ನೀಲಾಂಬೆಯ ಮಗನ ಮುಸುಡಿಯನು ।

ಹೊಯಿಬಿದ್ದೆನೊ॥ ಕೇಳೆನ್ನ ಪಾಡುಗಳ ಮೇಲಾದ ಗಣಪತಿಯ ಆಲಯದೊಳು ಕದ್ದು। ಆಲಗುಂಡಯ್ಯಗಳ ಶೂಲಕ್ಕೆ ಹಾಕಿಸಿದ। ಬಹಳ ಪಾಪವು ಹತ್ತಿ। ಬಗೆಗೆಟ್ಟು ತಿರುಗುವನ ಹೇಳಿದವರಾರೊ ನಿನಗೇ॥೮॥

**ಶಿಷ್ಯಃ**— ಅನಂದಮಹಿಮ ನೀನೇನ ಹೇಳಿದರೇನು। ನಾನೆನ್ನ ಬಯಕೆಗಳ ಬಯಸುವದ ಬಿಡೆನಯ್ಯ। ದೀನತನಗಳ ಬಿಟ್ಟು ಜ್ಞಾನದಯಗಳ ನಿಟ್ಟು। ಸಲಹೆನ್ನ ಕರುಣವಿಟ್ಟು॥ ಮಾನಕಂಜರಗೊಲಿದೆ ಮುರಳಿ ದೈತ್ಯರಿಗೊಲಿದೆ। ಭಾನುಕರ ಶಶಿ ಭಕ್ತಬಾಂಧವನು ನೀನೆಂದು। ನಾನಿದನು ಕೇಳ್ದಿನ್ನೈ ಭವಬಾಧೆಗಳ ಬಿಡಿಸಿ ನೀನೆನ್ನ ಸಲಹುದಯ್ಯಾ ॥೯॥

**ಗುರುಃ**— ಹುಚ್ಚು ಮಾನವ ಕೇಳು ಎಷ್ಟು ಹೇಳಲು ಕೇಳೆ। ಕಿಚ್ಚಿದ್ದು ಶರಿರದೊಳು ಹೊರಹತ್ತಿ। ಹಚ್ಚುವುದಕಿದಕೆಂಣೆದೊರೆಯದಿರೆ ತಲೆ ಬತ್ತಿ। ಹೊಸೆದು ನಿಡುಜಡೆಯಾಯಿತು॥ ಹುಸಿತುತ್ತಿಗಾಗಿ ಮನೆ ಮನೆಯ ತಿರುಗುತ್ತ। ಹೆಚ್ಚಿದಾಭೂತವಿದು ಬಂತೆಂದು ಕದಗಳನು ಮುಚ್ಚಿದರೆ। ಮಸಣವನು ತಿರುಗುತ್ತ ಹುಚ್ಚಾಗಿ ಮಲಗುತಿಹೆನೂ॥೧೦॥

**ಶಿಷ್ಯಃ**—ಈರೇಳು ಲೋಕಕ್ಕೆ ಮಾರಾರಿ ನೀನೆಂದು। ತಾರಕನ ಕೊಂದಂಥ ಧೀರ ನೀನಹುದೆಂದು। ಘೋರ ದನುಜೇಂದ್ರ ನಾ ಶಿರವರಿದ ನರನೆಂದು। ಸಾರುತಿಹ ಶೃತಿಯು ಕೇಳೀ॥ ಆರೈದು ನಾಂ ಬಂದೆ ಆತ್ತಿತ್ತ ತೋರಿಸದೆ। ಸಾರಿಬದುಕುವ ತೆರದೆ। ಪೊರೆವನಿವನೆಂದೆನ್ನ। ಕಾರುಣ್ಯನಿಧಿ ನಿಮ್ಮ ಬೇಡಬಂದವನಿಗೆ। ಪಾಂಗಾದೆನೆನ್ನಬಹುದೇ॥೧೧॥

**ಗುರುಃ**— ಮಗನೆ! ನೀ ಕೇಳೆನ್ನ। ನಗುಪಾಟುಗಳನೆಲ್ಲ। ವಿಗಡಶರಣನ ಕೂಡೆ ಜೂಜಾಡಿ ನಾ ಸೋತೆ। ಬಿಗಿದೆರಡು ಕೈಗಳನು ಬಿಚ್ಚೆಳದು ಮಠದಲ್ಲಿ। ಕಟ್ಟಿದರು ಮೂರು ದಿವಸಾ॥ ಬಗೆಗೊಂಡು ಅಡವಿಯನು ಸೇರಿದರೆ ಅಲ್ಲೊಬ್ಬ। ನೆಗೆದು ಬಿಲ್ಲಲಿ ಪೊಯ್ಸ್ಸ। ದಿಕ್ಕಿಲ್ಲದಲಿ ಬಂದು। ಮೃಗಧರನ ಗುಡಿಯೆಂದು ನೆಟ್ಟ ನಾನಿರಲಿಕೆ। ಉಗಿದು ಕಾಲಲಿ ಒದ್ದನೂ॥೧೨॥

ಶಿಷ್ಯ:—ಬೇಡ ಬೇಡೆನ್ನೊಡೆಯ| ಬೇಡಿದುದ ಕೊಡುಕಂಡ್ಯ| ನಾಡವಮಾತುಗಳನಾಡೆ ನಾನೇನಬಲ್ಲೆನ್ಯ| ಆಡುತಿಹಕರು ಹೋಗಿ ತಾಯಬಳಿಯಲಿನಿಂದು ಉಂಡೆಮೆಲೆ ಯೆಂಬುದಾಸೇ|| ಕಾಡುತಿಹ ಸ್ಮರರುಜಯಕರರೇನಬಲ್ಲರ್ಕ್ಯ| ಪೀಡಿಸದೆ ಎನ್ನನೀನೊಡಗೊಂಡು ಕಾಯಯ್ಯ| ಓಡಿನಲಿ ತಿರಿದುಂಬವನಚರಂದ ಬುದ್ಧಿಯನು | ಮಾಡದಿರು| ಗುರುರಾಯನೇ||೧೩||

ಗುರು:—ಪುತ್ರ ಕೇಳೆಲೊ ನಿನ್ನಸ್ತ್ರೋತ್ರಕ್ಕೆ ಅತಿಮೆಚ್ಚಿ| ನೇತ್ರಕರ್ಣವು ತುಂಬಿತುಳುಕಿದವು ಎನಗೀಗ| ಧಾತ್ರಿಯೊಳು ನಿನಗಿಂತ ಬುದ್ಧಿವಂತರಕಾಣೆ| ಸ್ತೋತ್ರಕ್ಕೆ ಆಧಿಕ್ಯವಿನ್ನು|| ಚಿತ್ತದಿಂದಲಿ ನೀನು ಗುರುವಾದ ಪೂಜೆಯನು| ನೇತ್ರದಿಂದಲಿನೋಡಿ ಸ್ತೋತ್ರದಿಂದಲಿ ಪಾಡಿ| ಧಾತ್ರಲೋಕಕ್ಕೊಯ್ಯು ದಯವಿಟ್ಟು ಸಲಹುವೆನು| ಚಿತ್ತ ಬೇಗದಲಿ ನಾನೂ|೧೪||

ಶಿಷ್ಯ:—ಪೂಜಿಸಲು ಎನ್ನಳವೆ ರಾಜಶೇಖರ ನಿಮ್ಮ| ವಾಜಿವಂತರತೆರದೆ ಧಯವಿಟ್ಟು ಸಲಹಿದರೆ| ತೇಜವಾಗಿಹ ಕೀರ್ತಿ ನೆರೆದುಬಹುದದು ತಾನು| ಮಾಜದಿರು ಗುರುರಾಯನೇ|| ಸೋಜಿಗವು ನಿಮ್ಮಪಾದವನುಕಂಡೆ ನಾನೀಗ| ಮಾಜಿಹೋದರೆ ಮತ್ತೆ ಮರಳಿ ದೊರೆಯಲಿಕಿಲ್ಲ| ಭಾಜನೆಯ ಮಾಡಿದೇ| ಭಕ್ತರೊಳು ಕೂಡಿಸೈ| ತ್ರಿಜಗದೇವರ ದೇವನೇ ||೧೫||

ಫಲ:—ಕರವಿಡಿದು ಗುರುರಾಯ ಭರದಿಂದ ನೋಡಲ್ಕೆ| ಹರಿದು ಹೋಯಿತು ಬ್ರಹ್ಮಲಿಪಿಯು ತಂನಂತಕ್ಕೆ| ಶರಣಗರ್ಭದೊಳಿಟ್ಟು ಹೊರೆಯಿಲ್ಲದಂದದಲಿ| ಪರಮಪಾವನ ಮೂರ್ತಿಯು|| ಗುರುಹಾಸ್ಯ ಮಹಿಮೆಯನು ಬರೆದೋದಿಕೇಳಿದರೆ| ನೆರೆಸರಿಸಿ ನಿಲಿಸಿದರೆ ದುರಿತಕಂಟಕ ಗೆಲಿವ| ಯಮನಬಾಧೆಯನೊದೆದು ಪರಮಾತ್ಮಸಲಹುತಿರ್ಪ ||೧೬||

---

# ವೀರಶೈವ ಧರ್ಮವೂ, ಆಂಧ್ರವಾಙ್ಮಯವೂ.

**ಲೇಖಾಂಕಃ— ೩**

(ಲೇಖಕಃ— ಶಿವಸುತ.)

## ಶ್ರೀ ಬಸವೇಶ್ವರ ಯುಗವು.

### ಶ್ರೀ ಪಾಲ್ಕುರಿಕೆ ಸೋಮನಾಥ ಕವಿಯು.

ಕಳೆದ ಸಂಚಿಕೆಯಲ್ಲಿ ಸೋಮನಾಥನು ವೀರಶೈವ ಸಿದ್ಧಾಂತ ಪ್ರತಿಪಾದಕವಾಗಿ ವಿರಚಿಸಿದ ಸೋಮನಾಥ ಭಾಷ್ಯ ಮತ್ತು "ಚತುರ್ವೇದಸಾರ'' ಇವುಗಳ ಪರಿಚಯವನ್ನು ವಾಚಕರಿಗೆ ಮಾಡಿಕೊಟ್ಟಿರುವೆವು. "ರುದ್ರಭಾಷ್ಯದ" ಪ್ರತಿಯು ಮಾತ್ರ ದೊರೆತಿಲ್ಲ. ಇಂಥಾ ಪ್ರೌಢಗ್ರಂಥಗಳ ಮೂಲಕವಲ್ಲದೇ "ಅನುಭವಸಾರ"ವೆಂಬುವ ಚಿಕ್ಕಕಾವ್ಯವನ್ನು ಸಹ ರಚಿಸಿ ತನ್ಮೂಲಕ ವೀರಶೈವ ತತ್ವವನ್ನೂ, ಷಟ್ಸ್ಥಲ ಮಾರ್ಗವನ್ನೂ ಬಹು ಸರಳವಾಗಿಯೂ ಸುಬೋಧಕರವಾಗಿಯೂ ಪ್ರತಿಪಾದಿಸಿರುತ್ತಾನೆ. ಈ ಗ್ರಂಥದಲ್ಲಿ ಮುದ್ದು ಮಾತುಗಳ ಮೂಟೆಗಳಂತಿರುವ "ತೇಟಗೀತೆ'' ಮತ್ತು "ಆಟವೆಲದಿ'' ಎಂಬೀ ಗೀತೆಗಳೇ ವಿಶೇಷವಾಗಿರುವದರಿಂದ ಕಾವ್ಯಪ್ರವಾಹವು ಯಾವ ಕಟ್ಟಿಗೂ ಒಳಗಾಗದೇ ನಿರರ್ಗಳವಾಗಿ ಹರಿಯುತ್ತಿರುವುದು. ಎಂಥವರಾದರೂ ಓದಿ ಮನನಮಾಡಿಕೊಳ್ಳಬಹುದು. ಓದುವುದಕ್ಕಂತೂ ಬೇಸರು ಬರುವುದೇ ಇಲ್ಲ. ಈ ಗ್ರಂಥದ ಮೂಲಕವೇ ನಾವು ಈ ಮಹಾಕವಿಯ ಗೋತ್ರಾದಿಕವನ್ನು ತಿಳಿದುಕೊಳ್ಳಬಹುದು.

## ಶ್ರೀ. ವೃಷಾಧಿಪ ಶತಕವು.

ಆವ ಮಹನೀಯ ಚರಿತ್ರನು ಬಾಡಿಹೋಗುತ್ತಿದ್ದ ವೀರಶೈವ ಮತವೃಕ್ಷವನ್ನು ಪುನರುಜ್ಜೀವನಗೊಳಿಸಿ ಧರ್ಮಸುಧಾರಕ ಸಂಘದಲ್ಲಿ ಅದ್ವಿತೀಯನಾಗಿ ವಿರಾಜಿಸುತ್ತಿರುವನೋ ಯಾವ ಪರಮಪಾವನಮೂರ್ತಿಯು ಪ್ರತಿಯೊಬ್ಬ ವೀರಶೈವನ ಹೃದಯ ಸಿಂಹಾಸನದಲ್ಲಿ ದುರ್ನಿರೀಕ್ಷವೂ, ಅ

ಖಂಡವೂ, ಆದ ಶಿವಯೋಗ ತೇಜಸ್ಸಿನಿಂದೊಡಗೂಡಿ ಝುಗಝುಗಾಯಮಾನವಾಗಿ ಕಂಗೊಳಿಸುತ್ತಿರುವನೋ ಯಾವ ಚಿದ್ಘನ ವಿಭೂತಿಯು ಸಪ್ರೇಮಭಕ್ತಿ ಸಿದ್ಧಾಂತವನ್ನೂ, ಸರ್ವ ಸೌಹಾರ್ದ್ಯ ಭಾವವನ್ನೂ, ಲೋಕದಲ್ಲೆಲ್ಲಾ ಪ್ರಸಂಗಿ ಪುಣ್ಯಭೂಮಿಯಾದ ಭರತಖಂಡದ ಯಶೋವೈಭವವನ್ನುಜ್ವಲಗೊಳಿಸಿದನೋ ಅಂಥಾ ಮಹಿಮಾಶಾಲಿ ಭಗವಾನ್ ಬಸವೇಶ್ವರನೇ ನಮ್ಮ ಕವಿಗೆ ಉಪಾಸ್ಯಮೂರ್ತಿಯಾಗಿದ್ದು ಸೋಮನಾಥನು ತನ್ನ ಜೀವಿತವನ್ನೆಲ್ಲಾ ಬಸವೇಶ್ವರಸ್ತವನದಲ್ಲೂ, ಮತ್ತು ಬಸವತತ್ವಪ್ರಸಾರದಲ್ಲೂ ಕಳೆದು ಪುಣ್ಯಚರಿತ್ರನಾದನು. ಈತನ ಪ್ರತಿಯೊಂದು ಕೃತಿಯೂ, ಬಸವೇಶ್ವರಸ್ತವನಾಮೃತಧಾರೆಯಿಂದ ತುಂಬಿ ತುಳುಕುತ್ತಿರುವುದು. ಬಸವತತ್ವ ಕುಸುಮ ಸೌರಭದಿಂದ ಝುಮುಝುಮಿಸುತ್ತಿರುವುದು. ಇಷ್ಟು ಸಾಲದೇ ತನ್ನ ಪ್ರೀತಿಯ ಬಸವಣ್ಣನನ್ನು ೧೦೯ ಪ್ರೌಢವೃತ್ತ ಕುಸುಮ ಮಾಲಿಕೆಯಿಂದಲಂಕರಿಸಿರುವನು. ಕಾಲಪುರುಷನ ಅಗಾಧವಾದ ಗರ್ಭದಲ್ಲಿ ಮರೆಯಾಗಿದ್ದ ಆ ಮಾಲಿಕೆಯು ಆಂದ್ರಪಂಡಿತರ ಪ್ರಯತ್ನದಿಂದ ಪುನಃ ಹೊರಬಿದ್ದು ತನ್ನ ಸ್ವರ್ಗೀಯ ಸೌರಭದಿಂದ ಲೋಕವನ್ನೂ, ಮೋಹಗೊಳಿಸುತ್ತಿರುವುದು. ಈ ವೃಷಾಧಿಪಶತಕವನ್ನು ರಚಿಸಿದ ಕವಿಯು ಪಂಡಿತಾಗ್ರಗಣ್ಯನಾದ ಪಾಲಕುರಿಕೆ ಸೋಮನಾಥನೆಂದು ಶತಕಾಂತ್ಯದಲ್ಲಿರುವ ಈ ಕೆಳಕಂಡಪದ್ಯವು ಹೇಳುತ್ತದೆ.

**ಚಂಪಕಃ**— ಅಕುಟಿಲ ಲಿಂಗ ಜಂಗಮ ಸಮಗ್ರದಯಾಕಲಿತ ಪ್ರಸಾದಿಪಾ। ಲಕುರಿಕೆ ಸೋಮನಾಥುಡತಿತಾಲ್ಯ ಮುನನ್ ಬಸವನ್ನ ದಂಡನಾ॥ ಯಕುನ ಕುನೊಪ್ಪ ನೀ ಶತಕಮುರ್ಪಣ ಜೇಸೆನಲಿಂಬ ರಿಂಚುವಾ। ರಿಕೆ ವಿನುವಾರಿಕಿನ್‌ಗಲುಗು ಶ್ರೀಯುವು ನಾಯುವು ಭಕ್ತಿಯುಕ್ತಿಮುನ್॥

ಆಂಗ್ಲೇಯ ಕವಿಗಳು "ಪರ್ಸನಲ್" ಎಂದರೆ ಆತ್ಮೀಯ (ತಮ್ಮ ಮನಸ್ಸಿನಲ್ಲಿ ಸಹಜವಾಗಿಸ್ಫುರಿಸಿದ) ವಿಚಾರಗಳನ್ನು "ಲಿರಿಕ್" ಎಂಬ ಪದ್ಯಕಾವ್ಯಗಳಲ್ಲಿ ಬರೆದುಕೊಳ್ಳುವುದುಂಟು. ಅದೇ ರೀತಿ ನಮ್ಮ ಕವಿಗಳು ಸ್ವಾನುಭವವನ್ನು "ಶತಕ" (ಎಂದರೆ ನೂರು ಪದ್ಯಗಳುಳ್ಳ ಕಾವ್ಯ) ದಲ್ಲಿ ಹೇಳಿಕೊಳ್ಳುತ್ತಾರೆ. ಸಾಧಾರಣವಾಗಿ ನಮ್ಮವರು ದೈವ ಭಕ್ತಿ ವಿಶೇಷವುಳ್ಳವರಾಗಿರುವುದರಿಂದ ಶತಕಗಳಲ್ಲಿ ತಮ್ಮ ಮನಬಂದಂತೆ ದೇವ

ರನ್ನು ಕೊಂಡಾಡುವರು. ಇಂಥಾ ಕಾವ್ಯಗಳಲ್ಲಿ ಭಕ್ತಿರಸವೇ ಹೆಗ್ಗುರುತಾಗಿದೆ.

ಆಂಧ್ರವಾಙ್ಮಯ ಚರಿತ್ರೆಯಲ್ಲಿ ಅನ್ನಮಾಮಾತ್ಯಕೃತ "ಸರ್ವೇಶ್ವರ ಶತಕ"ದ ಅನಂತರ ಗಣನೀಯವಾದ ಶತಕರಾಜವೆಂದರೆ ಈ "ವೃಷಾಧಿಪ ಶತಕವೇ". ಈ ರೀತಿ ಶತಕ ವಾಙ್ಮಯದಲ್ಲಿ ಸಹಾ ನಮ್ಮವರೇ ಮಾರ್ಗದರ್ಶಿಗಳಾಗಿರುತ್ತಾರೆಂಬುವಲ್ಲಿ ನಾವು ವಿಶೇಷವಾಗಿ ಗರ್ವಿಸಬೇಕಾಗಿದೆ. ಈ ವೃಷಾಧಿಪಶತಕದಲ್ಲಿ ಕವಿಯು ತನ್ನ ಹೃದಯ ಪಟಲದಲ್ಲಿ ಚಿಚ್ಛಕ್ತಿಯಿಂದ ಪ್ರಕಾಶಿಸುತ್ತಿರುವ ಶ್ರೀ ವೃಷಾಧಿಪನನ್ನು ಮನದಣಿಯೆ ಸ್ತುತಿಸಿರುವನು. ಭಕ್ತಿ ಪ್ರೇಮರಸಗಳೆರಡೂ ನಿರರ್ಗಳವಾಗಿ ಪ್ರವಹಿಸುತ್ತಿರುವವು. ಪದ್ಯಗಳನ್ನು ಓದುತ್ತಾ ಹೋದಹಾಗೆಲ್ಲಾ ಶಿವಭಕ್ತಿರಸವು ಉಕ್ಕೇರಿ ದೇಹವೆಲ್ಲಾ ಕಂಪಾಯಮಾನವಾಗಿ ರೋಮಾಂಚನವಾಗುವುದು. ಕಣ್ಣುಗಳಿಂದ ಆನಂದ ಬಾಷ್ಪಗಳು ಧಾರಾಳವಾಗಿ ಪ್ರವಹಿಸುವವು. ಈ ಶತಕವು ಗಂಭೀರವೂ ಮೃದುಮಧುರವೂ ಕರ್ಣಾನಂದದಾಯಕವೂ ಆದ ಕವನ ಸಂಪತ್ತಿನಿಂದ ರಮ್ಯವಾದ ೧೦೯ ಚಂಪಕ, ಉತ್ಪಲ, ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತಾದಿ ಘನತರ ಪ್ರೌಢ ವೃತ್ತಗಳಿಂದ ವಿರಾಜಿಸುತ್ತಿರುವುದು. ೧೦೫ನೇ ಪದ್ಯದಲ್ಲಿ ಕವಿಯು ಈ ರೀತಿ ಹೇಳಿಕೊಂಡಿರುವನು.

ಉ॥ ನೋರಿಕಿವಚ್ಚಿನಟ್ಲು ನಿನುನೂರು ವಿಧಂಬುಲ ಪ್ರಸ್ತುತಿಂಪನೇ। ನೇರುತುನೇರ ನಿಮ್ಮನಕ ನೀಪಯಿನೊಚ್ಚೆ ಮುಲೇನಿಮಚ್ಚಿಕನ॥ಗಾರವಮುಂದಮತ್ಪ್ರಣುತಿಗೈ ಕೊನಗಾದನು ಗೌರವಂಬು ಬನನ। ವಾರನಿಕೂರ್ಮಿ ಪೇರ್ಮಿ ಬಸನಾ ಬಸವಾ ಬಸವಾ ವೃಷಾಧಿಪಾ॥

ಅಂದರೆ ಎಲೈ ಬಸವೇಶ್ವರನೇ! ನನಗೆ ನಿನ್ನ ಮೇಲಿರುವ ಮೇರೆ ಇಲ್ಲದ ಪ್ರೀತಿಗೌರವಗಳಿಂದ ಪ್ರೇರಿತನಾಗಿ ನಾನು ನಿನ್ನನ್ನು ಬಾಯಿಗೆ ಬಂದಂತೆ ನೂರುವಿಧಾನಗಳಿಂದ ಸ್ತುತಿಸುತ್ತೇನೆ. ನನ್ನ ಪ್ರಣಾಮಗಳನ್ನಂಗೀಕರಿಸಿ ಚ್ಯುತವಾಗದೇ ಇರುವ ಪ್ರೇಮದಿಂದ ನನ್ನನ್ನು ರಕ್ಷಿಸು.

ಮತ್ತು ತಾನು ಬಸವ ಪುರಾಣವನ್ನು ಬರೆದು ವೃಷಾಧಿಪನಿಗೆ ಅಂಕಿತ ಮಾಡಿದ ವಿಷಯವನ್ನು ಸಹಾ ಬರೆದುಕೊಂಡಿರುವುದರಿಂದ ಬಸವಪುರಾಣ ರಚನಾನಂತರ ಈ ಶತಕವು ಬರೆಯಲ್ಪಟ್ಟಿದೆ. ಶತಕಾ

ದಿಯಲ್ಲಿ ಶ್ರೀ ಬಸವೇಶ್ವರನನ್ನು ಅನೇಕ ಅರ್ಥಾಲಂಕಾರ ಶಬ್ದಾಲಂಕಾರ ಗಳಿಂದ ಸ್ತುತಿಸಿರುವನು. ಸಾಧಾರಣವಾಗಿ ಈ ಪದ್ಯಗಳಲ್ಲಿ ಕೇವಲ ಸಂಸ್ಕೃತ ಪದಗಳ ಸಮಾಸಗಳೇ ವಿಶೇಷವಾಗಿರುತ್ತವೆ. ನಮ್ಮ ಕನ್ನಡಿ ಗರಿಗೆ ಸಹಾ ತಿಳಿಯುವಂತಿವೆ. ಮಾದರಿಗಾಗಿ ಕೆಲ ಪದ್ಯಗಳನ್ನು ಇಲ್ಲಿ ಕೊಟ್ಟಿರುತ್ತೇನೆ. ಅಲ್ಲಲ್ಲಿ ಕಂಡುಬರುವ ಅವ್ಯಯಾದಿ ಆಂಧ್ರಪದಗಳನ್ನು ಕನ್ನಡಕ್ಕೆ ಪರಿವರ್ತಿಸಿ ಸ್ತೋತ್ರಪದ್ಯಪ್ರಿಯರು ಕಂಠಗತ ಮಾಡಿಕೊಳ್ಳಲು ಅನುಕೂಲವಾಗುವಂತೆ ರೂಪಾಂತರ ಮಾಡಿರುತ್ತೇನೆ.

**ಉ॥** ಶ್ರೀಗುರುಲಿಂಗಮೂರ್ತಿಸುವಿಶೇಷಮಹೋಜ್ವಲ ಕೀರ್ತಿ ಸತ್ಕ್ರಿಯೋ। ದ್ಯೋಗಕಳಾ ಪ್ರಪೂರ್ತಿಯುವ ಧೂತಪುನರ್ಭವ ಜೂರ್ತಿಪಾಲಿತಾ॥ ಭ್ಯಾಗತ ಸಂಶ್ರಿತಾರ್ಥಿ ಕವಿಸಂಡಿತ ಗಾಯಕ ಚಕ್ರವರ್ತಿದೇವಾ! ಗತಿನೀನೆನಂಗೆ ಬಸವಾ ಬಸವಾ ಬಸವಾ ವೃಷಾಧಿಪಾ ॥೧॥

**ಚ॥** ಪ್ರಮಥವಿಲೋಲ ಭಕ್ತಪರಿಪಾಲಧುರಂಧರ ಶೀಲಸಂತತಾ। ಸ್ತಮಿತ ಸಮಸ್ತದೇಹಗುಣ ಜಾಲ ಸುಖಪ್ರದಲೀಲ ಲಿಂಗಜಂ॥ ಗಮಮಹಿಮಾನು ಪಾಲಗತ ಕಾಲಸಮಂಚಿತ ನಾದಮೂಲನೋ। ದಮನಮಗೀವು ದಯ್ಯ ಬಸವಾ ಬಸವಾ ಬಸವಾ ವೃಷಾಧಿಪಾ ॥೨॥

**ಉ॥** ಅಪ್ರತಿಮ ಪ್ರತಾಪ ಸಮುದಂಚಿತ ನಾದಕಳಾಕಲಾಪದೀ।ಪ್ತಪ್ರಮಥ ಸ್ವರೂಪ ಶಿವಭಕ್ತಗಣಾತ್ಮಗತ ಪ್ರದೀಪಧೂ॥ ತಪ್ರಬಲೇಕ್ಷುಚಾಪವಿಗತ ಪ್ರಕಟಾ ಖಿಲ ಪಾದಲಿಂಗತ। ತ್ತ್ವಪ್ರದ ನೀನೆ ದಿಕ್ಕು ಬಸವಾ ಬಸವಾ ಬಸವಾ ವೃಷಾಧಿಪ ॥೩॥

**ಉ॥** ಭಕ್ತಿರಸಾಭಿಷಿಕ್ತ ಭವಪಾಶವಿತಾನವಿಮುಕ್ತ ಜಂಗಮಾ। ಸಕ್ತ ದಯಾಭಿಷಿಕ್ತತನು ಸಂಗತ ಸೌಖ್ಯವಿರಕ್ತಸಂತತೋ॥ ದ್ವ್ಯಕ್ತಗುಣಾನು ರಕ್ತಪರಿತೋಷಿತ ಭಕ್ತ ಶಿವೈಕ್ಯಯುಕ್ತಪ್ರ। ವ್ಯಕ್ತನೆ ನೀನೆದಿಕ್ಕು ಬಸವಾ ಬಸವಾ ಬಸವಾ ವೃಷಾಧಿಪಾ ॥೪॥

**ಉ॥** ಶತ್ರುಲತಾಲವಿತ್ರಗುಣ ಚೈತ್ರಭವಾಬ್ಧಿ ವಹಿತ್ರಜಂಗಮ। ಕ್ಷೇತ್ರವಿಚಿತ್ರ ಸೂತ್ರ ಬುಧಗೀತ ಚರಿತ್ರಶಿಲಾದ ಪುತ್ರಸ॥ ತ್ಪಾತ್ರವಿಶುದ್ಧ

ಗಾತ್ರ ಶಿವಭಕ್ತಿ ಕಳತ್ರ ಶರಣ್ಯ ಮಯ್ಯಭಾ। ಸ್ವಶ್ರೀ ಜಗತ್ಪವಿತ್ರ ಬಸವಾ
ಬಸವಾ ಬಸವಾ ವೃಷಾಧಿಪಾ ॥೫॥

ಉ॥ ಅಕ್ಷಯಭಕ್ತಿ ಪಕ್ಷ ಬಸವಾಕ್ಷರಪಾಠಕ ಕಲ್ಪವೃಕ್ಷರು। ದ್ರಾಕ್ಷ
ವಿಭೂತಿವಕ್ಷ ಫಲಿತಾರ್ಥ ಮುಮುಕ್ಷ ಶಿವಪ್ರಯುಕ್ತ ಘಾ। ಲಾಕ್ಷ ಕೃಪಾ
ಸಮಂಚಿತ ಕಟಾಕ್ಷ ಶುಭಾಶುಭ ಪಾಶಮೋಕ್ಷತ। ತ್ರ್ಯಕ್ಷಮು ನೀನೇ
ದಿಕ್ಕು ಬಸವಾ ಬಸವಾ ಬಸವಾ ವೃಷಾಧಿಪಾ ॥೬॥

ಉ॥ ಆರ್ಯ ವಿತಾನವರ್ಯ ಭುವನಾಧಿಕ ಶೌರ್ಯಯುದಾತ್ತ ಸತ್ಪದಾ
ಚಾರ್ಯ ಯುಪಾರ್ಯ ವೀರ್ಯಬುಧಸನ್ನುತಚರ್ಯವಿಶೇಷಭಕ್ತಿ ತಾ। ತ್ಪರ್ಯ ವಿವೇಕ
ಧುರ್ಯ ಪರಿಪಾಲಿತ ತುರ್ಯ ಶರಣ್ಯಮುಯ್ಯದು। ರ್ವಾರ್ಯಮನೂನ ಧೈರ್ಯ
ಬಸವಾ ಬಸವಾ ವೃಷಾಧಿಪ।೭॥

ಉ॥ ಕ್ಷೀಣಜನಪ್ರಮಾಣ ಯನಿಕೃತ್ತ ಕುಯಂತ್ರಕ ಘೋಣಜಂಗಮ
ಪ್ರಾಣವಿನಿರ್ಜಿತ ಪ್ರಸವಬಾಣಸಮಂಚಿತ ಭಕ್ತಿಯೋಗಸು। ತ್ರಾಣ ಕಳಾ
ಪ್ರವೀಣ ಶಿವಧರ್ಮ ರಹಸ್ಯ ಧುರೀಣ ದತ್ತನಿ। ರ್ವಾಣ ಶರಣ್ಯ ದೇವ
ಬಸವಾ ಬಸವಾ ವೃಷಾಧಿಪಾ।೮॥

ಉ॥ ಗಾನರಸ ಪ್ರವೀಣ ಗತಕಾಲವಿತಾನ ಸಮಸ್ತಭಕ್ತ ಸ। ನ್ಮಾನ
ಮಹಾಕುಲೀಲಯ ಸಮಾನ ಚರಾ ಚರರೂಪಭೇದ ಸಂ। ಧಾನಜಿತಾ
ಭಿಮಾನತನಂ ಧರ್ಮವಿಹೀನ ಮಹಾಪ್ರಧಾನದೇ। ವಾನಘಕಾಯ್ವುದೆಮ್ಮ
ಬಸವಾ ಬಸವಾ ಬಸವಾ ವೃಷಾಧಿಪ ॥೯॥

ಉ॥ ಲಿಂಗಮಯಾಂತರಂಗ ಗುರುಲಿಂಗ ಪದಾಂಬುಜ ಭೃಂಗ
ಸತ್ಪ್ರಸಾ। ದಾಂಗ ಕೃಪಾಪರಿಸ್ಫುರದಪಾಂಗವಿಮುಕ್ತ ಭುಜಂಗ ಜಂಗ
ಮೋ। ತ್ತುಂಗ ಜಿತಾಭಿಷಂಗ ಗತದುಷ್ಕೃತ ಭಂಗಮದೀಯಲಿಂಗಭವ್ಯಾಂಗ
ಘನಾಂತರಂಗ ಬಸವಾ ಬಸವಾ ಬಸವಾ ವೃಷಾಧಿಪ॥೧೦॥

ಉ॥ ಉತ್ತಮಭಕ್ತಿ ವೃತ್ತಭಜನೋತ್ಸುಕ ಚಿತ್ತಯುದಾತ್ತ ಚಿತ್ಸು
ಖಾ। ಯತ್ತಕ್ರಿಯಾ ಪ್ರಮತ್ತ ನಿಖಿಲಾಗಮವೇತ್ತ ಗುಣೋಪಯುಕ್ತಸ।
ದ್ವೃತ್ತ ಪ್ರಸಾದ ಭೋಗಸಮುದೀರ್ಣ ವಿಶೇಷ ಸುಖಾಪ್ರಮತ್ತ ಭಾ॥
ಸ್ವತ್ತಮ ನೀನೇದಿಕ್ಕು ಬಸವಾ ಬಸವಾ ಬಸವಾ ವೃಷಾಧಿಪಾ ॥೧೧॥

ಉ॥ ದೇಹಜಸ್ಯೈರಿವಾಹ ಶಿವದೀಪಿತದೇಹ ಸುಖಪ್ರವಾಹನಿ। ರೋಹವಿನಮ್ರಸಂಯುಮಿ ಸಮೂಹಲ ಸದ್ಗುಣಗೇಹ ಸಂತತೋ। ತ್ಸಾಹ ನಿರೀಹ ಜಂಗಮ ವಿತಾನದಯಾ ವಿಹಿತಾವ ಗಾಹನಿ। ರ್ವಾಹನೆ ನೀನೆ ದಿಕ್ಕು ಬಸವಾ ಬಸವಾ ಬಸನಾ ವೃಷಾಧಿಪಾ॥೧೨॥

ಉ॥ ವ್ಯಾಸಫಲಾನಿ ವಾಸ ದರಹಾಸ ಮುಖ ಪ್ರತಿಭಾಸ ದತ್ತಕೈ ಲಾಸ ವಿಶೇಷ ಜಂಗಮ ವಿಲಾಸ ಶಿವೈಕ್ಯ ಸಮಾಸ ನಿರ್ಜಿತಾ।ಯಾಸ ಸಮಸ್ತ ಭಕ್ತಹೃದಯಾಂಬುಜ ನಿತ್ಯನಿವಾಸ ಧಿಕ್ಕೃತವ್ಯಾಸ ಶರಣ್ಯ ನೀನೇ ಬಸವಾ ಬಸವಾ ಬಸವಾ ವೃಷಾಧಿಪಾ॥೧೩॥

ಉ॥ ರಾಗಪರೋಪಭೋಗ ಗತರಾಗ ವಿಧೂತ ಭವಾದಿರೋಗ ನಿ। ರ್ಯೋಗಮಹಾಮರಾಗ ಬಹಿರಂತರ ನಿಷ್ಠಿತಯೋಗ ಸತ್ಕ್ರಿಯೋ। ದ್ಯೋಗ ಯುಕರ್ಮಯೋಗ ಶಿವಯೋಗ ಸಮಗ್ರ ಸುಖಾತಿ ಭೋಗದೇ।ವಾ ಗತಿ ನೀನೇ ತ್ರಾಹಿ ಬಸವಾ ಬಸವಾ ಬಸವಾ ವೃಷಾಧಿಪಾ ||೧೪||

ಉ॥ ಶೀತಲತಾಲವಾಲಯುವಶಿಷ್ಟ ಭವ ಪ್ರತಿಕೂಲಲಾಲಿತೋ। ತ್ತಾಲ ಗುಣಾನುಕೂಲ ಶಿವಧರ್ಮಮತ ಪ್ರತಿಪಾಲ ನಿತ್ಯಸ। ಲ್ಲೀಲಯಶೋ ವಿಶಾಲ ಚರಲಿಂಗ ಸುಖೋದಯಕಾಲ ಜಿಯ್ಯಪಾ। ಪಾಳಿಯಂ ದೂರು ಮಾಡುವ ಬಸವಾ ಬಸವಾ ಬಸವಾ ವೃಷಾಧಿಪಾ॥೧೫॥

ಇತ್ಯಾದಿಯಾಗೆ ಶತಕದ ಪ್ರಥಮಭಾಗದ ಪದ್ಯಗಳಲ್ಲಿ ಸಂಸ್ಕೃತ ಸಮಾಸಗಳನ್ನೇ ವಿಶೇಷವಾಗಿ ಉಪಯೋಗಿಸುತ್ತಾ ಶಬ್ದಾಲಂಕಾರ ಅರ್ಥಾ ಲಂಕಾರಗಳಿಗೆ ಹೆಚ್ಚು ಗಮನಕೊಟ್ಟು ಕವಿಸಮಯವನ್ನು ಪಾಲಿಸುತ್ತಾ ಪದ್ಯಗಳನ್ನು ಬರೆದಿರುತ್ತಾನೆ. ಬರಬರುತ್ತಾ ಭಕ್ತಿ ಪರವಶತೆಯು ಹೆಚ್ಚಾ ದಂತೆ ಶಬ್ದಾಲಂಕಾರಾದಿಗಳನ್ನು ಮೂಲೆಗೊತ್ತಿ ಅಚ್ಚ ತೆನುಗುಪದಗ ಳನ್ನೇ ಉಪಯೋಗಿಸುತ್ತಾ ತನ್ನ ನೈಸರ್ಗಿಕ ಕವಿತಾಶಕ್ತಿಯನ್ನು ಪ್ರದ ರ್ಶಿಸಿರುವನು. ಶ್ರೀ ಬಸವೇಶ್ವರನ ಅದ್ಭುತ ಪವಾಡಗಳನ್ನೂ ಅವುಗಳ ಲ್ಲಡಗಿರುವ ತತ್ತ್ವವನ್ನೂ ಹೃದಯಂಗಮವಾಗಿ ವರ್ಣಿಸಿರುವನು. ಬಸ ವಪುರಾಣವನ್ನೆಲ್ಲಾ ೫೦—೬೦ ಪದ್ಯಗಳಲ್ಲಿ ಮುಗಿಸಿಬಿಟ್ಟಿರುವನು. ಬಸ ವೇಶ್ವರ ಕಿಂಕರತ್ವದ ತತ್ತ್ವವನ್ನೂ, ಸರ್ವ ಸೌಹಾರ್ದ್ರಭಾವವನ್ನೂ, ಪಾಪಿ ಗಳ ವಿಷಯದಲ್ಲಿ ನಿರ್ದಾಕ್ಷಿಣ್ಯವನ್ನೂ ದೀನದಯಾಳುತ್ವವನ್ನೂ, ಶಿವ

ಯೋಗಸಂಪತ್ತನ್ನೂ ಸ್ವಾರ್ಥತ್ಯಾಗವನ್ನೂ ವಿಶೇಷಿಸಿ ಬರೆದಿರುತ್ತಾನೆ. ಅಂತ್ಯದಲ್ಲಿ ಬಸವೇಶ್ವರನಿಗೂ ಈಶ್ವರನಿಗೂ ಭೇದವಿಲ್ಲವೆಂದು ಪ್ರತಿಪಾದಿಸಿ ತನ್ನ ಶತಕವನ್ನು ಬಸವಾರ್ಪಣವಾಗಿ ಸಂಪೂರ್ಣಗೊಳಿಸಿರುತ್ತಾನೆ. ಮತ್ತು ಅಲ್ಲಲ್ಲಿ ಪಂಡಿತಾರಾಧ್ಯ ಮುಂತಾದ ಚರಿತ್ರ ಪುರುಷರ ಮತ್ತು ಶಿವಶರಣರ ಉಲ್ಲೇಖವನ್ನು ಮಾಡಿರುತಾನೆ.

ಒಂದು ಕಡೆ ಬಸವೇಶ್ವರನನ್ನು ಸಂಸ್ಕೃತ ದ್ರಾವಿಡ ಕನ್ನಡ ಮತ್ತು ಮರಾಠಿ ಈ ನಾಲ್ಕು ಭಾಷೆಗಳಲ್ಲಿ ಸ್ತುತಿಸಿರುವನು.

ಸಂಸ್ಕೃತದಲ್ಲಿ:—

ವೃ॥ ಹೃನ್ನಲಿನೇಸ್ಮರಾಮಿ ಭವದೀಯ ಪದದ್ವಿತಯಂ ಭವಾಟನ। ಸ್ವಿನ್ನತನು ಶ್ರಮಾಪಹಮಶೇಷ ಜಗತ್ಪ್ರಣುತಂ ಮದೀಶನಿ॥ ಷ್ಪನ್ನದಯಾನಿಧೇಯನುಚು ಸಂಸ್ಕೃತ ಭಾಷನುತಿಂತು ನಿನ್ನು ವಿ। ದ್ವನ್ನುತ ನಾಮಧೇಯ ಬಸವಾ ಬಸವಾ ಬಸವಾ ವೃಷಾಧಿಪಾ

ದ್ರಾವಿಡದಲ್ಲಿ:—

ಚ॥ ಪರಮನೆಯನ್ನೆ ಯಾಂಡವನೆ ಪನ್ನಗತಾನೆ ಯನಾಥ ನಾಥನೇ ಪೆರಿಯವನೇ ಪುಳಿಂದವನೇ ಪೇರಂಡಯಾನೆ ಪಿರಾನೆಯಪ್ಪನೇ॥ ತರಿಮುರಿಯಯ್ಯನೇಯನುಚು ದ್ರಾವಿಡ ಭಾಷನುತಿಂತುಮನ್ನನೋ। ವರ ಕರುಣಾವಿದೇಯ ಬಸವಾ ಬಸವಾ ಬಸವಾ ವೃಷಾಧಿಪ॥

ಕನ್ನಡದಲ್ಲಿ

ಚ॥ ಹಸುಳೆಯರೆನ್ನ ರಕ್ಷಿಸುವುದಾರಯವೆನ್ನವನೀತನೆಂದು ಮನ್ನಿಸುವುದು ನಿಮ್ಮಡಿಂಗೆರಗ ನಿಮ್ಮ ಪ್ರಸಾದಿಯ ನಿಮ್ಮದಾತ್ಮವೇಕಸಿ ಗತಿಯಂಚು ಭಕ್ತಿ ನಿನು ಗನ್ನಡ ಭಾಷಾನುತಿಂತು ಷಡ್ಗುಣ। ಶ್ವಸನಪುರಾತನಾತ್ಮ ಬಸವಾ ಬಸವಾ ಬಸವಾ ವೃಷಾಧಿಪಾ॥

ಮರಾಠಿ:—

ದೇವಪರೀ ತುಮ್ಹೀಚ ಗುರುದೇವ ಮಣೂನುತ ರೀತುಮ್ಹೀಚ ಗೋ। ಸಾವಿತರೀ ತುಮ್ಹೀಚ ತುಮಚಾಚ ಪ್ರಸಾದ ಮ್ಹೀಚಕೃಪಾಕರಾ॥ ಹೇ ವರದಾಯ ವಂಚು ನುತಿಯಿಂಚದ ನಿನ್ನೂನಸಾರೆಭಾಸದೇ। ವಾವಿನುತಾರ್ಸ ಲೀಲ ಬಸವಾ ಬಸವಾ ಬಸವಾ ವೃಷಾಧಿಪಾ ॥

# ಶಂಭುಲಿಂಗ ಪೇಳೆಲೈ?

(ಲೇಖಕಃ—ನಾರದ.)

---

ಭೋಗಷಟ್ಪದಿ॥

ಧರಣಿಯೊಳಗೆ ಮನವನೇಕೆ ।
ಮರುಳನಂತೆ ಕುಣಿಸುತಿರುವೆ ।
ಪರಮಕಾರುಣಿಕನೆ ಶಂಭುಲಿಂಗ ಪೇಳೆಲೈ॥
ಹರುಷಮಪ್ಪುದೇನೊ ನಿನಗೆ ।
ಚರಿಸುತಿರ್ಪ ಮನವ ನೋಡಿ ।
ದುರಿತಹರನೆ ಗಿರಿಜೆಯರಸ ಮರಣರಹಿತನೇ ॥೧॥

ಅಕಟ ತರಳತನವು ಪೋಯ್ತು ।
ಮುಕುತಿ ಯಿಚ್ಛೆಯಿಲ್ಲವಾಯ್ತು ।
ವಿಕಟ ಮೆನಿಪ ಹರಯ ಬಂದುದೀಗಲದರೊಳು ॥
ಭಗುತಿಯೆಲ್ಲ ವನಿತೆಯರೊಳು ।
ಯುಕುತಿಯೆಲ್ಲವಾರ್ಜನೆಯೊಳು ।
ಶಕುತಿಯೆಲ್ಲ ವೆಚ್ಚವಾಯ್ತು ಚಿಂತಿಸುದರೊಳು ॥೨॥

ಒಂದು ವೇಳೆ ಸಿರಿಯ ತನವ ।
ನೊಂದು ವೇಳೆ ಪಿರಿಯಜಸವ ।
ನೊಂದು ವೇಳೆ ಬಯಸುತಿಹುದು ಅರಸುತನವನು ॥
ಮಂದ ಭಾಗ್ಯಗೆಲ್ಲಿ ವೆಲ್ಲ ।
ವೆಂದು ಭಾವಿಸದೆಯೆ ಮನವು ।
ತಂದೆ ನಂದಿವಾಹ ನಿನ್ನ ಮರೆದು ಚರಿಸುದು ॥೩॥

ಲೋಲ ಲೋಚನೆಯರ ಕಂಡು ।
ಮೇಲನರಿಯದೆನ್ನ ಮನವು ।
ಶೂಲಿ ಪೋಡಿ ಪೋಗುತಿರ್ಪುದೇಕಕೇಸರಿ ।

ಕಾಲ ಕಾಲ ನಿನ್ನ ಪದವ ।
ಬಾಲ ಮನವು ಬಯಸದಿಹುದು ।
ಫಾಲನಯನ ನೋಡಲೆಲ್ಲ ನಿನ್ನ ಮಾಯೆಯು ॥೪॥

ಇಂತು ವಿವಿಧ ರೀತಿಯಿಂದೆ ।
ಚಿಂತೆಗಳನೆ ಪಡುತಲಿಹುದು ।
ಮುಂತೆ ಕಾಲಗೇನ ಹೇಳಲೆಂಬ ಮಾತನು ॥
ಚಿಂತಿಸದಯೆ ಮನವು ಮರುಳ ।
ನಂತೆ ಕುಣಿಯುತಿಹುದು ಶಿವನೆ ।
ಕಂತು ವೈರಿ ನೀನೆ ನೋಡಿ ಪೊರೆವುದೆಮ್ಮನು ॥೫॥

ಗಿಳಿಯು ಮರಿಯು ಪಂಜರದೊಳು ।
ಕಲಿಯುತಿರ್ಪುದಲ್ತೆ ತನ್ನ ।
ನೊಲುಮೆಯಿಂದ ಪೊರೆವ ದಣಿಯು ಕಲಿತನುಡಿಗಳ ॥
ಕಲಿವುದಂತೆ ಮಾಯೆಯಿಂದೆ ।
ಒಲಿದು ಮನವು ಗಿಳಿಯತೆರದಿ ।
ಚೆಲುವನೀನೆ ಕರ್ತೃ ನಿನ್ನ ಧೀನವೀಮನಂ ॥೬॥

ವೀಣೆ ಯನ್ನೆನುಡಿಪನೋರ್ವ ।
ಜಾಣನೆನಿಪ ವೀಣೆಗಾರ ।
ಬೀಣೆಯಿಂದೆ ಪೊರಟ ಸವಿಯ ದನಿಯನಾಲಿಸಿ ॥
ವೀಣೆ ನೋಡಲೆನ್ನ ದೀಗ ।
ಜಾಣತನವು ತನ್ನದೆಂಬ ।
ಕೇಣವಿಲ್ಲದವನು ವೀಣೆಯನ್ನೆ ಶ್ಲಾಘಿಪಂ ॥೭॥

ಗೊಂಬೆಗಳನೆ ಕುಣಿಪನೊರ್ವ ।
ಗೊಂಬೆಯಾಡಿಸುವನುನೋಡಿ ।
ಕುಂಭಿಣಿಯೊಳು ನಲಿವರೆಲ್ಲ ಜನರು ಹರುಷದಿ ॥
ಗೊಂಬೆಗಳನು ಪೊಗಳುತಿಹರು ।
ಗೊಂಬೆಯಾಡಿಸುವನ ಮರೆತು ।
ಸಾಂಬ ನಿನ್ನ ಮರೆಯುತಿಹುದು ಲೋಕವೀನೀಪರಿ ॥೮॥

ನೀನೆನ್ನನ್ನ ಮನಸಿನೊಳಗೊ ।
ನಾನೆ ನಿನ್ನ ಮಾಯೆಯೊಳಗೊ ।
ಭಾನುನಯನ ಆರಿಯೆನಿದರವಿವರ ನೆಲ್ಲವಾ ॥
ನೀನೆ ನಾನೊ ನಾನೆ ನೀನೊ ।
ಹಾನಿವೃದ್ಧಿಯೆಲ್ಲ ವೆನಗೊ ।
ಮೌನಿವರದ ನೆನಿಪ **ಶಂಭು ಲಿಂಗ** ಪೇಳೆಲೈ ॥೯॥

**ಕಂದ**॥ ಶಿವ ಕವಿಗಳಣುಗನೆನಿಸಿಹ ।
ಶಿವ ಮೂರ್ತಿಯ ಸೇವೆಗೈಯ್ವ ಶಿವಕವಿಯೊರ್ವಂ ॥
ಶಿವಪಾದಪೂಜೆ ಗೆನ್ನುತೆ ।
ಸುವಿಲಾಸ ದೊಳಿತ್ತ ಸಿಂದು ಕುಸುಮಾಂಜಲಿಯಂ ॥೧೦॥



# ಮುದನೂರು.

ಲೇಖಕ:—ರಾ. ರಾ. ಗೊಲ್ಲಾಳ ಪೂಜಾರಿ ವಿದ್ಯಾರ್ಥಿ ಎಫ ಏ ರಾಜಾರಾಮ
ಕಾಲೇಜ ಕೊಲ್ಹಾಪುರ



(ಮಿ. ಗೊಲ್ಲಾಳ ಪೂಜಾರಿ ಇವರು ನಮ್ಮ ವಿನಂತಿಯನ್ನು ಮಾನ್ಯಮಾಡಿ ಮುದನೂರು ಗ್ರಾಮಕ್ಕೆ ಹೋಗಿ ಶಿವಾನುಭವಕ್ಕೋಸ್ಕರ ಅದರ ವೃತ್ತಾಂತವನ್ನು ಬರೆದು ನಮ್ಮಕಡೆಗೆ ಕಳಿಸಿದ್ದಕ್ಕಾಗಿ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ.
ಸಂಪಾದಕ.)

---

ಮುದನೂರು ಈಗ ಸರ್ವ ಜನರಿಂದ ಕ್ಷೇತ್ರಸ್ಥಾನವೆಂದೆನಿಸಿಕೊಳ್ಳಲ್ಪಡುತ್ತದೆ. ಇದೊಂದು ಈಗ ನಿಜಾಮರಾಜ್ಯದ ಕಲಬುರ್ಗಿಜಿಲ್ಹೆಯ ಸುರಪುರ ತಾಲೂಕಿನಲ್ಲಿ ೨೦೦೦ ಜನವಸತಿಯುಳ್ಳ ಗ್ರಾಮವಿರುತ್ತದೆ. ವಿಜಾಪುರ ಜಿಲ್ಹೆಯಲ್ಲಿಯ ಸಿಂದಗಿ ಗ್ರಾಮದಿಂದ ಆಗ್ನೇಯ ದಿಕ್ಕಿಗೆ ಸುಮಾರು ೩೦ ಮೈಲಿನ ಮೇಲೆ ಇದು ಇರುತ್ತದೆ. ಇದರಲ್ಲಿ ಹಿರಿಯ ಮುದನೂರೆಂದೂ, ಚಿಕ್ಕ ಮುದನೂರೆಂದೂ, ಎರಡು ಭಾಗಗಳಿವೆ. ಇವೆರಡರ ಮಧ್ಯದಲ್ಲಿ ರಾಮತೀರ್ಥದಿಂದ ಒಂದು ದೊಡ್ಡ ಕಾಲುವೆಯು ಹರಿಯುತ್ತ ಹೋಗಿದೆ.

ಮುದನೂರು ಒಂದು ಕ್ಷೇತ್ರಸ್ಥಾನವೆಂದೆನ್ನಲಿಕ್ಕೆ ಇದು ಈಗಲೂ ಅರ್ಹವಾಗಿದೆ. ಎಷ್ಟೋ ಪ್ರಸಿದ್ಧವಾದ ತೀರ್ಥಗಳಿಂದಲೂ, ಭವ್ಯವಾದ ದೇವಾಲಯಗಳಿಂದಲೂ, ತುಂಬಿಕೊಂಡಿರುತ್ತದೆ. ಇಲ್ಲಿ ರಾಮತೀರ್ಥ, ಲಕ್ಷ್ಮಣತೀರ್ಥ, ಹಾಲುತೀರ್ಥ, ಸಂಗಮ ತೀರ್ಥ, ಪಾಂಡುತೀರ್ಥ, ಮರುಳತೀರ್ಥ, ಸಕ್ಕರೆತೀರ್ಥಗಳೆಂದು ಏಳು ತೀರ್ಥಗಳಿವೆ. ಅವುಗಳಲ್ಲಿ ರಾಮತೀರ್ಥ ಮತ್ತು ಲಕ್ಷ್ಮಣತೀರ್ಥಗಳೆರಡು ಬಹು ವಿಸ್ತೀರ್ಣವಾದಂಥವುಗಳು. ಈ ಭಾಗದಲ್ಲಿ ಎಷ್ಟೋ ಸಲ ಅನಾವೃಷ್ಟಿಯಾಗಿದ್ದರೂ ಕೂಡ ಈ ಎರಡು ತೀರ್ಥಗಳಿಗೆ ನೀರಿನ ಕೊರತೆಯು ಎಂದೂ ಬೀಳುವದಿಲ್ಲ. ಇವುಗಳಿಂದ ಹೊರಡುವ ಎರಡು ಬಹು ದೊಡ್ಡ ಕಾಲುವೆಗಳು ಎಷ್ಟೋ ಹೊಲಗಳನ್ನುಣಿಸಿ ಜನರನ್ನು ಮೊದಲಿನಿಂದಲೂ ಪೊರೆಯುತ್ತ ಬಂದಿವೆ.

ಹಾಲುತೀರ್ಥ, ಸಂಗಮ ತೀರ್ಥ ಮತ್ತು ಪಾಂಡುತೀರ್ಥಗಳಲ್ಲಿ ಯಾವಾಗಲೂ ನೀರು ಇರುತ್ತದೆ. ಮರುಳತೀರ್ಥದಲ್ಲಿ ಮಳೆಗಾಲದಲ್ಲಷ್ಟೇ ನೀರು ಇರುತ್ತದೆ. ಸಕ್ಕರೆತೀರ್ಥವು ಮಾತ್ರ ಈಗ ಹುಗಿದುಬಿಟ್ಟಿದೆ.

ಈ ಗ್ರಾಮದಲ್ಲಿ ದೇವಾಲಯಗಳಿಗಂತೂ ಗಣನೆಯೇ ಇಲ್ಲ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ರಾಮನಾಥನ ಗುಡಿ ಅಥವಾ ದಾಸಿಮಯ್ಯನ ಗುಡಿಯು. ಇದು ಶಿವಾಲಯವು. ದೇವರ ಎದುರಿಗೆ ದಾಸಿಮಯ್ಯನ ಒಂದು ಕಲ್ಲಿನ ಮೂರ್ತಿಯು ಇದೆ. ಇನ್ನೊಂದು ಲಕ್ಷ್ಮಣನ ಗುಡಿ. ಈ ಲಕ್ಷ್ಮನ ಗುಡಿಗೆ ಮಲ್ಲಿಕಾರ್ಜುನ ಗುಡಿಯೆಂತಲೂ ಜನರು ಅನ್ನುವದುಂಟು. ಎಷ್ಟೋ ದೇವಾಲಯಗಳು ಬಿದ್ದದರಿಂದ ಅವುಗಳ ಪುರಾತನ ಗದ್ದುಗೆಯ ಕಲ್ಲುಗಳ ಮೇಲೆ ಮನೆ ಗಟ್ಟಿದ ಅರ್ಧ ಊರೇ ಇದೆ. ಇವುಗಳಲ್ಲಿ ರಾಮನಾಥನ ಗುಡಿಯೇ ಆ ಕಾಲಕ್ಕೆ ಬಹು ವಿಸ್ತೀರ್ಣವಾಗಿತ್ತೆಂದು ತೋರುತ್ತದೆ. ಯಾಕಂದರೆ ಊರ ದಂಡೆಗಿರುವ ಈ ಗುಡಿಯಿಂದ ಹೋದ ಗದ್ದುಗೆ ಗಲ್ಲುಗಳ ಅವಶೇಷಗಳು ಸಂದಿಲ್ಲದೆ ನಡು ಊರಿನ ವರೆಗೂ ಹಬ್ಬಿದುದನ್ನು ನಾವು ಕಣ್ಣಾರೆ ಕಾಣಬಹುದು. ರಾಮನಾಥನ ಗುಡಿಯಲ್ಲಿಯ ಶಿಲಾಶಾಸನವನ್ನು ನೋಡಲಾಗಿ ಆದರಲ್ಲಿ "೧೪೦೦ ದೇವರ ನಂದಾದೀವಿಗೆಗೆ ಬಿಟ್ಟ ನಾಣ ೧" ಎಂಬದು ಉಲ್ಲೇಖವು ಇದೆ. ಈ ಶಾಸನದಲ್ಲಿ ಮುದನೂರು ಮಲ್ಲಿದೇವರಸನು ದೇವಾಲಯಕ್ಕೆ ಕೊಟ್ಟ ಭೂ ದಾನದ ವಿವರಣೆಯು ಇದೆ. ಈ ಸಂಗತಿಯಿಂದ ರಾಮದೇವರ ಗುಡಿಯು ಅಥವಾ ದಾಸಿಮಯ್ಯನ ಗುಡಿಯು ಪೂರ್ವ ಕಾಲದಲ್ಲಿ ಒಂದೇ ಒಂದು ಬಹು ವಿಶಾಲವಾದ ದೇವಾಲಯವಾಗಿತ್ತೆಂದು ತೋರುತ್ತದೆ. ಈ ರಾಮದೇವರ ಗುಡಿಯಲ್ಲಿ ಇನ್ನೊಂದು ಶಿಲಾಶಾಸನವಿದ್ದು ಅದರಲ್ಲಿ ಶ್ರೀ ಮಾರ್ಕಂಡೇಶ್ವರ ದೇವಾಲಯದ ಉಲ್ಲೇಖವಿದೆ. ಇದು ಬೇರೆ ದೇವಾಲಯವಿದ್ದು ಅಲ್ಲಿದ್ದ ಈ ಶಿಲಾಲೇಖವನ್ನು ಇಲ್ಲಿ ತಂದಿಟ್ಟಿರಬಹುದೆಂದು ತೋರುತ್ತದೆ. ಈ ದೇವಾಲಯದಲ್ಲಿ ಕೆತ್ತಿಗೆಯ ಕೆಲಸಗಳು ಬಹು ಸುಂದರವಾಗಿವೆ.

ಲಕ್ಷ್ಮಣನ ಗುಡಿಯಾದರೂ ಮಹತ್ವದ್ದದೆ. ಇದಕ್ಕೆ ಮಲ್ಲಿಕಾರ್ಜುನ ಗುಡಿಎಂತಲೂ ಜನರು ಕರೆಯುತ್ತಾರೆ. ಕವಿ ಚರಿತೆ ಭಾಗ ೧ ಪುಟ೨೧೫ ರಲ್ಲಿ ಭೋಗ ಮಲ್ಲಿಕಾರ್ಜುನ ಲಿಂಗದ ಉಲ್ಲೇಖವಿದೆ. ಈ ದೇವಾಲಯವು ಈ ಗುಡಿಯೇ ಆಗಿರಬಹುದು.

ಇವಲ್ಲದೆ ಗೋಪಾಲಸ್ವಾಮಿಯ ಗುಡಿಯೆಂಬ ಮೊದಲಿನ ಕಾಲದ ದೇವಾಲಯವಿದೆ. ಇದು ಸಣ್ಣದಿದ್ದರೂ ಪುರಾತನದಾಗಿದೆ. ಒಳಗೆ ಗೋಪಾಲ ಮೂರ್ತಿಯು ಇದೆ. ಈ ಗುಡಿಯ ಕಂಬಗಳ ಮೇಲೆಲ್ಲ ಕನ್ನಡ ಶಾಸನಗಳಿವೆ. ಅವುಗಳಲ್ಲಿ ಕಳಚೂರ್ಯ ಅರಸರ ಶಾಸನಗಳೇ ಬಹಳ. ಇನ್ನುಳಿದವುಗಳಲ್ಲಿ ಕೆಲವು ರಾಷ್ಟ್ರಕೂಟರವು ಇವೆ. ಶಾಸನಗಳಲ್ಲಿ ಈ ದೇವಾಲಯಕ್ಕೆ ಮೊದಲು ಶ್ರೀ. ಲಕ್ಷ್ಮಣೇಶ್ವರ ದೇವಾಲಯವೆಂದು ಕರೆಯುತ್ತಿದ್ದದ್ದು ಕಂಡು ಬರುತ್ತದೆ. ಆದರೆ ಈಗ ಇಲ್ಲಿಯ ಜನರು ಇದಕ್ಕೆ ಗೋಪಾಲಸ್ವಾಮಿಯ ಗುಡಿಯೆಂತಲೂ ಮೊದಲನೆಯದಕ್ಕೆ ಲಕ್ಷ್ಮಣಗುಡಿ ಎಂತಲೂ ಯಾಕೆ ಅನ್ನುತ್ತಾರೋ ತಿಳಿಯದು.

ಇವಲ್ಲದೆ ಊರಲ್ಲಿ ಶಿಲಾಶಾಸನಗಳಾದರೂ ಬಹಳಿವೆ. ಕೆಲವಂತೂ ಸವೆದು ಹೋಗಿವೆ. ಇವುಗಳಲ್ಲಿ ರಾಮನಾಥನಗುಡಿಯಲ್ಲಿ ಇಟ್ಟಿದ್ದೆ ಬಹಳ ದೊಡ್ಡದೂ, ಓದಲು ಸ್ಪಷ್ಟವಾದುದೂ ಇದೆ. ಇದು ಚಾಳುಕ್ಯ ಅರಸನಾದ ಶ್ರೀಮದ್ಭೂಲೋಕಮಲ್ಲನ ಮಹಾಮಂಡಳೇಶ್ವರನಾದ ಮುದನೂರ ಮಲ್ಲಿದೇವರಸನು ವಿಕ್ರಮ ವರ್ಷದ ೫೪ನೆಯ ಸೌಮ್ಯಸಂವತ್ಸರದಲ್ಲಿ ಶ್ರೀ ಮಾರ್ಕಂಡೇಶ್ವರ ದೇವರ ಪೂಜೆ ಮೊದಲಾದುದಕ್ಕೆ ಕೊಟ್ಟ ಭೂದಾನದ ಶಾಸನವೆಂದು ಹೇಳಿದೆ. ಗೋಪಾಲಸ್ವಾಮಿಯ ಗುಡಿಯಲ್ಲಿಯ ಶಾಸನಗಳಲ್ಲಿ ಕಳಚೂರ್ಯ ಅರಸನಾದ ರಾಯಮುರಾರಿ ಗೋವಿಂದನ ಮುಖ್ಯಪ್ರಧಾನನೂ, ಸೇನಾಧಿಪತಿಯೂ, ದಂಡನಾಯಕನೂ ಹಲವು ರಾಜರ ರಾಜ್ಯದಾಡಳಿತೆಯನ್ನು ಸಾಗಿಸಿದವನೂ ಆದ ಇತಿಹಾಸಪ್ರಸಿದ್ಧ ಬಮ್ಮ ದೇವರಸನುಗುಡಿಗೆ ಭೂದಾನ ಮಾಡಿದ್ದು ಉಲ್ಲೇಖಿಸಲ್ಪಟ್ಟಿದೆ. ಕಳಚೂರ್ಯರ ಶಾಸನಗಳು ಶಾಲಿವಾಹನ ಶಕೆಯ ೧೧ನೆಯ ಶತಮಾನದವುಗಳಿವೆ ಮೇಲೆ ಕಾಣಿಸಿದ ಎಲ್ಲ ಶಾಸನಗಳಲ್ಲಿ ಮುದನೂರಿಗೆ ಮುದಿನಿರೂರು ಎಂದು ಕರೆದಿದ್ದಾರೆ.

ನಮ್ಮ ಶಿವಶರಣನಾದ ದೇವರ ದಾಸಿಮಯ್ಯನು ಈ ಮುದನೂರು ಕ್ಷೇತ್ರದಲ್ಲಿಯೇ ರಾಮನಾಥನಗುಡಿಯ ಬಳಿಯಲ್ಲಿ ವಾಸಿಸುತ್ತಿದ್ದನೆಂದು ಐತಿಹ್ಯವದೆ. ಆದ್ದರಿಂದ ಈ ಗುಡಿಗೆ ದಾಸಿಮಯ್ಯನ ಗುಡಿಯೆಂತಲೂ ಜನರು ಅನ್ನುವದುಂಟು. ಅವನು ಗುಡಿಯಲ್ಲಿಯೇ ತನ್ನ ನೇಕಾರಿಕೆಯನ್ನು ಸಾಗಿಸುತ್ತಿದ್ದನಂತೆ. ಗುಡಿಯಲ್ಲಿಯ ರಾಮಲಿಂಗಕ್ಕೆ ಹಿಂದಿನ

ಮುಗ್ಗಲು ಸ್ವಲ್ಪ ಸವೆದ ಚಿಹ್ನವಿರುತ್ತದೆ. ಇದು ದಾಸಿಮಯ್ಯನು ನೇಯುವಾಗ ಮಗ್ಗದ ಹಗ್ಗವನ್ನು ಲಿಂಗಕ್ಕೆ ತೊಡಕಿಸುತ್ತಿದ್ದರಿಂದ ಲಿಂಗವು ಕಂಡುಗೊರೆದಿದೆಂಬ ಜನರು ಹೇಳುತ್ತಾರೆ. ಈ ದಾಸಿಮಯ್ಯನ ಅಥವಾ ರಾಮನಾಥನ ದೇವಾಲಯದಲ್ಲಿ ಮುದನೂರ ಗ್ರಾಮಾಧಿಕಾರಿಗಳಾದ ರಾ| ರಾ| ಬಸವಂತರಾಯರು ತಮ್ಮ ಪೂರ್ವಜರ ಪರಿಪಾಠದಂತೆ ಈಗಲೂ ದಾಸಿಮಯ್ಯನ ಪುರಾಣ ಪ್ರವಚನವನ್ನು ಹೇಳಿಸುತ್ತ ಬಂದಿರುತ್ತಾರೆ. ಇದು ಶ್ಲಾಘನೀಯವಾಗಿದೆ.

ಮುದನೂರಿಂದ ಒಂದು ಮೈಲಿನ ಮೇಲೆ ಒಂದು ಅಗ್ಗಣಿ ಇದೆ. ಇದು ಅಗ್ಗಣಿ ಹೊನ್ನಯ್ಯನ ಕ್ಷೇತ್ರ. ಮತ್ತು ಇದರ ಪೂರ್ವಕ್ಕೆ ಆರು ಮೈಲಿನ ಮೇಲಿರುವ ಕೆಂಭಾವಿಯಲ್ಲಿ ಶರಣಭೋಗಯ್ಯನಿರುತ್ತಿದ್ದನು. ಅಂತೂ ಆ ಕಾಲದಲ್ಲಿ ಈ ಭಾಗವೆಲ್ಲ ಶಿವಶರಣರ ಆವಾಸಸ್ಥಾನವಾಗಿತ್ತು.

ಅಂತೂ ಮುದನೂರು ಬಹು ಪ್ರಾಚೀನ ಕಾಲದಲ್ಲಿ ಮುದ್ರಾಪುರವೆಂದೂ, ತರುವಾಯ ಮುದ್ಧಿನಿರೂರೆಂದೂ ಹೆಸರು ಹೊಂದಿದ ದೊಡ್ಡ ಕ್ಷೇತ್ರಸ್ಥಾನವು. ಈ ಊರ ಶಿಲಾಶಾಸನಗಳಲ್ಲಿ ಇದಕ್ಕೆ ದಕ್ಷಿಣ ವಾರಣಾಸಿಯೆಂದು ಕರೆದಿದ್ದಾರೆ. ಈಗಲೂ ಈ ಸ್ಥಾನವು ರಸಿಕನಿಗೆ ಬಲು ರಮಣೀಯವಾಗಿಯೂ ಕವಿಗೆ ಸೃಷ್ಟಿಸೌಂದರ್ಯದ ನೋಟವಾಗಿಯೂ, ಚತುರಶಿಲ್ಪಿಗೆ ದೇವಾಲಯದಲ್ಲಿ ಕಲ್ಲಿನಲ್ಲಿ ಕೊರೆದು ಮಾಡಿದ ಭಾವಪರಿಪೂರ್ಣವಾದ ಗೊಂಬೆಗಳ ಮತ್ತು ಸೂಕ್ಷ್ಮತರದ ಕೆತ್ತಿಗೆಯ ಕುಸುರುಗಳ ಚಿತ್ರಶಾಲೆಯಾಗಿಯೂ, ಅಗಣಿತಾನಂದವನ್ನು ಕೊಟ್ಟು ತನ್ನ ಪೂರ್ವದ ಸೊಬಗನ್ನು ಈಗಲೂ ತೋರಿಸುವಂಥದಾಗಿದೆ.



# ಶ್ರೀ ಬಸವೇಶ್ವರಾಷ್ಟಕಂ

(ಲೇಖಕ:-- ಶ್ರೀ ಸದಾಶಿವ ಶಿವಾಚಾರ್ಯರು ಶಿವಯೋಗಮಂದಿರ ಬದಾಮಿ).



ಶ್ರೀ ಮದ್ಭಾಸುರ ಭಸ್ಮರೇಖ ವಿಲಸದ್ವಿಸ್ತಾರ ಫಾಲಂ ಶಿವಮ್। ಶ್ರೀ ಮದ್ರುದ್ರ ಸುನೇತ್ರ ಜಾತವರರುದ್ರಾಕ್ಷೈಃ ಸದಾಲಂಕೃತಮ್॥ ಶ್ರೀ ಮತ್ತಾರಕ (ಶ್ರೀಮತ್ಪ್ರಣವ) ಮಂತ್ರಪೂರ್ಣ ಹೃದಯಾಕಾಶಂ ಪರೇಶಂ ಪರಮ್। ಶ್ರೀ ಮಚ್ಛ್ರೀ ಬಸವಾಧಿಪಂ ಪರತರಂ ವಂದೇ ಸದಾ ಸಾದರಮ್॥೧॥

ಶ್ರೀಮತ್ಸದ್ಗುರು ಪಾದಭಕ್ತಿರಸಿಕಂ ಭಕ್ತಿಂ ಜಗದ್ವಿಸ್ತೃತಮ್। ಶ್ರೀ ಮಚ್ಚಿದ್ಗುರು ಲೀನಮಾನಸ ಮಜಂಮಾಯಾವಿದೂರಂ ಹರಮ್ ॥ ಶ್ರೀ ಮದ್ವಿಶ್ವಗುರುಂ ಪರಾತ್ಪರತರಂ ಭಕ್ತಿಪ್ರಭಾವಾನ್ವಿತಮ್। ಶ್ರೀ ಮಚ್ಛ್ರೀ ಬಸವಾಧಿಪಂ ಪರತರಂ ವಂದೇ ಸದಾ ಸಾದರಮ್॥೨॥

ಶ್ರೀಮದ್ಧಸ್ತತಲೇಷ್ಟಲಿಂಗ ಸುಮಹಾ ಭಕ್ತ್ಯಾತ್ತ ಚಿತ್ತೇಕ್ಷಣಮ್। ಶ್ರೀಮತ್ಪೂಜ್ಯ ಪದೋದಕೇಽತಿ ಕುತಕಂ ನಿತ್ಯಂಚ ಸದ್ಭೃತ್ಯಕಮ್॥ ಶ್ರೀಮಲ್ಲಿಂಗ ಮುಖಾರ್ಪಣೀಯಮಹ ಶೇಷಾನ್ನಂಭುಜಂ ಸ್ವಾಮಿನಮ್। ಶ್ರೀ ಮಚ್ಛ್ರೀಬಸವಾಧಿಪಂ ಪರತರಂ ವಂದೇ ಸದಾ ಸಾದರಮ್॥೩॥

ಶ್ರೀಮದ್ವೇದ ಶಿವಾಗಮೇಷು ಕಥಿತಾಚಾರೇ ಪರೇ ಮೋಹಿತಮ್। ಶ್ರೀಮದ್ವೇದ ಶಿವಾಗಮೋಕ್ತ ವಚನೈರ್ವ್ಯಸ್ತಾನ್ಯತಂತ್ರಾಂತರಮ್॥ ಶ್ರೀ ಮದ್ರಾಜ ವಿರಾಜಮಾನ ಚರಿತಂ ಭಕ್ತೇಷ್ಟ ಸಿದ್ಧಿಪ್ರದಮ್। ಶ್ರೀಮಚ್ಛ್ರೀ ಬಸವಾಧಿಪಂ ಪರತರಂ ವಂದೇ ಸದಾ ಸಾದರಮ್॥೪॥

ಶ್ರೀಮದ್ವೀರಮತಾಬ್ಧಿ ವರ್ಧನ ವಿಧೌ ಪೂರ್ಣೇಂದು ತುಲ್ಯಾಂಶುಭಮ್। ಶ್ರೀಮದ್ವೀರವ್ರತೇ ತಥಾಪಿ ನಿಯಮೇ ಶ್ರದ್ಧಾಪರಂ ಸದ್ಗುರುಮ್॥ ಶ್ರೀಮತ್ಪೂರ್ಣ ಕೃಪಾಕಟಾಕ್ಷಭರಿತಂ ಭಕ್ತೈಕ ಮುಕ್ತಿಪ್ರದಮ್। ಶ್ರೀಮಚ್ಛ್ರೀಬಸವಾಧಿಪಂ ಪರತರಂ ವಂದೇ ಸದಾ ಸಾದರಮ್ ॥೫॥

ಶ್ರೀಮತ್ಷಟ್‌ಸ್ಥಲಯೋಗ ಏವ ನಿರತಂ ಷಡ್ವರ್ಗದೂರೀಕೃತಮ್
ಶ್ರೀಮಚ್ಛಾಂತಿ ಸುದಾಂತಿ ಜೃಂಭಿತ ಮಹಾತತ್ವಾಧಿರೂಢಂ ಸುರನ್
(ವರಂ)॥ ಶ್ರೀಮತ್ಕೇವಲ ಭಕ್ತಿಮಾರ್ಗರಚನೇ ಬದ್ಧಾದರಂ ಬುದ್ಧಿದಮ್
ಶ್ರೀಮಚ್ಛ್ರೀಬಸವಾಧಿಪಂ ಪರತರಂ ವಂದೇ ಸದಾ ಸಾದರಮ್ ॥೬॥

ಶ್ರೀಮಚ್ಛಂಭುಃ ಪುರಾವತಾರಧರಮಾರಾಧ್ಯಂ ಸದಾದ್ಯಂ ಬುಧಮ್।
ಶ್ರೀಮದ್ಭದ್ರಮುನಾರ್ಯ ಸಂಘಹರಣೇ ರುದ್ರಂ ಚ ಕ್ಷುದ್ರಂ ಪರಮ್॥ ಶ್ರೀ
ಮತ್ಸಾರಸುಖಾನುಭೂತಿಪರಿಣಾಮೈಕಾಸ್ಪದಂ ಶ್ರೀ ಪ್ರಭುಮ್। ಶ್ರೀಮ
ಚ್ಛ್ರೀಬಸವಾಧಿಪಂ ಪರತರಂ ವಂದೇ ಸದಾ ಸಾದರಮ್ ॥೭॥

ಶ್ರೀಮಲ್ಲಿಂಗ ಶಿವಾಂಗಯೋರತಿಶಯಜ್ಞಾನ ಪ್ರದಂ ಭೂಪ್ರಭುಂ।
ಶ್ರೀಮದ್ಭೂರಿ ಗಣಾರ್ಚನಾರ್ಪಣ ಮಹಾಕಾರ್ಯೇಽತಿಧೀರಂ ಧುರಮ್॥
ಶ್ರೀಮನ್ನೈಜ ಗುರೋಃ ಪದಾರ್ಪಿತ ಸಮಸ್ತಾತ್ಮಾರ್ಥಜಾತಂ ಮುದಾ। ಶ್ರೀ
ಮಚ್ಛ್ರೀಬಸವಾಧಿಪಂ ಪರತರಂ ವಂದೇ ಸದಾ ಸಾದರಮ್ ॥೮॥

ಶ್ರೀಮದ್ಭಕ್ತಿಪರೇಣ ಸದ್ಗುರು ಕೃಪಾಲಬ್ಧ ಪ್ರವೀಣೇನ ವೈ। ಶ್ರೀ
ಮತ್ಸ್ಮಂದಿರವಾಸಿನಾ ಗುರುಪದಾಸಕ್ತೇನ ಮುಕ್ತೇಪ್ಸುನಾ॥ ಶ್ರೀಮದ್ಧೀರ
ಸದಾಶಿವಾರ್ಯ ಗುರುಣಾ ಚೇದಂಕೃತಂವಾಷ್ಟಕಮ್। ಶ್ರೀಮದ್ಭಕ್ತಿಪರಃ
ಪಠತ್ಯನುದಿನಂ ಯಸ್ತಸ್ಯ ಸಿದ್ಧಿ ಪ್ರದಮ್ ॥೯॥

# ಕೆಲವು ಪ್ರಮಾದಗಳು.

(ಲೇಖಕ:— ಪಂಡಿತ ಚಿದಿರೆಮಠದ ವೀರಭದ್ರ ಶರ್ಮಾ (ಕಾಶಿಯಿಂದ) )

'ಶಿವಾನುಭವ'ವು ವೀರಶೈವರ ಸೇವೆಯನ್ನು ನಿರ್ವಂಚನೆಯಿಂದ ಮಾಡುತ್ತದೆ. ಅಮೌಲ್ಯಗಳಾದ ಐತಿಹಾಸಿಕ ಲೇಖಗಳನ್ನು ಹೇರಳವಾಗಿ ಪ್ರಕಟಿಸುತ್ತಿದೆ. ಆದರೆ "ಪ್ರಮಾದೋ ಧೀಮತಾಮಪಿ" ಎಂಬ ನುಡಿಯನ್ನನುಸರಿಸಿ ಕೆಲವರ ಲೇಖಗಳಲ್ಲಿ ಸ್ವಾಭಾವಿಕವಾಗಿ ದೋಷಗಳು ಮೊದಲಿನಿಂದಲೂ ಕಾಣುತ್ತಿವೆ. ಬರುಬರುತ್ತ ಇತಿಹಾಸಗಳೆಂದು ಹೇಳಲ್ಪಡುವ ಪ್ರಾಮಾಣಿಕಲೇಖಗಳಲ್ಲಿಯೂ ಕೂಡ ಪ್ರಮಾದಗಳು ಸೇರುತ್ತಿರುವದರಿಂದ ಅವುಗಳನ್ನು ಹೋಗಲಾಡಿಸಲು ಯಥಾಮತಿ ಪ್ರಯತ್ನಿಸುವೆ.

೧

ಗತ ಸಂಚಿಕೆಯ «ಇತಿಹಾಸದ ಕಣಗಳ» ಲ್ಲಿ ಹಲಸಂಗಿ ಶ್ರೀ ಚನ್ನಮಲ್ಲಪ್ಪನವರು ಶಿವಲಿಂಗದ ಸ್ವರೂಪವನ್ನು ನಿರ್ಣಯಿಸುವದಕ್ಕೋಸ್ಕರ ಕೆಲವು ದುರ್ಬಲಾಧಾರಗಳಿಂದ "ಏಳೆಂಟು ಶತಮಾನಗಳ ಹಿಂದೆ ಲಿಂಗಕ್ಕೆ ಪೀಠವಿರಲಿಲ್ಲ"ವೆಂಬ ಸಿದ್ಧಾಂತವನ್ನು ಮಾಡಿರುವರು. ಇದು ಸರಿಯಾದುದಲ್ಲ. ಶಿಲ್ಪಿಯ ಅನಭಿಜ್ಞತೆಯಿಂದಲೂ ದೇವಾಲಯದಲ್ಲಿ ಲಿಂಗಕ್ಕಿರುವ ಅಪ್ರಾಧಾನ್ಯತೆಯಿಂದಲೂ ಲಿಂಗಾಕೃತಿ ದೊಡ್ಡದಾದುದರಿಂದಲೂ ಕೆಲವು ಲಿಂಗಗಳಿಗೆ ಮಾತ್ರ ಪೀಠವು ಬಿಡಲ್ಪಟ್ಟಿರುವದು. ನಿಸ್ಸಂಶಯವಾಗಿ ಎರಡು ಸಾವಿರವರ್ಷಗಳ ಹಿಂದಿನವೆಂದು ಹೇಳಲ್ಪಡುವ, ಸೌರಾಷ್ಟ್ರ, ಪರಳೀ, ಉಜ್ಜಯನೀ, ಜ್ಯೋತಿರ್ಲಿಂಗಗಳು ಸಪೀಠವಾಗಿರುವದಕ್ಕೆ ಕಾರಣವೇನು? ನಿಜಾಂ ದೇಶದ ಪ್ರಸಿದ್ಧ ದೇವಾಲಯಗಳಾದ ಎಲ್ಲೋರಾ, ಪಾನಗಲ್ಲು, ಪಿಲ್ಲಲಮರ್ರಿ, ಪಾಲಂಪೇಟ, ಮೊದಲಾದ ಲಿಂಗಗಳು ಅತಿ ಸುಂದರವಾದ ಕರಿ ದುಂಡು ಕಲ್ಲಿನ ಪೀಠಗಳಿಂದೊಡಗೂಡಿವೆ. ಇವುಗಳೆಲ್ಲ ಸಾವಿರವರ್ಷಕ್ಕಿಂತಲೂ ಪೂರ್ವದವೇ ಹೊರತು ಅರ್ವಾಚೀನವಾದುವಲ್ಲವು. ದೀಡು ಸಾವಿರ ವರ್ಷಗಳ ಹಿಂದಿನದಿಂದ ಶಿಲ್ಪವೊಂದು ಮದ್ರಾಸಿನ ವಸ್ತು ಪ್ರದರ್ಶನ ಶಾಲೆಯಲ್ಲಿದೆ. ಅದರಲ್ಲಿ ಮಲ್ಲಿಕಾರ್ಜುನ ಮತ್ತು ವಿದ್ಯಾರಾಶಿಯೆಂಬ ಪಾಶುಪತರು ಲಿಂಗಕ್ಕಿಂತಲೂ

ಮೊದ್ದವಾದ ಪೀಠದಿಂದ ಕೂಡಿದ ಶ್ರೀ ಶಿವಲಿಂಗ ಪೂಜೆಯನ್ನು ಮಾಡು ತ್ತಿರುವಂತೆ ಸ್ಪಷ್ಟವಾಗಿ ಚಿತ್ರಿಸಿರುವದನ್ನು ಕಾಣಬಹುದು. ಶ್ರೀಶೈಲವನ್ನು ಪೂರ್ವಮಾರ್ಗದಿಂದ ಹತ್ತುವಾಗ ದೃಗ್ಗೋಚರವಾಗತಕ್ಕ ಅನೇಕ ಶಿಲಾ ಚಿತ್ರಗಳಲ್ಲಿ ಪೀಠಸಹಿತಗಳಾದ ಲಿಂಗಗಳಿರುತ್ತವೆ. ಇದರಂತೆ, ವೇಮು ಲವಾಡ, ಸಾಲ್ಪುರಕಿ, ಓರುಗಲ್ಲು ವಾಡಪಲ್ಲಿ, ಮೊದಲಾದ ಆಂಧ್ರ ದೇಶದ ವಿಖ್ಯಾತ ಶಿಲ್ಪಸ್ಥಳಗಳಲ್ಲಿ ಲಿಂಗಗಳು ಪೀಠದಿಂದೊಡ ಗೂಡಿಯೇ ಇರುತ್ತವೆ. ಶಿಲ್ಪಿ (artist) ಗಳು ಕವಿಗಳಿಗಿಂತಲೂ ಹೆಚ್ಚು ಸ್ವತಂ ತ್ರರಾದವರೆಂಬ ಮಾತು ಎಲ್ಲರೂ ನೆನಪಿನಲ್ಲಿಡತಕ್ಕುದಾಗಿದೆ. ಕೆಲವರು ದುಂಡಿನ ಪೀಠವನ್ನುಪಯೋಗಿಸಿದರೆ ಕೆಲವರು ಚೌಕು ಪೀಠವನ್ನುಪ ಯೋಗ ಮಾಡಿರುವರು. ಆದರಂತೆ ಅವರು ಲಿಂಗಗಳಲ್ಲಿಯು ಕೂಡಾ ಸ್ವಾತಂತ್ರ್ಯವನ್ನು ತೋರಿಸಿರುತ್ತಾರೆಂಬುವದಕ್ಕೆ "ಕುಂಬಳಕಾಯಿ, ಟೆಂಗಿ ನಕಾಯಿ, ಸೊರೆಕಾಯಿ, ಪುಟ್ಟಿ, ಗಡಿಗೆ (ಘಟ)" ಮೊದಲಾದ ಆಕೃತಿ ಗಳುಳ್ಳ ಲಿಂಗಗಳನ್ನುದಾಹರಣಾರ್ಥವಾಗಿ ಗ್ರಹಿಸಬಹುದು. ಕಾಲ ಪರಿ ವರ್ತನವಾದಂತೆ ಶಿಲ್ಪದಲ್ಲಿ ನಾಣ್ಯವೂ, ಸೌಕುಮಾರ್ಯವೂ ಬಂದಿತೆಂ ಬುವದನ್ನು ನಾನೂ ಅಂಗೀಕರಿಸುತ್ತೇನೆ. ಆದರೆ ಶಿಲ್ಪಿಗಳು ತಮ್ಮ ಸೌಲಭ್ಯವನ್ನೂ ಸೌಕರ್ಯವನ್ನೂ ಅನುಸರಿಸಿ ಚಿತ್ರಗಳನ್ನು ಬೇಕಾದ ಹಾಗೆ ತಯಾರಿಸಿದ್ದಾರೆನ್ನುವ ಅಭಿಪ್ರಾಯವುಳ್ಳವನಾಗಿರುತ್ತೇನೆ. ಲಿಂಗ ಪೀಠಗಳ ವಿಷಯದಲ್ಲಿ ಸರಿಯಾಗಿರುಹಬೇಕಾದವರು ಒಂದು ವರ್ಷದ ವರವಿಗೆ ಮಾತ್ರ ಸಂಚಾರ ಮಾಡಿದರೆ ಸಾಕು ಲಕ್ಷಗಟ್ಟಲೆ ಕುರುಹುಗಳನ್ನು ಕಂಡು ಹಿಡಿಯುಬಹುದು.

ಇನ್ನು ಚನ್ನಮಲ್ಲಪ್ಪನವರು "ಈತತ್ವವನ್ನು ಪ್ರತಿಪಾದಿಸುವ ಗ್ರಂಥ ಗಳೆಲ್ಲ ಅರ್ವಾಚೀನವಾದುವೇ" ಎಂಬ ವಿಚಿತ್ರ ಸಿದ್ಧಾಂತವನ್ನು ಪ್ರತಿಪಾ ದಿಸಿರುವರು. ಯಾವ ವಿಷಯವನ್ನಾಗಲಿ ಸ್ವತಂತ್ರವಾಗಿ ಬರೆಯುತಕ್ಕಂಥ ವರು ವಿವಿಧಗ್ರಂಥಗಳ ಪೌರ್ವಾಪರ್ಯವನ್ನು ವಿಮರ್ಶಿಸಿಕೊಳ್ಳಬೇಕಾಗು ವದು. ಅಷ್ಟಾದಶ ಪುರಾಣಗಳಲ್ಲಿ ಹನ್ನೊಂದನೆಯದೂ ಶೈವರಿಗೆ ಪ್ರಾಮುಖ್ಯ ವಾದುದೂ ಆದ ಲಿಂಗ ಮಹಾಪುರಾಣವು ಹದಿನಾಲ್ಕುನೂರು ವರ್ಷಗಳ ಹಿಂದಿನದೆಂಬುವದರಲ್ಲಿ ಯಾವ ವಿವಾದವೂ ಇಲ್ಲ. ಇದರ ಪೂರ್ವಾರ್ಧದ ನಲವತ್ತೇಳನೆಯ ಅಧ್ಯಾಯದ ಆರನೆಯ ಶ್ಲೋಕದಿಂದ ಹೀಗೆ ಹೇಳ ಲ್ಪಟ್ಟಿರುವದು,

" ಲಿಂಗಮೇಕತಮಂ, ಶೈಲಂ............ ॥
ಸವೇದಿಕಂ ಸಸೂತ್ರಂಚ, ಸಮ್ಯಗ್ವಿಸ್ತೃತ ಮಸ್ತಕಂ ।
ವಿಶೋಧ್ಯಸ್ಥಾಪಯೇದ್ಭಕ್ತ್ಯಾ, ಸವೇದಿಕಮನುತ್ತಮಂ॥
ಲಿಂಗವೇದೀ ಉಮಾದೇವೀ ಲಿಂಗಂ ಸಾಕ್ಷಾನ್ಮಹೇಶ್ವರಃ॥
ತಯೋಸ್ಸಂ ಪೂಜನಾದೇವ, ದೇವೀದೇವಶ್ಚಪೂಜಿತೌ॥
ಪ್ರತಿಷ್ಠಯಾಚ ದೇವೇಶೋ ದೇವ್ಯಾ ಸಾರ್ಧಂ ಪ್ರತಿಷ್ಠಿತಃ॥
ತಸ್ಮಾತ್ಸವೇದಿಕಂಲಿಂಗಂ॥ ಸ್ಥಾಪಯೇತ್ ಸ್ಥಾಪಕೋತ್ತಮಃ॥

ಅಂದರೆ "ಲಿಂಗಸ್ಥಾಪನೆ ಮಾಡಲಿಚ್ಛೆಯುಳ್ಳವನು ಪೀಠಸಹಿತವಾದ ಮತ್ತು ಪಂಚಸೂತ್ರ ಘಟಿತವಾದ ವಿಶಾಲ ಮಸ್ತಕದಿಂದ ಕೂಡಿದ ಅತ್ಯುತ್ತಮವಾದ ಲಿಂಗವನ್ನು ಪರಿಶೋಧಿಸಿ ಭಕ್ತಿಯಿಂದ, ಸ್ಥಾಪಿಸಬೇಕು. ಪೀಠವೇದೇವಿಸ್ವರೂಪವಾಗಿಯೂ, ಲಿಂಗವೇ ಈಶ್ವರಸ್ವರೂಪವಾಗಿಯೂ, ಇರುವ ಕಾರಣ ಪೀಠಸಹಿತವಾದ ಲಿಂಗದ ಸ್ಥಾಪನಾಪೂಜನೆಗಳಿಂದ ಶ್ರೀಪಾರ್ವತೀ ಪರಮೇಶ್ವರ ಸ್ಥಾಪನೆ ಮತ್ತು ಪೂಜೆಯು ಆಗುತ್ತದೆ" ಂಬ ಸುಸ್ಪಷ್ಟ ತಾತ್ಪರ್ಯವು ಹೊಳೆಯುದಿರದು. ಟೀಕಾಕಾರನಾದರೂ ಇದೇ ಅರ್ಥವನ್ನು ಬರೆದಿರುತ್ತಾನಲ್ಲದೆ **"ಹರನಾಳಿಗೆ"** ಂಬರ್ಥವನ್ನು ಬಿಚ್ಚಿತ್ತೋರಿಸಿರುತ್ತಾನೆ.

ಇನ್ನೂ ಏತದ್ವಿಷಯಕಗಳಾದ ಅನೇಕ ಪ್ರಮಾಣಗಳು ಸ್ಕಾಂದ ಶಿವ-ಪದ್ಮಪುರಾಣಗಳಲ್ಲಿ ತಪ್ಪದೆ ದೊರೆಯುವದೆಂಬ ವಿಶ್ವಾಸವಿದೆ. ವಿಧಿಮಯೂಖ ಸಂಸ್ಕಾರ ಗ್ರಂಥಗಳಲ್ಲಿಯೂ, ಲಿಂಗಪೀಠನಿರ್ಣಯಾತಕೋದಾಹರಣಗಳು ಹೇರಳವಾಗಿ ಲಭಿಸುತ್ತವೆ. ಆಂಧ್ರ ತಮಿಳು, ದಕ್ಷಿಣಕನ್ನಡ ದೇಶಗಳ ಬ್ರಾಹ್ಮಣರಲ್ಲಿಯೂ, ವೀರಶೈವರಲ್ಲಿಯೂ, ವೇದದಂತೆ ಪ್ರಚಾರವನ್ನು ಹೊಂದಿದ ಈ ಕೆಳಗಿನ ಮಂತ್ರವನ್ನು ನೋಡಿರಿ. ಇದು ನನ್ನ ಬಾಲ್ಯಪಾಠವಾದುದರಿಂದ ಭಾಷಾದೋಷಗಳು ಕಾಣಿಸುತ್ತಿದ್ದರೂ ಲಿಂಗದಪೀಠಸಹಿತವಾದ ಸ್ವರೂಪವನ್ನು ಚನ್ನಾಗಿ ತೋರಿಸತಕ್ಕುದಾಗಿದೆ. ಅದು ಹೀಗೆ.

॥ಓಂ॥ ಪೀಠಂ ಯಸ್ಯಾಧರಿತ್ರೀಂ ಜಲಧರಕಲಶಂ ಲಿಂಗಮಾಕಾಶಮೂರ್ತಿಂ ನಕ್ಷತ್ರಂ ಪುಷ್ಪಮಾಲ್ಯಂಗ್ರಹಣಕುಸುಮಂ ನೇತ್ರ ಚಂದ್ರಾರ್ಕವಹ್ನಿಂ ಕುಕ್ಷೌಸಪ್ತಸಮುದ್ರಂ ಭುಜಗಿರಿಶಿಖರಂ ಸಪ್ತಪಾತಾಳಪಾದಂ ।

ವೇದಂವಕ್ತ್ರಂ ಶಾಸ್ತ್ರಂ ಷಡಂಗಂ ದಶದಿಶವಸನಂ ದಿವ್ಯ ಲಿಂಗಂ
ನಮಾಮಿ ॥

ಇದರಿಂದ 'ಪೀಠಕ್ಕೆ ಶಕ್ತಿಯೆಂತಲೂ, ಪಿಂಡಕ್ಕೆ ಲಿಂಗವೆಂತಲೂ ಜೋಡಣೆ' ಮಾಡಿಕೊಂಡ ಶೈವ ವೀರಶೈವ ಮತತತ್ವವು ಪ್ರಾಚೀನವಾದುದೆಂದೇ ಸಿದ್ಧವಾಗುತ್ತಲಿದೆ. ಅವಸರ ಪ್ರಾಪ್ತರಾದ ದೇಶದ ವಿದ್ವಾಂಸರಿನ್ನೂ ವಿಶದವಾಗಿ ವಿಮರ್ಶಿಸಿ ತಥ್ಯಾಂಶವನ್ನು ಪ್ರಸಾದಿಸಲೆಂದು ಯಾಚಿಸುವೆನು.

೨

'ವೀರಶೈವಧರ್ಮವೂ ಆಂಧ್ರವಾಙ್ಮಯವೂ' ಎಂಬ ಲೇಖಾಂಕಗಳು ಶಿವಾನುಭವದಲ್ಲಿ ಬಂದಿರುವುದು ಪಾಠಕರಿಗೆ ಪರಿಚಯವಿದೆ. ಆ ಲೇಖಗಳಲ್ಲಿ ಶ್ರೀ '**ಶಿವಸುತ**'ರ ಪರಿಶ್ರಮವು ಗಾಢವಾಗಿತ್ತೆಂಬುವದನ್ನು ಎಲ್ಲರೂ ಒಪ್ಪಬೇಕಾಗುವದು. ಅವುಗಳೂ ಅಲ್ಲಲ್ಲಿ ದೋಷಯುಕ್ತ ಭಾಗಗಳನ್ನೊಳಗೊಂಡಿರುತ್ತವೆ. ತದ್ವಿಷಯಗಳನ್ನೆಲ್ಲ ಪ್ರತ್ಯೇಕವಾಗಿಚರ್ಚಿಸಬೇಕೆಂಬ ಕುತೂಹಲವಿರುವದರಿಂದ ಪ್ರಸ್ತುತದಲ್ಲಿ ಆಘಾತಗಳಾಗಿ ಕಂಡು ಬರುವ ವಿಷಯಗಳನ್ನು ಮಾತ್ರ ವಿಮರ್ಶಿಸುತ್ತೇನೆ.

ಸೋಮನಾಥನ ಗ್ರಂಥಗಳೆಂದು ತೋರಿಸಿದ ಎರಡನೆಯ ಲೇಖ (**ಸಪ್ಟಂಬರ-ಶಿವಾನುಭವ**) ದ ಹದಿನೈದು ಗ್ರಂಥಗಳಲ್ಲಿ "**ಪ್ರಭುಲಿಂಗಲೀಲೆ, ಚನ್ನಬಸವರಗಳೆ**" ಎಂಬೆರಡು ಕೃತಿಗಳು ಸೋಮನಾಥನವಲ್ಲವು. ಮತ್ತು "**ವೃಷಭಾಷ್ಟಕ, ಬಸವಾಷ್ಟಕ, ಬಸವೋದಾಹರಣ, ಬಸವಪಂಚರತ್ನ, ಅಕ್ಷರಾಂಕಗದ್ಯ, ಅಷ್ಟೋತ್ತರಶತನಾಮಗದ್ಯ, ಪಂಚಪ್ರಕಾರಗದ್ಯ**" ಎಂಬ ಕೃತಿಗಳೂ, ಶ್ರೀಸೋಮನಾಥನವೇ ಎಂದು ಅವುಗಳ ಕೆಳಗಿರುವ ಫಲಶ್ರುತಿಗಳಿಂದಲೂ, ಕೆಲವು ಆಧಾರಗಳಿಂದಲೂ, ಗೊತ್ತಾಗುತ್ತವೆ. ಈ ವಿಷಯದಲ್ಲಿ ಧೃಢ ಪರಿಶೋಧನೆಯನ್ನು ಮಾಡಿದ ವೇ। ಪ್ರಭಾಕರಶಾಸ್ತ್ರಿಗಳವರು ಕೂಡಾ ಮೇಲಿನ ಗ್ರಂಥಗಳು ಸೋಮನಾಥನವೇಯೆಂದು ಒಡಂಬಟ್ಟಿರುವರು. ಆದುದರಿಂದ ನಾನು ತೋರಿಸಿದ ಗ್ರಂಥಗಳನ್ನು ಸೋಮನಾಥಕೃತ ಗ್ರಂಥಾನುಕ್ರಮಣಿಕೆಯಲ್ಲಿ ಸೇರಿಸಬೇಕಾಗುತ್ತದೆ.

ಇನ್ನು ಸೋಮನಾಥನು ರಚಿಸಿದ "ಪಂಡಿತಾರಾಧ್ಯ ಚರಿತ್ರೆಯನ್ನು ಲೇಖಕರಾದ ನಮ್ಮ 'ಶಿವ ಸುತ' ರು ವೀರಶೈವ ಮತದ ಜಗದ್ಗುರುಗಳಲ್ಲೊಬ್ಬರ ಚರಿತ್ರೆಯನ್ನಾಗಿ ಸ್ವೀಕರಿಸಿದ್ದಾರೆ. ಈ ಭ್ರಮೆ ಮೈಸೂರಿನ ಆಸ್ಥಾನ ವಿದ್ವಾನ್ ಶ್ರೀ॥ ಎನ್. ಆರ್. ಕರಿಬಸವ ಶಾಸ್ತ್ರಿಗಳೇ ಮೊದಲಾದವರಿಗೂ ಇದ್ದಿತು. ಪರಂತು ಇದನ್ನು ಬರೆಯುತಕ್ಕವರೆಲ್ಲರು ನಮ್ಮ 'ಶಿವಸುತ' ರಂತೆ ಅನಾಲೋಚನೆಯಲ್ಲಿ ಬೀಳುತ್ತಿರುವರೆಂದರೆ ತಪ್ಪಲ್ಲವು. ಮಲ್ಲಿಕಾರ್ಜುನ ಪಂಡಿತಾರಾಧ್ಯರೆಂಬವರು ಆರಾಧ್ಯ ಪಂಗಡಕ್ಕೆ ಸೇರಿದವರಷ್ಟೆ. ಇವರು ತಮ್ಮ ಶಿಷ್ಯನನ್ನು ಶ್ರೀ ಬಸವೇಶ್ವರನ ಸನ್ನಿಧಿಗೆ ಕಳುಹಿಸಿ ಅವನು ತಂದ ಭಸ್ಮವನ್ನು ಧರಿಸಿಕೊಂಡಕೂಡಲೆ ಬಸವೇಶ್ವರನ ಪ್ರಭಾವದಿಂದ ಇವ (ಪಂಡಿತಾರಾಧ್ಯ) ರಿಗೆ ಕನ್ನಡ ಭಾಷಾ ಜ್ಞಾನವು ಪ್ರಾಪ್ತವಾಯಿತು. ಆ ಬಳಿಕ ಶ್ರೀ ಬಸವೇಶ್ವರನಲ್ಲಿ ಭಕ್ತಿ ಹೆಚ್ಚಾಗಿ ಆ ಮಹಾನುಭಾವನನ್ನು ನೋಡಬೇಕೆಂಬಿಚ್ಛೆಯಿಂದ ಕಲ್ಯಾಣ ಪಟ್ಟಣಕ್ಕೆ ಪ್ರಯಾಣವನ್ನು ಬೆಳಸಿದರು. ಪರಂತು ದಾರಿಯಲ್ಲಿ (ಕೃಷ್ಣಾ ಜಿಲ್ಲಾ ನಿಡುಗುಡುಮು ಎಂಬ ಊರಿನಲ್ಲಿರುವಾಗ) ಯೇ ಶ್ರೀ ಬಸವಣ್ಣನವರು ಲಿಂಗೈಕ್ಯರಾದರೆಂಬ ವಿಷಯವನ್ನು ಕೇಳಿ ಹಿಂದಿರುಗಿ ಬಂದು ಸ್ವಲ್ಪ ದಿವಸಗಳೊಳಗೆನೇ ಶ್ರೀಶೈಲದ ಬಳಿಯಲ್ಲಿ ಶಿವೈಕ್ಯರಾದರು. ಈ ವಿಷಯವು ಪಂಡಿತಾರಾಧ್ಯ **ಚರಿತ್ರೆ ಶಿಂಗಿರಾಜ ಪುರಾಣ ಚಂದ ವೋಲು ಕೈಫಿಯತುಗಳಿಂದ** ಸ್ಪಷ್ಟವಾಗುತ್ತಿರುವದಲ್ಲದೆ ಕೆಲವು ಶಾಸನಗಳಿಂದಲೂ ಗೊತ್ತಾಗುತ್ತದೆ.

ಪಾಲಕುರಿಕೆ ಸೋಮನಾರಾಧ್ಯರು:—ಇವರಲ್ಲಿ ತಮಗಿರುವ ಅಭಿಮಾನ ಮತ್ತು ಸಂಬಂಧ ಬಾಂಧವ್ಯವನ್ನು ನೆನಿಸಿ ಈತನ ಚರಿತ್ರೆಯನ್ನೇ **"ಪಂಡಿತಾರಾಧ್ಯ ಚರಿತ್ರೆ"** ಎಂಬ ಕಾವ್ಯದಿಂದ ಪ್ರಕಟಿಸಿದರು. 'ಪಂಡಿತಾರಾಧ್ಯರ ಚರಿತ್ರೆ'ಯಲ್ಲಿ ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಉತ್ಪತ್ತಿ ಪಾಂಡಿತ್ಯ ಮಹತ್ವ ಗ್ರಂಥಕರ್ತೃತ್ವ ಮೊದಲಾದ ವಿಷಯಗಳ ಸಂಪೂರ್ಣ ವರ್ಣನೆಯಿದ್ದು ಬಸವಣ್ಣನವರಗೂಡ ಒಂದು ಅಪೌಲ್ಯವಾದ ತರ್ಕವನ್ನು ಪಂಡಿತಾರಾಧ್ಯರು ಮಾಡಿದಂತೆ ತೋರಿಸಿ ಕಡೆಗೆ ಒತ್ತಟ್ಟಿಗೆ

**"ಭಕ್ತಿಮೀದಿವಲಶು ಬ್ರಾಹ್ಮ್ಯಂಬುತೋಬೊತ್ತು। ಬಾಯನೇನು ಬಸವಲಿಂಗ॥"**

ಎಂದು ಹೇಳಲ್ಪಟ್ಟಿದೆ. ಅಂದರೆ ಕೇವಲ ವರ್ಣಾಶ್ರಮಾಚಾರ ಧರ್ಮವಂತನಾದ ಪಂಡಿತಾರಾಧ್ಯನು ವೀರಶೈವ ಮತದಲ್ಲಿ ಸೇರುವಾಗ "ಎಲೈ ಬಸವೇಶ್ವರನೇ! ನಾನು ನಿನ್ನಲ್ಲಿರುವ ಭಕ್ತಿಯನ್ನೂ ಬ್ರಾಹ್ಮಣತ್ವದಲ್ಲಿರುವ ಭಾಗವನ್ನೂ ಬಿಡಲಾರೆ"ನೆಂದೂ ಆಕ್ರೋಶವಾಡಿರುತ್ತಾನೆ. ಏಕಂದರೆ **ಆಗಿನ ಕಾಲದಲ್ಲಿ (ಕ್ರಿ. ಶ. ೧೧೬೦--೭೦) ಆರಾಧ್ಯರಿಗೆ ಲಿಂಗಧಾರಣವಿರಲಿಲ್ಲವು.** ಅದೇ ಪ್ರಥಮವಾದುದರಿಂದ ಬಹಳ ವಾದ ಗೊಂದಲವೇ ಎದ್ದು ಬಿಟ್ಟಿತು. ಪಂಡಿತಾರಾಧ್ಯರೆಂಬು[illegible] ಗಳೂ, ಸದಾಚಾರ ಸಂಪನ್ನರೂ, ಪ್ರತಿಭಾಶಾಲಿಗಳೂ ಆಗಿ[illegible] ಅವರ ಹೆಸರು ಆಚಾರ್ಯರ ನಾಮದಂತೆ ಪ್ರಸಿದ್ಧಿಗೆ ಬಂದಿತ[illegible] **ಅವರು ವೀರಶೈವ ಮತದ ಜಗದ್ಗುರುಗಳೊಲ್ಲೊಬ್ಬರೆಂ**[illegible] ಇಲ್ಲಿ ಪಂಡಿತಾರಾಧ್ಯರ **ಶಿವತತ್ವ ಸಾರವನ್ನೂ** ಸೋಮನಾರಾಧ್ಯರ ಪಂಡಿತಾರಾಧ್ಯ **ಚರಿತ್ರೆಯನ್ನೂ** ಪರಿಶೋಧನಾ ಪೂರ್ವಕವಾಗಿ ಓದಿದರೆ ಈ ಎಲ್ಲ ವಿಷಯವು ಹೃದಯ ದರ್ಪಣದಲ್ಲಿ ಪ್ರತಿಬಿಂಬವಾಗಿಯೇ ತೀರುವದು. ಶ್ರೀ ಸೋಮನಾರಾಧ್ಯ ಪಂಡಿತಾರಾಧ್ಯ ಮೊದಲಾದ ಆಂಧ್ರ ವೀರಶೈವ ಕವಿಗಳ ವಿಷಯವನ್ನು ಪ್ರತ್ಯೇಕವಾಗಿ ಬರೆಯುವ ಭಾಗ್ಯವು ನನಗೂ ದೊರೆಯಬಹುದೆಂದು ಪಾಠಕರಲ್ಲಿ ವಿಜ್ಞಾಪಿಸಿ ವಿರಮಿಸುತ್ತೇನೆ.



# ಹೃದ್ಗತ.

( ಲೇಖಕ:— ಸಂಪಾದಕರು. )

ಈ ಸಂಚಿಕೆಗೆ ಶಿವಾನುಭವದ ೩ ನೇ ವರ್ಷವು ಮುಗಿಯಿತು. ಈ ಅವಧಿಯಲ್ಲಿ ಈ ಪತ್ರಿಕೆಯು ಮಾಡುತ್ತಬಂದ ಮಹತ್ವದ ಕಾರ್ಯ ಗಳನ್ನು ನಾವು ಇಲ್ಲಿ ಸವಿಸ್ತಾರವಾಗಿ ಉಲ್ಲೇಖಿಸುವ ಅವಶ್ಯವೇನೂ ಇರು ದಿಲ್ಲ. ಈ ಬಗ್ಗೆ ಹೋದವರ್ಷ ಬೆಂಗಳೂರ ಮಹಾಸಭೆಯಲ್ಲಿ ಆದ ಅನಂದನಪರ ನಿರ್ಣಯುವೇ ಇದರ ಯೋಗ್ಯತೆಯು ದರ್ಶಕವಾಗಿದೆ. ಈ ಪತ್ರಿಕೆಯು ಉದ್ದೇಶವು ವೀರಶೈವರ ಇತಿಹಾಸ ಮತ್ತು ವಾಙ್ಮಯುವನ್ನು ಶೋಧಿಸಿ ಅವುಗಳನ್ನು ಪ್ರಸಾರ ಪಡಿಸುವದೇ ಮುಖ್ಯವಾಗಿರುತ್ತವೆ. ಈ ಮಹತ್ವವಾದ ವಿಷಯುಗಳ ಬಗ್ಗೆ ನಾವು ಈವರೆಗೆ ಯಥಾಶಕ್ತಿ ಪ್ರಯತ್ನಿ ಸುತ್ತ ಬಂದಿದ್ದೇವೆ. ಈ ಕಾರ್ಯದಲ್ಲಿ ಅನೇಕ ಮಹನೀಯರು ನಮಗೆ ಮನಃ ಪೂರ್ವಕವಾಗಿ ಸಹಾಯ ಮಾಡುತ್ತ ಬಂದಿದ್ದಾರೆ. ಅವರ ಲೇಖ ಗಳು ಶಿವಾನುಭವದ ಸಂಚಿಕೆಗಳಲ್ಲಿ ಮೇಲಿಂದ ಮೇಲೆ ಬಂದಿರುತ್ತವೆ. ಇದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಋಣಿಯಾಗಿದ್ದೇವೆ.

ನಾವು ಈ ವರೆಗೆ ಶಿವಾನುಭವ ಪತ್ರಿಕೆಯು ದ್ವಾರಾ ಒಟ್ಟಿಗೆಹದಿನಾರು ಗ್ರಂಥಗಳನ್ನು ಪ್ರಕಟಿಸಿದ್ದೇವೆ. ಇವೆಲ್ಲವುಗಳು ವೀರಶೈವ ಧರ್ಮ ಬೋಧ ಕವಾದ ಶ್ರೇಷ್ಠ ವಚನಗ್ರಂಥಗಳೂ ಕಾವ್ಯಗಳೂ ಇರುತ್ತವೆ. ವೀರಶೈವ ಧರ್ಮದ ತಿರುಳನ್ನು ಅರಿಯಲು ಇವುಗಳು ಬಹಳ ಸಹಾಯಕಾರಿಗಳಾ ಗಿವೆ. ಅದರಂತೆಯೇ ಇದರಲ್ಲಿ ಅನೇಕ ಐತಿಹಾಸಿಕ ಮತ್ತು ಧಾರ್ಮಿಕ ಲೇಖಗಳುಬಂದಿರುತ್ತವೆ. ಅವೆಲ್ಲವುಗಳೂ ಬಹು ಪರಿಶ್ರಮ ಪೂರ್ವಕವಾಗಿ ವಿದ್ವಜ್ಜನರಿಂದ ಬರೆಯಲ್ಪಟ್ಟವಿರುತ್ತವೆ. ಇವುಗಳ ಮಹತ್ವವನ್ನು ತಿಳಿದು ಕೊಂಡು ಅನೇಕರು ಶಿವಾನುಭವದ ಹಿಂದಿನ ಸಂಚಿಕೆಗಳೆಲ್ಲವನ್ನೂ ಈಗಲೂ ಬೇಡುತ್ತಲಿರುವರು. ಇದು ಶುಭ ಚಿನ್ಹವೇ ಸರಿ.

ಶಿವಾನುಭವದಲ್ಲಿ ಪ್ರಚಲಿತ ಪರಿಸ್ಥಿತಿಗೆ ಸಂಬಂಧ ಪಟ್ಟ ಸಾಮಾ ಜಿಕ ಮತ್ತು ಧಾರ್ಮಿಕ ಚಳವಳಿಯ ವಿಷಯುಗಳು ಬಂದಿರುವದಿಲ್ಲ. ಆದರೆ ಶೋಧಕ ದೃಷ್ಟಿಯಿಂದ ಬರೆಯಲ್ಪಟ್ಟ ವಾಙ್ಮಯಾತ್ಮಕ, ಧಾರ್ಮಿಕ ಮತ್ತು ಐತಿಹಾಸಿಕ ಲೇಖಗಳಿಗೆ ನಾವು ಹೆಚ್ಚಾಗಿ ಇದರಲ್ಲಿ ಇಂಬುಗೊ

ಡುತ್ತ ಬಂದಿದ್ದೇವೆ. ಆದ್ದರಿಂದ ಶಿವಾನುಭವಕ್ಕೆ ಲೇಖಗಳನ್ನು ಬರೆಯುತಕ್ಕವರು ಈ ದೃಷ್ಟಿಯಿಂದಲೇ ಅವುಗಳನ್ನು ಬರೆದು ಕಳಿಸಬೇಕೆಂದು ನಮ್ಮ ನಮ್ರ ಸೂಚನೆ ಇದೆ. ಇದಲ್ಲದೆ ಬಹಳ ಜನರು ಶಿವಾನುಭವದಲ್ಲಿ ಪ್ರಕಟವಾದ ವಿಚಾರಗಳು ಸಂಪಾದಕರವೇ ಇರುತ್ತವೆಂದು ಭಾವಿಸುವಂತೆ ನಮಗೆ ತೋರುತ್ತದೆ. ಆದರೆ ಅವರು ಹೀಗೆ ತಿಳಿಯದೆ ಆ ವಿಚಾರಗಳು ಆಯಾ ಲೇಖಕರವೇ ಇರುತ್ತವೆಂದು ತಿಳಿಯತಕ್ಕದ್ದು. ಶಿವಾನುಭವದ ಮುಖ್ಯಧ್ಯೇಯವು ತತ್ವಾನ್ವೇಷಣವೇ ಇದ್ದುದರಿಂದ ಈ ಬುದ್ಧಿಯಿಂದ ಚಿಕಿತ್ಸಾಪೂರ್ವಕವಾಗಿ ಬರೆದ ಲೇಖಗಳಿಗೆಲ್ಲ ನಾವು ಇದರಲ್ಲಿ ಸ್ಥಳ ಕೊಡುತ್ತ ಬಂದಿದ್ದೇವೆ. ಲೇಖಕರ ಅಭಿಪ್ರಾಯಗಳು ಸಂಪಾದಕರ ಅಭಿಪ್ರಾಯಗಳಿಗಿಂತ ಭಿನ್ನವಾಗಿದ್ದರೂ ಕೂಡ, ಅವುಗಳನ್ನು ಶಿವಾನುಭವದಲ್ಲಿ ಪ್ರಕಟ ಪಡಿಸುವದು ನಮ್ಮ ಕರ್ತವ್ಯವಾಗಿದೆ.

"ಬೀಳಗಿ ಅರಸರ ವಂಶಾವಳಿ" ಎಂಬ ಕಾವ್ಯ ಗ್ರಂಥವು ಪೂರ್ತಿಯಾಗಿದ್ದು ಅದರ ವಿಸ್ತೃತವಾದ ಪೀಠಿಕೆಯನ್ನು ಮಿ॥ ಬಿ. ರಾಮರಾವ ಎಮ್. ಎ. ಎಲ್. ಎಲ್. ಬಿ. ಸೀನಿಯರ ಟ್ರಾನ್ಸಲೇಟರ ಮದ್ರಾಸ ಇವರು ಮುಂದಿನ ಸಂಚಿಕೆಯಲ್ಲಿ ಕೊಡುವರು. ಈ ಸಾರೆ ಅದರ ಬರೇ ಶುದ್ಧಾಶುದ್ಧ ಪತ್ರಿಕೆಯು ಮಾತ್ರ ಕೊಡಲ್ಪಟ್ಟಿರುವದು.

ಈಗ ನಾವು ಉಲ್ಲೇಖಿಸತಕ್ಕ ಮಹತ್ವದ ಸಂಗತಿ ಏನಂದರೆ, ಶಿವಾನುಭವದಲ್ಲಿ ಮೇಲಿಂದ ಮೇಲೆ ಮಹತ್ವದ ಲೇಖಗಳನ್ನು ಬರೆಯುತ್ತಿದ್ದ ಪ್ರೊ॰ ಎಸ್. ಸಿ. ನಂದೀಮಠ ಎಮ್. ಎ. ಇವರು ಸಂಸ್ಕೃತ ವಾಙ್ಮಯದಲ್ಲಿ ಪಿ. ಎಚ್. ಡಿ. ಪದವಿಯನ್ನು ಹೊಂದಲು ಇಂಗ್ಲಂಡಿಗೆ ಈಗ ಹೋಗಿದ್ದಾರೆ. ಇವರು ಉತ್ತಮ ಶೋಧಕರಿದ್ದು ಯುರೋಪ ಖಂಡದಲ್ಲಿ ಈ ಬಗ್ಗೆ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ಡಾ. ಬಾರ್ನೆಟ್ ಇವರ ನಿದರ್ಶನದಲ್ಲಿ ತಮ್ಮ ಮುಂದಿನ ಅಭ್ಯಾಸವನ್ನು ಸಾಗಿಸಿದ್ದಾರೆ. ಇವರು ತಮ್ಮ ಪದವಿಗೋಸ್ಕರ ಆಗಮ ಗ್ರಂಥಗಳನ್ನು ವಿಶೇಷವಾಗಿ ಅಭ್ಯಾಸ ಮಾಡಬೇಕೆಂದು ಇಟ್ಟುಕೊಂಡಿದ್ದಾರೆ. ಆಗಮಗಳು ವೀರಶೈವ ಧರ್ಮಕ್ಕೆ ಮೂಲ ಗ್ರಂಥಗಳಾದ್ದರಿಂದ ಪ್ರೊ. ನಂದೀಮಠ ಇವರು ಈ ವಿಷಯವನ್ನು ಕೈಕೊಂಡಿದ್ದು ಎಲ್ಲ ವೀರಶೈವರೂ ಸಂತೋಷಿಸತಕ್ಕದ್ದಾಗಿದೆ. ಆದರೆ ಈ ಕಾರ್ಯವು ಸಿದ್ಧಿಗೆ ಹೋಗಬೇಕಾದರೆ ನಮ್ಮ ದೇಶದಲ್ಲಿ ಉಪಲಬ್ಧವಿರುವ ಆಗಮ ಗ್ರಂಥಗಳನ್ನು ಅವರ ಕಡೆಗೆ ಪರಿ

ಶೀಲನೆಗೋಸ್ಕರ ಕಳಿಸುವದು ಅತ್ಯಾವಶ್ಯಕವಾದುದು. ದುರದುಂಡಿ ಮಠದಲ್ಲಿರುವ ಪಾಶುಪತ್ಯಾಗಮವೆಂಬ ಗ್ರಂಥವು ನಮ್ಮ ಹತ್ತರವಿದ್ದದ್ದನ್ನು ನಾವು ಈಗ ಪ್ರೊ. ನಂದೀಮಠ ಇವರ ಕಡೆಗೆ ಕಳಿಸಿಕೊಟ್ಟಿದ್ದೇವೆ. ಇದೇ ಮೇರೆಗೆ ಬೇರೆ ಯಾರ ಕಡೆಗಾದರೂ ಆಗಮ ಗ್ರಂಥಗಳಿದ್ದರೆ ಅವರು ಅವುಗಳನ್ನು ಮುಚ್ಚಿಡದೆ ಪ್ರೋ. ನಂದೀಮಠ ಇವರ ಕಡೆಗೆ ಅವಶ್ಯವಾಗಿ ಕಳಿಸಿಕೊಡಬೇಕೆಂದು ನಮ್ಮ ವಿನಂತಿ ಇದೆ. ಇದರಿಂದ ಅವರು ವೀರಶೈವ ಸಮಾಜಕ್ಕೆ ಅತ್ಯಂತ ಉಪಕಾರ ಮಾಡಿದಂತೆ ಆಗುತ್ತದೆ.

ಅನೇಕರು ತಮ್ಮಲ್ಲಿ ಹಳೇ ಗ್ರಂಥಗಳು ಇದ್ದದ್ದನ್ನು ನಮಗೆ ಮೇಲಿಂದ ಮೇಲೆ ತಿಳಿಸುತ್ತಿದ್ದು ಅವರ ಹೆಸರುಗಳನ್ನು ನಾವು ಪ್ರತಿ ಸಂಚಿಕೆಯಲ್ಲಿ ಪ್ರಕಟಿಸುತ್ತ ಬಂದಿದ್ದೇವೆ. ಈಗ ಕೆಳಗೆ ಕಾಣಿಸಿದ ಸಭ್ಯ ಗೃಹಸ್ಥರು ಗ್ರಂಥ ಶೋಧ ಮಾಡಿದ್ದರ ಬಗ್ಗೆ ನಮಗೆ ತಿಳಿಸಿದ್ದಾರೆ. ಅವರ ಹೆಸರುಗಳು:—

(೧) ರಾ॥ ರಾ॥ ಮಡಿವಾಳಪ್ಪ ಸಾಸನೂರ ಹೆ. ಮಾಸ್ತರ ಕಲಕೇರಿ ತಾ॥ ಸಿಂದಗಿ ಇವರು ತಮ್ಮ ಗ್ರಾಮದಲ್ಲಿ ದೃಷ್ಟಿಗೆ ಬಿದ್ದ ೨೦ ಗ್ರಂಥಗಳ ಪಟ್ಟಿಯೊಂದನ್ನು ಕಳಿಸಿದ್ದಾರೆ.

(೨) ರಾ॥ ರಾ॥ ವೀರಭದ್ರಪ್ಪ ಕೊಪ್ಪಳ ಸಾ॥ ಲಕ್ಷ್ಮೇಶ್ವರ ಇವರು ತಮ್ಮ ಗ್ರಾಮದಲ್ಲಿ ಲಿಂಗಯ್ಯಾ ಸ್ವಾಮಿಮಠ ಎಂಬ ಶರಣ ಸಂತತಿಯ ಮಠವಿದ್ದು ಅಲ್ಲಿ ಬಸವೇಶ್ವರನ ಮತ್ತು ದೇವರ ದಾಸಿಮಯ್ಯನ ಅವಶೇಷಗಳು ಅಂದರೆ ನಂದೀಧ್ವಜ, ಬೆತ್ತ, ಬೀಗ ಮುದ್ರೆ, ಪಟಗಳು ಇದ್ದುದಾಗಿ ಬರೆದಿದ್ದಾರೆ. ಮತ್ತು ಅವರಲ್ಲಿ ಅನೇಕ ಪುರಾತನ ಗ್ರಂಥಗಳಾದರೂ ಇವೆ.

(೩) ಶಿ॥ ಮೂ॥ ಕಲ್ಲಿನಾಥ ವಿರೇಶ್ವರ ಹಿರೇಮಠ ಸಾ॥ ಗದಗ ಇವರು ತಮ್ಮಲ್ಲಿದ್ದ ೨೦ ಗ್ರಂಥಗಳ ಪಟ್ಟಿಯನ್ನು ಕಳಿಸಿದ್ದಾರೆ.

(೪) ರಾ॥ ರಾ॥ ಬಸೆಟ್ಟೆಪ್ಪ ಕರಬಸವಶೆಟ್ರು ಸಾ॥ ರೋಣ ಇವರು ರಗಳೆ ವಚನವೆಂಬ ಗ್ರಂಥವನ್ನು ನಮ್ಮ ಕಡೆಗೆ ಕಳಿಸಿದ್ದಾರೆ.

(೫) ರಾ॥ ರಾ॥ ಬಸವಂತಪ್ಪ ಹಳಕಟ್ಟಿ ಹೆ. ಕ್ಲಾರ್ಕ ಕರ್ನಾಟಕ ಕಾಲೇಜ ಧಾರವಾಡ ಇವರು ರಾಜಯೋಗದ ವಚನವೆಂಬ ಗ್ರಂಥವನ್ನು ಕಳಿಸಿದ್ದಲ್ಲದೆ ಇಂಡಿಯನ್ನ ಎಂಟಿಕ್ವರಿಯಲ್ಲಿದ್ದ ಏಕಾಂತದ ರಾಮಯ್ಯನ ಶಿಲಾಶಾಸನವನ್ನು ಸಂಪೂರ್ಣವಾಗಿ ಎತ್ತಿ ನಮ್ಮ ಕಡೆಗೆ ಕಳಿಸಿದ್ದಾರೆ.

(೬) ಶ್ರೀ|| ಮ|| ಮಡಿವಾಳಯ್ಯಾ ಝಳಕಿ ಸಾ|| ವಿಜಾಪೂರ ಇವರು ಭಕ್ತಿ ಶಿಖಾರತ್ನವೆಂಬ ವಚನ ಗ್ರಂಥವನ್ನು ನಮ್ಮ ಕಡೆಗೆ ಕಳಿಸಿದ್ದಾರೆ.

ಮೇಲ್ಕಂಡ ಮಹನೀಯರೆಲ್ಲರಿಗೆ ನಾವು ಅತ್ಯಂತ ಕೃತಜ್ಞತಾಪೂರ್ವಕವಾಗಿ ನಮ್ಮ ವಂದನೆಗಳನ್ನು ಅರ್ಪಿಸುತ್ತೇವೆ.

ನಾವು ಮೇಲೆ ವಿವರಿಸಿದ ಕಾರ್ಯಗಳು ಎಷ್ಟು ಮಹತ್ವವಾದವುಗಳಿರುತ್ತವೆಂಬದನ್ನು ನಾವು ಬೇರೆ ಹೇಳುವದು ಅವಶ್ಯವಿಲ್ಲ. ಈ ಪ್ರಕಾರ ವೀರಶೈವ ಸಂಸ್ಕೃತಿಯ ಪ್ರಸಾರದಿಂದಲೇ ಅದರ ಮೇಲ್ಮೆಯು ಇರುತ್ತದೆ. ಆದರೆ ಈ ಕಾರ್ಯವು ತ್ವರಿತಗತಿಯಿಂದ ಸಾಗಬೇಕಾದರೆ ಸಮಾಜದವರ ಸಂಪೂರ್ಣ ಬೆಂಬಲವೂ ವಿದ್ವಜ್ಜನರ ಪರಿಶ್ರಮವೂ ಅತ್ಯವಶ್ಯವಾದವುಗಳು. ಹೋದ ಬೆಂಗಳೂರ ಮಹಾ ಸಭೆಯ ಕಾಲಕ್ಕೆ ವಿಜಾಪುರದಲ್ಲಿ ಒಂದು ಗ್ರಂಥಾಲಯವನ್ನು ಸ್ಥಾಪಿಸಬೇಕೆಂದು ಗೊತ್ತಾಗಿದೆ. ಆದರೆ ಈ ಯೋಜನೆಯನ್ನು ನಿರ್ವಹಿಸಲಿಕ್ಕೆ ಅವಶ್ಯವಾಗಿರುವ ಯಾವ ಏರ್ಪಾಡೂ ಅದಂತೆ ನಮಗೆ ಕಂಡುಬರುವದಿಲ್ಲ. ಇದರಂತೆಯೇ ಧಾರ್ಮಿಕ ಮತ್ತು ಐತಿಹಾಸಿಕ ಶೋಧಗಳ ಬಗ್ಗೆ ಪ್ರೀತಿಯುಳ್ಳ ವಿದ್ಯಾವಂತರಾದರೂ ನಮ್ಮ ಸಮಾಜದಲ್ಲಿ ಬಹು ಸ್ವಲ್ಪ ಜನರು ಸಿಗುತ್ತಾರೆ. ಇದ್ದರೂ ಅವರಿಗೆ ಯಾವ ಸೌಕರ್ಯಗಳಿಲ್ಲ. ಈ ಸ್ಥಿತಿಯ ಮೂಲಕ ಈ ಮಹತ್ವದ ಕಾರ್ಯವು ಬಹು ಮಂದಿಗತಿಯಿಂದ ಸಾಗಿರುತ್ತದೆ. ಒಂದು ವೇಳೆ ಶಿವಾನುಭವ ಪತ್ರಿಕೆಯ ಪ್ರಸಾರವಾದರೂ ಹೆಚ್ಚಾಗಿದ್ದರೆ ನಾವು ಈಗಿನಕಿಂತಲೂ ಈ ಕಾರ್ಯವನ್ನು ಹೆಚ್ಚಿಗೆ ಭರದಿಂದ ಸಾಗಿಸಲು ಶಕ್ಯ ವಾಗುತ್ತಿತ್ತು. ಆದರೆ ಶಿವಾನುಭವದಲ್ಲಿ ಬರುವ ಕಠಿಣ ವಿಷಯಗಳ ಮೂಲಕ ಅದಕ್ಕೆ ಗ್ರಾಹಕರ ಸಂಖ್ಯೆಯಾದರೂ ಬಹಳ ಕಡಿಮೆ ಇರುತ್ತದೆ. ಅದು ಸ್ವಾವಲಂಬಿಯಾಗಿರುವದಿಲ್ಲ. ವೀರಶೈವ ಸಮಾಜದಲ್ಲಿ ಈ ಬಗೆಯ ಸ್ಥಿತಿ ಇರುವದು ಎಷ್ಟು ಶೋಚನೀಯವಾದುದೆಂಬುದನ್ನು ಅವರೇ ವಿಚಾರ ಮಾಡಲಿ.

ಆದರೆ ಅನುಕೂಲ ಪರಿಸ್ಥಿತಿಯು ಬರುವ ವರೆಗೆ ನಾವು ಅಂತೂ ಇಂತೂ ಶಿವಾನುಭವ ಪತ್ರಿಕೆಯನ್ನು ಸಾಗಿಸಬೇಕಾಗಿದೆ. ಇದು ನಮ್ಮ ವರ್ಗಣೀದಾರರ ಮೇಲೆ ಅವಲಂಬಿಸಿದೆ. ಆದ್ದರಿಂದ ಅವರು ಮುಂದಾದರೂ ಈ ಪತ್ರಿಕೆಗೆ ಹೆಚ್ಚಾಗಿ ಉತ್ತೇಜನ ಕೊಡುತ್ತ ಹೋಗಬೇಕೆಂದು ನಾವು ಅವರಿಗೆ ಆಗ್ರಹ ಪೂರ್ವಕವಾಗಿ ಬಿನ್ನವಿಸಿ ಕೊಳ್ಳುತ್ತೇವೆ.

---

ಶಿವಾನುಭವ ಗ್ರಂಥಮಾಲಾ ನಂ॥ ೧೪

ಸಿದ್ಧಲಿಂಗೇಶ್ವರ

# ಏಕೋತ್ತರ ಶತಸ್ಥಲ.

ಸಂಪಾದಕರು

ರಾ॥ ಸಾ॥ ಫ. ಗು. ಹಳಕಟ್ಟಿ

ಬಿ. ಏ. ಎಲ್. ಎಲ್. ಬಿ. ವಕೀಲ

ವಿಜಾಪುರ.

ಬೆಲೆ ೧-೪-೦

# ಪ್ರಸ್ತಾವನೆ.

ನಾವು ಈಗ ಮುದ್ರಿಸಿದ ಪುಸ್ತಕವು ಹೊಸ ತರದ್ದು ಇದೆ. ಈ ಗ್ರಂಥವನ್ನು ಅಚ್ಚು ಹಾಕಲಿಕ್ಕೆ ಅದನಾಸಿಯಲ್ಲಿಯ ರಾ॥ ರಾ॥ ಈಶ್ವರಪ್ಪಾ ಸೌದ್ರಿ ಈ ಮಹನೀಯರು ನಮ್ಮ ಕಡೆಗೆ ಕಳಿಸಿಕೊಟ್ಟರು. ಇದಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ. ಈ ಗ್ರಂಥವು ಎಷ್ಟು ಮಹತ್ವದ್ದಿರುತ್ತದೆಂಬದನ್ನು ನಾವು ಬೇರೆ ಹೇಳುವದು ಬೇಡ. ಇದರಲ್ಲಿ ಏಕೋತ್ತರ ಶತಸ್ಥಲದ ವಿಷಯಗಳು ಬಹಳ ಅತ್ಯುತ್ತಮ ರೀತಿಯಿಂದ ಪ್ರತಿಪಾದಿಸಲ್ಪಟ್ಟಿವೆ. ಇವುಗಳನ್ನು ವಿವರಿಸುವ ಪದ್ಧತಿಯಾದರೂ ಅದರಿಯುದಿರುತ್ತದೆ. ಗ್ರಂಥಕಾರನು ಮೊದಲಿಗೆ ತಾನು ಹೇಳುವ ವಿಷಯವನ್ನು ಬಹು ಸುಲಭವಾಗಿ ಸ್ವಲ್ಪ ಶಬ್ದಗಳಲ್ಲಿ ಸ್ಫುಟವಾಗಿ ವಿವರಿಸಿದ್ದಾನೆ. ಇದಕ್ಕೆ ಅವನು ಸೂತ್ರವೆಂದು ಕರೆದಿದ್ದಾನೆ. ಆ ಮೇಲೆ ಆ ವಿಷಯವನ್ನು ನಿರೂಪಿಸತಕ್ಕ ಒಂದು ಮೂಲ ವಚನವನ್ನು ಕೊಟ್ಟಿದ್ದಾನೆ. ಆ ಮೇಲೆ ಇನ್ನೊಬ್ಬ ವಚನಕಾರನ ವಚನವನ್ನು ತೆಗೆದುಕೊಂಡು ಅದರ ಮರ್ಮವನ್ನು ಹಾಡುಗಳ ರೂಪದಿಂದ ಬಹು ಸುಂದರವಾಗಿ ನಿರೂಪಿಸಿದ್ದಾನೆ. ಈ ಹಾಡುಗಳಾದರೋ, ಅತ್ಯಂತ ಮನೋಹರವಾಗಿವೆ. ಅವುಗಳ ಭಾಷೆಯು ಬಹು ಸುಂದರವು. ಇವುಗಳ ಮೇಲಿಂದ ಈ ಗ್ರಂಥಕಾರನು ಒಬ್ಬ ಅತ್ಯುತ್ತಮ ಕವಿ ಇದ್ದಾನೆಂದು ಹೇಳಲಿಕ್ಕೆ ಏನೂ ಅಡ್ಡಿ ಇಲ್ಲ. ಆ ಮೇಲೆ ವಿಷಯದ ಭಾವವನ್ನು ಒಂದು ವೃತ್ತ ಪದ್ಯದಲ್ಲಿ ಸಂಕ್ಷೇಪವಾಗಿ ವಿವರಿಸಿದ್ದಾನೆ. ಈ ಪದ್ಯಗಳಾದರೂ ಬಹು ಲಲಿತವಾಗಿವೆ. ಈ ಪದ್ಯಗಳ ಮೇಲಿಂದ "ಸಿದ್ಧಲಿಂಗೇಶ್ವರ" ಎಂಬುದೇ ಕವಿಯ ಮುದ್ರಿಕೆ ಇರಬಹುದೆಂದು ನಮಗೆ ತೋರುತ್ತದೆ. ಅದ್ದರಿಂದ ಈ ಗ್ರಂಥಕ್ಕೆ ನಾವು **"ಸಿದ್ಧಲಿಂಗೇಶ್ವರ ಏಕೋತ್ತರ ಶತಸ್ಥಲ"** ವೆಂಬ ಹೆಸರನ್ನಿಟ್ಟಿದ್ದೇವೆ. ಗ್ರಂಥದಿಂದ ಕವಿಯ ವೃತ್ತಾಂತ ಮುಂತಾದವುಗಳು ಏನೂ ತಿಳಿಯುವಂತೆ ಇಲ್ಲ.

ನಮಗೆ ಗ್ರಂಥದ ಪ್ರತಿಯು ಒಂದೇ ದೊರೆತದ್ದರಿಂದ ಅಲ್ಲಲ್ಲಿ ದೋಷಗಳು ವಾಚಕ ದೃಷ್ಟಿಗೆ ಬೀಳಬಹುದು ಅದಕ್ಕೋಸ್ಕರ ಅವರು ನಮ್ಮನ್ನು ಕ್ಷಮಿಸುವರೆಂದು ಕೋರುತ್ತೇವೆ.

**ಫ. ಗು. ಹಳಕಟ್ಟಿ.**
ಸಂಪಾದಕ.

# ಪೀಠಿಕಾ ಪ್ರಕರಣ.

ಶ್ರೀಮದನಾದಿ ಮಹಾಷಟ್ ಸ್ಥಲಾಂತರ್ಗತ ಏಕೋತ್ತರ ಶತಸ್ಥಲವಮಂ ಶ್ರೀ ಗುರುಬಸವರಾಜನ ಕೃಪೆಯಿಂ ಪೇಳ್ವೆಂ.

**ವಚನ**:— ಪ್ರಥಮದಲ್ಲಿ ಅನಾದಿ ಸದ್ಭಕ್ತನ ಹೃದಯದಲ್ಲಿಪ್ಪ ನಿರಂಜನ ಮಹಾಜಂಗಮ ಮಹಾಸ್ವಾಮಿಯ ಕರಸ್ಥಲದಲ್ಲೊಪ್ಪುವ ಶೂನ್ಯಲಿಂಗವು, ಆ ಮಹಾಶೂನ್ಯಲಿಂಗವೇ ಮುಂದೆ ಮಹಾ ವಸ್ತುರೂಪಾಗಿ ಏಕಮೇವಾದ್ವಿತೀಯ ಪರಬ್ರಹ್ಮಸ್ಥಲವು, ಆ ಸ್ಥಲವೇ ಒಂದನೆಯದಾಯ್ತು. ಆ ಸ್ಥಲವೇ ಅಂಗಸ್ಥಲವೆಂದು, ಲಿಂಗಸ್ಥಲವೆಂದು ಕೂಡಿದೊಂದೆರಡಾಗಲಾಗಿ ಆ ಸ್ಥಲವೇ ಎರಡನೆಯದಾಯ್ತು. ಆ ಸ್ಥಲವೇ ಅಂಗತ್ರಯಸ್ಥಲವೆಂದು ಲಿಂಗತ್ರಯಸ್ಥಲವೆಂದು ಕೂಡಲು ಆ ಸ್ಥಲವೇ ಮೂರನೆಯದಾಯ್ತು. ಆ ಸ್ಥಲವೇ ಅಂಗವಾರುಸ್ಥಲವೆಂದು, ಲಿಂಗವಾರುಸ್ಥಲವೆಂದು ಕೂಡಲು ಆ ಸ್ಥಲವೇ ನಾಲ್ಕನೆಯದಾಯ್ತು. ಆ ಸ್ಥಲವೇ ಅಂಗ ಪದಿನೆಂಟು ಲಿಂಗ ಪದಿನೆಂಟು ಸ್ಥಲಂಗಳಾಗ ಕೂಡಲು, ಆ ಸ್ಥಲವೇ ಐದನೆಯದಾಯ್ತು. ಆ ಸ್ಥಲವೇ ಅಂಗಸ್ಥಲಂಗಳು ನಾಲ್ವತ್ತುನಾಲ್ಕು ಲಿಂಗಸ್ಥಲಂಗಳು ಐವತ್ತೇಳು ಕೂಡಲಾರನೆಯದಾಗಿ ಏಕೋತ್ತರ ಶತಸ್ಥಲವೆಂದು ನೂರೊಂದು ಸ್ಥಲಂಗಳಾಗಲು. ಈ ಸ್ಥಲಂಗಳೇ ಆ ಮಹಾಪುರಾತನರು ತಮ್ಮ ಭಕ್ತ್ಯಾದಿಯಾಗಿ ಐಕ್ಯಾಂತಮಾದಾರಂಗಸ್ಥಲಂಗಳು ಆಚಾರಾದಿ ಮಹಾಲಿಂಗಾಂತಮಾದಾರು ಲಿಂಗಸ್ಥಲಂಗಳಲ್ಲಿ ಹಸುಗೆಯಂ ಮಾಡಿ, ಅರಿದಾಚರಿಸಿದ ಭೇದವಮಂ, ನಡೆನುಡಿಗಳಿಂದ ಆ ಮಹಾಪ್ರಸಾದವಾಕ್ಯಂಗಳನೇ ವಚನ ಪದ ಪದ್ಯರೂಪದಿಂ ಹಾಡಿ ಹರಸಿ, ತಮ್ಮ ಅಂಶೀಭೂತರಾದ ಶರಣ ಗಣಂಗಳು, ತಮ್ಮ ಸ್ಥಲವೇ ಪಿಂಡಾದಿಯಾದ ಜ್ಞಾನ, ಆ ಜ್ಞಾನವೇ ಶೂನ್ಯಾಂತಸ್ಥಲವಾಗಿ ನೂರೊಂದರಮೇಲೆ ನಿಲ್ಲಲಿ, ಎಂದು ಬರೆದಿಟ್ಟ ಬರವಣಿಗೆಯಂ ಬರೆಯಲು ಒಂದೊಂದಾಗಿ ಕ್ರಮದಿಂ ಶ್ರೀ ಮಚ್ಛರಗುರು ಶಿವಾಚಾರ್ಯರಾದ ಸಕಲ ಸದ್ಭಕ್ತರ ಕಂಜಕ್ರಮಕ್ಕೆರಗುವ ನಿಮ್ಮ ಅಸಂಖ್ಯಾತ ಮಹಾ ಪ್ರಮಥಗಣ ಪಾದಪಂಕಜ ರೇಣುಕಾಂಶೀಭೂತನಾದ ಈ ಮಾಕಂದ ಮೂಲಕಂದನೆಂದು ಅಂದವಳಿದ ಚಂದ

ಗೇಡಿ ಕಂದನಂ ನಿಮ್ಮ ಮೆಲ್ಲಡಿಗಳೊಂದಿಸಿಕೊಳ್ಳಿರಯ್ಯಾ ಎಲೆ ಅಪ್ಪ ಅಣ್ಣ ಅಯ್ಯಗಳೇ.

**ವಚನ:**— ಓಂ ನಮಶ್ಶಿವಾಯ ಸಿದ್ಧಂ ನಮೋ ನಮಃ ಎಂದು ಧನ್ಯ ಸದ್ಭಾವ ಮನಾಂತೆನಯ್ಯ ಶ್ರೀಸಕಾಮ ಕಾಮೇಶ್ವರ ಲಿಂಗವೇ

**ವಚನ:**— ನಿಮ್ಮ ಮಹಾಭಕ್ತ ಮಾಹೇಶ್ವರರ ಭೂಚಕ್ರಂಗಳು ಹನ್ನೆರಡು, ಅದರ ಕೊನೆಯಲ್ಲಿ ನೆಲೆಗೊಂಡ ಪರವಸ್ತುವೆ ಆ ಮಹಾ ಸ್ಥಲವೆಂಬ ನಿರ್ವಚನಕ್ಕಾಧಾರವಾಯಿತ್ತು. ಅದುವೇ ಒಂದನೆಯ ಸ್ಥಲ ವೆಂದು ಹೇಳಲ್ಪಟ್ಟಿತ್ತು ನೋಡಾ.

ಆ ಸ್ಥಲವು ಒಂದೆರಡಾಗಿ ಅಂಗಸ್ಥಲವೆಂಬುದೊಂದು ಲಿಂಗಸ್ಥಲ ವೆಂಬುದೊಂದು ಕೂಡಿ ಶಿವಶಕ್ತಿ ಸ್ವರೂಪಾದ ಜ್ಞಾನವಂಗ ಜ್ಞೇಯುವೇ ಲಿಂಗವೆನಿಸಿಕೊಂಡಿತು. ಇಂತೆರಡನುಳ್ಳವನೇ ಅಂಗಲಿಂಗಿ ಎಂದೆನಿಸಿದ ಅದುವೇ ಎರಡನೆಯ ಸ್ಥಲವೆಂದು ಹೇಳಲ್ಪಟ್ಟಿತ್ತು ನೋಡಾ.

ಮತ್ತಂ ಆ ಸ್ಥಲವು ಒಂದೊಂದರಲ್ಲಿ ಮೂದೆರದಿಂ ಅಂಗತ್ರಯ ಲಿಂಗತ್ರಯವೆನಿಸಿತು. ಅಂಗಸ್ಥಲವೇ ತ್ಯಾಗಾಂಗ ಭೋಗಾಂಗ ಯೋಗಾಂ ಗವೆಂದು ಮೂದೆರನಾದುದು. ಲಿಂಗವೇ ಇಷ್ಟಲಿಂಗ ಪ್ರಾಣಲಿಂಗ ಭಾವ ಲಿಂಗನೆಂದು ಮೂದೆರನಾದುದು. ಇಂತಾಚರಿಸಿದ ಸ್ಥಲವೇ ಮೂರನೆ ಯದಾಗಿ ನಿಂತಿತ್ತು ನೋಡಾ.

ಮತ್ತಂ ಆ ಸ್ಥಲವು ಮೂದೆರನಾದೊಂದರಲ್ಲೆರಡೆರಡರಿಂ ಷಡ್ವಿಧ ವಾದಂಗ ಷಡ್ವಿಧವಾದಲಿಂಗವಾಗಿ ಭಕ್ತ ಮಹೇಶ ಪ್ರಸಾದಿ ಪ್ರಾಣ ಲಿಂಗಿ ಶರಣೈಕ್ಯಾದಿಯಾದಾರು ಅಂಗಸ್ಥಲಂಗಳು ಆಚಾರ ಗುರು ಶಿವ ಚರ ಪ್ರಸಾದ ಮಹಲಿಂಗಾದಿಯಾರು ಲಿಂಗ ಸ್ಥಲಂಗಳು ಇಂತಾಚ ರಿಸಿದ ಸ್ಥಲವೇ ನಾಲ್ಕನೆಯದಾಗಿ ನಿಂತಿತ್ತು ನೋಡಾ.

ಮತ್ತಂ ಆ ಸ್ಥಲವು ಅಂಗಸ್ಥಲಂಗಳಾರು ಮೂಮೂರೆನಿಸಿದ ಪದಿನೆಂಟು ಲಿಂಗಸ್ಥಲಂಗಳಾರು ಮೂಮೂರೆನಿಸಿದ ಪದಿನೆಂಟು ಈ ಎರಡ ಕೂಡಿಯಾಚರಿಸಿದ ಸ್ಥಲವೇ ಐದನೆಯದು ನೋಡಾ.

ಮತ್ತಂ ಆ ಸ್ಥಲವು ಅಂಗಸ್ಥಲಂಗಳು ನಾಲ್ವತ್ತುನಾಲ್ಕು ಲಿಂಗಸ ಲಂಗಳೈವತ್ತೇಳು ಕೂಡಿದಾ ಸ್ಥಲವೇ ಆರನೆಯದು ನೋಡಾ.

ಲಿಂಗಸ್ಥಲ

ಪ್ರಾಣ | ಭಾವ

| | | | | |
|---|---|---|---|---|
| ಂಗ | ಜಂಗಮಲಿಂಗ | ಪ್ರಸಾದಲಿಂಗ | ಪ್ರಸಾದಲಿಂಗ | ಮಹಲಿಂಗ |
| ಯು | ಲಿಂಗತ್ರಯ | ಜಂಗಮತ್ರಯ | ಶೇಷತ್ರಯ | ಮಹಾಲಿಂಗತ್ರಯ |

ಂಗಸ್ಥಲಗಳು

| ಸ್ಥಲ | ೯ ಶಿವಲಿಂಗಸ್ಥಲ | ೯ ಜಂಗಮಲಿಂಗಸ್ಥಲ | ೯ ಪ್ರಸಾದಲಿಂಗಸ್ಥಲ | ೧೨ ಮಹಲಿಂಗಸ್ಥಲ |
|---|---|---|---|---|
| ು | ೧ ಕಾಯಾನುಗ್ರಹ | ೧ ಜೀವಾತ್ಮ | ೧ ದೀಕ್ಷಾಪಾದೋದಕ | ೧ ಕ್ರಿಯಾಪ್ರಕಾಶ |
| | ೨ ಇಂದ್ರಿಯಾನುಗ್ರಹ | ೨ ಅಂತರಾತ್ಮ | ೨ ಶಿಕ್ಷಾಪಾದೋದಕ | ೨ ಭಾವಪ್ರಕಾಶ |
| ು | ೩ ಪ್ರಾಣಾನುಗ್ರಹ | ೩ ಪರಮಾತ್ಮ | ೩ ಜ್ಞಾನಪಾದೋದಕ | ೩ ಜ್ಞಾನಪ್ರಕಾಶ |
| | ೪ ಕಾಯಾರ್ಪಿತ | ೪ ನಿರ್ದೇಹಾಗಮ | ೪ ಕ್ರಿಯಾನಿಷ್ಪತ್ತಿ | ೪ ಸ್ವೀಕೃತಪ್ರಸಾದಿ |
| | ೫ ಕರಣಾರ್ಪಿತ | ೫ ನಿರ್ಭಾವಾಗಮ | ೫ ಭಾವನಿಷ್ಪತ್ತಿ | ೫ ಶಿಷ್ಟೋದನಪ್ರಸಾದಿ |
| | ೬ ಭಾವಾರ್ಪಿತ | ೬ ನಷ್ಟಾಗಮ | ೬ ಜ್ಞಾನನಿಷ್ಪತ್ತಿ | ೬ ಚರಾಚರಲಯ |
| ರ | ೭ ಶಿಷ್ಯ | ೭ ಆದಿಪ್ರಸಾದಿ | ೭ ಪಿಂಡಾಕಾಶ | ೭ ಭಾಂಡಸ್ಥಲ |
| ತ | ೮ ಶಿಶ್ರೂಷಾ | ೮ ಅಂತ್ಯಪ್ರಸಾದಿ | ೮ ಬಿಂದ್ವಾಕಾಶ | ೮ ಭಾಜನಸ್ಥಲ |
| ರ | ೯ ಸೇವ್ಯ | ೯ ಸೇವ್ಯಪ್ರಸಾದಿ | ೯ ಮಹದಾಕಾಶ | ೯ ಅಂಗಲೇಪನಸ್ಥಲ |
| | | | | ೧೦ ಸ್ವಪರಾಜ್ಞಾಸ್ಥಲ |
| | | | | ೧೧ ಭಾವಾಭಾವಲಯ |
| | | | | ೧೨ ಜ್ಞಾನಶೂನ್ಯಸ್ಥಲ |

ಓಗರಸ್ಥಲವಾಗಿ ನಿಂದ ನಿಲವಿನ ಭೇದವೆಂತಿರ್ದುದೆಂದಡೆ ಮುಂದೆ ಶಿಷ್ಯೋದನ ಪ್ರಸಾದಿ ಸ್ಥಲವಾದುದು.

**ವಚನ**:— ಸರ್ವಾಂಗವು ಲಿಂಗವಾದ ಆರೋಗಣೆಗೆ ಆಪ್ಯಾಯನವೇ ಕರಸ್ಥಲ. ನಿಂದುದೋಗರ ಬಂದ ಪರಿಣಾಮ ಪ್ರಸಾದ. ಹೇಳಲಿಲ್ಲದ ಕೇಳಲಿಲ್ಲದ ನಿರ್ಣಯ ಕೂಡಲಿಲ್ಲ ಕಳೆಯಲಿಲ್ಲ ನೋಡಾ! ಇದು ಕಾರಣ ಕೂಡಲಚನ್ನ ಸಂಗಮದೇವಾ ಗುರುಬಸವಣ್ಣನನುಗ್ರಹಿಸಿ ಕೊಟ್ಟ ನಿಂದ ನಿಲವಿನ ಸಹಜದಲ್ಲಿ ಉದಯಿಸಿದ ಲಿಂಗನಿರತ ನಿಜ ಪರಿ ಇಂತು ನೋಡಾ ||೫||

ಪದ—ರಾಗ—ಭೌಳಿ

ಸುಖಿಯಾದೆನೆಂಬ ಸುಖದ ಸಕುತಿ ಯಡಗಿ ನಿಂದ ನಿಲವು, ಮುಕುತಿಗತೀತವಾದುದು ||ಪ||

ಗುರು ಪ್ರಸಾದವಕೊಂಡು ಗುರುಶೇಷ ವೆಂದರಿಯದೆ ಉಳಿದ ಶೇಷದ ನಿಲವು, ಪರತತ್ವ ಜಾರಿನಿಂದುದು ॥ ೧ ॥

ಲಿಂಗ ಸುಖದಲ್ಲಿ ಮನವು ಸಂಗವನೈದಿ ನಿಂದುದು ನಿಂದ ನಿಜದ ನಿಲವು ತನ್ನ ಸಂಬಂಧವ ನರಿಯದು ॥೨॥

ಅನುಭಾವದಲ್ಲಿ ಪ್ರಾಣಲೀಯ್ಯವಾಗಿ ಘನಸುಖವ ನಾಲಿಂಗಿಸಿ ನೆನಹಳಿದುಳಿದ ಶೇಷದನುವನುಪಮಿಸಲರಿದು ಕಂಡ್ಯಾ ॥೩॥

ಅರಿವು ವಿಡಿದಾ ಅರಿವು ಸುಖಸವಿಯೊಳು ವ್ಯೆಮರದು ಭವಿಯಾಗಿನಿಂದ ಬವವಿರಹಿತ ನಾನೇನೆಂಬೆನು ॥ ೪ ॥

ಹಳವು ಹೋರದ ತಿಳಿವಿನಲ್ಲಿ ಕಳೆಕಣ್ದೆರೆದು ಉಳಿದ ನಿಜಶೇಷ ಶ್ರೀಗುಹೇಶ್ವರ ನಿಮ್ಮ ಬಸವಣ್ಣ ॥ ೫ ॥

**ಶಾರ್ದೂಲ**:—ಓರಂತೊಪ್ಪುವ ದೃಶ್ಯಮಾದನಿತು ಮುಲ್ತಲ್ತಿತ್ತೆನುತ್ತೆಲ್ಲಮಂ। ದೂರಂಗೆಯ್ದುಳಿದಿರ್ದ ಖಂಡಿತ ಮಹಾಲಿಂಗ ಸ್ವರೂಪಾದಚಿ ॥ ತ್ಸಾರ ಜ್ಞಾನಿಯನಿಂದುದೊಂದಿರವ ನಾಸತ್ಪ್ರತ್ಯಯಾನಂದವಿ । ಸ್ತಾರೋಪೇತ ವಿಶಿಷ್ಟರಿಂತುಸಿರ್ವರೇ ಶ್ರೀ ಸಿದ್ಧಲಿಂಗೇಶ್ವರಾ ॥೯೪॥

**ಗದ್ಯ:**—ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ತೊಂಭತ್ತುನಾಲ್ಕನೆಯದಾದ ಶಿಷ್ಯೋದನ ಪ್ರಸಾದಿಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

## ೭೫ ಚರಾಚರಲಯಸ್ಥಲ.

**ಸೂತ್ರ:**—ಇಂತು ನಿಜನಿಲವು ನಿಂದು ನಿಸ್ತರಂಗಾಂಬುಧಿಯಂತಿಪ್ಪುದಾಲಿಂಗವು ಐಕ್ಯನಲ್ಲಿ ಚರಾಚರ ವೆಂಬುಭಯವು ಲಯವಾದ ಭೇದ ವೆಂತಿರ್ದುದೆಂದಡೆ ಚರಾಚರನಾಸ್ತಿ ಸ್ಥಲವಾದುದು.

**ವಚನ:**—ಆಕಾರ ನಿರಾಕಾರ ವೆಂಬೆರಡು ಸ್ವರೂಪಂಗಳು ಒಂದು ಆಹ್ವಾನ ಒಂದು ವಿಸರ್ಜನ ಒಂದು ಸುರಾಳ ಒಂದು ನಿರಾಳ ಈ ಉಭಯ ಕುಲರಹಿತ ಗುಹೇಶ್ವರಾ ನಿಮ್ಮ ಶರಣ ನಿಶ್ಚಿಂತ ॥೬॥

ಪದ—ರಾಗ--ಮಾಳವಗೌಳ

ನೀನು ನಾನು ಎಂಬ ಸಂದೇಹವುಂಟೆ। ಬಂಧ ಪ್ರತಿಬಂಧವಲ್ಲಿ ಬದ್ಧನಲ್ಲ॥ ಪ ॥

ಮಾಡುವ ನಡಿಸುವ ನುಡಿಸುವ ಹಂಗನು ಕೂಡದೆ ಹಸಿಗೆಯುರ ಸಕೂಡದೆ। ಮಾಡುವ ನಡಿಸುವ ನುಡಿಸುವ ಕೇಳುವ ವಾಸನೆಮುಟ್ಟದ ಧಣ್ಣಾದ ನಿರ್ಗಮನಿ ॥೧॥

ಪುರುಷನಲ್ಲ ಸತಿಯಲ್ಲ ನಪುಂಸಕನಲ್ಲ ಹಿರಿದುಕಿರಿದರಲ್ಲಿ ವರ್ತಕ ನಲ್ಲ ಚರಾಚರವೆಂಬುದು ನಿಸ್ಸಂಗ ಎರಡಿಲ್ಲದ ಬಗೆಯ ನುಂಗಿದ ನಿಲವು॥ ೨॥

ಆಗಮದ ಬಗೆಯ ಪುಗದ ಗಣಿತ ಸೂಕ್ಷ್ಮನು ಮಿಗೆನೆಮ್ಮುಗೆಯನ್ನು ನೆಗಳಲಿಲ್ಲ। ತಗುಳ ನಲುಗತಿಳಿಯಲು ಹರಿಯಲಿ ಬಾರದಾರಿಗಗೋಚರನು ಭಯಭ್ರಷ್ಟ ॥ ೩॥

ಅಂಕೆಗೆ ಝಂಕೆಗೆ ತಾಗು ತೆರಹಿಲ್ಲದ ಅಹಂಕಾರ ಮಮಕಾರ ಕೆಡ ಗುಡದೆ । ಭೋಂಕನೆ ಮನ ಕತನ ವಿರಳವಾದ ನಹಂಕಾರ ಮಮಕಾರ ವಳಿದುಳಿದಾ ॥ ೪ ॥

ಆಗದೆ ಹೋಗದೆ ಮಣಿಯದೆ ತಿಳಿಯದೆ ಜಾಗ್ರತ್ ಸ್ವಪ್ನಸುಷುಪ್ತಿ । ಯಲ್ಲಿ ತೂಗದೆ ತೊನೆಯದೆ ನಿಜಗುಣ ಶಿವತತ್ವಯೋಗಿ ಸ್ತುತಿಸಿದನು ನಿಜ ಪದವಾ ॥ ೫ ॥

**ಮತ್ತೇಭ** ॥ ಕಡಲೋಳ್ ಬುದ್ಬುದ ವೀಚಿಸಂಚಯ ಮುವ್ವುಂತೊ ರ್ಪವೊಲ್ ಮತ್ತಲ್ಲಿತಾ । ವಡಗುತ್ತಿರ್ಪ ವೊಲಿಂತು ತದ್ಘನ ಮಹಾಲಿಂಗೈಕ್ಯ ನೋಳ್ ಸತತಂ ॥ ಒಡನಾ ಸರ್ವ ಚರಾಚರಂಗಳು ಮಯುಂ ಪ್ರಖ್ಯಾತ ದಿಂ ನಾಶಮುಂ । ಬಿಡದೆಯ್ದಿರ್ಪವು ನಿಶ್ಚಯಂ ಬಳಿಕದೇಂ ಶ್ರೀಸಿದ್ಧಲಿಂ ಗೇಶ್ವರಾ ॥ ೯೫ ॥

**ಗದ್ಯ**:— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ತೊಂಭ ತ್ತೈದನೆಯದಾದ ಚರಾಚರ ನಾಸ್ತಿ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೭೦ ಭಾಂಡಸ್ಥಲ

**ಸೂತ್ರ**:— ಇಂತು ಸ್ವೀಕೃತ ಪ್ರಸಾದಿ ಶಿಷ್ಟೋದನ ಪ್ರಸಾದಿ ಚರಾ ಚರ ಲಯ ವೆಂಬ ತ್ರಿವಿಧ ಸ್ಥಲಂಗಳೇಕವಾದ ಲಿಂಗವು ಮಹದೈಕ್ಯನ ಸರ್ವಾಂಗವೆಂಬ ಭಾಂಡದಲ್ಲಿ ಅಡಗಿ ಸರ್ವಾಚಾರ ಸಂಪತ್ತೆಂಬ ಸಕಲ ಕರಣ ದ್ರವ್ಯಂಗಳಿಗೆ ಆಶ್ರಯ ಸ್ಥಾನವಾಗಿರ್ದ ಭೇದವೆಂತಿರ್ಪುದೆಂದಡೆ ಮುಂದೆ ಭಾಂಡಸ್ಥಲವಾದುದು

**ವಚನ**:– ಆಯತ ವಿಲ್ಲದ ಮಠದಲ್ಲಿ ಅಗ್ನಿಯಿಲ್ಲದ ಬೋನವಮಾಡೀ ಭಾವವಿಲ್ಲದ ಶಿವಕಾರ್ಯಂಗಳೊಳು ಭೋಜನವಿಲ್ಲದ ಅರಸಿ ಕೊಟ್ಟಡೆ ಆಪ್ಯಾ ಯನ ಆರಿಗೂ ಅಡಸಏದ್ದುದ ಕಂಡು ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದನು ॥ ೭ ॥

ಪದ—ರಾಗ—ಭೂಪಾಳಿ.

ನಾನಾವಿಧ ಬ್ರಹ್ಮಾಂಡದಾಲಯ ಸ್ಥಾನವೆನಿಸ ಮಾತಾಶ್ರಯ ರೂಪ ॥ ಪ ॥

ಇನಮಂಡಲ ಕಿರಣಾವಳಿಯ ತನ್ನೊಳಗೆ ಗರ್ಭೀಕರಿಸಿ ಕೊಂಡಿಪ್ಪಂತೆ । ನೆರೆದ ಜಗಂಗಳ ನೆಲ್ಲವ ನಿಮ್ಮಯ ಉದರದೊಳಡಗಿಸಿದಾ ಗುರುವೆ ॥ ೧ ॥

ಅಣುಮಾತ್ರ ಬೀಜದೊಳಗೆ ಘನ ವೃಕ್ಷವಡಗಿಪ್ಪಂತೆ ನಿಜ ತನು । ವಿನೊಳಗೆ ತೋರುವ ತೊರಿಕೆ ನಿಮ್ಮನುವಿನಳಡಗಿತ್ತದ ನೇನೆಂಬೆ॥ ೨ ॥

ಭಾಂಡದೊಳಡಗಿದ ದ್ರವ್ಯಂಗಳ ತೆರದಿ ಪಿಂಡದೊಳಗೆ ಶಿವತತ್ವವ ಖಂಡಾ। ಖಂಡಿತನಾಲಿಂಗಿಸಿ ನಿಜಸಹಜ ನಿರ್ಲೇಪ ನಿರಂಜನರೂಪನು ॥ ೩ ॥

ಸಕಲ ಪ್ರಪಂಚನು ಗರ್ಭೀಕರಿಸಿ ಸಕಲ ಪ್ರಪಂಚೆಂದರಿಯದೆ। ಉಪಮಾತೀತ ಮಹಂತ ನಿಮ್ಮ ನಿಜವನಾರು ಬಲ್ಲರು ಹೇಳಾ ॥ ೪ ॥

ಸರ್ವಾಚಾರ ಸಂಪತ್ತಿನ ಸರ್ವಾನುಭಾವ ಸಕ್ತಿಗಳ ಗರ್ಭೀಕರಿಸಿ ಕೊಂಡಿಪ್ಪ। ಕೂಡಲಸಂಗನಲ್ಲಿ ಅಲ್ಲಮಾ ಪ್ರಭುವೇ ॥೫॥

**ಮತ್ತೇಭಃ**—ಜಗವಂತೆನ್ನ ಶರೀರವಾದುದು ಭವದ್ರೂಪಂಸ್ವದೇಹಂಬಳ। ಕೈಗಲಲ್ಕೆಲ್ಲಿಯು ವೆಂಬುದಿಲ್ಲನಿತು ನೋಡಲಿತ್ತು ತಾನಾದ ಭಾಂ॥ ಡಗತಂ ಚಾರನನಂ ವಿಶೇಷಮದನಂ ಕಾಣ್ಬೇಂ ನಿಜಂ ತತ್ವವಿ। ತ್ತುಗಳೇ ನಿನ್ನಾರವಂ ಸದಾಪೊಗಳ್ವೆ ಶ್ರೀ ಸಿದ್ಧಲಿಂಗೇಶ್ವರಾ ॥೯೬॥

**ಗದ್ಯ**—ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ತೊಂಭತ್ತಾರನೆಯದಾದ ಭಾಂಡಸ್ಥಲದ ವಿಚಾರವು ಅನುವಿನಿಂಮುಗಿಯಲಾಯಿತು

---

## ೯೭ ಭಾಜನ ಸ್ಥಲ.

**ಸೂತ್ರ**:- ಇಂತು ಸಕಲ ಕರಣಂಗಳೆಂಬ ಸರ್ವಾಚಾರ ಸಾಧನಂಗಳನಿಂಬುಗೊಂಡು ಭಾಂಡಸ್ವರೂಪವನೈದಿದ ಲಿಂಗವು ಮಹದೈಕ್ಯಂಗೆತಾನೇ ಭಾಜನನಾದ ಭೇದವೆಂತೆಂದಡೆ ಮುಂದೆ ಭಾಜನ ಸ್ಥಲವಾದುದು.

**ವಚನ**:- ಪರಿಯಾಣ ಭಾಜನವೆಂಬದು ಪರಿಯಾಣ ಭಾಜನವಲ್ಲ ನೋಡಾ! ಮಹಾಲಿಂಗಕ್ಕೆ ತನ್ನ ಶ್ರೀಮನವೇ ಭಾಜನವು. ಬೀಸರಪೋಗ

ದ ವಿಶ್ವಾಸಲವಾಗರ್ಪಿಸ ಬಲ್ಲಡೆ ಕೂಡಿ ಕೊಂಡಿಪ್ಪನು ಕೂಡಲ ಸಂಗಮ ದೇವನು ॥ ೮ ॥

ಪದ-ರಾಗ-ಶೋಕವಾಳಿ.

ಲಿಂಗ ನಿಮಗೆಮಗೆ ಎನ್ನಮನವಿಶ್ವಾಸಲ ಭಾಜನವ ಮಾಡಿದನು ಅಯ್ಯಾ ॥ ಪಲ್ಲ ॥

ಶಬ್ದ ಸ್ಪರ್ಶ ರೂಪ ರಸ ಗಂಧಂಗಳ ವಿವರಿಸಿ ಕಳೆದು ಪ್ರಾಣಲಿಂಗ ನಿಮಗೆ ಪರಿಯಾಣವ ಮಾಡಿದೆನೋ ಅಯ್ಯಾ ॥ ೧ ॥

ಸರ್ವಾಂಗವ ಶುದ್ಧವ ಮಾಡಿ ನಿರ್ಮಲ ತತ್ವವೇದಿಯಾಗಿ ಸದಾಚಾರ ಸಂಪತ್ತೆಂಬ ದ್ರವ್ಯವನ್ನು ನಿಮಗಳವಡಿಸಿದೆನೋ ಅಯ್ಯಾ ॥ ೨ ॥

ಪರಿಪೂರ್ಣ ಜ್ಞಾನವೆಂಬ ಮಹಾಘನ ಭಾಜನದಲ್ಲಿ ಪರಮಾನಂದವೆಂಬ ಪದಾರ್ಥವನ್ನು ನಿಮಗಳವಡಿಸಿದೆನೋ ಅಯ್ಯಾ ॥ ೩ ॥

ಆನೆಂಬರಿವಿನ ಮೂಲ ಸಕೃತಿಯೊಳಗೆ ನೀನೆಂಬ ವಿವೇಕವನು ಸಲೆನಾನಿಮಗಳವಡಿಸಿದೆನೋ ಅಯ್ಯಾ ॥ ೪ ॥

ಪರಿಣಾಮ ಪ್ರಸಾದದ ಪರಮ ಮಂಗಳ ತೃಪ್ತಿಗೆ ಪರಮ ಸಾಧನವೆನ್ನಂಗವು ನಿಮಗಳವಡಿಸಿದೆನೋ ಕ್ರಮದಿಂ ಕೂಡಲ ಸಂಗಯ್ಯ ॥ ೫ ॥

**ಮತ್ತೇಭಃ**— ಪರಿಪೂರ್ಣತ್ವವನುಳ್ಳುದಾಗಿ ಘನ ಸಚ್ಚಿತ್ಸೌಖ್ಯವೇ ಚಿನ್ನಮಾ। ಗಿರುತಿರ್ಪ ದ್ವಯ ವಸ್ತು ತಾನೆಯರಿವಿಂದಂ ಕಾಣಿಕುಂಮತ್ತಮಾ ॥ ವರಸುಜ್ಞಾನವೇ ತಾನೆಚಿತ್ಸಲಿಲದಿಂದಂ ಧೌತವಾಗಿರ್ಪಮಾ ॥ ಪರಿಯಾಣಾತ್ಮಯದಿಂದೆ ತಳ್ಪರಣನೋಳ್ ಶ್ರೀಸಿದ್ಧಲಿಂಗೇಶ್ವರಾ ॥ ೯೭ ॥

**ಗದ್ಯಃ**— ಇಂತಿ ಪ್ರಕಾರದಿಂ ನೂರೊಂದು ಸ್ಥಲದೊಳಗೆ ತೊಂಭತ್ತೇಳನೆಯದಾದ ಭಾಜನ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು

---

## ೮೨ ಅಂಗ ಲೇಪನ ಸ್ಥಲ.

**ಸೂತ್ರಃ**— ಇಂತು ಐಕ್ಯಂಗೆ ಲಿಂಗವೇ ಭಾಜನವಾಗಿ ಮಹಾಲಿಂಗಕ್ಕೆ ಐಕ್ಯನೇ ಭಾಜನವಾಗಿ ಅವಿರಳವಾಗಿರ್ದ ಲಿಂಗವು ಮಹದೈಕ್ಯನ

ಸರ್ವಾಂಗದಲ್ಲಿ ಲೇಪವಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಲಿಂಗ ಲೇಪನ ಸ್ಥಲವಾದುದು.

**ವಚನಃ**— ಅಪ್ಪುವ ನಪ್ಪಿದ ವಾಯುವಿನಂತೆ ವಾಯುವನಪ್ಪಿದ ಪರಿಮಳದಂತೆ, ಬಯಲನೊಳಕೊಂಡ ಜ್ಯೋತಿಯಂತೆ ಲಿಂಗವನಪ್ಪಿದ ಶರಣ ದೇಹಿ ಎನಬಹುದೆ ಕೂಡಲ ಚನ್ನ ಸಂಗಾ ನಿಮ್ಮ ಶರಣನಪರಿ ಇಂತು ‖ ೯ ‖

ಪದ—ರಾಗ.

ಗಗನದ ಗವ್ಯ ನಿಲವನು ಒಂದು ಮದಾಳಿ ನುಂಗಿತ್ತ ಕಂಡೆನು ‖‖ ಕಾಲನೆಂಬ ಜಾಲಜಾಗರನ ಘನ ಶರಧಿ ನುಂಗಿತ್ತ ಕಂಡೆನು ‖‖ ಪ ‖

ಜಂಬು ದ್ವೀಪದ ಹೃದಯದಲೊಂದು ಸದ ಮದಗಜ ಹಯನಾಯಿತು । ಕುಂಭಿನಿ ಯುದರದ ಕಂದರನ ನೊಸಲಲಿ ಚಂದ್ರ ಲಿಖಿತ ಕಂಡೆನು ‖ ೧ ‖

ಹದಿನಾಲ್ಕು ಭುವನ ದಿಗುವಳಯ ಒಂದು ಹರಿಣಿಯ ನಖದೊಳಗಡಗಿತ್ತು । ಅರ್ಕನ ಕೃತಕದ ಭಿತ್ತಿಯು ಮೇಲಣ ಚಿತ್ತಾರ ವಡಗಿತ್ತ ಕಂಡೆನು ‖ ೨ ‖

ತುಂಬಿ ಯಮೃತವಕಡೆವಲ್ಲಿ ಅಂಗಜ ನತ್ತುದ ಬಿತ್ತಿದನು ಕಂಡೆನು । ಮೇರು ಮಂದಿರ ದಂಗನೆಯ ಬಸುರಲ್ಲಿ ನವಖಂಡ ಪಿಂಡವ ಕಂಡೆನು ‖೩‖

ಜಲದೊಳಗಣ ಕಿಚ್ಚು ಜಲವ ಸುಟ್ಟು ಕಂಡೆ ಜಲಬೆಂದು ನೆಲನಿಧಿ ವುಳಿಯಿತ್ತು । ಅಜ ಕಪಾಲವ ಪಿಡಿದಿಹ ರುದ್ರನ ಕರಬೆಂದು ಕಪಾಲ ಉಳಿಯಿತ್ತು ‖ ೪ ‖

ಅಳಿಯ ಬಣ್ಣದ ಮೇಲೊಂದು ಪವನನ ರತ್ನವ ನಂಗಿಯಡಗಿತ್ತು । ಗುಹೇಶ್ವರನೆಂಬ ಲಿಂಗಸಂಗ ನಿರ್ಲೇಪ ವಾಯಿತ್ತು ‖ ೫ ‖

**ಮತ್ತೇಭಃ**— ತಿಳದೊಳ್ತೈಲ ಮದಿರ್ಪವೊಲ್ಕು ಸುಮದೊಳ್ಸಾರಭವಿರ್ಪಂತೆವಾ । ಲೊಳಗಾಜ್ಯಂ ನೆಲಿಸಿರ್ಪವೋಲ್ನಿಜಪರಂ ಜ್ಯೋತಿ ಸ್ವರೂಪಾನಿ ‖ ವರ್ಗಳಲಿಂಗಂ ಘನ ಚಿತ್ಸ್ವರೂಪ ನೆನಿಪಾ ಲಿಂಗೈಕ್ಯನೋಳ್ಕ್ಯೋ

ಭಿಸು । ತನ್ನೊಳಗೆಂದುಂ ಪೊರಗೆಂದು ಮಿಲ್ಲ ದೆಸಗುಂ ಶ್ರೀಸಿದ್ಧಲಿಂಗೇಶ್ವರಂ ॥ ೯೮ ॥

**ಗದ್ಯ:**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ತೊಂಭತ್ತೆಂಟನೆಯದಾದ ಲಿಂಗಲೇಪನ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೯೯ ಸ್ವಪರಾಜ್ಞಾ ಸ್ಥಲ.

**ಸೂತ್ರ:**— ಇಂತು ಭಾಂಡ ಭಾಜನ ಲಿಂಗಲೇಪನವೆಂಬ ತ್ರಿವಿಧ ಸ್ಥಲಂಗಳೇಕವಾದ ಲಿಂಗದ ಮಹದೈಕ್ಯನಲ್ಲಿ ನಾಹಂ ಎಂಬುಭಯವನರಿಯದೆ ಸ್ವಯ ನಿಜವಾಗಿರ್ದಭೇದ ವೆಂತಿರ್ಪುದೆಂದಡೆ ಮುಂದೆ ಸ್ವಪರಾಜ್ಞಾ ಸ್ಥಲವಾದುದು.

**ವಚನ:**— ನಾವು ಅನಾಮವೆಂದು ನೀನು ನಾಮಕ್ಕೆ ಬಳಲುವೆ ನಾಮವಾವ ಸೀಮೆಯೊಳಗಿಪ್ಪದು ಹೇಳಿಲೆ ಮರುಳೆ! ನಾಮವಿಲ್ಲ, ಸೀಮೆಯಿಲ್ಲ, ಒಡಲೂ ಇಲ್ಲ, ನೆಳಲೂ ಇಲ್ಲ, ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ನಾನು ಇಲ್ಲ ನೀನು ಇಲ್ಲ ॥ ೧೦ ॥

ಪದ—ರಾಗ—ದೇಶಿ.

ಶ್ರೀಲಿಂಗೈಕ್ಯಂಗೆ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳುಂಟೆ । ಶ್ರೀಲಿಂಗೈಕ್ಯನು ಮಾಯಾ ಮೋಹದಿಂದ ಭಂಗಿತನೆ ಅಲ್ಲ ॥ ಪ॥

ನುಡಿಯಲ್ಲಿ ಎರಡಿಟ್ಟು ನುಡಿಯನು । ಬೆಡಗಿನ ಗಡಣದ ಕುಲವನು ಕಂಡರಿಯನು ಮತ್ತೆ । ಹಿಡಿಯನು ಕೃತಕವ ತನ್ನನುವನು ತೂರಿಡಂಬಿಕ್ಕುವನಲ್ಲ ॥ ತುಡುಗುಣಿತನದಿಂದ ಲೋಕದ ಬಳಕೆಯ । ತುಡುಕುವನಲ್ಲ ತನ್ನ ತೋರನು ಬೀರನು । ಜಡನಲ್ಲಿ ಜಾಣನಲ್ಲ ತನ್ನಲ್ಲಿಯೆ ತಾನೇನಿಂದ ಸಹಜನು ॥ ೧ ॥

ಮಾತಿನ ಸೂತಕ ಸುದ್ದಿಯ ಸಟೆಯುವನಲ್ಲ । ಜಾತಿಯ ನೀತಿಯ ಬಳಸದ ಸಮ್ಮುಖ । ಪ್ರೀತಿಯ ಮಾಡನು ತನ್ನ ಮಹಾತ್ಮೆಯ ತನ್ನಲ್ಲಿ

ಊಟವೆಂದು । ಧಾತುಗೆಟ್ಟು ಹೆರರುಂಟೆಂದರಿಲ್ಲೆನ್ನ । ಭೀತಿಯಿಂದ ಪ್ರೀತಿಗಳ ಸಂಪಾದಿಸ । ಮಾತ ಪಿತರನೆ ಕೊಂದು ತನ್ನನೆ ತಾ ಕೊಡಿಸಿ ಕೊಡ ಹೇಸಿಕೆಯಿಲ್ಲದವಾ ॥ ೨ ॥

ತನ್ನಯ ನೆಳಲಿಗೆ ತಾನೇ ಮುನಿವನು । ತನ್ನಯ ಹೆಸರಿಗೆ ತಾನೆ ನಗುವನು । ತನ್ನಯ ಹಮ್ಮನು ತಾನೇ ನಿಂದಿಸಿ ತಾನಿಲ್ಲದ ಮಹಿಮಾ ॥ ಎನ್ನವರು ತನ್ನವರೆಂದು ಮನದೊಳು । ಮನ್ನಣೆಯ ಮಾಡನು ಸಂವಳಿದುಳಿದನು । ತನ್ನಲ್ಲಿ ತಾನಾಗಿ ಏನು ಇಲ್ಲದ ನಿರ್ಣಯ ನಿರುಪಮನು ॥ ೩ ॥

ಅಲ್ಲೆನ್ನ ಅಹುದೆನ್ನ ಬೇಕೆನ್ನ ಬೇಡೆನ್ನ । ಹೊಲ್ಲಹರೆನ್ನ ಒಳ್ಳಿಹರೆನ್ನ ಎರಡರ । ಕೊಲ್ಲಣಗೆಯನು ಲಿಂಗೈಕ್ಯನು ಸಕಲ ಜಗವನು ಕಂಡಲ್ಲಿ ॥ ಇಲ್ಲುಂಟೆಂದೆಂಬ ಜಗಳದಜಾತಿಯ । ತಲ್ಲಣ ಮುಟ್ಟದ ಸಮರಸಭರಿತನು । ಅಲ್ಲಲ್ಲಿ ಯರಿವಡೆಯಲ್ಲಿ ಕಾಮಿಸಿ ಕೊಳ್ಳದ ಮೂರುತಿಯು ॥ ೪ ॥

ಎಣಿಕೆಯ ತನುಗುಣ ವಿಡಿದಾಡುವನಲ್ಲ । ಕ್ಷಣಿಕರ ಕುಚಿತರ ನೆರವಿಗೆ ನಾಚುವ ॥ ಗಣಿತದ ಗುಣಿತದೊಳಲ್ಲದ ನಿರ್ಣಯ ಎಲ್ಲೆಡೆಯೊಳು ತಾನೆ । ಸೆಣಸುವನಲ್ಲ ತನ್ನ ನಷ್ಟಕೆ ತುಷ್ಟಿಗೆ । ಹೊಣೆಯಾಗನು ಗುರುತನದಿಂ ಶಿಷ್ಯಗೆ । ಮಣಿಕಿನೊಳಗೆ ಹೊಗವಚ್ಚ ಲಿಂಗೈಕ್ಯನು ಘನ ನಿಜಗುಣ ಯೋಗಿ ॥ ೫ ॥

**ಮತ್ತೇಭ**:— ಸುರತ ಕ್ರೀಡೆಯೊಳಾತ್ಮ ವಲ್ಲಭೆಯನಿಂತಾ ಲಿಂಗನಗೆಯುದ್ದತ । ತ್ಪುರುಷಂ ಬಾಹ್ಯವನಂತೆ ಯಂತರವನೇನಂ ಬಲ್ಲನಾ ರೀತಿಯೋ ॥ ಕ್ಕರಣಂ ಲಿಂಗವನಪ್ಪಿ ಕೂಡಿದ ಸುಖಾವೇಶತ್ವದಿಂ ತನ್ನನಾ । ಪರವಂತಾನರಿಯಂ ನಿರಂತರಮುವಂ ಶ್ರೀಸಿದ್ಧಲಿಂಗೇಶ್ವರಾ ॥ ೯೯ ॥

ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ತೊಂಭತ್ತೊಂಭತ್ತನೆಯದಾದ ಸ್ವಪರಾಜ್ಞಾ ಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

---

## ೮೪ ಭಾವಾಭಾವ ನಷ್ಟಸ್ಥಲ.

ಇಂತು ಸ್ವಪರಾಜ್ಞಾ ಸ್ಥಲದ ನಿಶ್ಚಿಂತ ಲಿಂಗವು ಮಹದೈಕ್ಯನಲ್ಲಿ ಭಾವಾಭಾವ ವೆಂಬೆರಡು ನಷ್ಟವಾದ ಭೇದವೆಂತಿರ್ದುದೆಂದಡೆ ಮುಂದೆ ಭಾವಾಭಾವ ನಷ್ಟ ಸ್ಥಲವಾದುದು.

**ವಚನ:**— ಭೂಮಿ ಘನವೆಂಬೆನೆ? ಶ್ರೀಪಾದಕ್ಕೆ ಒಳಗಾಯಿತ್ತು. ಗಗನ ಘನವೆಂಬೆನೇ? ಶ್ರೀನೇತ್ರಕ್ಕೆ ಒಳಗಾಯಿತ್ತು. ಮಹತ್ತು ಘನ ವೆಂಬೆನೇ? ಶ್ರೀವಾಚ್ಯಕ್ಕೆ ಒಳಗಾಯಿತ್ತು, ಘನಘನವೆಂಬುದು ಇನ್ನೆಲ್ಲಿ ಹುದೋ ಎಲವೋ? ಅರಿವಿಂಗೆ ಆಚಾರವಿಲ್ಲ. ಕುರುಹಿಂಗೆ ನೆಲೆಯಿಲ್ಲ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆನು ॥೧೧॥

ಪದ— ರಾಗ— ಲಲಿತ

ಜಾತನಲ್ಲದ ಜಾತನ ಬರಿಬರಿ ಮಾತನಾಡಿಪಡೇನಪ್ಪದಯ್ಯಾ ॥ಪ॥

ಆಗುಹೋಗಿಲ್ಲದನ ರಾಗ ಭೋಗಕ್ಕೆ ತಂದು। ತಾಗು ನಿರೋಧಕ್ಕೆ ಗುರಿ ಮಾಡಿ। ಮೇಘ ಡಂಬರದಂತೆ ಸಮಭೋಗವನಳವಡಿಸಿಕೊಂಡು ಆಗಮದಿಙ್ಬಿಗೆ ತೋರಿಬೀರಲಿಲ್ಲ ಕಂಡಯ್ಯಾ ॥೧॥

ಬಗೆಯುರಳದೆ ಬಗೆಮೊಳೆಯುದೆ। ಬಗೆಹುಟ್ಟದೆ ಬಗೆಗೆಟ್ಟು ನಷ್ಟ ವಾದ। ಬಗೆಬಳಕಿನ್ನೇನಪ್ಪುದೋ ಬಗೆರಚನೆಯ ಮುಂದಿಟ್ಟುಕೊಂಡು॥ ಹೊಗಳುವ ಭಟ್ಟರಂತೆ ಹೊಗಳತೊಡಗ ಲೆಡೆಯಿಲ್ಲ ಕಂಡಯ್ಯ ॥೨॥

ಮತಿಯೆಂದು ಹೊಗಳಲು ಬಾರದು ವ್ರತಿಯೆಂದು ಹೊಗಳಲು ಬಾರದು। ಶೃತಿಗಳಿಗಳವಡದೆ ಸಹಜನು ಓತು ಪತಿಯಿಲ್ಲವಾಗಿ। ಸ್ಥಿತಿ ಲಯವೆಂಬುದಿಲ್ಲ ಅತಿ ಕವಿಗಳು ಹೊಗಳುವ ಕಳವಳದೊಳಗಿಲ್ಲ ಕಂ ಡಯ್ಯಾ ॥೩॥

ಮನವಚನ ಕಾಯಕಿಂತನುವಲ್ಲದೆ ಹೊಯಿತ್ತು ತನ್ನನು ಭವಕೆ ತರಬಹುದೆನುಡಿಗಧಿಕನ। ಇನಿತಿಂತು ಪರಿಯಲ್ಲಿ ಘನಘನವೆಂದಡೆ ಅನಿತ ನಿತು ಧಾವತಿ ಮುಂದೆ ಸುಖವಿಲ್ಲ ನಿರೂಪ ಮನ ತಾವಿನಲ್ಲಿ ಕಂಡ್ಯ ಅಯ್ಯ ॥೪॥

ಬದ್ಧನು ಮುಕುತನು ಎಂಬ ಸುದ್ದಿಯ ಸಟೆಯುವನಲ್ಲ ಉದ್ದೇಶ ನಿರ್ದೇಶ ನಿರುತನಲ್ಲ ವಿದ್ಯದ ಬಲುಹನೆ ತೋರಿ ಬುದ್ಧಿಯ ಮೆರೆದವ ನಲ್ಲ ನಿದ್ರೂಳಿಯ ಜನ್ಮನಿಜಗುಣಯೋಗಿ ಕಂಡಯ್ಯ ॥೫॥

**ಶಾರ್ದೂಲ:**— ಆವಾಗಳ್ ನಿಜದಿಂದ ಹಂತೆಯು ಮದಿಲ್ಲಾಗಲ್ಪ ಳಿಕ್ಕಂ ಶಿವ। ಭಾವಂ ಸಿದ್ಧಿಯದಾದುದೆಂಬ ನಿರಹಂತಾ ಭಾವವಂತಿಲ್ಲ

ವು॥ ತ್ತಾವಲ್ಲಿಲ್ಲನಹಂತೆ ಯೆಂಬುದು ಬಳಿಕ್ಕಿಲ್ಲಿಲ್ಲ ಹಂತಾಗುಣಂ। ಭಾವಾಭಾವ ವಿರರ್ಚಕಂಗಿದು ಭಟಂ ಶ್ರೀಸಿದ್ಧಲಿಂಗೇಶ್ವರಾ॥೧೦೦॥

**ಗದ್ಯ:**— ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ನೂರನೆಯದಾದ ಭಾವಾಭಾವ ನಷ್ಟಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

## ಜ್ಞಾನ ಶೂನ್ಯಸ್ಥಲ.

**ಸೂತ್ರ:**— ಇಂತು ಭಾವನಿರ್ಭಾವವೆರಡು ನಷ್ಟವಾದ ಲಿಂಗವು ಮಹದ್ವೈಕ್ಯನ ಮೂಲಜ್ಞಾನವನಾಲಿಂಗಿಸಿ ಜ್ಞಾನವೇ ತಾನಾಗಿ ಆ ಜ್ಞಾನವು ನಿಜನಿಜದಲ್ಲಿ ನಿಂದು ಶೂನ್ಯವಾದ ಭೇದವೆಂತಿರ್ದುದೆಂದಡೆ ಮುಂದೆ ಜ್ಞಾನಶೂನ್ಯಸ್ಥಲವಾದುದು.

**ವಚನ:**— ಶ್ರೀ ಮನ್ಮನದ ಕೊನೆಯಿಂದ ನೆನೆದ ನೆನಹು ಜನನ ಮರಣವ ನಿಲಿಸಿತ್ತು ಜ್ಞಾನ ಜ್ಯೋತಿಯು ಉದಯ ಭಾನುಕೋಟಿಯನೆ ಮೀರಿ ಸ್ವಾನುಭಾವದುದಯ ಜ್ಞಾನ ಶೂನ್ಯದೊಳಗಡಗಿದ ಭೇದವನು ಏನೆಂಬೆನೋ ನೋಡಾ ಗುಹೇಶ್ವರಾ ॥೧॥

ಪದ—ರಾಗ—ನಾಟಿ.

ತಾನಿದಿರೆಂಬೆರಡನು ಅರಿಯದೆ ಧ್ಯಾನ ನಷ್ಟವಾಗಿ। ಜ್ಞಾತೃಜ್ಞಾನ ಜ್ಞೇಯವೆಂಬ ತ್ರಿವಿಧ ವರತಮಹಿಮ ॥ಪ॥

ಹೊರವಳಗೆಂಬೆರಡರ ಬಗೆಯನರಿಯದೆ ಎರಡರ ತೆರನೆಂಬ ನುಡಿಯಮುನ್ನವೆ ತಾನರಿಯದೆ। ಅರಿವಿನ ಮೂಲವ ಹರಿದು ಮರವೆನಷ್ಟವಾದ ಅರಿತ ಅರುವಿನ ಮರವೆಯ ಕುರುಹಳಿದ ನಿಶ್ಚಿಂತ ॥೧॥

ಉಲುಹಡಗಿದ ಸಮುದ್ರದ ನಿಲವಿನ ಘಾತದಂತೆ ತಿಳಿವಿನ ಮಹಾಘನ ವಿವೇಕ ಹರಿಹಂಚಾಗಿ। ಮುಳಿದೆನೆಂಬ ಉಳುಮೆಯ ಮೂಲವ ಮರೆದು ಕಳೆಯಬೆಳಗಳಿದು ನಿಜದೊಳುನಿಂದ ಮಹಿಮ ॥೨॥

ಉರಿಕರ್ಪುರ ಒಡಗೂಡಿ ಎರಡುವಳಿದ ಬಳಿಕ ಪುರಳಿ ನೋಡಿಹೆ ನೆಂದಡೆ ಭಸ್ಮವಿಲ್ಲ ನೋಡಾ। ಅರಿವನರಿದಿಹೆನೆಂಬ ಅರಿವಿನ ಮೂಲವ ದಹಿಸಿ ಧರಿಸಿದ ಜ್ಞಾನಭಸ್ಮವೆಂಬುದಿಲ್ಲದ ಮಹಿಮ ॥೩॥

ನಿಜದಲಿ ನಿರ್ಣಯವಡಗಿ ಗತಿಮತಿ ನಷ್ಟವಾಗಿ ಕಳೆಯೊಳಗಣ ಬೆಳಗು ತಾನೆಂದು ತೋರುತಲಿರ್ಪ। ತೊಳಗಿ ಬೆಳಗುವ ಚೈತನ್ಯ ತನ್ನಲ್ಲಿ ತಾನೆ ನಿಷ್ಕಳೆಯಾಗಿ ನಿಜದೊಳು ನಿಶ್ಶೂನ್ಯವಾದ ಮಹಿಮ ॥೪॥

ತನ್ನೊಳು ತಾನೆಯಾಗಿ ಎನ್ನಲ್ಲಿ ನಾನರಿದು ಎನ್ನಲ್ಲಿ ನಾನರಿದೆ ನೆಂಬ ಅರಿವಿಂಗೆ ತೆರಹುಗೊಡದೆ। ಬಿಮ್ಮು ಬೀಸರವಾಗಿ ತಾಹಮ್ಮು ಶೂನ್ಯ ವಾಗಿ ನಿರ್ಮಲ ನಿಜಪದವಾದ ಉಪಮಾತೀತ ಮಹಿಮ ॥೫॥

ಜ್ಞಾನಜ್ಯೋತಿಯ ಪ್ರಭೆ ತಾನಾಗಿರ್ದ ನಿಂದಿರ್ದ ತಾನಾಗಿರ್ದೆನೆಂಬ ಜ್ಞಾನಶೂನ್ಯವಾಗಿ। ತಾನೆ ತನ್ನಲ್ಲಿ ವ್ಯೋಮರದೊರಗಿದ ನಿರಾಳ ಜ್ಞಾನಾ ತೀತ ನಿರುಪಮ ನಿಶ್ಚಲ ನಿರ್ಭೇದ್ಯ ॥೬॥

ಶಬ್ದ ನಿಶ್ಶಬ್ದವಾಗಿ ನಿಶ್ಶಬ್ದವ ನಾಹತವಾಗಿ ಶಬ್ದನಿಶ್ಶಬ್ದವೆಂಬ ಬುದ್ಧಿ ನಿರ್ಮಯಲಾಗಿ। ಇದ್ದುದ ಹೋದುದೆಂಬುದನರಿಯದೆ ಮೇರೆಗೆಟ್ಟು ನಿಶ್ಶಬ್ದ ಗಂಭೀರ ಗುಹೇಶ್ವರ ನಿಮ್ಮ ಬಸವಣ್ಣ ॥೭॥

**ಮತ್ತೇಭ:**— ಜ್ಞಾನಾತೀತನೆನಿಪ್ಪ ನಿರ್ಮಲ ಮಹಾಲಿಂಗೈಕ್ಯನಾ ಜ್ಞಾನಮಂ। ತಾನಾಲಿಂಗಿಸಿ ಯಾತರಂಬಡೆದು ಮತ್ತಾಜ್ಞಾನಮಂ ತನ್ನೊಳೇ॥ ಲೀನಂಗೈದ ವಿಲಾಸ ಕಾರಣ ಮುಪಾಸ್ಯೋಪಾಸ ಕತ್ವಂಗಳಿಂ। ತೇನುಂ ತೋರದೆ ಇರ್ದುದಾ ನಿಜಪದಂ ಶ್ರೀಸಿದ್ಧಲಿಂಗೇಶ್ವರಾ ॥೧೦೧॥

**ಗದ್ಯ:**— ಇಂತೀಪ್ರಕಾರದಿಂ ನೂರೊಂದು ಸ್ಥಲದೊಳಗೆ ನೂರೊಂದ ನೆಯದಾದ ಜ್ಞಾನಶೂನ್ಯಸ್ಥಲದ ವಿಚಾರವು ಅನುವಿನಿಂ ಮುಗಿಯಲಾ ಯಿತು.

---

ಇಂತೆಂಬಲ್ಲಿಗೆ ಏಕೋತ್ತರ ಶತಸ್ಥಲಂಗಳಲ್ಲಿ

ದೀಕ್ಷಾಗುರು ಸ್ಥಲವಾದಿಯಾಗಿ ಪರಜಂಗಮ ಸ್ಥಲಾಂತ್ಯವಾದ ಒಂಭತ್ತು ಸ್ಥಲಂಗಳಿಂದ ಒಂದನೇ ಆಚಾರಲಿಂಗಸ್ಥಲವಾಯ್ತು.

ಕ್ರಿಯಾಗಮ ಸ್ಥಲವಾದಿಯಾಗಿ ಜ್ಞಾನಾಚಾರ ಸ್ಥಲವಂತ್ಯವಾದೊಂ ಭತ್ತು ಸ್ಥಲಂಗಳಿಂದ ಎರಡನೇ ಗುರುಲಿಂಗ ಸ್ಥಲವಾಯ್ತು-

ಕಾಯಾನುಗ್ರಹಸ್ಥಲವಾದಿಯಾಗಿ ಸೇವ್ಯಸ್ಥಲವಾದೊಂಭತ್ತು ಸ್ಥಲಂಗಳಿಂದ ಮೂರನೇ ಶಿವಲಿಂಗ ಸ್ಥಲವಾಯ್ತು.

ಜೀವಾತ್ಮಸ್ಥಲವಾದಿಯಾಗಿ ಸೇವ್ಯಪ್ರಸಾದಿಸ್ಥಲವಂತ್ಯವಾದೊಂಭತ್ತು ಸ್ಥಲಂಗಳಿಂದ ನಾಲ್ಕನೇ ಜಂಗಮ ಸ್ಥಲವಾಯ್ತು.

ದೀಕ್ಷಾಪಾದೋದಕ ಸ್ಥಲವಾದಿಯಾಗಿ ಮಹದಾಕಾಶಸ್ಥಲವಂತ್ಯವಾದ ಒಂಭತ್ತು ಸ್ಥಲಂಗಳಿಂ ಐದನೆಯದಾದ ಪ್ರಸಾದಲಿಂಗ ಸ್ಥಲವಾಯ್ತು.

ಕ್ರಿಯಾಪ್ರಕಾಶ ಸ್ಥಲವಾದಿಯಾಗಿ ಜ್ಞಾನಶೂನ್ಯ ಸ್ಥಲಾಂತ್ಯವಾದ ಹನ್ನೆರಡು ಸ್ಥಲಂಗಳಿಂ ಆರನೇ ಮಹಾಲಿಂಗಸ್ಥಲವಾಯ್ತು.

ಅಂತು ಲಿಂಗಸ್ಥಲಂಗಳಾರಕ್ಕೆ ಸ್ಥಲಂಗಳೈವತ್ತೇಳು ಮುಗಿದವು.

**ಮಂಗಳಮಹಾ ಶ್ರೀ**



**ಗದ್ಯ:**— ಇಂತೀ ವ್ಯಾಖ್ಯೆಯಿಂ ಅನಾದಿ ಪರವಸ್ತುವೇ ಮಹಾಸ್ಥಲವಾಗಿ ಅನಾದಿ ಸದ್ಭಕ್ತನ ಹೃನ್ಮಂದಿರದಲ್ಲಿರ್ದ ಲಿಂಗ ಅಂಗ ಸ್ಥಲಂಗಳಾಗಿ ಆಱಾರಕ್ಕೆ ಕೂಡಿದ ಏಕೋತ್ತರ ಶತಸ್ಥಲಂಗಳಲ್ಲಿ ಲಿಂಗಸ್ಥಲಂಗಳು ಐವತ್ತೇಳಕ್ಕೆ ವಿವರವು.

ದೀಕ್ಷಾಗುರುಸ್ಥಲಾದಿ ಪರಜಂಗಮ ಸ್ಥಲಾಂತ್ಯವಾದ ಒಂಭತ್ತು ಸ್ಥಲಂಗಳ್ಕೂಡಿದ ಒಂದನೇ ಆಚಾರ ಲಿಂಗಸ್ಥಲಕ್ಕೆ ಸೂತ್ರ ವಚನ ಪದ ಪದ್ಯ ಗದ್ಯ ೯, ೨೭, ೧೦

ಕ್ರಿಯಾಗಮಸ್ಥಲಾದಿ ಜ್ಞಾನಾಚಾರ ಸ್ಥಲಾಂತ್ಯವಾದ ಒಂಭತ್ತು ಸ್ಥಲಂಗಳ್ಕೂಡಿದ ಎರಡನೇ ಗುರುಲಿಂಗ ಸ್ಥಲಕ್ಕೆ ಸೂತ್ರ ವಚನ ಪದ ಪದ್ಯ ಗದ್ಯ ೯, ೨೭, ೧೦

ಕಾಯಾನುಗ್ರಹಸ್ಥಲಾದಿ ಸೇವ್ಯಸ್ಥಲಾಂತ್ಯವಾದ ಒಂಭತ್ತು ಸ್ಥಲಂಗಳ್ಕೂಡಿದ ಮೂರನೇ ಶಿವಲಿಂಗಸ್ಥಲಕ್ಕೆ ಸೂತ್ರ ವಚನ ಪದ ಪದ್ಯ ಗದ್ಯ ೯, ೨೭, ೧೦

ಜೀವಾತ್ಮಸ್ಥಲಾದಿ ಸೇವ್ಯಪ್ರಸಾದಿ ಸ್ಥಲಾಂತ್ಯವಾದ ಒಂಭತ್ತು ಸ್ಥಲಂಗಳ್ಕೂಡಿದ ನಾಲ್ಕನೇ ಜಂಗಮಲಿಂಗಸ್ಥಲಕ್ಕೆ ಸೂತ್ರ ವಚನ ಪದ ಪದ್ಯ ಗದ್ಯ ೯, ೨೭, ೧೦

ದೀಕ್ಷಾಪಾದೋದಕಸ್ಥಲಾದಿ ಮಹದಾಕಾಶಸ್ಥಲಾಂತ್ಯವಾದ ಒಂಭತ್ತು ಸ್ಥಲಂಗಳ್ಕೂಡಿದ ಐದನೇ ಪ್ರಸಾದಲಿಂಗಸ್ಥಲಕ್ಕೆ ಸೂತ್ರ ವಚನ ಪದ ಪದ್ಯ ಗದ್ಯ ೯, ೨೭, ೧೦

ಕ್ರಿಯಾಪ್ರಕಾಶಸ್ಥಲಾದಿ ಜ್ಞಾನಶೂನ್ಯಸ್ಥಲಾಂತ್ಯವಾದ ಹನ್ನೆರಡು ಸ್ಥಲಂಗಳ್ಕೂಡಿದ ಆರನೇ ಮಹಾಲಿಂಗಸ್ಥಲಕ್ಕೆ ಸೂತ್ರ ವಚನ ಪದ ಪದ್ಯ ಗದ್ಯ ೧೨, ೩೬, ೧೪

ಅಂತು ಆಚಾರಾತ್ಮಕ ಭಕ್ತಸ್ಥಲಾದಿ ಐಕ್ಯಾತ್ಮಕ ಮಹಾಲಿಂಗ ಸ್ಥಲಾಂತ್ಯವಾದ ಲಿಂಗಸ್ಥಲಂಗಳಾಱರಲ್ಲಿ ಕೂಡಿದ ದೀಕ್ಷಾಗುರುಸ್ಥಲಾದಿಯಾಗಿ ಜ್ಞಾನಶೂನ್ಯಸ್ಥಲಾಂತ್ಯವಾದ ಐವತ್ತೇಳು ಲಿಂಗಸ್ಥಲಂಗಳಿಗೆ ಸೂತ್ರಂಗಳ್ ಐವತ್ತೇಳಕ್ಕಂ ವಚನಂಗಳ್ ಐವತ್ತೇಳಕ್ಕಂ ಪದಂಗಳ್ ಐವತ್ತೇಳಕ್ಕಂ ಪದ್ಯಂಗಳ್ ಐವತ್ತೇಳಕ್ಕಂ ಗದ್ಯಂಗಳ್ ಅಱವತ್ತುನಾಲ್ಕಕ್ಕೆ ಗಣನೆಯಿಂ ಕೂಡಿ ೨೯೨ಕ್ಕಂ ಲಿಂಗಸ್ಥಲಂಗಳ್ ಮುಗಿದುವು.

ಮುಂದಿನ್ನು ಅಂಗ ಲಿಂಗ ಸ್ಥಲಂಗಳು ನಾಲ್ವತ್ತನಾಲ್ಕನು ಲಿಂಗ ಅಂಗ ಸ್ಥಲಂಗಳು ಐವತ್ತೇಳನು ಮಿಶ್ರಪಟ್ಸ್ಥಲಂಗಳಾಗಿ ಕೂಡಿ ಪೇಳುತ್ತಿಪ್ಪುದು.

---

## ಮಹಾಪಿಂಡಾದಿ ಜ್ಞಾನಶೂನ್ಯಾಂತ್ಯೈಕೋತ್ತರ ಶತಸ್ಥಲಂಗಳು

ಅಂಗ ಲಿಂಗ ಸ್ಥಲಂಗಳ್ ೪೪, ಲಿಂಗ ಅಂಗ ಸ್ಥಲಂಗಳು ೫೭,
ನೂರೊಂದರ ಮೇಲೆ ನಿಂತಿರ್ದುವು ನೋಡಾ.

ಭಕ್ತಸ್ಥಲಕ್ಕೆ ೧೫ ಆಚಾರಲಿಂಗಸ್ಥಲಕ್ಕೆ ೯, ೨೪ ಇಪ್ಪತ್ತುನಾಲ್ಕು ಸ್ಥಲಂಗಳು
ಮಹೇಶಸ್ಥಲಕ್ಕೆ ೯ ಗುರುಲಿಂಗಸ್ಥಲಕ್ಕೆ ೯, ೧೮ ಹದಿನೆಂಟು ಸ್ಥಲಂಗಳು.
ಪ್ರಸಾದಿಸ್ಥಲಕ್ಕೆ ೭ ಶಿವಲಿಂಗಸ್ಥಲಕ್ಕೆ ೯, ೧೬ ಹದಿನಾರು ಸ್ಥಲಂಗಳು.
ಪ್ರಾಣಲಿಂಗಿಸ್ಥಲಕ್ಕೆ ೫ ಜಂಗಮಲಿಂಗಸ್ಥಲಕ್ಕೆ ೯, ೧೪ ಹದಿನಾಲ್ಕುಸ್ಥಲಂಗಳು
ಶರಣಸ್ಥಲಕ್ಕೆ ೪ ಪ್ರಸಾದಲಿಂಗಸ್ಥಲಕ್ಕೆ ೯, ೧೩ ಹದಿಮೂರು ಸ್ಥಲಂಗಳು
ಐಕ್ಯಸ್ಥಲಕ್ಕೆ ೪ ಮಹಲಿಂಗಸ್ಥಲಕ್ಕೆ ೯, ೧೩ ಹದಿಮೂರು ಸ್ಥಲಂಗಳು.
ತ್ಯಾಗಾಂಗದಿಷ್ಟಕ್ಕೊಂದು, ಭೋಗಾಂಗದ ಪ್ರಾಣಕ್ಕೊಂದು ಯೋಗಾಂಗದ ಭಾವಕ್ಕೊಂದು ಕೂಡಿ ನೂರೊಂದು ಸ್ಥಲಂಗಳಾಗಿ ಅನುವಿನಿಂ ಮಾಗಿದುವು.

ಭಕ್ತ್ಯೈಕ್ಯಾಂತ ಮೂರಾರಂಗಸ್ಥಲಂಗಳಲ್ಲಿಪ್ಪ ಪಿಂಡಾದಿ ಸಹಭೋಜನಾಂತ್ಯವಾದ ನಾಲ್ವತ್ತುನಾಲ್ಕು ಸ್ಥಲಂಗಳಿಗೆ ಗಣನೆಯಿಂ ಕೂಡಿದ ಸೂತ್ರ ವಚನ ಪದ ಪದ್ಯ ಗದ್ಯಂಗಳ್ ೨೩೭ ಕ್ಕಂ ಆಚಾರಾದಿ ಮಹದಂತ್ಯವಾದಾರು ಲಿಂಗಸ್ಥಲಂಗಳಲ್ಲಿಪ್ಪ ದೀಕ್ಷಾಗುರೋರಾದಿ ಜ್ಞಾನಶೂನ್ಯಾಂತವಾದ ಐವತ್ತೇಳು ಸ್ಥಲಂಗಳಿಗೆ ಗಣನೆಯಿಂ ಕೂಡಿದ ಸೂತ್ರ ವಚನ ಪದ ಪದ್ಯ ಗದ್ಯಂಗಳ್ ೨೯೨ಕ್ಕಂ ಅಂತು ಏಕೋತ್ತರ ಶತಸ್ಥಲಂಗಳಿಗೆ ೫೨೯ಕ್ಕಂ ಶ್ರೀ.

**ವಚನ:—** ನಿಮ್ಮಗಳಡಿದಾವರೆಗಳಾರೇ ಆರು ಅಂಗಸ್ಥಲಂಗಳು ಆರು ಲಿಂಗಸ್ಥಲಂಗಳು ಕೂಡಿದ ನೂರೊಂದು ಸ್ಥಲಂಗಳ ಮಿಶ್ರಭಾವಮಂ ಪೇಳ್ವೆಂ. ಅದೆಂತೆಂದೊಡೆ, ಪಿಂಡಸ್ಥಲಾದಿ ಸಹಜ ಮಾಟಸ್ಥಲಾಂತ್ಯವಾದ

ಹದಿನೈದಂಗಸ್ಥಲಗಳು, ದೀಕ್ಷಾಗುರುಸ್ಥಲಾದಿ ಪರಜಂಗಮ ಸ್ಥಲಾಂತ್ಯವಾದ ಒಂಭತ್ತು ಲಿಂಗಸ್ಥಲಂಗಳು, ಮಹೇಶಸ್ಥಲಾದಿ ಭಕ್ತದೇಹಿಕಲಿಂಗಸ್ಥಲಾಂತ್ಯವಾದ ಒಂಭತ್ತು ಅಂಗಸ್ಥಲಂಗಳು, ಕ್ರಿಯಾಗಮಸ್ಥಲಾದಿ ಜ್ಞಾನಾಚಾರಸ್ಥಲಾಂತ್ಯವಾದ ಒಂಭತ್ತು ಲಿಂಗಸ್ಥಲಂಗಳು, ಕೂಡಿ ನಾಲ್ವತ್ತೆರಡು ಸ್ಥಲಂಗಳೆಂದೆನಿಸಿ ಇಷ್ಟ ಪರಬ್ರಹ್ಮದ ವೃತ್ತಸ್ಥಾನದಲ್ಲಿಪ್ಪ ಸ್ವಪರಾಜ್ಞಾಸ್ಥಲ ಮಿಶ್ರವಾಗಿ ಸದ್ಭಕ್ತನ ಕರಸ್ಥಲವೆಂದುದು ಗುರುವಚನ ನೋಡಾ. ಪ್ರಸಾದಿಸ್ಥಲಾದಿ ಪ್ರಸಾದಮಹಾತ್ಮ್ಯ ಸ್ಥಲಾಂತ್ಯವಾದ ಏಳು ಅಂಗಸ್ಥಲಂಗಳು ಕಾಯಾನುಗ್ರಹಸ್ಥಲಾದಿ ಸೇವ್ಯಸ್ಥಲಾಂತ್ಯವಾದ ಒಂಭತ್ತು ಲಿಂಗಸ್ಥಲಂಗಳು ಪ್ರಾಣಲಿಂಗಿಸ್ಥಲಾದಿ ಅಂಗಲಿಂಗಸ್ಥಲಾಂತ್ಯವಾದ ಐದು ಅಂಗಸ್ಥಲಂಗಳು ಜೀವಾತ್ಮಸ್ಥಲಾದಿ ಸೇವ್ಯಪ್ರಸಾದಿಸ್ಥಲಾಂತ್ಯವಾದ ಒಂಭತ್ತು ಲಿಂಗಸ್ಥಲಂಗಳು ಕೂಡಿ ಮೂವತ್ತು ಸ್ಥಲಂಗಳೆಂದೆನಿಸಿ ಪ್ರಾಣಪರಬ್ರಹ್ಮದ ಗೋಮುಖಸ್ಥಾನದಲ್ಲಿಪ್ಪ ಭಾವಾಭಾವನಷ್ಟಸ್ಥಲ ಮಿಶ್ರವಾಗಿ ಸಮ್ಯಜ್ಞಾನಿಯ ಮನಸ್ಥಲವೆಂದುದು ಲಿಂಗ ವಚನ ನೋಡಾ! ಶರಣಸ್ಥಲಾದಿ ಶೀಲಸಂಪಾದನ ಸ್ಥಲಾಂತ್ಯವಾದ ನಾಲ್ಕು ಅಂಗಸ್ಥಲಂಗಳು ದೀಕ್ಷಾಪಾದೋದಕಸ್ಥಲಾದಿ ಮಹದಾಕಾಶಸ್ಥಲಾಂತ್ಯವಾದ ಒಂಭತ್ತು ಲಿಂಗಸ್ಥಲಂಗಳು ಐಕ್ಯಸ್ಥಲಾದಿ ಸಹಭೋಜನಸ್ಥಲಾಂತ್ಯವಾದ ನಾಲ್ಕು ಅಂಗಸ್ಥಲಂಗಳು ಕ್ರಿಯಾಪ್ರಕಾಶಸ್ಥಲಾದಿ ಅಂಗಲೇಪನಸ್ಥಲಾಂತ್ಯವಾದ ಒಂಭತ್ತು ಲಿಂಗಸ್ಥಲಂಗಳು ಕೂಡಿ ಇಪ್ಪತ್ತಾರು ಸ್ಥಲಂಗಳೆಂದೆನಿಸಿ ಭಾವಪರಬ್ರಹ್ಮದ ಗೋಳಕ ಸ್ಥಾನದಲ್ಲಿಪ್ಪ ಜ್ಞಾನಶೂನ್ಯಸ್ಥಲ ಮಿಶ್ರವಾಗಿ ಸಚ್ಛೀಲವೈರಾಗಿಯ ಭಾವಸ್ಥಲವೆಂದುದು ಜಂಗಮ ವಚನ ನೋಡಾ. ಇಂತೀ ನೂರೊಂದು ಸ್ಥಲಂಗಳನೊಳಕೊಂಡ ಮಹಾಲಿಂಗವು ಶೂನ್ಯಲಿಂಗದಲ್ಲಿ ಕೂಡಿ ಅಂತಪ್ಪ ಶೂನ್ಯಲಿಂಗವು ನಿರಂಜನ ಜಂಗಮ ಸ್ವಾಮಿಯ ಕರಸ್ಥಲದಲ್ಲಡಗಿಪ್ಪುದು. ಅಂತಪ್ಪ ಮಹಾಸ್ವಾಮಿಯನ್ನು ತನ್ನ ಹೃದಯದಲ್ಲಡಗಿಕೊಂಡ ಅನಾದಿ ಸದ್ಭಕ್ತನ ತೋರಿಬದುಕಿಸಾ ಎಲೇ ಸಪ್ತಸಂಗಮೇಶ್ವರ ಮಹಾಲಿಂಗವೇ. ಮಂಗಳ ಮಹಾ ಶ್ರೀ.

**ಸಂಪೂರ್ಣ.**



ಶಿವಾನುಭವ ಗ್ರಂಥಮಾಲಾ ಸಂ॥ ೧೫

# ದೇವರ ದಾಸಿಮಯ್ಯನ

## ವಚನಗಳು.



ಸಂಪಾದಕರು

**ರಾ॥ ಸಾ॥ ಫ. ಗು. ಹಳಕಟ್ಟಿ**

ಬಿ. ಎ. ಎಲ್. ಎಲ್. ಬಿ. ವಕೀಲ

**ವಿಜಾಪುರ.**



**ಬೆಲೆ ೧೦ ಆಣೆಗಳು.**

# ಪ್ರಸ್ತಾವನೆ.

---

ದಾಸಿಮಯ್ಯನು ವೀರಶೈವರಲ್ಲಿ ಒಬ್ಬ ಪ್ರಸಿದ್ಧ ಶಿವಶರಣನಾಗಿದ್ದಾನೆ. ಇವನ ವಚನಗಳು ಅತ್ಯುತ್ಕೃಷ್ಟವಾಗಿದ್ದು ವಚನವಾಙ್ಮಯದಲ್ಲಿ ಅವುಗಳಿಗೆ ಅತ್ಯಂತ ಉನ್ನತಸ್ಥಾನವನ್ನು ಕೊಡಬಹುದಾಗಿದೆ. ಅವು ಸೂತ್ರರೂಪವಾಗಿದ್ದು ಬಹು ಅರ್ಥಗರ್ಭಿತವಾಗಿವೆ. ಲಲಿತವೂ ರಮಣೀಯವೂ ಅರ್ಥಬೋಧವೂ ಆದ ಅವನ ವಚನಗಳು ಸಂಕ್ಷಿಪ್ತವಾಗಿದ್ದರೂ ಗಂಭೀರವಾದ ವಿಚಾರವುಳ್ಳವಾಗಿವೆ. ಅವುಗಳನ್ನು ಓದಿದೊಡನೆಯೇ ಅವು ಒಡಪಿನಂತೆ ಭಾಸವಾಗುತ್ತವೆ. ದೇವರದಾಸಿಮಯ್ಯನ ವಚನಗಳು ಕನ್ನಡಕ್ಕೆ ಅಲಂಕಾರ ಪ್ರಾಯವಾಗಿವೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ.

ದೇವರ ದಾಸಿಮಯ್ಯನು ಬಸವನಕಿಂತಲೂ ಹಿಂದಿನವನೆಂಬದು ಅನೇಕ ಆಧಾರಗಳಿಂದ ಈಗ ತಿಳಿದುಬಂದಿದೆ. ಪುರಾತನರಾದ ಇಂಥ ಶಿವಶರಣರ ಉಕ್ತಿಗಳು ಎಲ್ಲಿಯೂ ಗ್ರಂಥರೂಪವಾಗಿ ಒತ್ತಟ್ಟಿಗೆ ಸಿಗುವದಿಲ್ಲ. ದೇವರದಾಸಿಮಯ್ಯನ ವಚನಗಳ ಸ್ಥಿತಿಯಾದರೂ ಹೀಗೆಯೇ ಇದೆ. ಅವು ಬೇರೆ ಬೇರೆ ವಚನಸಂಗ್ರಹ ಗ್ರಂಥಗಳಲ್ಲಿ ಖಂಡಶಃ ಮಾತ್ರ ದೊರೆಯುತ್ತವೆ. ಈ ಸಂಗ್ರಹ ಗ್ರಂಥಗಳನ್ನು ನನಗೆ ಸಿಕ್ಕಷ್ಟವುಗಳನ್ನು ದೊರಕಿಸಿ ಅವುಗಳಲ್ಲಿಯ ವಚನಗಳನ್ನು ಆಯ್ದು ಒತ್ತಟ್ಟಿಗೆ ಸ್ಥಲಾನುಸಾರವಾಗಿ ಸೇರಿಸಿ ಈ ಗ್ರಂಥವನ್ನು ರಚಿಸಿದ್ದಾಗಿರುತ್ತದೆ. ದೇವರದಾಸಿಮಯ್ಯನ ಇನ್ನೂ ಅನೇಕ ವಚನಗಳು ಉಪಲಬ್ಧವಾಗಬಹುದು. ಅವು ಯಾರಿಗಾದರೂ ದೊರೆದಲ್ಲಿ ಅವುಗಳನ್ನು ಅವರು ನಮ್ಮ ಕಡೆಗೆ ಕಳಿಸಿ ಕೊಟ್ಟಲ್ಲಿ ನಾವು ಅವರಿಂದ ಬಹಳ ಉಪಕೃತರಾಗುವೆವು. ಮತ್ತು ಅವುಗಳನ್ನು ನಾವು ಈ ಗ್ರಂಥದ ಪುನರ್ಮುದ್ರಣದ ಕಾಲಕ್ಕೆ ಇದರಲ್ಲಿ ಸೇರಿಸುವೆವು

ದೇವರ ದಾಸಿಮಯ್ಯನ ವೃತ್ತಾಂತವನ್ನು ಅರುಹುವಂಥ ಕೆಲವು ಗ್ರಂಥಗಳಿವೆ. ಅವು ಯಾವವೆಂದರೆ:—(೧) ಬಸವಪುರಾಣದ ೫೧ನೇ ಸಂಧಿ, ಇದರಲ್ಲಿ ಜಯಸಿಂಹರಾಜನ ಆಸ್ಥಾನದಲ್ಲಿ ದಾಸಿಮಯ್ಯನಿಗೂ

